ಆನಂದ ಕರ್ಣಾಟಕ ಗ್ರಂಥರತ್ನಮಾಲೆ. ನಂ ೨.

ಶ್ರೀಃ.

ಶ್ರೀ ವ್ಯಾ ಸ ಮ ಹ ರ್ಷಿ ಪ್ರ ಣೀ ತ

# ಶ್ರೀಮದ್ಭಾಗವತವು

ಕರ್ಣಾಟಕ ವಚನವು

(ದಶಮಸ್ಕಂಧದ ಉತ್ತರಾರ್ಧವು )

---

ಶ್ರೀಮದ್ಯದುಶೈಲನಿವಾಸರಸಿಕ

ಪಂಡಿತ ದೇವಶಿಖಾಮಣಿ ಅಳಸಿಂಗರಾಚಾರ್ಯ ವಿರಚಿತವು

---

ಮ ದ್ರಾ ಸು

ಆನಂದಮುದ್ರಾಕ್ಷರಶಾಲೆಯಲ್ಲಿ ಮುದ್ರಿತವಾಗಿ

ಆರ್. ವೇಂಕಟೇಶ್ವರ ಕಂಪೆನಿಯವರಿಂದ

ಪ್ರಕಟಿಸಲ್ಪಟ್ಟಿದೆ.

---

1922

# ದಶಮಸ್ಕಂಧ ಉತ್ತರಾರ್ಧದ ವಿಷಯಾನುಕ್ರಮಣಿಕೆ.



# ಪ ಟ ಗ ಳ ಪ ಟ್ಟಿ.

ಪುಟಸಂಖ್ಯೆ.



ಶ್ರೀ.

# ಶ್ರೀಮದ್ಭಾಗವತವು

## ದಶಮಸ್ಕಂಧದ ಉತ್ತರಾರ್ಧವು.

### ಜರಾಸಂಧಪರಾಜಯವು.

ಕಂಸನಿಗೆ ಅಸ್ತಿಪ್ರಾಸ್ತಿಗಳೆಂಬ ಇಬ್ಬರು ಭಾರ್ಯೆಯರಿದ್ದರು. ಕೃಷ್ಣನಿಂದ ತಮ್ಮ ಪತಿಯು ಹತನಾದಮೇಲೆ, ಅವರಿಬ್ಬರೂ ದುಃಖದಿಂದ ತಂದೆಯಾದ ಜರಾಸಂಧನ ಮನೆಗೆ ಹೋಗಿ ಸೇರಿದರು ಅಲ್ಲಿ ಅವರು ಮಗಧ ರಾಜನಾದ ಜರಾಸಂಧನಿಗೆ ತಮ್ಮ ದುಃಖವನ್ನು ವಿವರಿಸಿ, ತಮಗೆ ವೈಧವ್ಯ ವುಂಟಾದ ಕಾರಣಗಳೆಲ್ಲವನ್ನೂ ತಿಳಿಸಿದರು.ಅದನ್ನು ಕೇಳಿದೊಡನೆ ಜರಾಸಂ ಧನು ದುಃಖದಿಂದಲೂ, ಕೋಪದಿಂದಲೂ ಪೀಡಿತನಾಗಿ, ಭೂಮಿಯಲ್ಲಿ ಯಾದವರ ಹುಟ್ಟೇ ಇಲ್ಲದಂತೆ ಮಾಡುವೆನೆಂದು ದೃಢಸಂಕಲ್ಪವನ್ನು ಹಿಡಿ ದನು ಒಡನೆಯೇ ಇಪ್ಪತ್ತುಮೂರು ಅಕ್ಷೋಹಿಣೀಸೈನ್ಯವನ್ನು ಸೇರಿಸಿಕೊಂ ಡು, ಯಾದವ ರಾಜಧಾನಿಯಾದ ಮಧುರಾಪುರಿಯಮೇಲೆ ದಂಡೆತ್ತಿಬಂದು, ನಾಲ್ಕುದಿಕ್ಕುಗಳಿಂದಲೂ ಅದಕ್ಕೆ ಮುತ್ತಿಗೆಹಾಕಿದನು. ಇಷ್ಟರಲ್ಲಿ ಶ್ರೀ ಕೃಷ್ಣನು,ಮೇರೆಮೀರಿ ಬರುವ ಸಮುದ್ರದಂತೆ ಜರಾಸಂಧನ ಸೈನ್ಯವು ತನ್ನ ಪಟ್ಟಣದ ಸುತ್ತುಮುತ್ತಲೂ ಬಂದುಸೇರಿ ಮುತ್ತಿಗೆಹಾಕಿರುವುದನ್ನೂ, ಅ ದರಿಂದ ಆ ಪುರವಾಸಿಗಳೆಲ್ಲರೂ ಭಯದಿಂದ ತತ್ತಳಿಸುತ್ತಿರುವುದನ್ನೂ ನೋ ಡಿದನು. ಆದರೇನು ? ಓಪರೀಕ್ಷಿದ್ರಾಜಾ! ಆ ಶ್ರೀಕೃಷ್ಣನೇ ಸರ್ವಲೋಕ ಕಾರಣನಾದುದರಿಂದ, ಆತನಿಗೆ ಈ ಜರಾಸಂಧನ ಮುತ್ತಿಗೆಯಿಂದ ಯಾವ ವಿಧವಾದ ಆಪತ್ತೂ ಸಂಭವಿಸಲಾರದು. ಆ ಸೈನ್ಯಗಳೆನ್ನಡಗಿಸುವುದೂ

ಅವನಿಗೆ ಅಸಾಧ್ಯವಾಗಿರಲಿಲ್ಲ ಹಾಗಿದ್ದರೂ ಆತನು ಮನುಷ್ಯಾವತಾರವನ್ನೆ ತ್ತಿ ಅದಕ್ಕನುಗುಣವಾದ ನಟನೆಗಳನ್ನೇ ತೋರಿಸಬೇಕಾಗಿದ್ದುದರಿಂದ, ಆ ಕಾಲದೇಶಕ್ಕನುಗುಣವಾಗಿ ತಾನು ಭೂಮಿಯಲ್ಲಿ ಅವತರಿಸಿದುದಕ್ಕೆ ಪ್ರಯೋ ಜನವೇನೆಂಬುದನ್ನು ವಿಚಾರಮಾಡಿ, ತನ್ನಲ್ಲಿ ತಾನು ಹೀಗೆಂದು ನಿಶ್ಚಯಿಸಿ ಕೊಂಡನು. “ಮಗಧರಾಜನಾದ ಜರಾಸಂಧನು ಉತ್ತಮಕುಲದಲ್ಲಿ ಹುಟ್ಟಿ ದ ಅನೇಕರಾಜರ ಸೈನ್ಯಗಳನ್ನು ಸೇರಿಸಿಕೊಂಡು, ಈ ಪಟ್ಟಣಕ್ಕೆ ಮುತ್ತಿಗೆ ಹಾಕಿರುವನು ರಥ, ಗಜ ತುರಗ, ಪದಾತಿಗಳೆಂಬ ಚತುರಂಗಗಳಿಂದ ಕೂಡಿ ದ ಈ ಸೈನ್ಯವು, ಮೂರಕ್ಷೋಹಿಣಿಗಳವರೆಗೆ ಬಂದು ಸೇರಿರುವುದು. ಭೂ ಮಿಗೆ ಭಾರಭೂತವಾದ ಈ ಸೈನ್ಯವನ್ನು ನಾನು ಮೊದಲು ಧ್ವಂಸಮಾಡುವೆ ನು ಆದರೆ ಜರಾಸಂಧನನ್ನು ಮಾತ್ರ ಈಗಲೇ ಕೊಂದುಬಿಡುವುದು ಸರಿಯಲ್ಲ. ಭೂಭಾರವನ್ನು ಪರಿಹರಿಸುವುದಕ್ಕಾಗಿಯೂ, ದುಷ್ಟರನ್ನಡಗಿಸಿ ಶಿಷ್ಟರನ್ನು ರಕ್ಷಿಸುವುದಕ್ಕೂ ನಾನು ಈ ಅವತಾರವನ್ನೆತ್ತಿರುವೆನು. ಇಷ್ಟೇ ಅಲ್ಲದೆ ಅ ಗಾಗ ಹೆಚ್ಚುತ್ತಿರುವ ಅಧರ್ಮವನ್ನಡಗಿಸಿ,ಧರ್ಮವನ್ನು ಹೆಚ್ಚಿಸುವುದೂ ಈ ನನ್ನ ಅವತಾರಕ್ಕೆ ಪ್ರಯೋಜನವಾಗಿರುವುದು. ಈ ಉದ್ದೇಶದಿಂದಲೇ ಹಿಂದೆ ಯೂ ನಾನು ಮತ್ಸ್ಯಕೂರ್ಮಾದ್ಯವತಾರಗಳನ್ನೆತ್ತಿದೆನು. ಈಗಲೇ ಈ ಜರಾಸಂಧನನ್ನು ಕೊಂದಪಕ್ಷದಲ್ಲಿ, ಭೂಭಾರವನ್ನು ಸಂಪೂರ್ಣವಾಗಿ ಪರಿ ಹರಿಸಿದಂತಾಗುವುದಿಲ್ಲ ಹಾಗಿಲ್ಲದೆ ಈಗ ಇಲ್ಲಿ ಬಂದ ಸೈನ್ಯಗಳನ್ನು ಸಂಹರಿಸಿ, ಆ ಜರಾಸಂಧನನ್ನು ಮಾತ್ರ ಕೊಲ್ಲದೆ ಬಿಟ್ಟಿದ್ದಪಕ್ಷದಲ್ಲಿ, ಅವನು ತಿರುಗಿತಿರುಗಿ ಸೈನ್ಯಗಳನ್ನು ತರುತ್ತಿರುವನು ಆಸೈನ್ಯಗಳೆಲ್ಲವನ್ನೂ ಕೊಂದ ಮೇಲೆಯೇ ನನ್ನ ಅವತಾರಪ್ರಯೋಜನವು ಪೂರ್ತಿಯಾಗುವುದು ಆದುದ ರಿಂದ ಈ ಜರಾಸಂಧನನ್ನುಮಾತ್ರ ಈಗಲೇ ಕೊಲ್ಲದೆ, ಅವನು ತನ್ನ ಸಹಾ ಯಕ್ಕಾಗಿ ತರತಕ್ಕ ಸೈನ್ಯಗಳೆಲ್ಲವನ್ನೂ ಕೊಲ್ಲುತ್ತಾಬರುವೆನು” ಎಂದು ಮ ನಸ್ಸಿನಲ್ಲಿ ಯೋಚಿಸುತ್ತಿರುವಾಗಲೇ, ಆಕಾಶದಲ್ಲಿ, ಸರ್ವಾಲಂಕಾರಭೂಷಿತ ಗಳಾಗಿ, ಸಾರಥಿ ಮೊದಲಾದ ಸಮಸ್ತಸಾಧನಗಳೊಳಗೂಡಿ,ಸೂರ್ಯತೇಜಸ್ಸಿ ನಿಂದ ಜ್ವಲಿಸುತ್ತಿದ್ದ ಎರಡುರಥಗಳು ಕಾಣಿಸಿಕೊಂಡುವು.ಮತ್ತು ಆರಥದ ಲ್ಲಿ ಪುರಾತನಗಳಾದ ದಿವ್ಯಾಯುಧಗಳೂ ಕಾಣಿಸಿದುವು. ಅದನ್ನುನೋಡಿ ಕೃ

ಷ್ಣನು, ಅಣ್ಣನಾದ ಬಲರಾಮನನ್ನು ನೋಡಿ “ಅಣ್ಣಾ! ಇದೋ ನೋಡು! ನಮಗಾಗಿ ಎರಡುರಥಗಳು ಬಂದಿರುವುವು. ಅವುಗಳಲ್ಲಿ ನಮಗೆ ಇಷ್ಟವಾದ ಆಯುಧಗಳೆಲ್ಲವೂ ಸಿದ್ಧವಾಗಿರುವುವು. ನೀನು ಯುದ್ಧಸನ್ನದ್ಧನಾಗಿ ಈ ರಥವನ್ನೇರು! ಈಗಲಾದರೋ ನಮ್ಮ ಯಾದವರಿಗೆ ಮಹತ್ತಾದ ಭಯವು ಬಂದೊದಗಿರುವುದು ಜರಾಸಂಧನ ಸೈನ್ಯವು ನಮ್ಮಪಟ್ಟಣವನ್ನು ಮುತ್ತಿರುವುದು. ಈಗಲೇ ನಾವು ರಥಾರೂಢನಾಗಿ ಆ ಸೈನ್ಯವನ್ನು ಧ್ವಂಸಮಾಡುವುದಕ್ಕೆ ಯತ್ನಿಸಬೇಕು. ನಮ್ಮ ಯಾದವರಿಗೆ ಬಂದೊದಗಿರುವ ಅಪಮೃತ್ಯುವನ್ನು ತಪ್ಪಿಸಬೇಕು. ದುಷ್ಟರನ್ನಡಗಿಸಿ ಸಾಧುಗಳಿಗೆ ಕ್ಷೇಮವನ್ನುಂಟುಮಾಡುವುದಕ್ಕಾಗಿಯೇ,ನಾವಿಬ್ಬರೂ ಅವತರಿಸಿರುವೆವು. ಭೂಮಿಗೆ ಭಾರಭೂತವಾದ ಇಪ್ಪತ್ತುಮೂರು ಅಕ್ಷೋಹಿಣೀ ಸೈನ್ಯಗಳು ಒಂದಾಗಿ ಬಂದು ಸೇರಿರುವುದು. ಇವುಗಳನ್ನು ನಿಗ್ರಹಿಸುವುದರಿಂದ ಬಹಳಮಟ್ಟಿಗೆ ಭೂಭಾರವನ್ನು ಪರಿಹರಿಸಿದಂತಾಗುವುದು” ಎಂದನು ಹೀಗೆ ರಾಮಕೃಷ್ಣರಿಬ್ಬರೂ ತಾವು ಮುಂದೆ ನಡೆಸಬೇಕಾದ ಕಾರ್ಯಗಳನ್ನು ತಮ್ಮೊಳಗೆ ನಿರ್ಧರಿಸಿಕೊಂಡು ತಮ್ಮತಮ್ಮ ರಥವನ್ನೇರಿದರು ಆದರಲ್ಲಿ ತಮತಮಗೆ ಇಷ್ಟವಾದ ಆಯುಧಗಳನ್ನು ಸಿದ್ಧವಾಗಿ ಕೈಯಲ್ಲಿ ಹಿಡಿದು, ಸೈನ್ಯವನ್ನು ಮಾತ್ರಸ್ವಲ್ಪವಾಗಿಯೇ ತಮ್ಮೊಡನೆ ತೆಗೆದುಕೊಂಡು,ಪಟ್ಟಣದಿಂದ ಹೊರಟರು. ಶ್ರೀಕೃಷ್ಣನು ದಾರುಕನೆಂಬ ತನ್ನ ಸಾರಥಿಯಿಂದ ಪ್ರೇರಿತವಾದ ರಥದಲ್ಲಿ ಕುಳಿತು, ಪುರದ್ವಾರದಿಂದ ಹೊರಗೆ ಬಂದೊಡನೆ, ಶತ್ರುಸೈನ್ಯಗಳ ಎದೆನಡುಗುವಂತೆ ಪಾಂಚಜನ್ಯವೆಂಬ ತನ್ನ ಶಂಖವನ್ನು ಧ್ವನಿಮಾಡಿದನು ಈ ಧ್ವನಿಯನ್ನು ಕೇಳಿದೊಡನೆ,ಅತ್ತಲಾಗಿ ಜರಾಸಂಧನು, ರಥಾರೂಢರಾಗಿ ಬರುತ್ತಿರುವ ರಾಮಕೃಷ್ಣರಿಬ್ಬರನ್ನೂ ನೋಡಿ, ಕೋಪದಿಂದ ಮೈತಿಳಿಯದೆ ಕೃಷ್ಣನನ್ನು ಕುರಿತು “ಎಲ ಕೃಷ್ಣಾ! ಪುರುಷಾಧಮಾ! ನೀನು ನನ್ನ ಅಳಿಯನಾದ ಕಂಸನನ್ನು ಕೊಂಡವನಾದರೂ, ನಿನ್ನೊಡನೆ ನಾನು ಯುದ್ಧಮಾಡ

* ಇಲ್ಲಿ ಜರಾಸಂಧನ ದಂಡಯಾತ್ರೆಯನ್ನೂ, ದೇವತೆಗಳು ಕೃಷ್ಣನ ಸಹಾಯಾರ್ಥವಾಗಿ ಕಳುಹಿಸಿಕೊಟ್ಟ ಯುದ್ಧಸಾಧನಗಳನ್ನೂ, ಇನ್ನೂ ವಿವರವಾಗಿ ತೋರಿಸುವಂತೆ ಕೆಲವು ಅಧಿಕಪಾಠಗಳು ಕೆಲವು ಪ್ರತಿಗಳಲ್ಲಿಮಾತ್ರ ಕಾಣುವುವು.

ತಕ್ಕವನಲ್ಲ ಹಿಂದೆ ಹೋಗು! ನೀನು ಸೋದರಮಾವನನ್ನೇ ಕೊಂದ ಮಹಾ ಪಾಪಿಯು! ಮತ್ತು ಮೂಢನು ಮಹಾಪರಾಕ್ರಮಿಗಳು ಸಣ್ಣಮಕ್ಕಳೊಡನೆ ಯುದ್ಧಕ್ಕೆ ನಿಲ್ಲುವಂತೆ,ನಿನ್ನೊಡನೆ ಯುದ್ಧಕ್ಕೆ ನಿಲ್ಲುವುದು ನನಗೆ ಲಜ್ಜಾವಹವಾಗಿರುವುದು. ನಿನ್ನ ಬಂಧುಗಳಲ್ಲಿ ಯಾರನ್ನಾದರೂ ಮುಂದೆ ನಿಲ್ಲಿಸಿ ನೀನು ತಲೆತಪ್ಪಿಸಿಕೊಂಡು ಹೋಗು" ಎಂದು ಹೇಳಿ ಬಲರಾಮನಕಡೆಗೆ ತಿರುಗಿ, "ಓ ರಾಯಾ! ನಿನಗೆ ನನ್ನೊಡನೆ ಯುದ್ಧಮಾಡಬೇಕೆಂಬ ಅಕ್ಕರೆಯಿದ್ದಪಕ್ಷದಲ್ಲಿ, ಧೈರ್ಯದಿಂದ ಮುಂದೆಬಂದು ನಿಲ್ಲು! ನಿನ್ನ ಶಕ್ತಿಯಿದ್ದಹಾಗೆ ಯುದ್ಧಮಾಡು. ನನ್ನ ಬಾಣಗಳಿಂದ ಹತನಾಗಿ ವೀರಸ್ವರ್ಗವನ್ನು ಹೊಂದು! ಹಾಗಿಲ್ಲವೇ ನಿನ್ನಪರಾಕ್ರಮದಿಂದ ನನ್ನನ್ನು ಕೊಲ್ಲು" ಎಂದನು ಆಗ ಶ್ರೀಕೃಷ್ಣನು ಮದೋನ್ಮತ್ತನಾದ ಆ ಜರಾಸಂಧನ ವೀರವಾದಗಳನ್ನು ಕೇಳಿ, "ಎಲೆಮೂಢಾ!ಶೂರರಾದವರು ಎಂದಿಗೂ ಹೀಗೆ ಆತ್ಮಸ್ತುತಿಮಾಡಿಕೊಳ್ಳಲಾರರು ಕಾರ್ಯದಿಂದ ತಮ್ಮ ಪೌರುಷವನ್ನು ತೋರಿಸತಕ್ಕವರೇ ಧೀರರು. ಅಥವಾ ಮರಣೋನ್ಮುಖರಾದವರು ಬಾಯಿಗೆ ಬಂದಂತೆ ಬಗುಳುವುದೂ ಸಹಜವೇ. ಅದರಂತೆಯೇ ಈಗಲೂ ನೀನು ಸಾಯುವುದಕ್ಕಾಗಿಯೇ ಇಲ್ಲಿ ಬಂದವನಾದುದರಿಂದ,ಅಸಂಬದ್ಧ ಪ್ರಲಾಪವನ್ನು ಮಾಡುವಹಾಗಿದೆ. ಈ ನಿನ್ನಮಾತುಗಳಿಗೆ ನಾವು ಕಿವಿಗೊಡತಕ್ಕವರಲ್ಲ ಶೌರ್ಯವಿದ್ದರೆ ಮುಂದೆ ಬಾ!" ಎಂದನು. ಓ! ಪರೀಕ್ಷಿದ್ರಾಜಾ! ಈ ಮಾತನ್ನು ಕೇಳಿದೊಡನೆ ಜರಾಸಂಧನು,ತನ್ನ ದೊಡ್ಡಸೈನ್ಯವನ್ನು ಮುಂದೆಬಿಟ್ಟುಕೊಂಡು ಆರಾಮಕೃಷ್ಣರನ್ನು ಇದಿರಿಸುನಿಂತನು. ವಾಯುವು ಮೇಘಗಳಿಂದ ಸೂರ್ಯನನ್ನೂ, ಧೂಳುಗಳಿಂದ ಅಗ್ನಿಯನ್ನೂ ಮರೆಸುವಂತೆ, ಜರಾಸಂಧನು ಆ ರಾಮಕೃಷ್ಣರಿಬ್ಬರನ್ನೂ ಬಾಣಪರಂಪರೆಯಿಂದ ಮುಚ್ಚಿ, ಅವರ ರಥವಾಗಲಿ, ರಥಾಶ್ವವಾಗಲಿ ಧ್ವಜವಾಗಲಿ, ಸೈನ್ಯಗಳಾಗಲಿ ಯಾವುದೂ ಕಣ್ಣಿಗೆ ಕಾಣದಂತೆ ಮಾಡಿಬಿಟ್ಟನು. ಆಗ ಮಧುರಾಪುರದಲ್ಲಿ ಉಪ್ಪರಿಗೆಗಳನ್ನೂ, ಅಟ್ಟಲೆಗಳನ್ನೂ, ಗೋಪುರಗಳನ್ನೂ ಏರಿ, ಈ ಯುದ್ಧವನ್ನು ಅತ್ಯಾತುರದಿಂದ ನೋಡುತಿದ್ದ ಪುರಸ್ತ್ರೀಯರೆಲ್ಲರೂ, ತಾಲಧ್ವಜಗರುಡಧ್ವಜಗಳಿಂದ ಶೋಭಿತಗಳಾದರಾಮಕೃಷ್ಣರ ರಥಗಳೆರಡೂ ಜರಾಸಂಧನ ಬಾಣಪರಂಪರೆಗಳಲ್ಲಿ ಮರಸಿಹೋದುದ

ನ್ನು ನೋಡಿ, ಭಯದಿಂದಲೂ, ದುಃಖದಿಂದಲೂ ತತ್ತಳಿಸುತ್ತ, ಹಾಗೆಯೇ ಪ್ರಜ್ಞೆತಪ್ಪಿದಂತಾದರು. ಹೀಗೆ ಮೇಘಗಳು ಮಳೆಯನ್ನು ಕರೆಯುವಂತೆ ಶತ್ರುಸೈನ್ಯವು ತನ್ನ ಸೈನ್ಯದಮೇಲೆ ಎಡೆಬಿಡದೆ ಬಾಣವರ್ಷವನ್ನು ಕರೆಯುವುದನ್ನುನೋಡಿ ಕೃಷ್ಣನು, ದೇವಾಸುರರಿಂದಲೂ ಪೂಜಿತವಾದ ಶಾರ್ಙ್ಗವೆಂಬ ತನ್ನ ಮಹಾಧನುಸ್ಸನ್ನು ಟಂಕಾರಮಾಡಿ, ಬತ್ತಳಿಕೆಯಿಂದ ಬಾಣಗಳನ್ನು ತೆಗೆದು ಆ ಧನುಸ್ಸಿನಲ್ಲಿ ಸಂಧಾನಮಾಡಿ, ಆ ಕರ್ಣಾಂತವಾಗಿ ನಾಣೆಳೆದು, ಪರಂಪರೆಯಾಗಿ ಬಾಣಗಳನ್ನು ವರ್ಷಿಸುತ್ತ, ಶತ್ರುಪಕ್ಷದಲ್ಲಿದ್ದ ರಥಗಜತುರಗಪದಾತಿಗಳೆಂಬ ಚತುರಂಗಸೈನ್ಯಗಳನ್ನೂ ಧ್ವಂಸ ಮಾಡುತ್ತಬಂದನು. ಅಲಾತಚಕ್ರದಿಂದ ಕಿಡಿಗಳು ಹೊರಡುವಂತೆ ಆಗ ಕೃಷ್ಣನ ಕೈಯಲ್ಲಿದ್ದ ಮಂಡಲಾಕಾರವಾದ ಧನುಸ್ಸಿನಿಂದ, ಎಡೆಬಿಡದೆ ಬಾಣಗಳು ಬೀಳುತಿದ್ದುವು. ಆ ಬಾಣಪ್ರಹಾರಗಳಿಂದ ಜರಾಸಂಧನ ಸೈನ್ಯದಲ್ಲಿದ್ದ ಆನೆಗಳೆಲ್ಲವೂ ತಲೆಯೊಡೆದು ಕೆಳಗೆ ಬಿದ್ದುವು. ಕುದುರೆಗಳು ಕತ್ತು ಮುರಿದು ಬಿದ್ದುವು ರಥಗಳೆಲ್ಲವೂ ಧ್ವಜದಂಡಗಳೊಡನೆ ಮುರಿದುಬಿದ್ದುವು. ರಥಾಶ್ವಗಳೂ ಸತ್ತು ಬಿದ್ದುವು. ಸಾರಥಿಗಳೆಲ್ಲರೂ ಮಡಿದರು. ಆ ರಥದಲ್ಲಿದ್ದ ಯುದ್ಧಸಾಧನಗಳೆಲ್ಲವೂ ತುಂಡಾಗಿ ಬಿದ್ದುವು. ಪದಾತಿಸೈನ್ಯವೆಲ್ಲವೂ ಕೈಕಾಲುಮುರಿದು, ತಲೆಹರಿದು ಕೆಳಗೆ ಬಿದ್ದುವು. ಹೀಗೆ ಕೃಷ್ಣನ ಬಾಣಪ್ರಹಾರದಿಂದ ಸತ್ತುಬಿದ್ದ ರಥಗಜಪದಾತಿಗಳ ದೇಹದಿಂದ ಹೊರಟ ರಕ್ತವು,ರಣರಂಗದಲ್ಲಿ ಅನೇಕನದಿಗಳಾಗಿ ಪ್ರವಹಿಸುತಿದ್ದುವು ಆ ರಕ್ತನದಿಗಳಲ್ಲಿ ವೀರಭಟರ ನೀಡಿದ ತೋಳುಗಳು ಹಾವುಗಳಂತೆಯೂ,ತಲೆಬುರುಡೆಗಳು ಆಮೆಗಳಂತೆಯೂ, ದೊಡ್ಡದೊಡ್ಡ ಆನೆಗಳ ಶರೀರವು ದ್ವೀಪದಂತೆಯೂ, ಕುದುರೆಗಳು ಮೊಸಳೆಗಳಂತೆಯೂ, ಕೈಕಾಲುಗಳು ಮೀನುಗಳಂತೆಯೂ' ತಲೆಕೂದಲುಗಳು ಪಾಚಿಗಳಂತೆಯೂ, ಮುರಿದ ಧನುಸ್ಸುಗಳು ಅಲೆಗಳಂತೆಯೂ, ಆಯುಧಗಳು ಪೊದೆಗಳಂತೆಯೂ, ಚಕ್ರಗಳು ಸುಳಿಗಳಂತೆಯೂ, ಆಭರಣದಿಂದುದಿರಿದ ರತ್ನಗಳು ಮಳಲುಗಳಂತೆಯೂ ಕಾಣುತಿದ್ದುವು. ಆರಣರಂಗವು,ಭೀರುಸ್ವಭಾವವುಳ್ಳವರಿಗೆ ಮನಸ್ಸಿನಲ್ಲಿ ಮಹಾಭಯವನ್ನೂ, ಧೈರ್ಯಶಾಲಿಗಳಿಗೆ ಸಂತೋಷವನ್ನೂ ಉಂಟುಮಾಡುತಿತ್ತು. ಹೀಗೆಯೇ

ಅತ್ತಲಾಗಿ ಬಲರಾಮನೂಕೂಡ, ತನ್ನ ಮುಸಲಾಯುಧವನ್ನು ಹಿಡಿದು, ಸಮುದ್ರದಂತೆ ದುರ್ಗಮವಾದ ಜರಾಸಂಧನ ಸೈನ್ಯವನ್ನು ಪ್ರವೇಶಿಸಿ, ತನ್ನ ಅಪ್ರಮೇಯವಾದ ಪರಾಕ್ರಮದಿಂದ ನಾನಾಕಡೆಗಳಲ್ಲಿಯೂ ಧ್ವಂಸಮಾಡುತ್ತಬಂದನು ಲೋಕನಾಯಕರಾದ ಆ ರಾಮಕೃಷ್ಣರಿಬ್ಬರೇ ಹೀಗೆ ಆ ಜರಾಸಂಧನ ಸಮಸ್ತಸೈನ್ಯವನ್ನೂ ಲೀಲಾಮಾತ್ರದಿಂದ ನಿಗ್ರಹಿಸುತ್ತ ಬಂದರು ಓ ಪರಿಕ್ಷಿದ್ರಾಜಾ! ಆ ರಾಮಕೃಷ್ಣರ ಪರಾಕ್ರಮಕ್ಕೆ ಇಪ್ಪತ್ತುಮೂರು ಆ ಅಕ್ಷೋಹಿಣಿಸೈನ್ಯವನ್ನು ನಾಶಮಾಡುವುದೇನೂ ವಿಶೇಷವೆಂದು ತಿಳಿಯಬೇಡ! ಅನಂತಕಲ್ಯಾಣಗುಣಪರಿಪೂರ್ಣನಾದ ಯಾವ ಭಗವಂತನು, ತನ್ನ ಇಚ್ಛಾಮಾತ್ರದಿಂದಲೇ ಮೂರುಲೋಕಗಳ ಸೃಷ್ಟಿಸ್ಥಿತಿ ಸಂಹಾರಗಳನ್ನು ನಡೆಸುತ್ತಿರುವನೋ, ಅವನಿಗೆ ಈ ಸ್ವಲ್ಪ ಸೈನ್ಯವನ್ನಡಗಿಸುವುದೊಂದು ಕಷ್ಟವೆ? ಹಾಗಿದ್ದರೂ ಆತನು ಈಗ ಮನುಷ್ಯಲೀಲೆಯನ್ನನುಕರಿಸುತ್ತಿರುವಾಗ ಸಾಮಾನ್ಯಮನುಷ್ಯರಿಗೆ ಸಾಧ್ಯವಲ್ಲದ ಈ ಕಾರ್ಯವನ್ನು ನಡೆಸಿದುದರಿಂದ, ಇದೊಂದು ಆಶ್ಚರ್ಯ ಚರಿತ್ರವಾಗಿ ವರ್ಣಿಸಲ್ಪಡುವುದೇಹೊರತು ಬೇರೆಯಲ್ಲ. ಹೀಗೆ ತನ್ನ ಸಮಸ್ತಸೈನ್ಯಗಳೂ ಹತವಾಗುತ್ತಿರುವುದನ್ನೂ, ಅಲ್ಲಲ್ಲಿ ಸತ್ತುಳಿದ ಕೆಲವು ಸೈನ್ಯಗಳು ನಾನಾಕಡೆಗೆ ಪಲಾಯನಮಾಡುತ್ತಿರುವುದನ್ನೂ ನೋಡಿ ಜರಾಸಂಧನಿಗೆ ಅತ್ಯಾಕ್ರೋಶವುಂಟಾಯಿತು. ಈ ಕೋಪದಿಂದ ಜರಾಸಂಧನು ತನ್ನ ರಥವನ್ನು ಬಲರಾಮನ ಸಮೀಪಕ್ಕೆ ವೇಗದಿಂದ ನಡಿಸಿಕೊಂಡು ಹೋಗಲು, ಬಲರಾಮನು ಅವನ ರಥವನ್ನು ಮುರಿದು, ಸಿಂಹವು ಕ್ಷುದ್ರಮೃಗವನ್ನು ಹಿಡಿಯುವಂತೆ ಅವನನ್ನು ಹಿಡಿದು ಕಟ್ಟುವುದಕ್ಕೆ ಯತ್ನಿಸಿದನು ಸಮಸ್ತಸೈನ್ಯವೂ ಹತವಾಗಿ ಪ್ರಾಣಮಾತ್ರದಿಂದುಳಿದಿರುವ ಆ ಜರಾಸಂಧನನ್ನು ಹಿಡಿದುತಂದು ಬಲರಾಮನುಹಗ್ಗಗಳಿಂದಲೂ,ವರುಣಪಾಶಗಳಿಂದಲೂಕಟ್ಟಿರುವುದನ್ನು ನೋಡಿ ಕೃಷ್ಣನು, ಮುಂದೆ ತಮ್ಮಿಂದ ನಡೆಯಬೇಕಾದ ಕಾರ್ಯಗಳಿಗಾಗಿ ಆ ಜರಾಸಂಧನನ್ನು ಬಿಟ್ಟುಬಿಡುವಂತೆ ತನ್ನಣ್ಣನಾದ ಬಲರಾಮನನ್ನು ಪ್ರಾರ್ಥಿಸಿಕೊಂಡನು. ಅದರಂತೆಯೇ ಬಲರಾಮನು, ಆ ಜರಾಸಂಧನನ್ನು ಬಿಟ್ಟು ಬಿಟ್ಟಮೇಲೆ, ಆತನು ಲಜ್ಜೆಯಿಂದ ಬೇರೊಬ್ಬರಿಗೆ ಮುಖವನ್ನು

ತೋರಿಸಲಾರದೆ, ಅಲ್ಲಿಂದ ಹಾಗೆಯೇ ತಪಸ್ಸಿಗಾಗಿ ಕಾಡಿಗೆ ಹೋಗಬೇಕೆಂದು ನಿಶ್ಚಯಿಸಿ ಹೊರಟುಬಿಟ್ಟನು.ಇಷ್ಟರಲ್ಲಿ ಅವನ ಮಿತ್ರರಾದ ಶಿಶುಪಾಲಾದಿರಾಜರು,ದಾರಿಯಲ್ಲಿ ಅವನನ್ನು ತಡೆದು, ಅವನ ಮನಸ್ಸಿಗೊಪ್ಪುವಂತೆ ನ್ಯಾಯನೀತಿಗಳಿಂದ ಸಮಾಧಾನವನ್ನು ಹೇಳತೊಡಗಿ "ಓ ವೀರಾಗ್ರಣೀ! ನೀನಾದರೋ ಲೋಕೈಕವೀರನು. ಅಲ್ಪಬಲವುಳ್ಳ ಯಾದವರಿಂದ ನಿನಗೆ ಈ ವಿಧವಾದ ಪರಾಭವವುಂಟಾಗಬೇಕಾದರೆ, ಇದು ನಿನ್ನ ದುಷ್ಕಾಲವಲ್ಲದೆ ಬೇರೆಯಲ್ಲ ಕಾಲವು ಅನುಕೂಲಿಸಿ ಬರುವವರೆಗೂ ನಾವು ನಮ್ಮ ಪ್ರಯತ್ನವನ್ನು ಬಿಡಬಾರದು," ಎಂದು ಹೇಳಿ ತತ್ವಬೋಧೆಗಳಿಂದಲೂ, ಲೌಕಿಕನ್ಯಾಯಗಳಿಂದಲೂ, ಅವನನ್ನು ನಿವಾರಿಸಿದರು. ಕೊನೆಗೆ ಜರಾಸಂಧನು ಅವರ ಮಾತನ್ನು ನಿರಾಕರಿಸಲಾರದೆ, ತನ್ನ ಸೈನ್ಯಗಳೆಲ್ಲವೂ ಹತವಾದುದನ್ನೂ, ತನಗುಂಟಾದ ಅವಮಾನವನ್ನೂ ನೆನೆಸಿಕೊಂಡು ದುಃಖಿಸುತ್ತ ತನ್ನ ರಾಜಧಾನಿಯನ್ನು ಸೇರಿದನು. ಇತ್ತಲಾಗಿ ಶ್ರೀಕೃಷ್ಣನೂ ಕೂಡ, ತನ್ನ ಸೈನ್ಯಗಳಿಗೆ ಯಾವ ಅಪಾಯವೂ ಇಲ್ಲದೆ ತಾನು ಶತ್ರುಸೈನ್ಯವೆಂಬ ಮಹಾಸಮುದ್ರವನ್ನು ಸುಲಭವಾಗಿ ದಾಟಿ,ತನ್ನ ಅರಮನೆಗೆ ಹಿಂತಿರುಗಿದನು. ದೇವತೆಗಳೆಲ್ಲರೂ ನಾನಾವಿಧವಾಗಿ ಕೃಷ್ಣನನ್ನು ಸ್ತುತಿಸುತ್ತ ಪುಷ್ಪವರ್ಷವನ್ನು ಕರೆದರು ಮಧುರಾಪುರನಿವಾಸಿಗಳೆಲ್ಲರೂ ಸಂತೋಷದಿಂದ ಕೊಂಡಾಡುತ್ತಿದ್ದರು. ಸೂತ, ಮಾಗಧ, ವಂದಿಗಳೆಲ್ಲರೂ ಜಯಘೋಷವನ್ನು ಮಾಡುತ್ತಿದ್ದರು ಆ ಪಟ್ಟಣದ ನಾನಾಕಡೆಗಳಲ್ಲಿಯೂ ಶಂಖ, ದುಂದುಭಿ, ಭೇರಿ, ತೂರ್ಯ, ವೀಣೆ, ಮೃದಂಗಗಳೇ ಮೊದಲಾದ ವಾದ್ಯಗಳು ನುಡಿಸಲ್ಪಡುತ್ತಿದ್ದುವು ಬೀದಿಬೀದಿಗಳಲ್ಲಿಯೂ ಜನರು ಸಂತೋಷದಿಂದ ಗುಂಪುಗೂಡಿದ್ದರು ಆ ಪಟ್ಟಣದ ಒಂದೊಂದು ಬೀದಿಯೂ ಧ್ವಜಪತಾಕೆಗಳಿಂದಲೂ, ಜಲಸೇಚನದಿಂದಲೂ, ಮಕರತೋರಣಗಳಿಂದಲೂ, ಬ್ರಾಹ್ಮಣರ ವೇದಘೋಷಗಳಿಂದಲೂ ಶೋಭಿಸುತಿತ್ತು. ಹೀಗೆ ಸರ್ವಾಲಂಕಾರಭೂಷಿತವಾದ ಆ ಮಧುರಾಪುರದ ಬೀದಿಯಲ್ಲಿ ಕೃಷ್ಣನು ಬರುತ್ತಿರುವಾಗ, ಅಲ್ಲಿನ ಪುರಸ್ತ್ರೀಯರೆಲ್ಲರೂ ಮೊಸರು, ಅಕ್ಷತೆ, ಗರಿಕೆ ಪುಷ್ಪಮಾಲಿಕೆ, ಮೊದಲಾದ ಮಂಗಳದ್ರವ್ಯಗಳೊಡನೆ ಬಂದು, ಆ ಶ್ರೀ

ಕೃಷ್ಣನನ್ನು ಆಸೆಯಿಂದ ನೋಡುತ್ತಿದ್ದರು ಆಗ ಕೃಷ್ಣನು ಆ ಯುದ್ಧ ದಲ್ಲಿ ತಾನು ಜಯಿಸಿ ತಂದ ಅನೇಕದ್ರವ್ಯರಾಶಿಯನ್ನೂ, ವೀರಭೂಷಣಗ ಳನ್ನೂ, ಯದುರಾಜನಾದ ಉಗ್ರಸೇನನಿಗೆ ಪ್ರೀತಿಯಿಂದೊಪ್ಪಿಸಿದನು. ಇಷ್ಟರಲ್ಲಿ ಅತ್ತಲಾಗಿ ಬಲಾಢ್ಯನಾದ ಜರಾಸಂಧನು, ತಿರುಗಿ ಮಥು ರಾಪುರದಮೇಲೆ, ದಂಡೆತ್ತಬೇಕೆಂಬ ಉದ್ದೇಶದಿಂದ ಹೊಸಸೈನ್ಯಗಳನ್ನು ಸೇರಿಸುವುದಕ್ಕೆ ಆರಂಭಿಸಿದನು ಇಷ್ಟರಲ್ಲಿ ಎರಡುತಿಂಗಳು ಕಳೆದು ಹೋದುವು. ಜರಾಸಂಧನು ಹಿಂದೆ ತನಗಾದ ಅವಮಾನಕ್ಕಾಗಿ ಅಹೋ ರಾತ್ರವೂ ಸಂಕಟದಿಂದ ಪರಿತಪಿಸುತ್ತಾ, ಅನೇಕರಾಜರನ್ನು ಕರೆಸಿ ಯು ದ್ಧಕ್ಕೆ ಹೊರಡಬೇಕೆಂದು ಪ್ರೇರಿಸಿದನು. * ಅದರಂತೆಯೇ ಅನೇಕರಾಜರು ಯುದ್ಧಸನ್ನದ್ಧರಾದರು. ಈ ಸಮಸ್ತರಾಜರೊಡನೆ ಜರಾಸಂಧನು ಮಥು ರಾಪುರವನ್ನು ಮುತ್ತಿ, ಆಗಲೂ ಕೃಷ್ಣನಿಂದ ಪರಾಜಿತನಾಗಿ ಓಡಿಹೋದ ನು. ಹೀಗೆಯೇ ಹದಿನೇಳಾವರ್ತಿ ಹೊಸಹೊಸದಾಗಿ ಅನೇಕಾಕ್ಷೋಹಿಣೀ ಸೈನ್ಯಗಳನ್ನು ಸೇರಿಸಿಕೊಂಡು ಬಂದು,ಮಥುರಾಪುರಿಯನ್ನು ಮುತ್ತಿ,ಯಾದ ವರೊಡನೆ ಯುದ್ಧಮಾಡಿದನು. ಇತ್ತಲಾಗಿ ವೃಷ್ಣಿಗಳೂಕೂಡ ಕೃಷ್ಣನ ತೇಜೋಬಲದಿಂದ ಸುರಕ್ಷಿತರಾಗಿ ಜರಾಸಂಧನನ್ನಿದಿರಿಸಿ, ಅವನು ತಂದ ಸೈನ್ಯಗಳೆಲ್ಲವನ್ನೂ ನಾಶಮಾಡುತ್ತಬಂದರು. ಜರಾಸಂಧನೂಕೂಡ ಒಂ ದೊಂದಾವರ್ತಿಯೂ ತಾನು ತಂದ ಸೈನ್ಯಗಳೆಲ್ಲವನ್ನೂ ಕಳೆದುಕೊಂಡು ಯಾದವರ ಕೈಯಲ್ಲಿ ಸೆರೆಸಿಕ್ಕಿ, ಪರಮದಯಾಳುವಾದ ಕೃಷ್ಣನಿಂದ ಬಿಡಿಸಲ್ಪಟ್ಟು ಹಿಂತಿರುಗಿ ಬರುತಿದ್ದನು ಕೊನೆಗೆ ಹದಿನೆಂಟನೆಯ ಸಾರಿಯೂ ಜರಾಸಂಧನು ಯುದ್ಧಕ್ಕಾಗಿ ಪ್ರಯತ್ನಿಸುತ್ತಿದ್ದನು. ಇಷ್ಟರಲ್ಲಿ ಮನು ಷ್ಯಲೋಕದಲ್ಲಿ ತನಗೆ ಸಮಾನರಾದ ವೀರರೇ ಇಲ್ಲವೆಂದು ಹೆಮ್ಮೆಗೊಂ ಡಿದ್ದ ಕಾಲಯವನನೆಂಬವನೊಬ್ಬನು, ನಾರದನ ಮೂಲಕವಾಗಿ ಯಾದ ವರ ಪರಾಕ್ರಮವನ್ನು ಕೇಳಿ, ಅವರು ತನಗೆ ಸಮಾನರಾದುದರಿಂದ ಅವ ರೊಡನೆ ಯುದ್ಧಮಾಡಬೇಕೆಂದೆಣಿಸಿ, ಮೂರುಕೋಟಿ ಮ್ಲೇಚ್ಛಸೈನ್ಯ

---

* ಇಲ್ಲಿಯೂ ಕೃಷ್ಣ ಜರಾಸಂಧರ ಯುದ್ಧಸನ್ನಾಹಗಳನ್ನು ವಿವರಿಸತಕ್ಕ ಕೆಲವು ಅಧಿಕಪಾಠಗಳು ಕೆಲಕೆಲವು ಪ್ರತಿಗಳಲ್ಲಿಮಾತ್ರ ಕಾಣುವುವು.

ಗಳನ್ನು ಸಂಗ್ರಹಿಸಿಕೊಂಡು, ಮಥುರಾಪುರಿಯನ್ನು ಮುತ್ತಿದನು. ಇದನ್ನು ನೋಡಿ ಕೃಷ್ಣನು ತನ್ನಣ್ಣನಾದ ಬಲರಾಮನೊಡನೆ ಮಂತ್ರಾಲೋಚನೆಯನ್ನು ನಡೆಸುತ್ತ "ಅಣ್ಣಾ! ಈಗ ನಮ್ಮ ಯಾದವರಿಗೆ ಎರಡು ಕಡೆಯಿಂದಲೂ ಭಯಂಕರವಾದ ವಿಪತ್ತು ಬಂದೊದಗಿರುವುದು. ಮೂರು ಕೋಟಿಸೈನ್ಯದೊಡನೆ ಕಾಲಯವನನು ಬಂದು, ನಮ್ಮ ಪಟ್ಟಣವನ್ನು ಮುತ್ತಿರುವನು ಈಗಲೋ ನಾಳೆಯೋ ಜರಾಸಂಧನು ಯುದ್ಧಸನ್ನದ್ಧನಾಗಿ ಬರುವದರಲ್ಲಿರುವನು. ಈಗ ನಾವಿಬ್ಬರೂ ಈ ಕಾಯಲವನನೊಡನೆ ಯುದ್ಧವನ್ನಾರಂಭಿಸಿದಪಕ್ಷದಲ್ಲಿ, ಇಲ್ಲಿ ಯುದ್ಧವು ನಡೆಯುತ್ತಿರುವಾಗಲೇ ಜರಾಸಂಧನು ಬೇರೆಕಡೆಯಿಂದ ನಮ್ಮ ಪುರಕ್ಕೆ ಪ್ರವೇಶಿಸಿ,ನಮ್ಮ ಬಂಧುಗಳೆಲ್ಲರನ್ನೂ ಕೊಲ್ಲುವನು ಇಲ್ಲವೇ ಯಾದವರೆಲ್ಲರನ್ನೂ ಸೆರೆಹಿಡಿದು ತನ್ನ ಪುರಕ್ಕಾದರೂ ಸಾಗಿಸಿಬಿಡುವನು. ಆದುದರಿಂದ ಈಗ ನಾವು ಬೇರೊಬ್ಬರಿಗೂ ಪ್ರವೇಶಿಸಲಸಾಧ್ಯವಾದ ಒಂದು ಜಲದುರ್ಗವನ್ನು ಮಾಡಿ, ನಮ್ಮ ಬಂಧುಗಳೆಲ್ಲರನ್ನೂ ಅದರಲ್ಲಿಟ್ಟು, ಆಮೇಲೆ ನಾವು ಆ ಯವನನೊಡನೆ ಯುದ್ಧಕ್ಕೆ ನಿಲ್ಲುವೆವು." ಎಂದನು. ಬಲರಾಮನು ಅದಕ್ಕೆ ಸಮ್ಮತಿಸಿದಮೇಲೆ, ಕೃಷ್ಣನು ಸಮುದ್ರಮಧ್ಯದಲ್ಲಿ ಹನ್ನೆರಡುಯೋಜನಗಳ ವಿಸ್ತಾರಕ್ಕೆ ಒಂದು ಪುರವನ್ನು ಅದ್ಭುತಾಕಾರದಿಂದ ಕಟ್ಟಿಸಿದನು. ವಿಶ್ವಕರ್ಮನ ಶಿಲ್ಪನೈಪುಣ್ಯವೆಲ್ಲವೂ ಆದರಲ್ಲಿ ತೋರುತಿದ್ದಿತು. ಅದರಲ್ಲಿ ರಾಜಬೀದಿಗಳೂ, ಅಂಗಳಗಳೂ, ಬೀದಿಗಳೂ, ಚತುಷ್ಪಥಗಳೂ,ಶಿಲ್ಪಶಾಸ್ತ್ರವಿಧಿಯನ್ನನುಸರಿಸಿ ಕ್ರಮವಾಗಿ ಕಂಗೊಳಿಸುತಿದ್ದುವು ಮತ್ತು ಅಲ್ಲಿ ದೇವಯೋಗ್ಯವಾದ ವೃಕ್ಷಗಳಿಂದಲೂ, ಪುಷ್ಪಲತೆಗಳಿಂದಲೂ ಶೋಭಿತಗಳಾದ ಅನೇಕೋದ್ಯಾನಗಳು ನೋಡುವವರಿಗೆ ಆನಂದವನ್ನುಂಟುಮಾಡುವಂತಿದ್ದುವು ಮತ್ತು ಅದು ಆಕಾಶವನ್ನು ಮುಟ್ಟುವಂತಿರುವ ಸುವರ್ಣಶೃಂಗಗಳಿಂದಲೂ, ಸ್ಫಟಿಕದ ಅಟ್ಟಲೆಗಳಿಂದಲೂ. ಗೋಪುರಗಳಿಂದಲೂ ಶೋಭಿತವಾಗಿದ್ದಿತು ಕುದುರೆಯ ಲಾಯಗಳು, ಅನ್ನಸತ್ರಗಳು, ಮುಂತಾದ ಕಟ್ಟಡಗಳೆಲ್ಲವೂ, ಬೆಳ್ಳಿ, ಹಿತ್ತಾಳೆ, ಮೊದಲಾದ ಲೋಹಗಳಿಂದಲೇ ರಚಿತವಾಗಿದ್ದುವು ಅಲ್ಲಿನ ಒಂದೊಂದುಮನೆಯೂ ಸುವರ್ಣಕಲಶಗಳಿಂದಲೂ, ಪದ್ಮರಾಗಮಣಿಯ ಶಿಖರಗಳಿಂದಲೂ, ಮರ

ಕತರತ್ನಖಚಿತವಾದ ಚಿನ್ನದ ನೆಲಗಟ್ಟುಗಳಿಂದಲೂ ಕಂಗೊಳಿಸುತಿದ್ದುವು. ಮತ್ತು ಅಲ್ಲಿ ಚಂದ್ರಶಾಲೆಗಳೂ, ದೇವಗೃಹಗಳೂ, ಬ್ರಾಹ್ಮಣಾದಿಚತು ರ್ವರ್ಣದವರಿಗೆ ಬೇರೆಬೇರೆ ನಿವಾಸಯೋಗ್ಯಗಳಾದ ಸ್ಥಳಗಳೂ ಶೋಭಿಸು ತಿದ್ದುವು. ಇಷ್ಟರಲ್ಲಿಯೇ ಮಹೇಂದ್ರನು, ಶ್ರೀಕೃಷ್ಣನಿಗಾಗಿ ಸುಧರ್ಮೆಯೆಂ ಬ ತನ್ನ ಸಭೆಯನ್ನೂ, ಪಾರಿಜಾತವೃಕ್ಷವನ್ನೂ ಅಲ್ಲಿಗೆ ಕಳುಹಿಸಿಕೊಟ್ಟನು. ಆದರಿಂದ ಅಲ್ಲಿರತಕ್ಕವರಿಗೆ, ಮನುಷ್ಯಧರ್ಮಗಳಾದ ಹಸಿವು, ಬಾಯಾರಿಕೆ, ದುಃಖ, ಮೋಹ, ಜರೆ, ಮರಣ, ಮೊದಲಾದ ಬಾಧೆಗಳೇ ಕಾಣದಂತಾ ದುವು. ವರುಣದೇವನು ಶ್ರೀಕೃಷ್ಣನಿಗಾಗಿ ಒಂದು ಕಿವಿಯಲ್ಲಿಮಾತ್ರ ಶ್ಯಾಮಲವಾಗಿ, ಬೇರೆ ಅವಯವಗಳಲ್ಲವೂ ಬಿಳುಪಾಗಿ, ಮನೋವೇಗವುಳ್ಳ ಕುದುರೆಗಳನ್ನು ಕಳುಹಿಸಿಕೊಟ್ಟನು. ನವನಿಧಿಗಳಿಗೆ ಅಧಿಪತಿಯಾದ ಕುಬೇ ರನು, ತನ್ನ ವಶದಲ್ಲಿದ್ದ ಎಂಟುಬಗೆಯ ಬೊಕ್ಕಸಗಳನ್ನೂ ಕಳುಹಿಸಿಕೊಟ್ಟ ನು. ಹೀಗೆಯೇ ಇತರಸಿದ್ಧಾದಿಗಳೆಲ್ಲರೂ, ತಮ್ಮತಮ್ಮ ಅಧಿಕಾರಸಿದ್ಧಿಗಾ ಗಿ,ಆ ಭಗವದನುಗ್ರಹದಿಂದಲೇ ತಮತಮಗೆ ಪ್ರಾಪ್ತವಾಗಿದ್ದ ಐಶ್ವರ್ಯಗಳೆಲ್ಲ ವನ್ನೂ, ಅವನು ಭೂಮಿಯಲ್ಲಿ ಅವತರಿಸಿದ್ದಾಗ,ಹಿಂತಿರುಗಿ ಅವನಲ್ಲಿಯೇ ಸ ಮರ್ಪಿಸಿದರು. ಕೃಷ್ಣನು ತನ್ನ ಯೋಗಪ್ರಭಾವದಿಂದ ಮಧುರೆಯಲ್ಲಿದ್ದ ತ ನ್ನ ಜನವೆಲ್ಲವನ್ನೂ ಆ ಹೊಸಪಟ್ಟಣಕ್ಕೆ ತಂದುಸೇರಿಸಿ, ಅಲ್ಲಿಂದ ಬಲ ರಾಮನ ಬಳಿಗೆ ಬಂದು, ಆತನೊಡನೆ ಮಂತ್ರಾಲೋಚನೆಯನ್ನುಮಾಡಿ, ಅ ದರಂತೆ ಒಂದು ಪುಷ್ಪಮಾಲಿಕೆಯನ್ನುಮಾತ್ರ ಧರಿಸಿ, ನಿರಾಯುಧನಾಗಿ ಪುರದ್ವಾರದಿಂದ ಹೊರಗೆ ಬಂದನು ಇದು ಐವತ್ತನೆಯ ಅಧ್ಯಾಯವು

---

## ಮುಚುಕುಂದ ವೃತ್ತಾಂತವು.

ಇತ್ತಲಾಗಿ ಕಾಲಯವನನು, ಆಗಲೇ ಉದಿಸಿ ಬರುತ್ತಿರುವ ಪೂರ್ಣ ಚಂದ್ರನಂತೆ, ಪುರದ್ವಾರದಿಂದ ಹೊರಟುಬರುತ್ತಿರುವ ಶ್ರೀಕೃಷ್ಣನನ್ನು ಕಂ ಡನು. ಆಗ ಶ್ರೀಕೃಷ್ಣ ಪರಮಾತ್ಮನ ದಿವ್ಯಾದ್ಭುತರೂಪವನ್ನು ಕೇಳಬೇಕೆ? ನೋಡಿದಷ್ಟೂ ಮೇಲೆಮೇಲೆ ಆಸೆಯನ್ನು ಹೆಚ್ಚಿಸತಕ್ಕ ಸುಂದರಾಕೃತಿ ! ಶ್ಯಾಮಲವರ್ಣವಾದ ಮೈ! ಮೈಮೇಲೆ ಹೊಂಬಣ್ಣದ ಪಟ್ಟೆಮಡಿ! ಎದೆಯ

ಲ್ಲಿ ಶ್ರೀವತ್ಸವೆಂಬ ಮಚ್ಚೆ! ಕಂಠದಲ್ಲಿ ಕೌಸ್ತುಭಮಣಿ! ಯಾವಾಗಲೂ ಉಲ್ಲಾಸದಿಂದರಳಿ ಕಾಂತಿವಿಶಿಷ್ಟವಾದ ಕಪೋಲಗಳು! ಮುಖದಲ್ಲಿ ಶುದ್ಧವಾದಮುಗುಳ್ನಗೆ!ಮಾಂಸಪುಷ್ಟಿಯಿಂದುಬ್ಬಿನೀಡಿದ ನಾಲ್ಕುತೋಳುಗಳು. ಆಗಲೇ ಅರಳಿದ ಕಮಲದಂತೆಕೆಂಪಾದ ಕಣ್ಣುಗಳು!ಕಿವಿಯಲ್ಲಿಜಾಜ್ವಲ್ಯಮಾನವಾಗಿ ಹೊಳೆಯುವ ಮಕರಕುಂಡಲಗಳು! ಇಂತಹ ದಿವ್ಯಾಕೃತಿಯನ್ನು ನೋಡಿದೊಡನೆ ಕಾಲಯವನನು ತನ್ನಲ್ಲಿ ತಾನು ಆಶ್ಚರ್ಯದಿಂದ “ಓಹೋ! ಈತನೇ ಯಾದವರಿಗೆಲ್ಲಾ ಬೆಂಬಲವೆನಿಸಿರುವ ವಸುದೇವಪುತ್ರನಾದ ಕೃಷ್ಣನೆಂದು ತೋರುವುದು ಇದರಲ್ಲಿ ಸಂದೇಹವಿಲ್ಲ ನಾರದನು ಹೇಳಿದ ಲಕ್ಷಣಗಳೆಲ್ಲವೂ ಇವನಲ್ಲಿ ಕಾಣುತ್ತಿರುವುವು. ಇದೋ! ಇವನಿಗೆ ಎದೆಯಲ್ಲಿ ಶ್ರೀವತ್ಸವೆಂಬ ಮಚ್ಚೆಯು ಶೋಭಿಸುತ್ತಿರುವುದು ನಾಲ್ಕು ಭುಜಗಳು! ಕಮಲದಂತೆ ಕಣ್ಣುಗಳು! ಕಂಠದಲ್ಲಿ ವನಮಾಲಿಕೆ! ಅತ್ಯಂತಸುಂದರಾಕೃತಿ! ಆದುದರಿಂದ ನಾರದನು ಹೇಳಿದಂತೆ ಈಗ ನನಗೆ ಸಮಾನಬಲವುಳ್ಳ ವೀರನು ಈತನೇ ಆಗಿರಬೇಕು. ಆದರೆ ಈತನು ಈಗ ನಿರಾಯುಧನಾಗಿ ಕಾಲುನಡೆಯಿಂದಲೇ ಬರುತ್ತಿರುವನು. ಆದುದರಿಂದ ಈಗ ನಾನುಮಾತ್ರ ಆಯುಧವನ್ನು ಹಿಡಿದು ಅವನೊಡನೆ ಯುದ್ಧಮಾಡುವುದು ಧರ್ಮವಲ್ಲ! ನಾನೂ ಅವನಂತೆ ನಿರಾಯುಧನಾಗಿಯೇ ಯುದ್ಧಕ್ಕೆ ನಿಲ್ಲುವೆನು? ಎಂದು ನಿಶ್ಚಯಿಸಿಕೊಂಡು,ಯೋಗಿಗಳ ಮನಸ್ಸಿಗೂ ಸಿಕ್ಕಲಾರದ ಆ ಭಗವಂತನನ್ನು ಕೈಯಿಂದ ಹಿಡಿಯುವುದಕ್ಕಾಗಿ ಆತುರದಿಂದ ಓಡಿಬಂದನು. ಅತ್ತಲಾಗಿ ಕೃಷ್ಣನೂ ಕೂಡ, ಈ ಯವನನು ಸಮೀಪಕ್ಕೆ ಬರುವವರೆಗೂ ಸುಮ್ಮನಿದ್ದು, ಆಮೇಲೆ ಅವನಿಗೆ ಭಯಪಟ್ಟೋಡುವವನಂತೆ ಹಿಂತಿರುಗಿ ಓಡಲಾರಂಭಿಸಿದನು ಕಾಲಯವನನೂ ಅವನನ್ನು ಹಿಡಿಯಬೇಕೆಂದು ಬೆನ್ನಟ್ಟಿ ಹೋಗುತಿದ್ದನು ಕೃಷ್ಣನು ಆಗಾಗ ಅವನ ಕೈಗೆ ಸಿಕ್ಕಿಬಿದ್ದಹಾಗೆ ಆಸೆಯನ್ನು ತೋರಿಸುತ್ತ, ಕೊನೆಗೆ ಅವನನ್ನು ಒಂದಾನೊಂದು ಪರ್ವತಗುಹೆಗೆಕರೆತಂದನು. ಇಷ್ಟರಲ್ಲಿ ಯವನನು ಬಹಳವಾಗಿ ಬಳಲಿ, ಕೈಗೆ ಸಿಕ್ಕದೆ ಓಡುತ್ತಿರುವ ಕೃಷ್ಣನನ್ನು ಕುರಿತು “ಎಲಕೃಷ್ಣಾ! ಉತ್ತಮವಾದ ಯದುಕುಲದಲ್ಲಿ ಹುಟ್ಟಿದ ನೀನು, ಯುದ್ಧಕ್ಕಾಗಿ ಹೀಗೆ ಭಯಪಟ್ಟೋಡುವುದು ಉಚಿತವಲ್ಲ! ನಿಲ್ಲು!” ಎಂದು ಮೂದ

ಲಿಸುತ್ತ ಬೆನ್ನಟ್ಟಿಹೋದನು ಆದರೇನು? ಪಾಪಶೇಷವು ಕಳೆದಲ್ಲದೆ ಕೃಷ್ಣನು ಕೈಗೆ ಸಿಕ್ಕುವನೇ! ಎಷ್ಟುದೂರಕ್ಕೆ ಹೋದರೂ ಕೃಷ್ಣನನ್ನು ಹಿಡಿಯುವುದಕ್ಕೆ ಸಾಧ್ಯವಿಲ್ಲದಂತಾಯಿತು ಕೃಷ್ಣನು ಆ ಗುಹೆಯನ್ನು ಪ್ರವೇಶಿಸಿಬಿಟ್ಟನು ಯವನನೂ ಅದರೊಳಗೆ ಪ್ರವೇಶಿಸಿ, ಯಾವನೋ ಒಬ್ಬ ಪುರುಷನು ಅಲ್ಲಿ ಮಲಗಿರುವುದನ್ನು ಕಂಡನು ಅವನನ್ನು ನೋಡಿ ಯವನನು ತನ್ನಲ್ಲಿ ತಾನು “ಓಹೋ! ಈಗ ಶತ್ರುವು ಸಿಕ್ಕಿಬಿದ್ದನು ನನ್ನನ್ನು ಮೋಸದಿಂದ ಇಷ್ಟುದೂರಕ್ಕೆಳೆದುಕೊಂಡು ಬಂದು, ಇಲ್ಲಿ ಏನೂ ತಿಳಿಯದ ಪರಮಸಾಧುವಿನಂತೆ ಮಲಗಿರುವನು ಇರಲಿ! ಇವನಿಗೆ ತಕ್ಕಪ್ರತೀಕಾರವನ್ನು ಮಾಡುವೆನು?” ಎಂದು ನಿಶ್ಚಯಿಸಿ, ಅವನನ್ನೇ ತನಗೆ ಶತ್ರುವಾದ ಕೃಷ್ಣನೆಂದು ಭ್ರಮಿಸಿ, ಅಲ್ಲಿ ಮಲಗಿದ್ದಪುರುಷನನ್ನು ಕಾಲಿಂದ ಬಲವಾಗಿ ಒದೆದನು ಬಹುಕಾಲದಿಂದ ಅಲ್ಲಿ ಮಲಗಿದ್ದ ಪುರುಷನು, ನಿಷ್ಕಾರಣವಾಗಿ ಹೀಗೆ ತನ್ನನ್ನು ಒದೆದವರಾರೆಂದು ಸಂಭ್ರಮದಿಂದ ತಟ್ಟನೆ ಮೇಲೆದ್ದು, ಕಣ್ಣುಗಳನ್ನೊರೆಸಿಕೊಂಡು, ನಾಲ್ಕುಕಡೆಗೂ ತಿರುಗಿ ತನ್ನ ಸಮೀಪದಲ್ಲಿದ್ದ ಕಾಲಯವನನ್ನು ಕೋಪದಿಂದ ನೋಡಿದನು ಆತನ ದೃಷ್ಟಿಯು ಬಿದ್ದಮಾತ್ರಕ್ಕೆ ಆ ಯವನನ ದೇಹದಲ್ಲಿ ಅಗ್ನಿಜ್ವಾಲೆಯು ಹುಟ್ಟಿ, ಅದರಿಂದಲೇ ಅವನು ಭಸ್ಮವಾಗಿ ಬಿದ್ದನು” ಎಂದು ಶುಕಮಹರ್ಷಿಯು ಮುಂದಿನ ಕಥೆಯನ್ನು ಹೇಳುವಷ್ಟರಲ್ಲಿ, ಪರೀಕ್ಷಿದ್ರಾಜನು ಪ್ರಶ್ನೆಮಾಡುವನು “ಓ ಬ್ರಾಹ್ಮಣೋತ್ತಮಾ! ಅಲ್ಲಿ ಮಲಗಿದ್ದ ಮಹಾತ್ಮನಾರು? ಅವನು ಯಾರ ಕಡೆಯವನು! ಅವನ ವೀರ್ಯವೆಂತದು? ಅವನು ಆ ಗುಹೆಯಲ್ಲಿ ಮಲಗಿದ್ದಕಾರಣವೇನು? ಕಾಲಯವನನನ್ನು ತನ್ನ ದೃಷ್ಟಿಮಾತ್ರದಿಂದಲೇ ದಹಿಸತಕ್ಕ ಅದ್ಭುತಶಕ್ತಿಯು ಅವನಿಗೆ ಹೇಗೆ ಬಂದಿತು.? ಈ ವಿಚಾರವನ್ನು ನನಗೆ ವಿವರಿಸಿ ತಿಳಿಸಬೇಕು” ಎಂದನು.

ಅದಕ್ಕಾ ಶುಕಮಹರ್ಷಿಯು “ಓರಾಜೇಂದ್ರಾ! ಕೇಳು! ಆತನು ಇಕ್ಷ್ವಾಕುವಂಶದವನು ಮಾಂಧಾತೃವಿನ ಮಗನು ಅವನಿಗೆ ಮುಚುಕುಂದನೆಂದು ಹೆಸರು. ಆತನು ಬ್ರಾಹ್ಮಣಪ್ರಿಯನು. ಸತ್ಯಸಂಧನು. ಹಿಂದೆ ಇಂದ್ರಾದಿದೇವತೆಗಳು ದೈತ್ಯರಿಗೆ ಭಯಪಟ್ಟು, ಇವನಲ್ಲಿ ಬಂದು ಮರೆಹುಗಲು, ಇವ

ನು ಅವರನ್ನು ತನ್ನ ಪರಾಕ್ರಮದಿಂದ ರಕ್ಷಿಸುತಿದ್ದನು ಆಮೇಲೆ ಆ ದೇವತೆಗಳು ರುದ್ರನ ಮಗನಾದ ಕುಮಾರಸ್ವಾಮಿಯನ್ನು ತಮ್ಮ ಸ್ವರ್ಗಲೋಕಕ್ಕೆ ರಕ್ಷಕನನ್ನಾಗಿ ಪಡೆದಮೇಲೆ, ಈ ಮುಚುಕುಂದನನ್ನು ಕುರಿತು “ಓ, ರಾಜೇಂದ್ರಾ! ಇದುವರೆಗೆ ನೀನು ನಮಗೆ ಅನೇಕಕಷ್ಟಗಳನ್ನು ಬಿಡಿಸಿ ಕಾಪಾಡಿದೆ! ಇನ್ನು ನೀನು ವಿಶ್ರಾಂತಿಯನ್ನು ತೆಗೆದುಕೊಳ್ಳಬಹುದು ಓ ವೀರಾಗ್ರಣೀ! ನೀನು ನಮಗಾಗಿ ನಿನ್ನ ರಾಜ್ಯವನ್ನೂ ಬಿಟ್ಟು, ಸಮಸ್ತಕಾಮಭೋಗಗಳನ್ನೂ ನಿರಾಕರಿಸಿ, ಮನುಷ್ಯಲೋಕದಿಂದ ಇಲ್ಲಿಗೆ ಬಂದು ನಮ್ಮನ್ನು ಕಾಪಾಡುತಿದ್ದೆ. ಇನ್ನು ನೀನು ಹೋಗಬಹುದು. ಆದರೆ ಈಗ ಭೂಲೋಕದಲ್ಲಿ ನಿನ್ನ ಮಕ್ಕಳಾಗಲಿ, ಪತ್ನಿಯರಾಗಲಿ, ಜ್ಞಾತಿಗಳಾಗಲಿ, ಮಂತ್ರಿಗಳಾಗಲಿ, ಅಮಾತ್ಯರಾಗಲಿ, ಪ್ರಜೆಗಳಾಗಲಿ, ಯಾರೂ ಇರಲಾರರು. ನಿನ್ನ ಸಮಕಾಲದವರೆಲ್ಲರೂ ಈಗ ಕಾಲವಶರಾಗಿರುವರು. ಆ ಕಾಲವೆಂಬುದು ಬೇರೆಯಲ್ಲ. ಅವ್ಯಯನಾಗಿಯೂ, ಸರ್ವನಿಯಾಮಕನಾಗಿಯೂ ಇರುವ ಭಗವಂತನೇ ಕಾಲಸ್ವರೂಪನಾಗಿರುವನು. ಆತನು ಬಲಾಢ್ಯರಿಗೂ ಬಲಾಢ್ಯನು. ಗೋಪಾಲಕರು ಪಶುಗಳನ್ನು ಹೇಗೋ ಹಾಗೆ, ಅವನು ಸಮಸ್ತಪ್ರಾಣಿಗಳನ್ನೂ ತನಗೆ ವಶಮಾಡಿಕೊಂಡು ಅದರಿಂದ ವಿನೋದಿಸುತ್ತಿರುವನು. ರಾಜೇಂದ್ರಾ! ಮುಖ್ಯವಾಗಿ ನಾವು ನಿನಗೆ ಬಹಳ ಕೃತಜ್ಞರಾಗಿರುವೆವು. ನಿನಗೆ ಬೇಕಾದ ವರಗಳನ್ನು ಕೇಳು! ಕೈವಲ್ಯವೊಂದನ್ನುಹೊರತು ಬೇರೆ ಯಾವವರವನ್ನು ಕೇಳಿದರೂ ನಾವು ಕೊಡಬಲ್ಲೆವು. ಆ ಕೈವಲ್ಯವನ್ನು ಕೊಡುವುದಕ್ಕೆ ಭಗವಂತನಾದ ವಿಷ್ಣುವೊಬ್ಬನುಹೊರತು, ಬೇರೆಯಾವ ದೇವತೆಗಳೂ ಸಮರ್ಥರಲ್ಲ ಅದೊಂದನ್ನು ಬಿಟ್ಟು ನಿನಗಿಷ್ಟವಾದ ವರವನ್ನು ಕೇಳಬಹುದು” ಎಂದರು ಆಗ ಮುಚುಕುಂದನು ದೇವತೆಗಳಿಗೆ ನಮಸ್ಕರಿಸಿ, “ಎಲೈ ದೇವತೆಗಳಿರಾ! ನಾನು ಬಹುಕಾಲದಿಂದ ನಿದ್ರೆಯಿಲ್ಲದೆ ಆಯಾಸಪಟ್ಟಿರುವೆನು. ಆದುದರಿಂದ ನನಗೆ ಮಲಗುವುದಕ್ಕಾಗಿ ವಿವಿಕ್ತವಾದ ಒಂದು ಸ್ಥಳವನ್ನು ತೋರಿಸಿಕೊಟ್ಟರೆ ಸಾಕು”ಎಂದು ಕೇಳಿದನು. ಅದರಂತೆ ದೇವತೆಗಳು,ಆತನಿಗೆ ಈ ಪರ್ವತಗುಹೆಯನ್ನು ತೋರಿಸಿಕೊಟ್ಟು, ಅವನನ್ನುಕುರಿತು ಓ ಮುಚುಕುಂದಾ! ಇದೋ! ಈ ಗುಹೆ

ಯಲ್ಲಿ ನೀನು ಸುಖವಾಗಿ ನಿದ್ರಿಸುತ್ತಿರು. ನೀನು ಸುಖನಿದ್ರೆಯಲ್ಲಿರುವಾಗ ಯಾರು ನಿನಗೆ ನಿದ್ರಾಭಂಗವನ್ನು ಮಾಡುವರೋ, ಅವರು ನಿನ್ನ ದೃಷ್ಟಿಯಿಂದ ದಗ್ಧರಾಗಲಿ" "ಎಂದು ಅನುಗ್ರಹಿಸಿ ಕಳುಹಿಸಿದರು. ಅದರಂತೆ ಆ ಮುಚುಕುಂದನು ಈ ಗುಹೆಯಲ್ಲಿ ಮಲಗಿದ್ದಾಗ, ಕಾಲಯವನನು ಅವನಿಗೆ ನಿದ್ರಾಭಂಗವನ್ನು ಮಾಡಿದುದರಿಂದ ಮೃತನಾದನು ರಾಜೇಂದ್ರಾ! ಇತ್ತಲಾಗಿ ಕಾಲಯವನನು ಮೃತನಾದ ಸಂಗತಿಯನ್ನು ತಿಳಿದೊಡನೆ, ಕೃಷ್ಣನು ಹಿಂತಿರುಗಿ ಬಂದು, ಮುಚುಕುಂದನಿಗೆ ಕಾಣಿಸಿಕೊಂಡನು ಆಗ ಮುಚುಕುಂದನು, ನೀಲಮೇಘಶ್ಯಾಮನಾಗಿಯೂ, ಶ್ರೀವತ್ಸ, ಕೌಸ್ತುಭ ವೈಜಯಂತೀ ವನಮಾಲಿಕೆಗಳಿಂದಲಂಕೃತನಾಗಿಯೂ, ಪೀತಾಂಬರಧಾರಿಯಾಗಿಯೂ, ಕುಂಡಲಶೋಭಿತವಾದ ಪ್ರಸನ್ನಮುಖದಿಂದಲೂ, ಅನುರಾಗಪೂರ್ವಕವಾದ ಕಟಾಕ್ಷದಿಂದಲೂ, ಎಳವಯಸ್ಸಿನಿಂದಲೂ, ಸಿಂಹದಂತೆ ಗಂಭೀರವಾದ ನಡೆಯಿಂದಲೂ, ತ್ರೈಲೋಕ್ಯವನ್ನೂ ಮೋಹಗೊಳಿಸತಕ್ಕ ದಿವ್ಯಾಕೃತಿಯುಳ್ಳವನಾಗಿದ್ದ ಆ ಭಗವಂತನನ್ನು ನೋಡಿ, ಅದ್ಭುತವಾದ ಅವನ ತೇಜಸ್ಸಿಗೆ ಮರುಳಾಗಿ, ಅವನನ್ನು ಕುರಿತು ಭಯಭಕ್ತಿಗಳೊಡನೆ ಹೀಗೆಂದು ಪ್ರಶ್ನೆಮಾಡುವನು."ಎಲೈ ನೀನು ಯಾರು? ನಿರ್ಜನವಾದ ಈ ಪರ್ವತಗುಹೆಗೆ ನೀನು ಬರಲು ಕಾರಣವೇನು? ತೀಕ್ಷ್ಣವಾದ ಕಲ್ಲುಮುಳ್ಳುಗಳಿಂದ ಕಠಿನವಾದ ಈ ಅರಣ್ಯಪ್ರದೇಶದಲ್ಲಿ, ಕಮಲದಳದಂತೆ ಮೃದುವಾದ ಈ ನಿನ್ನ ಕಾಲಿನಿಂದ ಸಂಚರಿಸುವ ಕಾರಣವೇನು? ಲೋಕದಲ್ಲಿ ಮಹಾತೇಜಸ್ವಿಗಳ ತೇಜಸ್ಸೆಲ್ಲವೂ ಒಂದಾಗಿ ನಿನ್ನಲ್ಲಿ ಮೂರ್ತಿಭವಿಸಿದಂತೆ ತೋರುವುದು. ಪೂಜ್ಯನಾದ ಸೂರ್ಯದೇವನೇ ನೀನಾಗಿರಬಹುದೆ? ಅಥವಾ ನೀನು ಅಗ್ನಿ ಪುರುಷನಾಗಿರಬಹುದೆ? ಇಂದ್ರಚಂದ್ರರಲ್ಲಿ ನೀನೊಬ್ಬನಾಗಿರಬಹುದೆ? ಅಥವಾ! ಲೋಕಪಾಲಕರಲ್ಲಿ ಸೇರಿದವನೇ? ಅಷ್ಟುಮಾತ್ರವೂ ಸಾಲದು. ದೇವೋತ್ತಮರಾದ ತ್ರಿಮೂರ್ತಿಗಳಲ್ಲಿಯೇ ನೀನೊಬ್ಬನಾಗಿರಬಹುದೆಂದೂ ತೋರುವುದು.ದೀಪವನ್ನು ಬೆಳಗಿದಂತೆ ನಿನ್ನ ದೇಹಕಾಂತಿಯಿಂದಲೇ ಇಲ್ಲಿನ ಅಂಧಕಾರವೆಲ್ಲವೂ ಅಡಗಿಹೋಗಿರುವುದು. ಓ!ಪುರುಷಶ್ರೇಷ್ಠಾ! ನಿನ್ನ ಪೂರ್ವೋತ್ತರಗಳನ್ನು ತಿಳಿಯಬೇಕೆಂದು ನನಗೆ

ಬಹಳ ಕುತೂಹಲವುಂಟಾಗಿರುವುದು. ನೀನು ಹುಟ್ಟಿದುದೆಲ್ಲಿ? ನಿನ್ನ ಕುಲ ವಾವುದು? ನಿನ್ನ ಕಾರ್ಯಗಳೇನು ? ಇವೆಲ್ಲವನ್ನೂ ಹೇಳಬಹುದಾದರೆ, ಕೃಪೆ ಯಿಟ್ಟು ತಿಳಿಸಬೇಕು. ಓ ಮಹಾತ್ಮಾ! ನಾವು ಇಕ್ಷ್ವಾಕುಕುಲದವರು. ನನಗೆ ಮುಚುಕುಂದನೆಂದು ಹೆಸರು. ನಾನು ಮಾಂಧಾತೃವಿನ ಮಗನು. ಬಹುಕಾಲದಿಂದ ನಿದ್ರೆಯಿಲ್ಲದೆ ಈ ಗುಹೆಯಲ್ಲಿ ಮೈತಿಳಿಯದೆ ಮಲಗಿದ್ದೆನು. ಈಗ ಸ್ವಲ್ಪಮುಂದೆ ಯಾವನೋ ಒಬ್ಬನು ನನ್ನನ್ನು ಕಾಲಿಂದೊದೆದು ಎಬ್ಬಿಸಿದನು. ಅವನ ಅಪರಾಧಕ್ಕೆ ಫಲವಾಗಿ ಆಗಲೇ ಅವನು ಭಸ್ಮೀಭೂತ ನಾದನು. ಆಮೇಲೆ ನೀನು ನನ್ನ ಕಣ್ಣಿಗೆ ಗೋಚರಿಸಿದೆ. ದುಸ್ಸಹವಾದ ನಿನ್ನ ತೇಜಸ್ಸಿನಿಂದ ನಿನ್ನನ್ನು ಚೆನ್ನಾಗಿ ನೋಡುವುದಕ್ಕೂ ನನಗೆ ಸಾಧ್ಯವಿಲ್ಲ ದಂತಿದೆ! ನಿನ್ನ ದಿವ್ಯತೇಜಸ್ಸನ್ನು ನೋಡಿದರೆ ಸಮಸ್ತಲೋಕಕ್ಕೂ ನೀನು ಪೂಜ್ಯನೆಂದು ತೋರುವುದು. ನಿನ್ನ ನಿಜಸ್ಥಿತಿಯನ್ನು ತಿಳಿಸಬೇಕು ” ಎಂದನು. ಆಗ ಕೃಷ್ಣನು, ಅವನ ವಿನಯವಾಕ್ಯಗಳಿಗೆ ಸಂತೋಷಪಟ್ಟು, ಮುಖದಲ್ಲಿ ಮಂದಹಾಸವನ್ನು ತುಳುಕಿಸುತ್ತಾ, ಮೇಘಗಂಭೀರವಾದ ಧ್ವನಿಯಿಂದ ಹೀಗೆಂದು ಹೇಳುವನು. “ಎಲೈ ರಾಜನೆ! ನನಗೆ ಒಂದು ಹೆಸರಲ್ಲ! ಸಾವಿರಾರು ಹೆಸರುಗಳುಂಟು ನಾನು ನಡೆಸತಕ್ಕ ಕಾರ್ಯಗಳೂ, ನಾನು ಪಡೆಯತಕ್ಕ ಜನ್ಮಗಳೂ ಅನೇಕವಾಗಿರುವುವು. ಅವೆಲ್ಲವೂ ಅಸಂಖ್ಯಾತವಾಗಿರುವುದರಿಂದ ಇಷ್ಟೆಂದು ಲೆಕ್ಕಮಾಡುವುದಕ್ಕೆ ಯಾರಿಂದಲೂ ಸಾಧ್ಯವಿಲ್ಲ. ಕೊನೆಗೆ ನಾನೇ ಅದನ್ನೆಣಿಸುವುದಕ್ಕೆ ಸಮರ್ಥನಲ್ಲ. ಯಾವಾಗಲೂ, ಯಾವನಾ ದರೂ ಸೂಕ್ಷ್ಮಬುದ್ಧಿಯುಳ್ಳವನೊಬ್ಬನು, ತನ್ನ ಅನೇಕಜನ್ಮಗಳಿಂದ ಭೂಮಿ ಯಲ್ಲಿರುವ ರೇಣುಗಳನ್ನಾದರೂ ಲೆಕ್ಕಮಾಡಿ ತೆಗೆಯಬಲ್ಲನು. ನನ್ನ ಗುಣಗಳನ್ನೂ, ಕರ್ಮಗಳನ್ನೂ, ನಾಮಗಳನ್ನೂ ಇಷ್ಟೆಂದು ನಿರ್ಣಯಿಸು ವುದಕ್ಕೆ ಯಾರಿಂದಲೂ ಸಾಧ್ಯವಿಲ್ಲ. ಅಷ್ಟೇಕೆ? ಭೂತಭವಿಷ್ಯದ್ವರ್ತಮಾನ ಕಾಲಗಳನ್ನು ತಿಳಿಯತಕ್ಕ ಶೌನಕಪರಾಶರಾದಿಮಹರ್ಷಿಗಳೂಕೂಡ ನನ್ನ ಜನ್ಮಕರ್ಮಗಳನ್ನು ಎಷ್ಟೆಷ್ಟೇ ವರ್ಣಿಸುತಿದ್ದರೂ, ಅದನ್ನು ಕೊನೆ ಮುಟ್ಟಲಾರರು. ಹಾಗಿದ್ದರೂ ಎಲೈ ಮುಚುಕುಂದನೆ! ನನ್ನ ಈಗಿನ ಸ್ಥಿತಿ ಯನ್ನು ಮಾತ್ರ ತಿಳಿಸುವೆನು ಕೇಳು. ಪೂರ್ವದಲ್ಲಿ ಬ್ರಹ್ಮನು ಧರ್ಮಸಂರಕ್ಷ

ಣಾರ್ಥವಾಗಿಯೂ, ಭೂಮಿಗೆ ಭಾರಭೂತರಾದ ರಾಕ್ಷಸಪ್ರಕೃತಿಯುಳ್ಳವರನ್ನು ನಾಶಮಾಡುವುದಕ್ಕಾಗಿಯೂ, ನನ್ನಲ್ಲಿ ಬಂದು ಪ್ರಾರ್ಥಿಸಲು ನಾನು ಯದುಕುಲದಲ್ಲಿ ವಸುದೇವನ ಭಾರ್ಯೆಯಲ್ಲಿ ಅವತರಿಸಿದೆನು. ವಸುದೇವನ ಮಗನಾದುದರಿಂದ, ನನ್ನನ್ನು ವಾಸುದೇವನೆಂದು ಹೇಳುವರು ಪೂರ್ವದಲ್ಲಿ ಕಾಲನೇಮಿಯಾಗಿದ್ದು, ಈಗ ಕಂಸನಾಗಿ ಹುಟ್ಟಿದ ದುಷ್ಟಯಾದವನು ನನ್ನಿಂದಲೇ ಹತನಾದನು ಪ್ರಲಂಬಾದಿದಾನವರೂ ನನ್ನಿಂದ ಹತರಾದರು. ಈಗನಿನ್ನ ದೃಷ್ಟಿಯಿಂದ ದಗ್ಧನಾದವನಿಗೆ ಯವನನೆಂದು ಹೆಸರು ಅವನಿಗೆ ನಿನ್ನ ಮೂಲಕವಾಗಿ ಈ ಅವಸ್ಥೆಯನ್ನು ತಂದಿಟ್ಟವನೂ ನಾನೇ! ಓ ರಾಜಾ! ಈಗ ನಾನು ನಿನ್ನನ್ನು ಅನುಗ್ರಹಿಸುವುದಕ್ಕಾಗಿಯೇ ಈ ಗುಹೆಗೆ ಬಂದೆನು ಪೂರ್ವಜನ್ಮದಲ್ಲಿ ನೀನು ನನ್ನನ್ನು ವಿಶೇಷವಾಗಿ ಆರಾಧಿಸಿರುವೆ ನಿನ್ನಂತಹ ಭಕ್ತರನ್ನು ಅನುಗ್ರಹಿಸಬೇಕಾದುದೇ ನನ್ನ ಸಂಕಲ್ಪವು ನಿನಗೆ ಬೇಕಾದ ವರವನ್ನು ಕೇಳು! ಕೊಡುವೆನು ನನ್ನಲ್ಲಿ ಮರೆಹೊಕ್ಕವರು ತಿರುಗಿ ಸಂಸಾರದಲ್ಲಿ ಸಿಕ್ಕಿ ಸಂಕಟಪಡಬಾರದು” ಎಂದನು ಈ ಮಾತನ್ನು ಕೇಳಿದೊಡನೆ ಮುಚುಕುಂದನು, ಪೂರ್ವದಲ್ಲಿ ತನಗೆ ಇದೇವಿಷಯವನ್ನು ಕುರಿತು ಗರ್ಗಮಹರ್ಷಿಯು ಹೇಳಿದ್ದ ಮಾತನ್ನು ಸ್ಮರಿಸಿಕೊಂಡು,ದೇವದೇವನಾದಶ್ರೀಮನ್ನಾರಾಯಣನೇ ಆತನೆಂದು ತಿಳಿದು, ಸಂತೋಷದಿಂದ ನಮಸ್ಕರಿಸಿ ವಿಜ್ಞಾಪಿಸುವನು.” ಓ ಸರ್ವೇಶ್ವರಾ! ಈಗಲಾದರೋ ನೀನು ಇಷ್ಟವರಗಳನ್ನು ಕೇಳಿಕೊಳ್ಳುವಂತೆ ನನ್ನನ್ನು ಪ್ರೇರಿಸುತ್ತಿರುವೆ. ಆದರೇನು! !ಲೋಕದಲ್ಲಿ ಸ್ತ್ರೀಪುರುಷರು ಮೊದಲಾದ ಸಮಸ್ತಪ್ರಾಣಿಗಳೂ, ನಿನ್ನ ಮಾಯೆಯಿಂದಲೇ ಮೋಹಿತಗಳಾಗಿ, ನಿರತಿಶಯಪುರುಷಾರ್ಥಭೂತನಾದ ನಿನ್ನನ್ನು ಮರೆತಿರುವುವು ಮತ್ತು ಉತ್ತಮಪುರುಷಾರ್ಥವಾವುದೆಂಬುದನ್ನು ತಿಳಿಯದೆ ಮುಂದೆ ತಮಗೆ ಅನರ್ಥಹೇತುಗಳಾದ ವಿಷಯಗಳನ್ನೇ ಪುರುಷಾರ್ಥವೆಂದು ತಿಳಿದು ಭ್ರಮಿಸುವುವು. ಕೇವಲದುಃಖಕ್ಕೆ ಜನ್ಮಸ್ಥಾನವಾಗಿ, ಲೇಶಮಾತ್ರವೂ ಸುಖವಿಲ್ಲದ ಸಂಸಾರವನ್ನೇ ಸುಖವೆಂದು ತಿಳಿದು, ಆ ಸಂಸಾರದಲ್ಲಿ ಬಿದ್ದು ನರಳುವುವು ಹೀಗೆ ಮೊದಲೇ ನಿನ್ನಿಂದ ವಂಚಿತರಾದ ನಮ್ಮಂತಹ ಜನರನ್ನು ಈಗ ತಿರುಗಿ ನೀನು ಇಷ್ಟವರಗಳನ್ನು ಕೊಡುವುದಾಗಿ ಪ್ರೋತ್ಸಾ

ಹಿಸಿ, ಲೌಕಿಕಸುಖಗಳಲ್ಲಿ ಸೇರಿಸುವುದಕ್ಕೆ ಯತ್ನಿಸಬಹುದೆ? ಆದರೆ ಇದರಿಂದ ನಿನ್ನನ್ನು ನಿರ್ದಯನೆಂದೂ, ವಂಚಕನೆಂದೂ ಹೇಳುವುದಕ್ಕಿಲ್ಲ. ಅವರವರ ಕರ್ಮವಾಸನೆಯೇ ಅವರಿಗೆ ಈ ವಿಧದಾದ ಬುದ್ಧಿಯನ್ನುಂಟು ಮಾಡುವುದು. ನೀನೇನೋ ಅನುಗ್ರಹಬುದ್ಧಿಯಿಂದಲೇ ಚೇತನರಿಗೆ ಈ ಕರ್ಮ ಕ್ಷೇತ್ರದಲ್ಲಿ ದುರ್ಲಭವಾದ, ಮತ್ತು ನಿನ್ನನ್ನು ಆರಾಧಿಸುವುದಕ್ಕೆ ಅನುಕೂಲ ವಾದ ಮನುಷ್ಯಜನ್ಮವನ್ನು ಕೊಡುತ್ತಿರುವೆ. ಚೇತನರು ತಮ್ಮ ಪ್ರಯತ್ನ ವಿಲ್ಲದೆ ನಿರ್ಹೇತುಕವಾದ ನಿನ್ನ ಅನುಗ್ರಹದಿಂದ ಈ ಉತ್ತಮದೇಹವನ್ನು ಪಡೆದಿರುವಾಗಲೂ, ಕರ್ಮವಾಸನೆಯಿಂದ ಬುದ್ಧಿಗೆಟ್ಟವರಾಗಿ, ನಿನ್ನ ಪಾ ದಾರವಿಂದಧ್ಯಾನವನ್ನೇ ಮರೆತುಬಿಡುವರು. ಮತ್ತು ದೇಹವನ್ನೇ ಆತ್ಮವೆಂದು ಭ್ರಮಿಸಿ, ಹಸುಗಳು ಮೇವಿನಾಸೆಯಿಂದ ಹುಲ್ಲುಮುಚ್ಚಿದ ಹಾಳು ಬಾವಿಯಲ್ಲಿ ಬೀಳುವಂತೆ, ಸಂಸಾರಸಾಗರದಲ್ಲಿ ಬಿದ್ದು ತತ್ತಳಿಸುವರು. ಓ ದೇವಾ! ಅದರಂತೆಯೇ ಈಗ ನಾನು, ಇಂದೋ, ನಾಳೆಯೋ ಮರಣ ಹೊಂದತಕ್ಕ ಈ ದೇಹವನ್ನೇ ಆತ್ಮವೆಂದು ಭ್ರಮಿಸಿ, ಹೆಂಡಿರುಮಕ್ಕಳ ಲ್ಲಿಯೂ, ರಾಜ್ಯಕೋಶಗಳಲ್ಲಿಯೂ ಮೋಹಗೊಂಡು, ಅವುಗಳನ್ನು ರಕ್ಷಿಸುವು ದಕ್ಕಾಗಿ ಕೊನೆಮೊದಲಿಲ್ಲದ ಚಿಂತೆಯಿಂದ ಕಳವಳಿಸುತ್ತಿದ್ದೆನು. ಹೀಗೆ ಅಹಂಕಾರಮಮಕಾರಗಳಲ್ಲಿ ಸಿಕ್ಕಿಬಿದ್ದು ಐಶ್ವರ್ಯಮದದಿಂದ ಮುಂಗಾಣದೆ ವಿಷಯಾಭಿಲಾಷೆಯಲ್ಲಿ ಬುದ್ಧಿಗೆಟ್ಟಿದ್ದೆನು. ಇದರಿಂದ ನಾನು ಇದುವರೆಗೂ ನಿಷ್ಪ್ರಯೋಜನವಾಗಿಯೇ ನನ್ನ ಜೀವನಕಾಲವನ್ನು ಕಳೆದಂತಾಯಿತು. ಮಣ್ಣಿನ ಗೋಡೆಯಂತೆಯೂ, ಮಡಿಕೆಯಂತೆಯೂ ನಶ್ವರವಾದ ಈ ಶರೀರ ದಲ್ಲಿ ವಿಶೇಷಾಭಿಮಾನವನ್ನಿಟ್ಟು, ರಥ, ಗಜ, ತುರಗ, ಪದಾತಿಗಳೆಂಬ ಚತು ರಂಗಸೈನ್ಯಗಳಿಂದಲೂ, ಆಯಾಸೈನ್ಯಾಧಿಪತಿಗಳಿಂದಲೂ ಪರಿವೃತನಾಗಿ, ರಾಜ್ಯಾಧಿಕಾರಮದದಿಂದ ಭೂಮಿಯೆಲ್ಲವನ್ನೂ ತಿರುಗುತಿದ್ದೆನು. ಆ ಅಧಿ ಕಾರಮದದಿಂದ ಕುರುಡನಂತೆ ನಿನ್ನನ್ನೂ ಕಾಣದಿದ್ದೆನು. ಹೀಗೆ ಐಶ್ವರ್ಯಮ ದದಿಂದಲೂ, ಅಧಿಕಾರಮದದಿಂದಲೂ ಮುಂದುಗಾಣದೆ, ಮೇಲೆಮೇಲೆ ನಾನಾಬಗೆಯ ಮನೋರಥಗಳನ್ನು ಮನಸ್ಸಿನಲ್ಲಿಟ್ಟುಕೊಂಡು, ಶಬ್ದಾದಿ ವಿಷಯಗಳ ಲೋಭಬುದ್ಧಿಯಿಂದ ಮೈಮರೆತಿರುವವರನ್ನು ನೋಡಿದಾಗ,ನೀ

ನು, ಹಸಿದ ಹಾವು ನಾಲಗೆಯನ್ನು ನೀಡುತ್ತ ಬಂದು, ಇಲಿಯನ್ನು ಹಿಡಿಯು ವಂತೆ ಮೃತ್ಯುರೂಪಿಯಾಗಿ ಥಟ್ಟನೆ ಬಂದು ಅವರನ್ನು ಹಿಡಿಯುವೆ ಹೀಗೆ ತಾವೇ ಸ್ವತಂತ್ರರೆಂಬ ಅಭಿಮಾನದಿಂದ ನಿನ್ನನ್ನು ಲಕ್ಷ್ಯಮಾಡದಿರತಕ್ಕವ ರಿಗೆ ಇದಕ್ಕಿಂತಲೂ ಅನರ್ಥವೇನಾಗಬೇಕು ಆದರೆ “ಈ ರಾಜಶರೀರ ವನ್ನು ಹೊಂದಿದಾಗಲೂ ನಾನು ಅದನ್ನು ಹೀಗೆ ನಿಂದಿಸಬಹುದೇ” ಎಂ ದು ನೀನು ಕೇಳಬಹುದು ಓ, ದೇವಾ! ಈ ಶರೀರವೂ, ಈ ರಾಜಭೋಗಗ ಳೂ, ಎಷ್ಟು ಕಾಲದವರೆಗೆ ನಿಲ್ಲುವುವು? ಇದುವರೆಗೆ ರಾಜಭೋಗದಲ್ಲಿದ್ದು ಸುವರ್ಣಾಲಂಕೃತವಾದ ರಥಗಳ ಮೇಲೆಯೂ, ಆನೆಗಳಮೇಲೆಯೂ,ಹೆಮ್ಮೆ ಯಿಂದ ಸಂಚರಿಸುತಿಪ್ಪ ಈ ದೇಹವೇ, ಅಂತ್ಯಕಾಲವು ಬಂದೊದಗಿದಾಗ, ನಾಯಿನರಿಗಳಿಗೆ ಆಹಾರವಾಗಿ ಅಮೇಧ್ಯರೂಪವನ್ನೋ, ಕ್ರಿಮಿರೂಪವ ನ್ನೋ, ಭಸ್ಮರೂಪವನ್ನೋ ಹೊಂದುವುದು ಈಗ ರಾಜನಾಮದಿಂದ ಕರೆಯಲ್ಪಡುತ್ತಿರುವ ಈ ದೇಹವೇ ಮುಂದೆ ಅಮೇಧ್ಯ, ಕ್ರಿಮಿ, ಭಸ್ಮಾದಿ ನಾಮಗಳಿಂದ ಕರೆಯಲ್ಪಡಬೇಕಲ್ಲವೆ? ಅಥವಾ ಆ ದೇಹಾವಸಾನಕಾಲವೂ ಹಾಗಿರಲಿ! ರಾಜಪದವಿಯಿರುವಾಗಲಾದರೂ ಅದಕ್ಕೆ ಸ್ವಾತಂತ್ರ್ಯವೆಲ್ಲಿಯ ದು? ದಿಕ್ಕುಗಳೆಲ್ಲವನ್ನೂ ಜಯಿಸಿ, ಯುದ್ಧಪ್ರಸಕ್ತಿಯೇ ಇಲ್ಲದಂತೆ ರಾಜ್ಯವ ನ್ನು ನಿಷ್ಕಂಟಕವನ್ನಾಗಿ ಮಾಡಿ, ಉತ್ತಮವಾದ ರಾಜಸಿಂಹಾಸನವನ್ನೇರಿ, ತನಗೆ ಸಮಾನಸ್ಕಂಧರಾದ ಅನೇಕರಾಜರಿಂದ ಸೇವಿಸಲ್ಪಡುತ್ತಿರುವ ದೇಹ ವೇ, ಮೈಥುನಸುಖವೊಂದೇ ಪ್ರಧಾನವಾಗಿ ಉಳ್ಳ ಗೃಹಗಳಲ್ಲಿ, ಸ್ತ್ರೀಯರಿಗೆ ವಶವಾಗಿ, ಕೈಯಾಟದ ಕೋತಿಯಂತೆ ಅವರು ಹೇಳಿದಹಾಗೆ ಆಡುತ್ತಿರಬೇ ಕಾಗುವುದು “ಮನುಷ್ಯನು ರಾಜಪದವಿಯಲ್ಲಿರುವಷ್ಟು ಕಾಲವಾದರೂ ಸುಖವನ್ನನುಭವಿಸಬಹುದಲ್ಲವೆ?” ಎಂದರೆ, ರಾಜಪದವಿಯಲ್ಲಿರುವವನಿಗೆ ಬೇ ಕಾದ ಭೋಗಗಳನ್ನನುಭವಿಸುವುದಕ್ಕೆ ತಕ್ಕ ಅನುಕೂಲ್ಯಗಳಿದ್ದರೂ, ಮೇ ಲೆಮೇಲೆ ಅವನ ಮನಸ್ಸಿನಲ್ಲಿ ಹುಟ್ಟತಕ್ಕ ಪೇರಾಸೆಯು, ಅವನ ಸುಖಾನು ಭವಕ್ಕೂ ಅವಕಾಶವನ್ನು ಕೊಡಲಾರದು ಹೇಗೆಂದರೆ, ಈಗ ರಾಜಪದ ವಿಯಲ್ಲಿರತಕ್ಕವನಿಗೆ ಮುಂದಿನ ಜನ್ಮದಲ್ಲಿ ಇದಕ್ಕಿಂತಲೂ ಉತ್ತಮವಾದ ಚ ಕ್ರವರ್ತಿಪದವಿಯನ್ನು ಹೊಂದಬೇಕೆಂಬ ಮನೋರಥವು ಹುಟ್ಟುವುದು ಅ

ದರ ಆಸೆಯಿಂದ ತಾನು ಅನುಭವಿಸಬಹುದಾದ ಭೋಗಗಳನ್ನೂ ಬಿಟ್ಟು, ಉಪವಾಸ, ಅಥಶ್ಚರ್ಯ್ಯ, ಮೊದಲಾದ ನಿಮಗಳಿಂದ ದೇಹಖಂಡನವನ್ನು ಮಾಡುತ್ತಿರುವನು. ಅದರ ಫಲದಿಂದ ಮುಂದಿನ ಜನ್ಮದಲ್ಲಿ ಸಾರ್ವಭೌಮಪದವಿಯನ್ನು ಪಡೆದವನೂಕೂಡ, ಅದಕ್ಕೆ ಮುಂದಿನ ಜನ್ಮದಲ್ಲಿ ಇನ್ನೂ ಉತ್ತಮಪದವಿಯನ್ನು ಪಡೆಯಬೇಕೆಂಬ ಆಸೆಯಿಂದ ತಿರುಗಿ ವ್ರತೋಪವಾಸಗಳಿಂದ ಕಷ್ಟಪಡುವನು. ಆದುದರಿಂದ ಮನಸ್ಸಿನಲ್ಲಿ ಆಸೆಯಿರುವವರೆಗೂ ಕಷ್ಟಪಡುತ್ತಿರುವನೇಹೊರತು, ಲೇಶಮಾತ್ರವಾದರೂ ಸುಖವನ್ನನುಭವಿಸಲಾರನು. “ಹಾಗಿದ್ದರೆ ಮನುಷ್ಯನು ಎಂದಿಗೆ ಸುಖಿಯಾಗಬೇಕು?” ಎಂದರೆ, ದುಃಖಪ್ರಚುರವಾದ ಈ ಸಂಸಾರವು ಬಿಟ್ಟುಹೋದಾಗಲೇ ಮನುಷ್ಯನು ಸುಖಿಯಾಗುವನು. ಭಾಗವತೋತ್ತಮರಾದ ಸತ್ಪುರುಷರ ಸಹವಾಸದಿಂದಲ್ಲದೆ ಮನುಷ್ಯನಿಗೆ ಸಂಸಾರಸಂಬಂಧವು ಬಿಟ್ಟುಹೋಗಲಾರದು ಏಕೆಂದರೆ, ಸತ್ಸಹವಾಸಬಲದಿಂದಲೇ ಮನುಷ್ಯನಿಗೆ ಲೌಕಿಕವಿಷಯಗಳಲ್ಲಿ ಆಸೆಯು ಬಿಟ್ಟುಹೋಗಿ, ಸರ್ವೇಶ್ವರನಾದ ನಿನ್ನಲ್ಲಿ ಬುದ್ಧಿಯು ಪ್ರವರ್ತಿಸುವುದು. ಆದುದರಿಂದ ಓ ಭಗವಂತಾ! ಈಗ ನೀನು ನನ್ನನ್ನು ಅನುಗ್ರಹಿಸುವುದಕ್ಕಾಗಿ ಈ ಗುಹೆಗೆ ಬಂದೆನೆಂದು ಹೇಳಿದೆಯಲ್ಲವೆ? ಈಗ ಮಾತ್ರವೇನು? ಇದಕ್ಕೆ ಮೊದಲು ದೇವತೆಗಳಿಗೆ ಸಹಾಯಮಾಡಿಸುವನೆವದಿಂದ, ನನಗೆ ನೀನು ರಾಜ್ಯಾಧಿಕಾರವೆಂಬ ಪಾಶವನ್ನು ಬಿಡಿಸಿದಾಗಲೇ, ನೀನು ನನ್ನಲ್ಲಿ ಎಷ್ಟೋ ಅನುಗ್ರಹವನ್ನು ತೋರಿಸಿದಂತಾಯಿತು. ಅಖಂಡವಾದ ಏಕಚ್ಛತ್ರಾಧಿಪತ್ಯದಲ್ಲಿರುವ ರಾಜರೂಕೂಡ, ವಿವೇಕಿಗಳಾದಪಕ್ಷದಲ್ಲಿ, ಮೊದಲು ಆ ರಾಜ್ಯಾಧಿಕಾರವೆಂಬ ಪಾಶವನ್ನು ತೊರೆದು, ಒಂಟಿಯಾಗಿ ತಪೋವನಕ್ಕೆ ಹೋಗುವುದನ್ನೇ ಅಪೇಕ್ಷಿಸುವರು ಓ ಪ್ರಭೂ! ಅನನ್ಯಪ್ರಯೋಜನರಾದ ಮಹರ್ಷಿಗಳೆಲ್ಲರೂ ಅತ್ಯಾಶೆಯಿಂದ ಪ್ರಾರ್ಥಿಸತಕ್ಕ ನಿನ್ನ ಪಾದಸೇವೆಗಿಂತಲೂ ಈಗ ನಾನು ನಿನ್ನಿಂದ ಬೇರೆ ಯಾವ ವರವನ್ನೂ ಅಪೇಕ್ಷಿಸತಕ್ಕವನಲ್ಲ ಲೋಕದಲ್ಲಿ ವಿವೇಕಿಯಾದ ಯಾವನುತಾನೇ ನಿನ್ನನ್ನು ಆರಾಧಿಸಿ. ನೀನು ಪ್ರಸನ್ನನಾದಮೇಲೆ, ನಿನ್ನ ಪಾದಸೇವೆಯನ್ನು ಬಿಟ್ಟು ಆತ್ಮವನ್ನು ಕೆಡಿಸತಕ್ಕ ಬೇರೆ ಲೌಕಿಕಸುಖವನ್ನಪೇಕ್ಷಿಸುವನು? ಆದುದರಿಂದ ಓ

ಸರ್ವೇಶ್ವರಾ! ಸತ್ವರಜಸ್ತಮೋಗುಣಗಳ ಸಂಬಂಧದಿಂದುಂಟಾಗುವ ಕಾಮಕ್ರೋಧಾದಿಗಳನ್ನೇ ಹಿಂದಿಟ್ಟುಕೊಂಡು ಬರುತ್ತಿರುವ ಬೇರೆ ಯಾವ ವಿಷಯಸುಖಗಳನ್ನೂ ನಾನು ನಿನ್ನಿಂದ ಅಪೇಕ್ಷಿಸತಕ್ಕವನಲ್ಲ ಕರ್ಮರಹಿತನಾಗಿಯೂ, ಸತ್ವಾದಿಗುಣಗಳ ಸಂಬಂಧವಿಲ್ಲದವನಾಗಿಯೂ, ಅಸಮಾನನಾಗಿಯೂ, ಪರಮಪುರುಷನಾಗಿಯೂ, ಈ ಮನುಷ್ಯಾವತಾರದಿಂದ ಸರ್ವಸುಲಭನಾಗಿಯೂ, ಜ್ಞಾನೈಕಸ್ವರೂಪನಾಗಿಯೂ ಇರುವ ನಿನ್ನ ಪಾದಸಾನ್ನಿಧ್ಯವೊಂದನ್ನೇ ನಾನು ಬಯಸುವೆನು ಈ ಸಂಸಾರದಲ್ಲಿ ಬಹುಕಾಲದಿಂದ ತಾಪತ್ರಯಗಳಿಗೆ ಸಿಕ್ಕಿಬಿದ್ದು, ಅಪಾರದುಃಖಗಳನ್ನನುಭವಿಸುತ್ತ, ಕಾಮಕ್ರೋಧಗಳೇ ಮೊದಲಾದ ಅರಿಷಡ್ವರ್ಗಗಳನ್ನೂ ಜಯಿಸಲಾರದೆ, ಮನಸ್ಸಿನಲ್ಲಿ ಶಾಂತಿಯೂ ಇಲ್ಲದೆ, ಸಂಸಾರದಲ್ಲಿ ಸಿಕ್ಕಿನರಳುತ್ತಿದ್ದ ನಾನು, ನಿರ್ಹೇತುಕವಾದ ನಿನ್ನ ಕೃಪೆಯಿಂದ, ಈಗ ನಿನ್ನ ಪಾದಸಾನ್ನಿಧ್ಯವನ್ನು ಸೇರಿರುವೆನು ಸಂಸಾರಭಯವನ್ನು ನೀಗಿಸತಕ್ಕುದಾಗಿಯೂ, ಸಮಸ್ತದುಃಖನಿವಾರಕವಾಗಿಯೂ, ನಿತ್ಯವಾಗಿಯೂ ಇರುವ ನಿನ್ನ ಪಾದಾರವಿಂದಗಳಲ್ಲಿ ಮರೆಹೊಕ್ಕಿರುವೆನು. ಶರಣಾಗತನಾದ ನನಗೆ ಇನ್ನುಮೇಲೆ ಸಂಸಾರಭಯವಿಲ್ಲದಂತೆ ಕಾಪಾಡಬೇಕು. ಇದೊಂದೇ ಈಗ ನಿನ್ನಲ್ಲಿ ಪ್ರಾರ್ಥಿಸತಕ್ಕ ವರವು" ಎಂದನು.

ಆಗ ಕೃಷ್ಣನು ಆ ಮುಚಕುಂದನ ಭಕ್ತಿಗೆ ಸಂತೋಷಪಟ್ಟು, "ಓಗ ಸಾರ್ವಭೌಮಾ! ಮಹಾರಾಜಾ! ನಿನ್ನ ಭಕ್ತಿಯು ದೃಢವಾಗಿರುವುದು. ಈ ನಿನ್ನ ಬುದ್ಧಿಯು ವಿಷಯಾಭಿಲಾಷೆಯನ್ನು ಬಿಟ್ಟು ಶುದ್ಧವಾಗಿರುವುದು. ನಾನು ಇಲ್ಲಿ ನಿನಗೆ ಪ್ರತ್ಯಕ್ಷನಾಗಿನಿಂತು ಬೇಕಾದ ವರಗಳನ್ನು ಕೇಳುವಂತೆ ಪ್ರೇರಿಸಿದರೂ, ನೀನು ಬೇರೆಯಾವ ಸುಖಗಳನ್ನೂ ಅಪೇಕ್ಷಿಸದೆ, ನನ್ನ ಸಾನ್ನಿಧ್ಯವೊಂದನ್ನೇ ಬಯಸುತ್ತಿರುವೆಯಲ್ಲವೆ. ನಿನ್ನಂತಹ ಧೀರರಿಗೆ ಇದು ಯುಕ್ತವಾಗಿಯೇ ಇರುವುದು ಉತ್ತಮವಾದ ವಸ್ತುಗಳನ್ನು ತಂದು ಮುಂದಿಟ್ಟು ಆಸೆಯನ್ನು ತೋರಿಸಿದಾಗ ಎಂಥವರಿಗಾದರೂ ಬುದ್ಧಿಯು ಕದಲುವುದುಂಟು. ಆದರೆ ನಿನ್ನಂತೆ ಅನನ್ಯಪ್ರಯೋಜನರಾಗಿ ನನ್ನಲ್ಲಿ ಭಕ್ತಿಯನ್ನು ಮಾಡತಕ್ಕವರಿಗೆ ಎಂದಿಗೂ ಮನಸ್ಸು ಚಲಿಸಲಾರದು. ಎಷ್ಟೆಷ್ಟೋವಿಧದಿಂದ ಆಸೆಯನ್ನು

ತೋರಿಸಿದರೂ,ಅವರ ಬುದ್ಧಿಯು ಕದಲಲಾರದು.ಹಾಗಿಲ್ಲದೆ ಯಾರ ಮನಸ್ಸಿನಲ್ಲಿಭಕ್ತಿಯು ಪರಿಪಕ್ವವಾಗಿರುವುದಿಲ್ಲವೋ,ಅಂತವರು ಪ್ರಾಣಾಯಾಮವೇ ಮೊದಲಾದ ಉಪಾಯಗಳಿಂದ ಮನಸ್ಸನ್ನು ನಿಗ್ರಹಿಸುತಿದ್ದರೂ,ಕರ್ಮವಾಸನೆಯೆಂಬುದು ಅವರನ್ನು ಅಂಟಿಬರುತ್ತಿರುವುದರಿಂದ,ಎಂದಾದರೂ ಒಮ್ಮೆ ಅವರಿಗೆ ವಿಷಯಾಭಿಲಾಷೆಯಲ್ಲಿ ಬುದ್ಧಿ ಹುಟ್ಟದಿರಲಾರದು ಓರಾಜೇಂದ್ರಾ! ನಿನಗೆ ನನ್ನಲ್ಲಿ ಈಗಾಗಲೇ ಧೃಢವಾದ ಭಕ್ತಿಯು ಅಂಕುರಿಸಿರುವುದು. ಎಂದೆಂದಿಗೂ ಅದು ನಿನಗೆ ಸ್ಥಿರವಾಗಿರುವಂತೆ ಅನುಗ್ರಹಿಸುವೆನು. ನೀನು ಯಾವಾಗಲೂ ನನ್ನಲ್ಲಿಯೇ ನಟ್ಟಮನಸ್ಸುಳ್ಳವನಾಗಿ,ಯಥೇಚ್ಛವಾಗಿ ಭೂಮಿಯನ್ನು ಸಂಚರಿಸುತ್ತಿರು! ಭಕ್ತಿಯೊಂದಕ್ಕೇ ಸುಲಭವಾಗಿ ವಶನಾಗತಕ್ಕ ನಾನು, ಈಗ ನಿನಗೆ ಸುಲಭವಾಗಿ ಪ್ರತ್ಯಕ್ಷನಾಗಿದ್ದರೂ, ಈಗಲೇ ನಿನಗೆ ಮೋಕ್ಷವನ್ನೇಕೆ ಕೊಡಬಾರದೆಂದು ನೀನು ಶಂಕಿಸಬಹುದು. ಹಿಂದೆ ನೀನು ಬಹುಕಾಲದವರೆಗೆ ಕ್ಷತ್ರಧರ್ಮದಲ್ಲಿದ್ದು, ಬೇಟೆ ಮೊದಲಾದುವುಗಳಿಂದ ಅನೇಕ ಪ್ರಾಣಿಗಳನ್ನು ಸಂಹರಿಸಿರುವೆ. ಅದುದರಿಂದ ಆ ಪಾಪನಿವೃತ್ತಿಗಾಗಿ ನೀನು ಇನ್ನೂ ಕೆಲವುಕಾಲದವರೆಗೆ ನನ್ನಲ್ಲಿ ಭಕ್ತಿನಿಷ್ಠನಾಗಿ, ಭೂಸಂಚಾರವನ್ನು ಮಾಡುತ್ತಿರಬೇಕು, ಮುಂದಿನ ಜನ್ಮದಲ್ಲಿ ನೀನು ಬ್ರಾಹ್ಮಣಜನ್ಮವನ್ನುಹೊಂದಿ. ಸರ್ವಭೂತದಯಾಪರನಾಗಿ, ಸಮಸ್ತಜಗತ್ತನ್ನೂ ಬ್ರಹ್ಮಸ್ವರೂಪದಿಂದಲೇ ತಿಳಿಯತಕ್ಕ ಜ್ಞಾನದೃಷ್ಟಿಯುಳ್ಳವನಾಗುವೆ. ಅದಕ್ಕೆಮೇಲೆ ನೀನುಪ್ರಕೃತಿಮಂಡಲಕ್ಕಿಂತಲೂ ಆಚೆಗಿರುವ ನನ್ನ ಸಾನ್ನಿಧ್ಯವನ್ನು ಸೇರಬಹುದು." ಎಂದನು. ಇದು ಐವತ್ತೊಂದನೆಯ ಅಧ್ಯಾಯವು.

---

## ರುಕ್ಮಿಣೀ ಕಲ್ಯಾಣ ವೃತ್ತಾಂತವು.

ಹೀಗೆ ಕೃಷ್ಣನಿಂದ ಅನುಗ್ರಹಿಸಲ್ಪಟ್ಟ ಮುಚುಕುಂದನು, ಸಂತೋಷದಿಂದ ಅವನಿಗೆ ಪ್ರದಕ್ಷಿಣನಮಸ್ಕಾರಗಳನ್ನು ಮಾಡಿ, ತಾನು ಬಹುಕಾಲದಿಂದ ಮಲಗಿದ್ದ ಗುಹೆಯನ್ನು ಬಿಟ್ಟು ಹೊರಟನು. ಹೊರಗೆ ಬಂದು ಪ್ರಪಂಚದ ಸ್ಥಿತಿಯನ್ನು ನೋಡಿದಾಗ, ಆಗಿದ್ದ ಮನುಷ್ಯವರ್ಗವೂ, ಪಶುಪಕ್ಷಿಮೃಗಾದಿಗಳೂ, ಗಿಡುಬಳ್ಳಿಗಳೂ, ತಾನು ಹಿಂದೆ ನೋಡಿದಂತಿಲ್ಲದೆ,

ಬಹಳಕೃಶವಾಗಿ, ಅಲ್ಪಪ್ರಮಾಣದಿಂದಿರುವುದನ್ನು ಕಂಡು, ಭೂಲೋಕ ದಲ್ಲಿ ಕಲಿಯುಗವು ತಲೆಯೆತ್ತಿತೆಂದು ತಿಳಿದು, ಅಲ್ಲಿ ನಿಲ್ಲದೆ ಉತ್ತರಾಭಿಮುಖ ವಾಗಿ ಹೊರಟನು. ತಪಸ್ಸಿನಲ್ಲಿ ದೃಢಮನಸ್ಸುಳ್ಳವನಾಗಿ,ಇಂದ್ರಿಯಗಳನ್ನು ಜಯಿಸಿ, ಮನಸ್ಸಿನಲ್ಲಿರುವ ಕಲ್ಮಷಗಳನ್ನು ನೀಗಿ, ತಪಸ್ಸಿದ್ಧಿಯವಿಷಯದಲ್ಲಿ ತನಗಿದ್ದ ಸಂದೇಹವನ್ನು ಬಿಟ್ಟು, ಕೃಷ್ಣನಲ್ಲಿಯೇ ನಟ್ಟಮನಸ್ಸುಳ್ಳವನಾಗಿ ಗಂಧಮಾದನಪರ್ವತವನ್ನು ಪ್ರವೇಶಿಸಿದನು. ಅಲ್ಲಿ ನರನಾರಾಯಣರ ಸಾನ್ನಿಧ್ಯವುಳ್ಳ ಬದರಿಕಾಶ್ರಮವನ್ನು ಸೇರಿ, ಸುಖದುಃಖಾದಿದ್ವಂದ್ವಗ ಳನ್ನು ಜಯಿಸಿ, ತಪಸ್ಸಿನಿಂದ ಶ್ರೀವಿಷ್ಣುವನ್ನಾರಾಧಿಸುತಿದ್ದನು. ಇತ್ತಲಾಗಿ ಶ್ರೀಕೃಷ್ಣನೂಕೂಡ ಮುಚುಕುಂದನನ್ನು ಅನುಗ್ರಹಿಸಿದ ಮೇಲೆ ಮಥುರಾಪುರಿಗೆ ಬಂದನು. ಇಷ್ಟರಲ್ಲಿ ಮಥುರೆಯೆಲ್ಲವೂ ಮ್ಲೇಚ್ಛಸೈನ್ಯದಿಂದ ಆಕ್ರಮಿಸಲ್ಪಟ್ಟಿದ್ದಿತು. ಆ ಮ್ಲೇಚ್ಛಸೈನ್ಯ ವೆಲ್ಲವನ್ನೂ ಕೊಂದು, ಅವರು ಸಂಗ್ರಹಿಸಿಟ್ಟಿದ್ದ ದ್ರವ್ಯಗಳೆಲ್ಲವನ್ನೂ ಅಲ್ಲಿಂದ ದ್ವಾರಕೆಗೆ ಸಾಗಿಸುತ್ತಿದ್ದನು ಹೀಗೆ ಕೃಷ್ಣನು ಎತ್ತುಗಳಮೇಲೆ ಯೂ,ಮನುಷ್ಯರಮೇಲೆಯೂ ದ್ರವ್ಯರಾಶಿಯನ್ನು ಸಾಗಿಸುತ್ತಿರುವಷ್ಟರಲ್ಲಿ, ಜರಾಸಂಧನು ಹದಿನೆಂಟನೆಯಸಾರಿಯೂ ಯುದ್ಧಕ್ಕಾಗಿ, ಇಪ್ಪತ್ತುಮೂರು ಅಕ್ಷೋಹಿಣೀಸೈನ್ಯಗಳೊಡನೆ ಬಂದು ಇದಿರಿಸಿದನು. ಹೀಗೆ ಜರಾಸಂಧನು ಅತ್ಯಾಕ್ರೋಶದಿಂದ ಮೊದಲಿಗಿಂತಲೂ ಪ್ರಬಲವಾದ ದೊಡ್ಡಸೈನ್ಯ ದೊಡನೆ ಬರುತ್ತಿರುವುದನ್ನು ನೋಡಿ, ರಾಮಕೃಷ್ಣರಿಬ್ಬರೂ ತಾವು ಶಕ್ತರಾಗಿದ್ದರೂ, ಮನುಷ್ಯಲೀಲೆಯನ್ನು ತೋರಿಸುವುದಕ್ಕಾಗಿ, ಅವನಿಗೆ ಭಯಪಟ್ಟಂತೆ ನಟಿಸಿ,ತಾವು ಸಾಗಿಸುತ್ತಿದ್ದ ದ್ರವ್ಯರಾಶಿಯೆಲ್ಲವನ್ನೂ ಅಲ್ಲಲ್ಲಿ ಯೇ ಬಿಸುಟು, ಕಾಲ್ನಡೆಯಿಂದಲೇ ಬಹುಯೋಜನಗಳವರೆಗೆ ಪಲಾಯನ ಮಾಡಿದರು, ಮೂಢನಾದ ಜರಾಸಂಧನಾದರೋ ಅವರ ನಿಜಸ್ಥಿತಿಯನ್ನು ತಿಳಿಯದೆ, ನಿಜವಾಗಿ ಅವರು ತನಗೆ ಭಯಪಟ್ಟು ಪಲಾಯನಮಾಡುವರೆಂದೇ ನಿಶ್ಚಯಿಸಿ, ಅವರನ್ನು ಹಾಸ್ಯಮಾಡಿ ನಗುತ್ತ, ಸೇನಾಸಹಿತನಾಗಿ ಅವರನ್ನು ಬಹುದೂರದವರೆಗೆ ಬೆನ್ನಟ್ಟಿಹೋದನು. ರಾಮಕೃಷ್ಣರೂಕೂಡ ಬಹು ದೂರದವರೆಗೆ ಅಲೆದು ಆಯಾಸಪಟ್ಟಂತೆ ನಟಿಸುತ್ತ, ಪ್ರವರ್ಷಣವೆಂಬ

ಒಂದಾನೊಂದು ಬೆಟ್ಟವನ್ನು ಹತ್ತಿದರು. ರಾಜೇಂದ್ರಾ! ಆ ಪರ್ವತದ ಮೇಲೆ ಪರ್ಜನ್ಯದೇವನು ಯಾವಾಗಲೂ ಮಳೆಯನ್ನು ಕರೆಯುತ್ತಿರುವುದ ರಿಂದ ಅದು ಯಾವಾಗಲೂ ಸಸ್ಯಸಮೃದ್ಧವಾಗಿರುವುದು ಹೀಗೆ ರಾಮ ಕೃಷ್ಣರು ಆ ಪರ್ವತದಮೇಲೆ ಹತ್ತಿದುದನ್ನು ನೋಡಿದೊಡನೆ,ಜರಾಸಂಧನು ಅದರ ಬುಡದಲ್ಲಿ ನಿಂತು, ಆಪರ್ವತದ ಸುತ್ತಲೂ ಕಟ್ಟಿಗೆಗಳನ್ನಿಟ್ಟು ಬೆಂಕಿ ಯನ್ನು ಹತ್ತಿಸಿದನು ಆ ಪರ್ವತವು ಹತ್ತಿಕೊಂಡು ಉರಿಯುತ್ತಿರುವಾಗಲೇ ರಾಮಕೃಷ್ಣರಿಬ್ಬರೂ ಅದರ ಶಿಖರದಿಂದ ಒಂದೇನೆಗೆತಕ್ಕೆ ಹನ್ನೊಂದು ಯೋಜನಗಳದೂರಕ್ಕೆ ಹಾರಿ, ಜರಾಸಂಧನ ಕಣ್ಣಿಗೆ ಬೀಳದಹಾಗೆಯೇ ಸ್ಥಲಮಾರ್ಗವಾಗಿ ಹೊರಟು, ಸಮುದ್ರಮಧ್ಯದಲ್ಲಿರುವ ದ್ವಾರ ಕಾಪುರಕ್ಕೆ ಬಂದುಸೇರಿದರು ಇತ್ತಲಾಗಿ ಜರಾಸಂಧನು, ಆ ಪರ್ವತ ವನ್ನು ಸಂಪೂರ್ಣವಾಗಿ ಸುಟ್ಟಮೇಲೆ, ರಾಮಕೃಷ್ಣರಿಬ್ಬರೂ ಅದರಲ್ಲಿ ದಗ್ಧರಾಗಿರಬೇಕೆಂದೇ ನಿಶ್ಚಯಿಸಿಕೊಂಡು, ತನ್ನ ಸೈನ್ಯದೊಡನೆ ಮಗಧ ದೇಶಕ್ಕೆ ಹಿಂತಿರುಗಿ ಹೊರಟುಹೋದನು. ಓ ಪರೀಕ್ಷಿದ್ರಾಜಾ! ಆನರ್ತ ದೇಶಕ್ಕೆ ದೊರೆಯಾದ ರೈವತನೆಂಬ ರಾಜನು, ಬ್ರಹ್ಮನ ಪ್ರೇರಣೆಯಿಂದ ರೇ ವತಿಯೆಂಬ ತನ್ನ ಮಗಳನ್ನು ಬಲರಾಮನಿಗೆ ಕೊಟ್ಟು ಮದಿವೆಮಾಡಿದುದಾಗಿ ನಿನಗೆ ನಾನು ಹಿಂದೆಯೇ (ನವಮಸ್ಕಂಧದಲ್ಲಿ)ತಿಳಿಸಿರುವೆನಷ್ಟೆ? ಶ್ರೀಕೃಷ್ಣ ಪರಮಾತ್ಮನೂಕೂಡ ಲಕ್ಷ್ಮಿಯ ಅಂಶಭೂತೆಯಾಗಿ, ಭೀಷ್ಮಕನ ಮಗಳೆನಿ ಸಿಕೊಂಡ ರುಕ್ಮಿಣಿಯನ್ನು ಸ್ವಯಂವರದಿಂದ ವರಿಸಿದನು. ಈ ಸ್ವಯಂವರ ಸಂದರ್ಭದಲ್ಲಿ ಕೃಷ್ಣನು, ಸಾಲ್ವನೇಮೊದಲಾಗಿ ಶಿಶುಪಾಲನ ಪಕ್ಷದವರಾದ ಅನೇಕದುಷ್ಟರಾಜರನ್ನು ಜಯಿಸಿ, ಪೂರ್ವದಲ್ಲಿ ಗರುಡನು ಅಮೃತವನ್ನು, ಸಾಧಿಸಿತಂದಂತೆ ರುಕ್ಮಿಣಿಯನ್ನು ತನ್ನ ವಶಮಾಡಿಕೊಂಡನು". ಎಂದನು. ಆಗ ಪರೀಕ್ಷಿದ್ರಾಜನು. ಓ ಶುಕಮುನೀಂದ್ರಾ! ಶ್ರೀಕೃಷ್ಣನು ಭೀಷ್ಮ ಕನ ಮಗಳಾದ ರುಕ್ಮಿಣಿಯನ್ನು, ರಾಕ್ಷಸವಿವಾಹದಿಂದ ವರಿಸಿದುದಾಗಿ ಕೇಳಿ ರುವೆನು ಆ ವಿವರವನ್ನು ನನಗೆ ಚೆನ್ನಾಗಿ ತಿಳಿಸಬೇಕು. ಆ ಕೃಷ್ಣನೊಬ್ಬನೇ ಮಾಗಧರು, ಸಾಲ್ವರು ಮೊದಲಾದ ರಾಜರನ್ನು ಜಯಿಸಿ, ರುಕ್ಮಿಣಿಯನ್ನು ಸಾಧಿಸಿ ತಂದುದು ಹೇಗೆ? ಓ ಬ್ರಾಹ್ಮಣೋತ್ತಮಾ! ಲೋಕಪಾವನಗ

ಳಾಗಿಯೂ, ಅಮೃತದಂತೆ ಆಹ್ಲಾದಕರವಾಗಿಯೂ ಇರುವ ಶ್ರೀಕೃಷ್ಣನ ಚರಿತ್ರಗಳನ್ನು ಎಷ್ಟುಕೇಳಿದರೆ ತಾನೇ ತೃಪ್ತಿಯುಂಟಾಗುವುದು! ಎಂದನು.

ಆಗ ಶುಕಮಹರ್ಷಿಯು, “ ಓ ಪರೀಕ್ಷಿದ್ರಾಜಾ! ಕೇಳು. ಹಿಂದೆ ವಿದರ್ಭದೇಶಾಧಿಪತಿಯಾದ ಭೀಷ್ಮಕನೆಂಬ ರಾಜನಿದ್ದನು ಅವನಿಗೆ ಐದು ಮಂದಿ ಗಂಡುಮಕ್ಕಳೂ, ಒಬ್ಬಕನ್ಯೆಯೂ ಹುಟ್ಟಿದರು. ಆ ಐದುಮಂದಿ ಗಂಡುಮಕ್ಕಳಿಗೂ ಜ್ಯೇಷ್ಠಾನುಕ್ರಮವಾಗಿ, ರುಕ್ಮಿ, ರುಕ್ಮರಥ, ರುಕ್ಮಬಾಹು ರುಕ್ಮಕೇಶ, ರುಕ್ಮಮಾಲಿಗಳೆಂದು ಹೆಸರು. ಇವರೆಲ್ಲರಿಗೂ ಕಿರಿಯವಳಾ ಗಿದ್ದ ಹೆಣ್ಣು ಮಗಳಿಗೆ ರುಕ್ಮಿಣಿಯೆಂದು ಹೆಸರು. ಈ ರುಕ್ಮಿಣಿಯೆಂಬ ಕನ್ಯೆಗೆ ಕ್ರಮವಾಗಿ ವಿವಾಹಯೋಗ್ಯವಾದ ವಯಸ್ಸು ಬಂದಿತು. ಈ ಕನ್ಯೆಯು ಆ ಗಾಗ ತನ್ನ ಮನೆಗೆ ಬಂದು ಹೋಗತಕ್ಕವರ ಮೂಲಕವಾಗಿ ಶ್ರೀಕೃಷ್ಣನ ರೂಪವೀರ್ಯಗುಣಾದ್ಯಗಳನ್ನು ಕೇಳಿ, ಅವನೇ ತನಗೆ ತಕ್ಕ ಪತಿಯೆಂದು ಮನಸ್ಸಿನಲ್ಲಿ ನಿಶ್ಚಯಿಸಿಕೊಂಡಿದ್ದಳು ಇದರಂತೆಯೇ ಅತ್ತಲಾಗಿ ಕೃಷ್ಣನೂ ಕೂಡ, ವಿದರ್ಭನಗರದಿಂದ ಆಗಾಗ ಬರುತಿದ್ದವರಮೂಲಕವಾಗಿ ಆ ರುಕ್ಮಿ ಣಿಯ ಶೀಲಸ್ವಭಾವಗಳನ್ನೂ,ಶುಭಲಕ್ಷಣಗಳನ್ನೂ, ಬುದ್ಧಿಚಾತುರ್ಯವನ್ನೂ, ಔದಾರ್ಯಾದಿಗಳನ್ನೂ ಕೇಳಿ, ಅವಳೇ ತನಗೆ ತಕ್ಕ ಪತ್ನಿಯೆಂದು ನಿಶ್ಚಯಿಸಿ ಕೊಂಡಿದ್ದನು. ಹೀಗೆ ರುಕ್ಮಿಣಿಗೂ, ಕೃಷ್ಣನಿಗೂ ಹುಟ್ಟಿದ ಪರಸ್ಪರಾನು ರಾಗವು, ಆ ರುಕ್ಮಿಣಿಯ ತಂದೆತಾಯಿಗಳಿಗೂ ತಿಳಿದುಬಂದಿತು ಅವರೆಲ್ಲರೂ ಆಕೆಯನ್ನು ಕೃಷ್ಣನಿಗೇ ಕೊಡುವುದಾಗಿ ನಿಶ್ಚಯಿಸಿಕೊಂಡಿದ್ದರು ಇಷ್ಟ ರಲ್ಲಿ ಚೇದಿದೇಶಾಧಿಪತಿಯಾದ ಶಿಶುಪಾಲನೆಂಬವನು ಆ ಉದ್ದೇಶವನ್ನು ತಿಳಿದು, ಹೇಗಾದರೂ ಪ್ರಯತ್ನಮಾಡಿ ಆ ರುಕ್ಮಿಣಿಯನ್ನು ತಾನೇ ಮದಿವೆ ಯಾಗಬೇಕೆಂದು ಯತ್ನಿಸುತಿದ್ದನು ರುಕ್ಮಿಣಿಯ ಸಹೋದರರಾದ ರುಕ್ಮಿ ಮೊದಲಾದವರೆಲ್ಲರೂ, ಕೃಷ್ಣನಮೇಲೆ ತಮಗಿದ್ದ ಸಹಜವಾದ ದ್ವೇಷ ದಿಂದ, ಶಿಶುಪಾಲನಿಗೇ ತಮ್ಮ ತಂಗಿಯನ್ನು ಕೊಡಿಸಬೇಕೆಂದು ತಂದೆಗೆ ದುರ್ಬೋಧನೆಯನ್ನು ಮಾಡುತಿದ್ದರು. ರುಕ್ಮಿಣಿಯು ಈ ಸಂಗತಿ ಯನ್ನು ತಿಳಿದು, ಮನಸ್ಸಿನಲ್ಲಿ ಬಹಳವಾಗಿ ದುಃಖಿಸುತ್ತ,ತನಗೆ ಆಪ್ತನಾಗಿದ್ದ ಬ್ರಾಹ್ಮಣನೊಬ್ಬನನ್ನು ರಹಸ್ಯವಾಗಿ ಕರೆದು, ಅವನ ಮೂಲಕವಾಗಿ ಕೃಷ್ಣ

ನಿಗೆ ಕೆಲವುಮಾತುಗಳನ್ನು ಹೇಳಿ ಕಳುಹಿಸಿದಳು. ಒಡನೆಯೇ ಆ ಬ್ರಾಹ್ಮಣನು ದ್ವಾರಕಾಪುರಿಗೆ ಬಂದು, ಕೃಷ್ಣನ ಅರಮನೆಯ ದ್ವಾರಪಾಲಕರಿಗೆ ತನ್ನ ಪೂರ್ವೋತ್ತರಗಳನ್ನು ತಿಳಿಸಿದಮೇಲೆ,ಅವರು ಅಡ್ಡಿಮಾಡದೆ ಅವನನ್ನು ಒಳಕ್ಕೆ ಕಳುಹಿಸಿಕೊಟ್ಟರು. ಆ ಬ್ರಾಹ್ಮಣನು ಸುವರ್ಣಪೀಠದಮೇಲೆ ಕುಳಿತಿದ್ದ ಪುರಾಣಪುರುಷನಾದ ಶ್ರೀ ಕೃಷ್ಣನನ್ನು ಕಂಡೊಡನೆ, ಶ್ರೀಕೃಷ್ಣನು, ಥಟ್ಟನೆ ತನ್ನ ಸಿಂಹಾಸನದಿಂದ ಇದಿರೆದ್ದು ಬಂದು, ಅವನನ್ನು ಕೈಹಿಡಿದು ಕರೆದು, ತನ್ನ ಆಸನದಲ್ಲಿಯೇ ಕುಳ್ಳಿರಿಸಿ, ದೇವತೆಗಳು ತನ್ನನ್ನು ಪೂಜಿಸುವಂತೆ ಅವನನ್ನು ಯಥಾವಿಧಿಯಾಗಿ ಸತ್ಕರಿಸಿ, ಅವನಿಗೆ ಮೃಷ್ಟಾನ್ನಭೋಜನವನ್ನು ಮಾಡಿಸಿದನು. ಆ ಬ್ರಾಹ್ಮಣನು ಭೋಜನವನ್ನು ಮಾಡಿ ಸುಖಾಸೀನನಾಗಿ ಕುಳಿತಿರುವಾಗ, ಕೃಷ್ಣನು, ಅವನ ಕಾಲುಗಳನ್ನೊತ್ತುತ್ತ ಮೆಲ್ಲಗೆ ಹೀಗೆಂದು ಪ್ರಶ್ನೆಮಾಡುವನು "ಓ ಬ್ರಾಹ್ಮಣೋತ್ತಮಾ ! ನಿಮ್ಮಂಥವರು ಅತ್ಯಾಸೆಗೊಳಗಾಗದೆ, ವಿಷಯಾಭಿಲಾಷೆಯಿಂದ ತೊಳಲದೆ, ಪ್ರಯತ್ನವಿಲ್ಲದೆ ತಾನಾಗಿ ಬಂದುದರಲ್ಲಿ ತೃಪ್ತಿಯನ್ನು ಹೊಂದತಕ್ಕವರು. ಯಾವಾಗಲೂ ಸಂತೋಷವೃತ್ತಿಯೇ ನಿಮ್ಮ ಧರ್ಮವು. ಲೋಕದಲ್ಲಿ ಸಜ್ಜನಸಮ್ಮತವಾದ್ದ ಧರ್ಮವೂ ಇದೇ. ಈ ನಿನ್ನ ಧರ್ಮವು ನಿರಪಾಯವಾಗಿ ನಡೆಯುತ್ತಿರುವುದಲ್ಲವೆ? ಬ್ರಾಹ್ಮಣನು ತನ್ನ ಶರೀರಪೋಷಣಮಾತ್ರಕ್ಕಾಗಿ ತನ್ನ ಪ್ರಯತ್ನವಿಲ್ಲದೆ ದೊರಕಿದುದರಲ್ಲಿ ತೃಪ್ತನಾಗಿ, ತನ್ನ ವರ್ಣಾಶ್ರಮಧರ್ಮಗಳನ್ನೂ ಅದರಿಂದಲೇ ನಡೆಸಿಕೊಂಡುಬರಬೇಕು ನಿತ್ಯತೃಪ್ತಿಯೆಂಬ ಈ ಧರ್ಮವನ್ನು ದೃಢವಾಗಿ ಹಿಡಿದವನಿಗೆ, ಸಮಸ್ತಪುರುಷಾರ್ಥಗಳೂ ಸಿದ್ಧಿಸಿದಂತೆಯೇಹೊರತು ಬೇರೆಯಲ್ಲ. ಆ ಮನಸ್ತುಷ್ಟಿಯೊಂದಿದ್ದರೆ ನಮ್ಮ ಪ್ರಯತ್ನವಿಲ್ಲದೆ ಸಮಸ್ತ ಪುರುಷಾರ್ಥಗಳೂ ತಾನಾಗಿ ಕೈಗೂಡಿಬರುವುವು ತೃಪ್ತಿಯಿಲ್ಲದಿದ್ದಮೇಲೆ ದೇವೇಂದ್ರನಾದರೂ ಇಹಲೋಕದಲ್ಲಿಯಾಗಲಿ, ಪರಲೋಕದಲ್ಲಿಯಾಗಲಿ ಸುಖವನ್ನು ಹೊಂದಲಾರನು ಮನಸ್ತೃಪ್ತಿಯಿದ್ದರೆ ದರಿದ್ರನಾದರೂ ನಿಶ್ಚಿಂತನಾಗಿ ಮಲಗುವನು. ಓ ಬ್ರಾಹ್ಮಣೋತ್ತಮಾ! ಇದ್ದುದರಲ್ಲಿ ತೃಪ್ತಿಹೊಂದಿ, ಪರೋಪಕಾರನಿರತರಾಗಿ, ಅಹಂಕಾರಮಮಕಾರಗಳನ್ನು ಬಿಟ್ಟು,

ಸಮಸ್ತಭೂತಗಳಲ್ಲಿಯೂ ಸೌಹಾರ್ದವನ್ನು ತೋರಿಸತಕ್ಕ ನಿನ್ನಂತಹ ಸಾಧುಗಳನ್ನೇ ನಾನು ಪರದೈವವೆಂದು ಭಾವಿಸುವೆನು ನಾನು ಅವರ ಪಾದಗಳನ್ನು ಹಿಡಿದು ಬಾರಿಬಾರಿಗೂ ನಮಸ್ಕರಿಸುವೆನು ಓ ಸಾಧುಶಿರೋಮಣೀ ! ನಿನಗೆ ಕ್ಷೇಮವಷ್ಟೆ? ನಿಮ್ಮರಾಜನು ನಿಮ್ಮನ್ನು ಸುಖವಾಗಿ ಪೋಷಿಸುವನಷ್ಟೆ? ಯಾವ ರಾಜನು ಧರ್ಮಪರಿಪಾಲನದಿಂದ ತನ್ನದೇಶದ ಪ್ರಜೆಗಳೆಲ್ಲರನ್ನೂ ಕ್ಷೇಮದಿಂದ ನೋಡುತ್ತಿರುವನೋ, ಅಂಥವನೇ ನನಗೆ ಪರಮಪ್ರಿಯನು ಅದು ಹಾಗಿರಲಿ! ನಿನ್ನ ದೇಶವಾವುದು? ಯಾವ ಉದ್ದೇಶದಿಂದ ಈ ಸಮುದ್ರದುರ್ಗವನ್ನುದಾಟಿ ಇಲ್ಲಿಗೆ ಬಂದಿರುವೆ? ನನಗೆ ತಿಳಿಸಬಹುದಾದಪಕ್ಷದಲ್ಲಿ, ಮುಚ್ಚುಮರೆಯಿಲ್ಲದೆ ನಿನ್ನ ಉದ್ದೇಶವನ್ನು ನಿಸ್ಸಂಕೋಚವಾಗಿ ತಿಳಿಸು ನನ್ನನ್ನು ನಿನ್ನ ಕಿಂಕರನನ್ನಾಗಿ ತಿಳಿದು ನನ್ನಿಂದಾಗಬೇಕಾದ ಕಾರ್ಯವನ್ನು ಹೇಳು" ಎಂದನು ಲೀಲಾಮಾನುಷರೂಪಿಯಾದ ಕೃಷ್ಣನು ಹೀಗೆ ವಿನಯದಿಂದ ಪ್ರಶ್ನೆಮಾಡಲು, ಆ ಬ್ರಾಹ್ಮಣನು ತಾನು ಬಂದ ಉದ್ದೇಶವೆಲ್ಲವನ್ನೂ ಅವನಿಗೆ ತಿಳಿಸತೊಡಗಿ, "ಓ ಪುರುಷೋತ್ತಮಾ! ರುಕ್ಮಿಣೀದೇವಿಯು ನಿನಗೆ ಕೆಲವು ಮಾತುಗಳನ್ನು ಹೇಳಿಬರುವಂತೆ ನನ್ನನ್ನು ಕಳುಹಿಸಿರುವಳು. ಅದನ್ನು ಕೇಳಿ ನೀನು ಉಚಿತರೀತಿಯಲ್ಲಿ ನಡೆಸಬಹುದು. ಇದೋ! ಅವಳು ಈ ಪತ್ರಿಕೆಯನ್ನು ಬರೆದು ಕಳುಹಿಸಿರುವಳು" ಎಂದು ಹೇಳಿ, ತನ್ನಕೈಯಲ್ಲಿದ್ದ ಪತ್ರವನ್ನು ಕೃಷ್ಣನ ಪಾದಗಳಮೇಲಿಟ್ಟು ನಮಸ್ಕರಿಸಿದನು ಕೃಷ್ಣನು ಸಂತೋಷದಿಂದ ಆ ಪತ್ರವನ್ನು ಕೈಗೆ ತೆಗೆದುಕೊಂಡು, ಅದನ್ನೋದಿ ಹೇಳುವಂತೆ ಆ ಬ್ರಾಹ್ಮಣನ ಕೈಯಲ್ಲಿಯೇ ಕೊಟ್ಟು, ತಾನು ಅತ್ಯಾದರದಿಂದ ಅದನ್ನು ಕಿವಿಗೊಟ್ಟು ಕೇಳುತಿದ್ದನು ಆಗ ಬ್ರಾಹ್ಮಣನು ಆ ಪತ್ರವನ್ನು ಹೀಗೆಂದು ವಾಚಿಸುವನು.

"ಓ ಲೋಕಸುಂದರಾ! ನಿನ್ನ ಗುಣಗಳು, ಆದರದಿಂದ ಕೇಳತಕ್ಕವರ ಕರ್ಣರಂಧ್ರಗಳಮೂಲಕವಾಗಿ ಹೃದಯದಲ್ಲಿ ಪ್ರವೇಶಿಸಿ,ಅವರ ಆಧ್ಯಾತ್ಮಿಕಾದಿತಾಪಗಳೆಲ್ಲವನ್ನೂ ಪರಿಹರಿಸುವುದು. ಅಂತಹ ನಿನ್ನ ಸುಗುಣಗಳನ್ನೂ ನೋಡತಕ್ಕವರ ಕಣ್ಣುಗಳಿಗೆ ಸರ್ವಾರ್ಥಪ್ರದವಾದ ನಿನ್ನ ರೂಪಸಂಪತ್ತಿಯನ್ನೂ ಕೇಳಿ, ನನ್ನ ಮನಸ್ಸು ನಾಚಿಕೆಯಿಲ್ಲದೆ ನಿನ್ನನ್ನು ಬಯಸುತ್ತಿರುವುದು

ದು ಓ ಪುರುಷೋತ್ತಮಾ ! ಲೋಕಾತಿಶಯವಾದ ನಿನ್ನ ಮಹಿಮೆಯೆಲ್ಲಿ? ಯಾವ ವಿಷಯದಲ್ಲಿಯೂ ನಿನಗೆ ಅನುರೂಪಳಲ್ಲದ ನಾನೆಲ್ಲಿ! ಹಾಗಿದ್ದರೂ ನಿನ್ನ ಗುಣಶ್ರವಣವು ನನ್ನ ಮನಸ್ಸನ್ನು ಆಕರ್ಷಿಸಿಬಿಟ್ಟಿರುವುದು.

"ಕುಲಕನ್ಯೆಯರಿಗೆ ಇಷ್ಟು ಧೈರ್ಯವೆ" ಎಂದು ನೀನು ಆಕ್ಷೇಪಿಸಬಾರದು ಓ! ಮುಕುಂದಾ! ಕುಲ, ರೂಪ, ಶೀಲ, ವಿದ್ಯೆ, ವಯಸ್ಸು, ಸಂಪತ್ತು, ಮುಂತಾದ ಸಮಸ್ತವಿಯಷಯಗಳಲ್ಲಿಯೂ ನಿನಗೆ ನೀನೇಸಾಟಿಯೇಹೊರತು ಮತ್ತೊಬ್ಬರು ನಿನಗೆ ಸಮಾನರಲ್ಲ! ಓ ಪುರುಷಸಿಂಹಾ! ಸರ್ವಲೋಕಮನೋಹರನಾದ ಆನಿನ್ನ ವಿಷಯವನ್ನು ಕೇಳಿದಮೇಲೆ, ಎಷ್ಟೇ ಗುಣವತಿಯಾಗಿದ್ದರೂ, ಎಷ್ಟೇ ದೊಡ್ಡಕುಲದಲ್ಲಿ ಹುಟ್ಟಿದವಳಾಗಿದ್ದರೂ, ನಿನ್ನನ್ನು ಬಯಸದೆ ಬಿಡಲಾರಳು ಹೀಗಿರುವಾಗ ನಾನು ಎಷ್ಟುಮಾತ್ರದವಳು? ಇದು ನನ್ನ ತಪ್ಪಲ್ಲ!

ಓ ವಿಭೂ ! ನಾನು ನಿನ್ನನ್ನೇ ಪತಿಯನ್ನಾಗಿ ವರಿಸಿರುವೆನು. ನನ್ನ ಆತ್ಮವನ್ನೇ ನಿನಗೆ ಅರ್ಪಿಸಿರುವೆನು ಕೃಷ್ಣಾ ! ಈಗ ನೀನಾಗಿಯೇ ಬಂದು ನನ್ನನ್ನು ಕೈಹಿಡಿಯಬೇಕು. ಹಾಗಿಲ್ಲದೆ ನೀನು ವಿಳಂಬಮಾಡಿದಪಕ್ಷದಲ್ಲಿ, ಸಿಂಹಕ್ಕೆ ಸೇರಬೇಕಾದ ಭಾಗವನ್ನು ನರಿಯು ಅಪಹರಿಸಿಕೊಂಡುಹೋಗುವಂತೆ, ನಿನ್ನ ಕೈಗೆ ಸೇರಬೇಕಾದ ನನ್ನನ್ನು ನೀಚನಾದ ಶಿಶುಪಾಲನು ಬಂದು ಮುಟ್ಟಿಬಿಡುವನು. ಪೂರ್ವದಲ್ಲಿ ನಾನು ವಾಪೀ, ಕೂಪ, ತಟಾಕ, ಸತ್ರಾದಿಧರ್ಮಕಾರ್ಯಗಳನ್ನು ಮಾಡಿದವಳಾಗಿದ್ದರೆ, ಏನಾದರೂ ಯಾಗಾದಿಕರ್ಮಗಳನ್ನು ನಡೆಸಿದ್ದರೆ, ಸತ್ಪಾತ್ರಗಳಲ್ಲಿ ದಾನವನ್ನು ಮಾಡಿದ್ದರೆ, ತೀರ್ಥಸ್ನಾನಾದಿನಿಯಮಗಳನ್ನು ನಡೆಸಿದ್ದರೆ, ಕೃಚ್ಛ್ರಾದಿವ್ರತಗಳನ್ನು ಅನುಷ್ಠಿಸಿದ್ದರೆ, ದೇವಬ್ರಾಹ್ಮಣರನ್ನೂ, ಗುರುಗಳನ್ನೂ ಪೂಜಿಸಿದ್ದರೆ, ಇತರಭೂತಗಳಿಗೆ ಹಿತವನ್ನುಂಟುಮಾಡಿದ್ದರೆ, ಇವುಗಳಿಂದ ಭಗವಂತನು ಸಂತುಷ್ಟನಾಗಿ, ನೀನೇ ಬಂದು ನನ್ನ ಕೈಯನ್ನು ಹಿಡಿಯುವಂತೆ ಅನುಗ್ರಹಿಸಲಿ ! ಶಿಶುಪಾಲನಾಗಲಿ, ಬೇರೊಬ್ಬರಾಗಲಿ, ನನ್ನನ್ನು ಬಂದು ಮುಟ್ಟದಂತೆ ಆ ಪುಣ್ಯವು ನನ್ನನ್ನು ಕಾಪಾಡಲಿ.

ಕೃಷ್ಣಾ! ಈಗಲೂ ಕಾರ್ಯವು ಮಿಂಚಿ ಹೋಯಿತೆಂದು ತಿಳಿಯಬೇಡ! ನನ್ನ ಬಂಧುಗಳು ನನ್ನನ್ನು ಶಿಶುಪಾಲನಿಗೆ ಕೊಡುವುದಾಗಿಯೇ ನಿಶ್ಚಯಿಸಿದ್ದರೂ, ಆ ಕಾರ್ಯವು ನಾಳೆ ನಡೆಯಬೇಕಾಗಿರುವುದು ಅಷ್ಟರೊಳಗಾಗಿ ನೀನು ನಿನ್ನ ಸೇನಾಬಲದೊಡನೆ, ಇಲ್ಲಿಗೆ ರಹಸ್ಯವಾಗಿ ಬಂದು, ನಿನ್ನ ಪರಾಕ್ರಮವನ್ನೇ ಕನ್ಯಾಶುಲ್ಕವನ್ನಾಗಿಟ್ಟು ರಾಕ್ಷಸವಿವಾಹವಿಧಿಯಿಂದ ನನ್ನನ್ನು ಕರೆದುಕೊಂಡು ಹೋಗಿ, ಇದೇನೆವದಲ್ಲಿ ಆ ಶಿಶುಪಾಲಾದಿಗಳ ಬಲವನ್ನೂ ಮುರಿಯಬಹುದು.

"ಅಂತಃಪುರದಲ್ಲಿ ಬಂಧುಗಳನಡುವೆ ಇರುವ ನಿನ್ನನ್ನು ಸಾಗಿಸಬೇಕಾದರೆ, ನಿನ್ನ ತಂದೆತಾಯಿಗಳೊಡನೆಯೇ ನಾನು ಮೊದಲು ಯುದ್ಧಕ್ಕೆ ನಿಲ್ಲಬೇಕಾಗುವುದಲ್ಲವೆ?" ಎಂದು ನೀನು ಶಂಕಿಸಬೇಡ ಅದಕ್ಕೆ ತಕ್ಕ ಉಪಾಯವನ್ನೂ ತಿಳಿಸುವೆನು. ವಿವಾಹಕ್ಕೆ ಮೊದಲುದಿನದಲ್ಲಿ ಮದವಣಿಗಿತ್ತಿಯನ್ನು ಕುಲದೇವತಾಸಾನ್ನಿಧ್ಯಕ್ಕೆ ಪೂಜಾರ್ಥವಾಗಿ ಕರೆದುಕೊಂಡುಹೋಗುವುದು ನಮ್ಮಲ್ಲಿ ಪೂರ್ವಾಚಾರದಿಂದ ಬಂದ ಪದ್ಧತಿಯಾಗಿರುವುದು ಅದಕ್ಕಾಗಿ ನಾನು ನಮ್ಮ ಪಟ್ಟಣದ ಹೊರಗಿರುವ ಅಂಬಿಕಾದೇವಿಯ ದರ್ಶನಕ್ಕಾಗಿ ಹೊರಡುವೆನು. ಆ ಅಂಬಿಕಾಲಯದಿಂದಲೇ, ನೀನು ನನ್ನನ್ನು ಸುಲಭವಾಗಿ ಕರೆದುಕೊಂಡು ಹೋಗಬಹುದು

ಕೃಷ್ಣಾ! ಇನ್ನು ಹೆಚ್ಚು ಮಾತಿನಿಂದೇನು? ಪರಮೇಶ್ವರನಾದ ರುದ್ರನು ಮೊದಲುಗೊಂಡು, ಮಹಾತ್ಮರೆಲ್ಲರೂ ತಮ್ಮ ಅಜ್ಞಾನನಿವೃತ್ತಿಗಾಗಿ ಯಾವನ ಪಾದಧೂಳಿಯನ್ನು ಶಿರಸಾಧಾರಣಮಾಡಬೇಕೆಂದು ಬಯಸುವರೋ, ಅಂತಹ ಮಹಾಮಹಿಮೆಯುಳ್ಳ ನೀನು ಈ ವಿಷಯದಲ್ಲಿ ನನ್ನನ್ನು ಅನುಗ್ರಹಿಸದಿದ್ದರೆ, ನಾನು ಉಪವಾಸಾದಿವ್ರತಗಳಿಂದ ಈ ದೇಹವನ್ನು ದಂಡಿಸಿ, ಪ್ರಾಣತ್ಯಾಗವನ್ನು ಮಾಡುವುವೇ ನಿಜವು. ಹಾಗೆಯೇ ನೂರಾರುಜನ್ಮಗಳನ್ನೆತ್ತಿದಮೇಲೆಯಾದರೂ ನಿನ್ನನ್ನೇ ಮದುವೆಯಾಗುವೆನು". ಮೇಲೆ ಹೇಳಿದ ಈ ಲೇಖನವನ್ನೋದಿದಮೇಲೆ ಆ ಬ್ರಾಹ್ಮಣನು ಕೃಷ್ಣನನ್ನು ಕುರಿತು, "ಓ ಯದುನಾಥಾ! ರುಕ್ಮಿಣಿಯು ನಿನಗೆ ರಹಸ್ಯವಾಗಿ ಹೇಳಿ ಕಳುಹಿಸಿರುವ ಮಾತುಗಳೂ ಇಷ್ಟೇ? ಇವುಗಳನ್ನು ನಿನಗೆ ತಿಳಿಸಿರ

ವೆನು. ಮುಂದೆ ನಡೆಸಬೇಕಾದ ಕಾರ್ಯವೇನೆಂಬುದನ್ನು ನೀನೇ ಯೋಚಿಸ ಬೇಕು. ಆದರೆ ನಡೆಸಬೇಕಾದ ಕಾರ್ಯವನ್ನು ವಿಳಂಬವಿಲ್ಲದೆ ತ್ವರೆಯಿಂದ ನಡೆಸಬೇಕು" ಎಂದನು. ಇದು ಐವತ್ತೆರಡನೆಯ ಅಧ್ಯಾಯವು

---

## ರುಕ್ಮಿಣೀಕಲ್ಯಾಣವು

ಹೀಗೆ ರುಕ್ಮಿಣಿಯು ಹೇಳಿ ಕಳುಹಿಸಿದ ಸಂದೇಶವನ್ನು ಕೇಳಿದೊಡನೆ, ಕೃಷ್ಣನು ಆಬ್ರಾಹ್ಮಣನ ಕೈಯನ್ನು ಹಿಡಿದುಕೊಂಡು,ಮಂದಹಾಸದೊಡನೆ ಅವನನ್ನು ಕುರಿತು "ಓ ವಿಪ್ರೋತ್ತಮಾ! ಆ ರುಕ್ಮಿಣಿಯು ನನ್ನಲ್ಲಿ ಹೇಗಿ ರುವಳೋ, ಹಾಗೆಯೇ ನಾನೂ ಅವಳಲ್ಲಿ ನಟ್ಟಮನಸ್ಸುಳ್ಳವನಾಗಿರುವೆನು. ಅಷ್ಟೇಕೆ! ಅವಳ ಚಿಂತೆಯಿಂದ ಹಗಲುರಾತ್ರಿಯೂ ನನಗೆ ನಿದ್ರೆ ಯೂ ಬಾರದು.ಅವಳ ಅಣ್ಣನಾದ ರುಕ್ಮಿಯು ನನ್ನಲ್ಲಿ ದ್ವೇಷವನ್ನಿಟ್ಟು,ನನ್ನ ವಿವಾಹಕ್ಕೆ ಅಡ್ಡಿಮಾಡುವ ಯತ್ನದಲ್ಲಿರುವುದನ್ನೂ ನಾನು ಬಲ್ಲೆನು. ಆದ ರೇನು?ಅರಣಿಯನ್ನು ಭೇದಿಸಿ ಪವಿತ್ರವಾದ ಅಗ್ನಿಶಿಖೆಯನ್ನು ಪಡೆಯುವಂತೆ, ಆ ದುಷ್ಟಕ್ಷತ್ರಿಯರನ್ನಡಗಿಸಿ ಅವಳನ್ನು ನಾನೇ ಸಾಧಿಸಿಕೊಂಡು ಬರುವೆ ನು" ಎಂದನು ಆಗ ಮತ್ತೊಮ್ಮೆ ಕೃಷ್ಣನು ರುಕ್ಮಿಣಿಯ ವಿವಾಹಲಗ್ನವ ನ್ನು ಆ ಬ್ರಾಹ್ಮಣನಿಂದ ನಿರ್ಧರವಾಗಿ ತಿಳಿದುಕೊಂಡು, ಆಗಲೇ ತನ್ನ ಸಾ ರಥಿಯಾದ ದಾರುಕನನ್ನು ಕುರಿತು, ರಥವನ್ನು ಸಿದ್ಧಪಡಿಸುವಂತೆ ಆಜ್ಞೆಮಾ ಡಿದನು ಒಡನೆಯೇ ದಾರುಕನು, ಸೈನ್ಯ, ಸುಗ್ರೀವ, ಮೇಘಪುಷ್ಪ, ವಲಾ ಹಕಗಳೆಂಬ ನಾಲ್ಕು ಕುದುರೆಗಳಿಂದ ಹೂಡಿದ ರಥವನ್ನು ಸಿದ್ಧಪಡಿಸಿ ತಂ ದು, ಕೃಷ್ಣನಮುಂದೆ ಕೈಮುಗಿದು ವಿಜ್ಞಾಪಿಸಿದನು ಆಗ ಕೃಷ್ಣನು ಆ ರಥ ವನ್ನೇರಿ, ಆಬ್ರಾಹ್ಮಣನನ್ನೂ ಕರೆದು ಕುಳ್ಳಿರಿಸಿಕೊಂಡು,ಆನರ್ತದೇಶದಿಂದ ಅದೇರಾತ್ರಿ ವಿದರ್ಭನಗರಕ್ಕೆ ಬಂದು ಸೇರಿದನು ಅತ್ತಲಾಗಿ ಕುಂಡಿನಪತಿಯಾ ದ ಭೀಷ್ಮಕನೂಕೂಡ, ತನ್ನ ಮಕ್ಕಳಲ್ಲಿರುವ ಮೋಹದಿಂದ ಅವರ ಮಾತ ನ್ನು ಮೀರಲಾರದೆ, ತನಗೆ ಇಷ್ಟವಿಲ್ಲದಿದ್ದರೂ, ತನ್ನ ಮಗಳನ್ನು ಶಿಶುಪಾ ಲನಿಗೇ ಮದುವೆಮಾಡಿಕೊಡುವುದಾಗಿ ನಿಶ್ಚಯಿಸಿ,ಅದಕ್ಕೆ ತಕ್ಕ ಸನ್ನಾಹಗಳ ನ್ನು ಸಿದ್ಧಪಡಿಸಿದ್ದನು. ಆ ಪಟ್ಟಣದ ಬೀದಿಗಳೂ, ರಾಜಮಾರ್ಗಗಳೂ, ಅಂ

ಗಳಗಳೂ,ಜಲಸೇಚನಾದಿಗಳಿಂದಲಂಕರಿಸಲ್ಪಟ್ಟುವು ಮನೆಮನೆಬಾಗಿಲುಗಳ ಲ್ಲಿ ಧ್ವಜಗಳೂ, ಪತಾಕೆಗಳೂ, ತೋರಣಗಳೂ ತೂಗಾಡುತಿದ್ದುವು. ಅಲ್ಲಿನ ಸ್ತ್ರೀಪುರುಷರೆಲ್ಲರೂ ಗಂಧಪುಷ್ಪಾದಿಗಳಿಂದಲೂ, ರತ್ನಾಭರಣಗಳಿಂ ದಲೂ,ಅಮೂಲ್ಯವಸ್ತುಗಳಿಂದಲೂ ಅಲಂಕರಿಸಿಕೊಂಡು,ಸಂಭ್ರಮದಿಂದ ಓಡಾಡುತಿದ್ದರು ಎಲ್ಲಿ ನೋಡಿದರೂ ಅಗರುಧೂಪಗಳೂ, ಸುಗಂಧದೀಪಗ ಳೂ ಘುಮಘುಮಿಸುತಿದ್ದುವು ಭೀಷ್ಮಕನೂಕೂಡ ತನ್ನ ಮಗಳ ವಿವಾಹ ಕ್ಕೆ ಮೊದಲು,ಪಿತೃಗಳನ್ನೂ, ದೇವತೆಗಳನ್ನೂ ಬ್ರಾಹ್ಮಣರನ್ನೂ ವಿಧ್ಯುಕ್ತ ವಾಗಿ ಪೂಜಿಸಿ, ಅನೇಕಬ್ರಾಹ್ಮಣರಿಗೆ ಭೋಜನವನ್ನಿಕ್ಕಿಸಿ. ಅವ ರಿಂದ ತನ್ನ ಮಗಳಿಗೆ ಸ್ವಸ್ತಿವಾಚನವನ್ನು ಮಾಡಿಸಿದನು ಇಷ್ಟರಲ್ಲಿ ಅಂತಃಪುರಸ್ತ್ರೀಯರು ರುಕ್ಮಿಣಿಗೆ ಮಂಗಳಸ್ನಾನವನ್ನು ಮಾಡಿಸಿ, ಅ ಮೂಲ್ಯವಾದ ವಸ್ತ್ರವನ್ನುಡಿಸಿ, ಪುಷ್ಪಾಭರಣಗಳಿಂದ ಅವಳ ಮೈಯನ್ನಲಂ ಕರಿಸಿದರು. ಬ್ರಾಹ್ಮಣರೆಲ್ಲರೂ ಋಗ್ಯಜುಸ್ಸಾಮಮಂತ್ರಗಳಿಂದ ವಧುವಿಗೆ ರಕ್ಷಾಕಾರ್ಯಗಳನ್ನು ನಡೆಸಿದರು ಅಥರ್ವಮಂತ್ರದಲ್ಲಿ ನಿಪುಣನಾದ ಪುರೋ ಹಿತನೊಬ್ಬನು, ದುಷ್ಟಗ್ರಹಶಾಂತಿಗಾಗಿ ಹೋಮವನ್ನು ಮಾಡಿದನು ಭೀಷ್ಮಕನು ಕಾಲೋಚಿತವಾದ ಕಾರ್ಯಗಳನ್ನು ಬಲ್ಲವನಾದುದರಿಂದ, ಆ ಬ್ರಾಹ್ಮಣರೆಲ್ಲರಿಗೂ, ಬೆಳ್ಳಿಬಂಗಾರಗಳನ್ನೂ, ವಸ್ತ್ರಗಳನ್ನೂ, ಗೋವುಗಳ ನ್ನೂ,ಎಳ್ಳು, ಬೆಲ್ಲ, ಮುಂತಾದ ದಾನವಸ್ತುಗಳನ್ನೂ ಯಥೇಷ್ಟವಾಗಿ ಕೊ ಟ್ಟು ತೃಪ್ತಿಪಡಿಸಿದನು ಹೀಗೆಯೇ ಅತ್ತಲಾಗಿ ಶಿಶುಪಾಲನ ತಂದೆಯಾದ ದಮಘೋಷನೂಕೂಡ, ಮಂತ್ರಜ್ಞರಾದ ಬ್ರಾಹ್ಮಣರಮೂಲಕವಾಗಿ ತನ್ನ ಮಗನಿಗೆ ಅಭ್ಯುದಯಕಾರ್ಯಗಳೆಲ್ಲವನ್ನೂ ಮಾಡಿಸಿ, ರಥ, ಗಜ, ತುರಗ, ಪದಾತಿಗಳೆಂಬ ಚತುರಂಗಸೈನ್ಯಗಳಿಂದ ಪರಿವೃತನಾಗಿ ಕುಂಡಿನಪುರಕ್ಕೆ ಹೊರಟನು ದಮಘೋಷನು ಹೊರಟುಬರುವ ಸುದ್ದಿಯನ್ನು ಕೇಳಿದೊಡನೆ, ಭೀಷ್ಮಕನು ತನ್ನ ಸೈನ್ಯಗಳೊಡನೆ ಇದಿರುಗೊಂಡು ಬಂದು. ಬೀಗನಾದ ಅ ವನಿಗೆ ನಡೆಸಬೇಕಾದ ಗೌರವಗಳೆಲ್ಲವನ್ನೂ ನಡೆಸಿ, ಅವನನ್ನು ಕರೆತಂದು ಅ ವನ ನಿವಾಸಕ್ಕಾಗಿ ಹೊಸದಾಗಿ ಕಟ್ಟಿದ ಒಂದು ಮಂದಿರದಲ್ಲಿಳಿಸಿದನು. ಇಷ್ಟರಲ್ಲಿ, ಸಾಲ್ವ, ಜರಾಸಂಧ, ದಂತವಕ್ರ, ವಿಡೂರಥ, ಪೌಂಡ್ರಕ, ಮೊದ

ಲಾದ ಶಿಶುಪಾಲನ ಪಕ್ಷವನ್ನು ವಹಿಸಿದ್ದ ರಾಜರೆಲ್ಲರೂ,ಅಪಾರವಾದ ತಮ್ಮ ತಮ್ಮ ಸೈನ್ಯಗಳನ್ನು ಸೇರಿಸಿಕೊಂಡು, ಕೃಷ್ಣನಮೇಲೆ ಬದ್ಧದ್ವೇಷವುಳ್ಳವರಾಗಿ, ಆ ಶಿಶುಪಾಲನಿಗೆ ಬೆಂಬಲವಾಗಿ ನಿಂತಿದ್ದರು. ಈ ರಾಜರೆಲ್ಲರೂ ರುಕ್ಮಿಣಿಯನ್ನು ಹೇಗಾದರೂ ಶಿಶುಪಾಲನಿಗೇ ವಿವಾಹಮಾಡಿಸಬೇಕೆಂಬ ದೃಢಪ್ರಯತ್ನವುಳ್ಳವರಾಗಿ,ಎಲ್ಲರೂಒಂದುಕಡೆಯಲ್ಲಿ ಸೇರಿಹೀಗೆಂದುಮಂತ್ರಾಲೋಚನೆಯನ್ನು ಮಾಡಿದರು. “ಓ ಮಿತ್ರರೇ! ಈ ಸಮಯದಲ್ಲಿ ಕೃಷ್ಣನು, ಬಲರಾಮನೇ ಮೊದಲಾದ ಯದುವೀರರೊಡನೆ ಬಂದು, ಬಲಾತ್ಕಾರದಿಂದ ರುಕ್ಮಿಣಿಯನ್ನು ಅಪಹರಿಸಿಕೊಂಡು ಹೋದರೂ ಹೋಗಬಹುದು ಆಗ ನಾವೆಲ್ಲರೂ ಎಚ್ಚರಿಕೆಯಿಂದ ಅವರೊಡನೆ ಯುದ್ಧಮಾಡಬೇಕು.” ಎಂದು ನಿಶ್ಚಯಿಸಿ ಸಿದ್ಧರಾಗಿದ್ದರು ಇದರಂತೆಯೇ ಇನ್ನೂ ಅನೇಕರಾಜರು ತಮ್ಮಸೈನ್ಯಗಳೊಡನೆ ಸಿದ್ಧರಾಗಿ ಬಂದಿದ್ದರು ಇಷ್ಟರಲ್ಲಿ ಬಲರಾಮನಿಗೂ ಈ ಸಂಗತಿಯು ತಿಳಿಯಿತು ಆ ಕನ್ಯೆಯನ್ನು ಸಾಧಿಸಿ ತರುವುದಕ್ಕಾಗಿ ಕೃಷ್ಣನು ತಾನೊಬ್ಬನೇ ಹೋಗಿರುವನೆಂಬ ಸಂಗತಿಯೂ ಅವನ ಕಿವಿಗೆ ಬಿದ್ದಿತು ಹೇಗಿದ್ದರೂ ಅಲ್ಲಿ ದೊಡ್ಡ ಯುದ್ಧವು ನಡೆಯುವುದೆಂದು ಶಂಕಿಸಿ, ಕೃಷ್ಣನಲ್ಲಿ ತನಗಿರುವ ಸ್ನೇಹದಿಂದ ಉದಾಸೀನನಾಗಿರಲಾರದೆ, ದೊಡ್ಡಚತುರಂಗಸೈನ್ಯವನ್ನು ಸೇರಿಸಿಕೊಂಡು ಕುಂಡಿನಪುರಕ್ಕೆ ಹೋದನು. ಇಷ್ಟರಲ್ಲಿ ಅತ್ತಲಾಗಿ ರುಕ್ಮಿಣಿಗಾದರೋ ಕ್ಷಣಕ್ಷಣಕ್ಕೂ ಮನಸ್ಸಿನಲ್ಲಿ ಆತುರವು ಹೆಚ್ಚುತ್ತಬಂದಿತು. ವಿವಾಹಕಾಲವು ಸಮೀಪಿಸಿತು. ಕೃಷ್ಣನಾಗಲಿ, ತಾನು ಕಳುಹಿಸಿದ ಬ್ರಾಹ್ಮಣನಾಗಲಿ ಅದುವರೆಗೆ ಬಾರದಿದ್ದುದನ್ನು ನೋಡಿ, ತನ್ನಲ್ಲಿ ತಾನು “ಅಕಟಾ! ಇನ್ನೇನು ಗತಿ! ಮಂದಭಾಗ್ಯೆಯಾದ ನನಗೆ ನಾಳೆ ವಿವಾಹವು ನಿಶ್ಚಿತವಾಗಿರುವುದು ನಡುವೆ ಒಂದೇರಾತ್ರಿಯು ಉಳಿದಿರುವುದು. ಆ ಪುಂಡರೀಕಾಕ್ಷನು ಇದುವರೆಗೆ ಬಾರದಿರುವುದಕ್ಕೆ ಕಾರಣವೇನೋ ತಿಳಿಯದಲ್ಲಾ! ನಾನು ಕಳುಹಿಸಿದ ಬ್ರಾಹ್ಮಣನೂ ಇನ್ನೂ ಹಿಂತಿರುಗಿಬರಲಿಲ್ಲವಲ್ಲಾ! ಈಗ ನಾನೇನುಮಾಡಲಿ! ನಿರ್ದುಷ್ಟಹೃದಯನಾದ ಆ ಕೃಷ್ಣನು ನನ್ನಲ್ಲಿ ಯಾವುದಾದರೂ ದೋಷವನ್ನು ಕಂಡು ನನ್ನನ್ನು ವರಿಸುವುದಕ್ಕೆ ಇಷ್ಟವಿಲ್ಲದಿರುವನೋ!ಅಥವಾ! ದುರ್ಭಾಗಿನಿಯಾದ ನನಗೆ ದೈವವು ಅನುಕೂ

ಲವಾಗಿಲ್ಲವೋ! ಆ ಪಾರ್ವತೀದೇವಿಯು ನನ್ನಲ್ಲಿ ವಿಮುಖಳಾಗಿರುವಳೋ! ನಿಜಸ್ಥಿತಿಯೇನೋ ತಿಳಿಯಲಿಲ್ಲವಲ್ಲಾ" ಎಂದು ಧಾರೆಧಾರೆಯಾಗಿ ಕಣ್ಣೀರುಸುರಿಸಿ ಅಳುವುದಕ್ಕೂ ತೊಡಗಿದಳು. ಇಷ್ಟರಲ್ಲಿ ಅವಳ ಇಷ್ಟಸಿದ್ಧಿಯನ್ನು ಸೂಚಿಸುವಂತೆ, ಆಕೆಯ ಎಡದ ಭುಜವೂ, ಎಡದ ತೊಡೆಯೂ ಅದಿರಿತು. ಆಸಮಯಕ್ಕೆ ಸರಿಯಾಗಿ, ಅವಳು ಕಳುಹಿಸಿದ್ದ ಬ್ರಾಹ್ಮಣನೂ ಬಂದುಸೇರಿದನು ಇಂಗಿತಜ್ಞಳಾದ ರುಕ್ಮಿಣಿಯು, ಉಲ್ಲಾಸಗೊಂಡ ಅವನ ಮುಖಲಕ್ಷಣದಿಂದಲೇ ತನ್ನ ಕಾರ್ಯಸಿದ್ಧಿಯಾಗಿರಬಹುದೆಂದು ತಿಳಿದು, ಸಂತೋಷದಿಂದ ಮುಖದಲ್ಲಿ ಮಂದಹಾಸವನ್ನು ಬೀರುತ್ತ, ಅವನು ಹೋಗಿ ಬಂದ ವೃತ್ತಾಂತಗಳೆಲ್ಲವನ್ನೂ ಕೇಳಿದಳು ಆ ಬ್ರಾಹ್ಮಣನೂಕೂಡ ಕೃಷ್ಣನಿಗೂ, ತನಗೂ ನಡೆದಸಂಭಾಷಣೆಗಳನ್ನೆಲ್ಲಾ ಆಮೂಲಾಗ್ರವಾಗಿತಿಳಿಸಿರಾಮಕೃಷ್ಣರಿಬ್ಬರೂ ಸಿದ್ಧರಾಗಿ ಬಂದಿರುವುದನ್ನೂ, ಕೃಷ್ಣನು ಆಕೆಯನ್ನಪಹರಿಸಿಕೊಂಡು ಹೋಗುವುದಾಗಿ ಸಂಕಲ್ಪಿಸಿರುವುದನ್ನೂ ಸೂಚಿಸಿದನು! ಈ ವಾಕ್ಯವನ್ನು ಕೇಳಿದೊಡನೆ ರುಕ್ಮಿಣಿಗೆಮೈಯೆಲ್ಲವೂಪುಳಕಿತವಾಗಿ, ಇಂತಹ ಪ್ರಿಯವಾಕ್ಯವನ್ನು ತಂದ ಬ್ರಾಹ್ಮಣನಿಗೆ ತಕ್ಕ ಬಹುಮಾನವೇನೆಂದು ತಿಳಿಯದೆ, ಅವನಿಗೆ ಸುಮ್ಮನೆ ಕೈಮುಗಿದು ನಮಸ್ಕರಿಸಿ ಬಿಟ್ಟಳು. ಇಷ್ಟರಲ್ಲಿ ಭೀಷ್ಮಕನಿಗೂ, ರಾಮಕೃಷ್ಣರು ಬಂದಿರುವರೆಂಬ ವೃತ್ತಾಂತವು ತಿಳಿಯತು ಆತನು ಬಹಳ ಸರಳಹೃದಯನಾದುದರಿಂದ, ಅವರೂ ತನ್ನ ಮಗಳ ಮದಿವೆಯನ್ನು ನೋಡುವುದಕ್ಕಾಗಿ, ಬಂದಿರುವರೆಂದೆಣಿಸಿ, ಅನೇಕವಾದ್ಯ ಘೋಷದೊಡನೆ ಅವರನ್ನಿದಿರುಗೊಂಡು, ತಕ್ಕಸತ್ಕಾರಗಳಿಂದ ಪೂಜಿಸಿ, ಮಧುಪರ್ಕವನ್ನೂ, ವಸ್ತ್ರಾಭರಣಗಳನ್ನೂ, ಅವರಿಗೆ ಇಷ್ಟವಾದ ಇತರವಸ್ತುಗಳನ್ನೂ ಒಪ್ಪಿಸಿ ಸತ್ಕರಿಸಿದನು. ರಾಮಕೃಷ್ಣರಿಗೂ, ಅವರ ಸೈನ್ಯಗಳಿಗೂ, ಅವರ ಅನುಚರರಿಗೂ, ಸಕಲವಸ್ತು ಸಮೃದ್ಧವಾದ ಬಿಡದಿಗಳನ್ನು ಮಾಡಿಕೊಟ್ಟನು. ಹೀಗೆಯೇ ತನ್ನಮಗಳ ವಿವಾಹಕ್ಕಾಗಿ ಬಂದ ಸಮಸ್ತರಾಜರಿಗೂ, ಅವರವರ ಪರಾಕ್ರಮಕ್ಕೂ, ವಯಸ್ಸಿಗೂ, ಸೇನಾಬಲಕ್ಕೂ, ಅವರವರ ಯೋಗ್ಯತೆಗಳಿಗೂ ತಕ್ಕ ಸಾಮಗ್ರಿಗಳನ್ನೊದಗಿಸಿಕೊಟ್ಟು ಪೂಜಿಸಿದನು. ಕೃಷ್ಣಾಗಮನವನ್ನು ಕೇಳಿದೊಡನೆ, ವಿದರ್ಭಪುರದ ಸಮಸ್ತಜನರೂ, ಆತನ ಮುಖಾರವಿಂದ

ಮಕರಂದವನ್ನು ನೇತ್ರಾಂಜಲಿಗಳಿಂದ ತೃಪ್ತಿಯಿಲ್ಲದೆ ಪಾನಮಾಡುತ್ತ, ತಮ್ಮಲ್ಲಿ ಒಬ್ಬರಿಗೊಬ್ಬರು ‹‹ನಮ್ಮ ರುಕ್ಮಿಣಿಯು ಈ ಕೃಷ್ಣನಿಗೇ ತಕ್ಕ ಪತ್ನಿ! ಈ ಕೃಷ್ಣನೇ ನಮ್ಮ ರುಕ್ಮಿಣಿಗೆ ತಕ್ಕ ವರನು ಆದರೇನು? ಈಗ ಅನ್ಯಾಯವಾಗಿ ನಮ್ಮ ರಾಜಕನ್ಯೆಯು ನೀಚನಾದ ಆ ಶಿಶುಪಾಲನ ಕೈಗೆ ಸಿಕ್ಕಿಬೀಳುವಳು. ಮಾಡುವುದೇನು? ಪೂರ್ವಜನ್ಮದಲ್ಲಿ ನಾವೇನಾದರೂ ಸತ್ಕಾರ್ಯಗಳನ್ನು ನಡೆಸಿದ್ದರೆ,ಅದರಿಂದ ಲೋಕಕರ್ತನಾದ ಭಗವಂತನು ನಮ್ಮಲ್ಲಿ ಸಂತುಷ್ಟನಾಗಿದ್ದರೆ, ಆ ಕೃಷ್ಣನೇ ರುಕ್ಮಿಣಿಯನ್ನು ಕೈಹಿಡಿಯುವಂತೆ ಭಗವಂತನು ನಮ್ಮಲ್ಲಿ ಅನುಗ್ರಹವನ್ನು ತೋರಿಸಲಿ" ಎಂದು ಆನಂದಬಾಷ್ಪವನ್ನು ಸುರಿಸುತ್ತ ಗುಸುಗುಟ್ಟುತ್ತಿದ್ದರು. ಹೀಗೆ ಸಕಲಸನ್ನಾಹಗಳೂ ಸಿದ್ಧವಾದ ಮೇಲೆ, ಮದುಮಗಳಾದ ರುಕ್ಮಿಣಿಯು,ಅಂಬಿಕಾಲಯದಲ್ಲಿ ಪಾರ್ವತೀಪೂಜೆಗಾಗಿ ಅಂತಃಪುರದಿಂದ ಕಾಲುನಡೆಯಾಗಿಯೇ ಹೊರಟಳು. ಅನೇಕರಾಜಭಟರು ಖಡ್ಗಪಾಣಿಗಳಾಗಿ ಬರುತ್ತಿದ್ದರು. ರುಕ್ಮಿಣಿಯು ದಾರಿಯುದ್ದಕ್ಕೂ ಆ ಕೃಷ್ಣನ ಮುಖಸೌಂದರ್ಯವನ್ನೇ ಧ್ಯಾನಿಸುತ್ತ ಬರುತ್ತಿದ್ದಳು ಆಕೆಯನ್ನು ಮುಂದೆ ಬಿಟ್ಟುಕೊಂಡು ತಂದೆತಾಯಿಗಳೂ ಹಿಂಬಾಲಿಸುತಿದ್ದರು. ಮುಂದೆ ಮೃದಂಗ, ಶಂಖ, ಪಣವ, ತೂರ್ಯ, ಭೇರಿ, ಮೊದಲಾದ ಮಂಗಳವಾದ್ಯಗಳು ಮೊಳಗುತಿದ್ದುವು. ಮತ್ತು ಬಗೆಬಗೆಯ ನೈವೇದ್ಯಗಳನ್ನೂ, ಪೂಜಾಸಾಮಗ್ರಿಗಳನ್ನೂ ಕೈಯಲ್ಲಿ ಹಿಡಿದು, ಕೆಲವು ಮಂದಿ ವಾರಾಂಗನೆಯರು ಬರುತಿದ್ದರು ಅನೇಕಬ್ರಾಹ್ಮಣಸ್ತ್ರೀಯರು, ಚೆನ್ನಾಗಿ ಮೈಯನ್ನಲಂಕರಿಸಿಕೊಂಡು, ಹೂ, ಗಂಧ, ವಸ್ತ್ರ, ಆಭರಣ, ಮೊದಲಾದುವುಗಳನ್ನು ತಟ್ಟೆಯಲ್ಲಿಟ್ಟುಕೊಂಡು ಬರುತಿದ್ದರು ರುಕ್ಮಿಣಿಯು ಹೊರಟುಬರುವಾಗ,ಅವಳಮುಂದೆ ಗಾಯಕರು ಗಾನಮಾಡುತಿದ್ದರು ವಂದಿಗಳೂ ಮಾಗಧರೂ, ಸೂತರೂ ಸ್ತುತಿಸುತಿದ್ದರು. ವಾದ್ಯಗಾರರು ವಾದ್ಯಗಳನ್ನು ನುಡಿಸುತಿದ್ದರು ಇಂತಹ ಸಕಲವೈಭವಗಳೊಡನೆ, ರುಕ್ಮಿಣಿಯು ಊರಹೊರಗಿನ ಅಂಬಿಕಾದೇವಾಲಯಕ್ಕೆ ಬಂದು ಸೇರಿದಳು. ಆ ದೇವಾಲಯದ ಬಾಗಿಲಲ್ಲಿ ಕೈಕಾಲುಗಳನ್ನು ತೊಳೆದುಕೊಂಡು, ಆಚಮನವನ್ನು ಮಾಡಿ ಶುಚಿಯಾಗಿ, ಆ ಪಾರ್ವತಿದೇವಿಯನ್ನೇ ಮನಸ್ಸಿನಲ್ಲಿ ನಿಶ್ಚಲವಾಗಿ ಧ್ಯಾನಿಸುತ್ತ

ದೇವತಾಸಾನ್ನಿಧ್ಯಕ್ಕೆ ಹೋದಳು. ಆಗ ವೃದ್ಧರಾದ ಬ್ರಾಹ್ಮಣಸುಮಂಗಲಿಯರೂ, ಪೂಜಾಸಂಪ್ರದಾಯವನ್ನು ತಿಳಿದ ಮುತ್ತೈದೆಯರೂ ಮುಂದೆ ಬಂದು, ರುದ್ರನೊಡಗೂಡಿರುವ ಭವಾನೀದೇವಿಗೆ ನಮಸ್ಕಾರಮಾಡಿಸಿ, ವರಪ್ರಾರ್ಥನೆಯನ್ನು ಮಾಡುವಂತೆ ರುಕ್ಮಿಣಿಗೆ ಹೇಳಿದರು ಆಗ ರುಕ್ಮಿಣಿಯು ಆ ದೇವಿಯಮುಂದೆ ಕೈಮುಗಿದು ನಿಂತು ‹‹ಓ ದೇವಿ ! ಮಂಗಳಸ್ವರೂಪಿಣಿ! ನಿನಗೂ, ನಿನ್ನ ವಿನಾಯಕಾದಿಗಣಗಳಿಗೂ ನಮಸ್ಕರಿಸುವೆನು ” ಎಂದು ಹೇಳಿ ಮನಸ್ಸಿನಲ್ಲಿ ‹‹ ಓ ಜನನಿ! ನನಗೆ ಭಗವಂತನಾದ ಆ ಕೃಷ್ಣನೇ ಪತಿ ಯಾಗುವಂತೆ ಅನುಗ್ರಹಿಸಬೇಕು” ಎಂದು ಪ್ರಾರ್ಥಿಸಿದಳು ಹೀಗೆ ರುಕ್ಮಿಣಿಯು ಶಿವನನ್ನೂ, ಅಂಬಿಕಾದೇವಿಯನ್ನೂ ಪ್ರಾರ್ಥಿಸಿದಮೇಲೆ, ಬ್ರಾಹ್ಮಣಪತ್ನಿಯರನ್ನು ಮುಂದಿಟ್ಟುಕೊಂಡು, ವಿಧ್ಯುಕ್ತವಾದ ಪೂಜೆಗಳನ್ನು ನಡೆಸಿದಳು. ಹಾಗೆಯೇ ಶುದ್ಧಜಲದಿಂದ ಪಾರ್ವತಿಪರಮೇಶ್ವರರಿಗೆ ಅಭಿಷೇಕವನ್ನೂ ನಡೆಸಿದಳು. ಧೂಪದೀಪಾದಿಗಳನ್ನು ಸಮರ್ಪಿಸಿದಳು. ಅಕ್ಷತೆ, ಗಂಧ, ವಸ್ತ್ರ, ಪುಷ್ಪಮಾಲಿಕೆ ಮುಂತಾದುವುಗಳಿಂದ ಆ ದೇವತಾಮೂರ್ತಿಯನ್ನು ಅಲಂಕರಿಸಿದಳು ನಾನಾಬಗೆಯ ಉಪಚಾರಗಳಿಂದ ಬಲಿಗಳನ್ನು ನಿವೇದನಮಾಡಿದಳು. ಮುತ್ತೈದೆಯರನ್ನು ಕರೆಸಿ ಬೇರೆಬೇರೆಯಾಗಿ ಆರತಿಯನ್ನೆತ್ತಿಸಿದಳು. ಆಮೇಲೆ ಅಲ್ಲಿಗೆ ಬಂದಿದ್ದ ಬ್ರಾಹ್ಮಣಸ್ತ್ರೀಯರೆಲ್ಲರಿಗೂ ಕ್ರಮವಾಗಿ ಫಲತಾಂಬೂಲಗಳನ್ನೂ, ಕಂಠಸೂತ್ರಗಳನ್ನೂ, ಕಬ್ಬಿನ ತುಂಡುಗಳನ್ನೂ, ಉಪ್ಪುಹಾಕಿದ ತೊವ್ವೆ, ನೀರು, ಮುಂತಾದ ಉಪಹಾರಗಳನ್ನೂ ಕೊಟ್ಟು ಪೂಜಿಸಿದಳು. ಆ ಬ್ರಾಹ್ಮಣಸ್ತ್ರೀಯರೂಕೂಡ, ಅಂಬಿಕಾದೇವಿಗೆ ಧರಿಸಿದ, ಪುಷ್ಪಾದಿಗಳನ್ನು ರುಕ್ಮಿಣಿಯ ಕೈಗೆ ಕೊಟ್ಟು ಆಶೀರ್ವದಿಸಿದರು ಆಮೇಲೆ ರುಕ್ಮಿಣಿಯು ವೃದ್ಧಸ್ತ್ರೀಯರಿಗೂ, ಅಂಬಿಕಾದೇವಿಗೂ ನಮಸ್ಕರಿಸಿ, ದೇವತಾಪ್ರಸಾದವನ್ನು ಕೈಯಲ್ಲಿಟ್ಟುಕೊಂಡು, ಮೌನವ್ರತವನ್ನು ಬಿಟ್ಟು, ತನ್ನ ಗೌಡಿಯರ ಕೈಯನ್ನು ಹಿಡಿದುಕೊಂಡು, ಅಂಬಿಕಾಗೃಹದಿಂದ ಹೊರಗೆ ಬಂದಳು. ಆ ರಾಜಕುಮಾರಿಯು ಹಂಸದಂತೆ ಮಂದಗಮನದಿಂದ ನಡೆದು ಬರುವಾಗ, ಅವಳ ಸೊಬಗನ್ನು ಕೇಳಬೇಕೆ! ದೇಹದ ಭಾರದಿಂದ ಮುರಿದುಬೀಳುವಂತೆ ಅದಿರುತ್ತಿರುವ ಸಣ್ಣನಡು! ಮುಖಕ್ಕೆ ಮತ್ತಷ್ಟು ಕಳೆಯೇರಿಸುವಂತೆ

ತೂಗಾಡುತ್ತಿರುವ ಕುಂಡಲಗಳು ! ನಿತಂಬದಮೇಲೆ ಘಲಘಲನೆ ಧ್ವನಿ ಮಾಡುತ್ತಿರುವ ಒಡ್ಯಾಣದ ಗೆಜ್ಜೆಗಳು! ಯೌವನಾತಿಶಯವನ್ನು ಸೂಚಿಸುವಂತೆ ಉಬ್ಬಿದ ಸ್ತನ್ಯಗಳು. ಭಗವನ್ಮಾಯೆಯೋ ಎಂಬಂತೆ ಲೋಕವೋಹನವಾದ ಸುಂದರಾಕೃತಿ! ಶ್ಯಾಮಲವರ್ಣವಾದ ಮೈ!ಮುಂಗುರುಳಿನ ಕಾಂತಿಯನ್ನು ಹೋಲುತ್ತಿರುವ ನೇತ್ರಕಾಂತಿ! ಮುಖದಲ್ಲಿ ಮುಗಳ್ನಗೆ!ತೊಂಡೆಹಣ್ಣಿನಂತಿರುವ ತುಟಿಯ ಕಾಂತಿಯಿಂದ ಕೆಂಪಗೆ ತೋರುತ್ತಿರುವ ಹಲ್ಲುಗಳು ಕಲಹಂಸದಂತೆ ಮೃದುವಾದ ನಡೆ! ಘಲ್ಘಲನೆ ಶಬ್ದಿಸುತ್ತಿರುವ ಕಾಲಂದುಗೆಗಳು ಇಂತಹ ದಿವ್ಯಸೌಂದರ್ಯದಿಂದ ಬರುತ್ತಿರುವ ಆ ರುಕ್ಮಿಣಿಯನ್ನು ನೋಡಿದೊಡನೆ, ಅಲ್ಲಿ ಬಂದಿದ್ದ ವೀರಕ್ಷತ್ರಿಯರ ಹೃದಯವೆಲ್ಲವೂ ಕದಲುವಂತಾಯಿತು ಎಲ್ಲರೂ ಆಕೆಯ ಸೌಂದರ್ಯಕ್ಕೆ ವೋಹಿತರಾಗಿದ್ದರು. ಆಕೆಯ ಮಂದಹಾಸದ ಸೊಗಸನ್ನೂ, ಲಜ್ಜಾವಿಶಿಷ್ಟವಾದ ನೋಟವನ್ನೂ ನೋಡಿದೊಡನೆ, ಅಲ್ಲಿದ್ದ ರಾಜರೆಲ್ಲರೂ ಮೈಮರೆತು, ತಮ್ಮ ಕೈಯಲ್ಲಿದ್ದ ಶಸ್ತ್ರಾಸ್ತ್ರಗಳು ಜಾರಿಬಿದ್ದುದನ್ನೂ ತಿಳಿಯದೆ, ತಾವು ಏರಿದ್ದ ಆನೆಕುದುರೆ ಮೊದಲಾದ ವಾಹನಗಳಿಂದ ಕೆಳಕ್ಕೆ ಬೀಳುತಿದ್ದರು. ಹೀಗೆ ರುಕ್ಮಿಣೀದೇವಿಯು, ಕುಲದೇವಮಾತ್ರೆಯೆಂಬ ನೆಪದಿಂದ ಶ್ರೀಕೃಷ್ಣನಿಗೆ ತನ್ನ ಲಾವಣ್ಯವನ್ನರ್ಪಿಸುತ್ತ, ಕೃಷ್ಣನು ಯಾವಾಗ ಬರುವನೋ, ಎಂದು ಮನಸ್ಸಿನಲ್ಲಿ ಹಂಬನಿಸುತ್ತ, ಮೆಲ್ಲಮೆಲ್ಲಗೆ ಹೆಜ್ಜೆಯನ್ನಿಟ್ಟುಕೊಂಡು ಬರುತಿದ್ದಳು. ಆಗಾಗ ತನ್ನ ಎಡಗೈಯ ಉಗುರುಗಳಿಂದ ಮುಂಗುರುಳನ್ನು ತಿದ್ದಿಕೊಳ್ಳುವಳು. ಆಗಾಗ ತನ್ನ ಕಡೆಕಣ್ಣಿನಿಂದ ಮುಂದಿದ್ದ ರಾಜಮಂಡಲಿಯನ್ನು ನೋಡಿ, ಲಜ್ಜೆಯಿಂದ ಥಟ್ಟನೆ ತಲೆಯನ್ನು ತಗ್ಗಿಸುವಳು. ಹೀಗೆ ರುಕ್ಮಿಣಿಯು ಆ ದೇವಾಲಯದ್ವಾರದಿಂದ ಹೊರಗೆ ಬಂದು, ರಥವನ್ನೇರುವುದಕ್ಕೆ ಸಿದ್ಧವಾಗುವಷ್ಟರಲ್ಲಿ, ಆಕಸ್ಮಾತ್ತಾಗಿ ಶ್ರೀಕೃಷ್ಣನು ಅವಳ ಸಮೀಪಕ್ಕೆ ಬಂದು, ಅಲ್ಲಿ ತನ್ನ ಶತ್ರುರಾಜರೆಲ್ಲರೂ ನೋಡುತ್ತಿರುವಹಾಗೆಯೇ, ರುಕ್ಮಿಣಿಯನ್ನು ಕೈಹಿಡಿದು,ಗರುಡಧ್ವಜದಿಂದ ಅಲಂಕೃತವಾದ ತನ್ನ ರಥದಮೇಲೆ ಏರಿಸಿಕೊಂಡನು. ಹೀಗೆ ಕೃಷ್ಣನು, ಅಲ್ಲಿದ್ದ ವೀರಕ್ಷತ್ರಿಯರೆಲ್ಲರೂ ನೋಡುತ್ತಿರುವಾಗಲೆ, ಯಾರನ್ನೂ ಲಕ್ಷ್ಯಮಾಡದೆ, ನರಿಗಳ ಗುಂಪಿನಲ್ಲಿರುವ ಆಹಾರವನ್ನು

ಸಿಂಹವು ಎತ್ತಿಕೊಂಡು ಹೋಗುವಂತೆ, ಆ ರುಕ್ಮಿಣಿಯನ್ನು ಕರೆದುಕೊಂಡು, ಬಲರಾಮಸಹಿತನಾಗಿ ತಾನೂ ಆರಥದಮೇಲೆ ಕುಳಿತು ವೇಗದಿಂದ ಹೊರಟುಬಿಟ್ಟನು. ಮೊದಲೇ ದುರಹಂಕಾರದಿಂದ ಬೀಗಿ ಬೆರೆಯುತಿದ್ದ ಜರಾಸಂಧಾದಿಗಳೆಲ್ಲರೂ, ತಮಗುಂಟಾದ ತಿರಸ್ಕಾರವನ್ನೂ, ರಾಜಕನ್ಯೆಯು ತಮ್ಮ ಕೈತಪ್ಪಿಹೋದುದನ್ನೂ ನೋಡಿ ಸಹಿಸಲಾರದೆ, ದುಃಖಾಕ್ರೋಶಗಳಿಂದ ಒಬ್ಬರಿಗೊಬ್ಬರು “ಆಹಾ! ಏನಾಶ್ಚರ್ಯವು! ಮಹಾಧನುರ್ಧಾರಿಗಳಾದ ನಮ್ಮ ಕೀರ್ತಿಯೆಲ್ಲವೂ ನಿಮಿಷಮಾತ್ರದಲ್ಲಿ ನಿರ್ನಾಮವಾಯಿತು! ಸಿಂಹಗಳ ನಡುವೆ ನರಿಯು ನುಗ್ಗಿದಂತೆ, ಮಹಾವೀರರಾದ ನಮ್ಮ ಕೀರ್ತಿಯನ್ನು ಒಬ್ಬ ಗೊಲ್ಲನು ಕೆಡಿಸಿ ಬಿಟ್ಟನಲ್ಲವೆ? ಛಿ! ಇನ್ನು ನಾವು ಬದುಕಿ ಫಲವೇನು?” ಎಂದು ಕೋಪದಿಂದ ಹಲ್ಲುಕಡಿದು ಬುಸುಗುಟ್ಟುತ್ತಿದ್ದರು. ಇದು ಐವತ್ತುಮೂರನೆಯ ಅಧ್ಯಾಯವು.

---

## ರುಕ್ಮಿಣಿಯ ಪರಾಜಯವು.

ಹೀಗೆ ಆ ರಾಜರೆಲ್ಲರೂ ಅತಿಕುಪಿತರಾಗಿ, ಯುದ್ಧಕವಚವನ್ನು ಧರಿಸಿ, ಧನುಸ್ಸನ್ನು ಹಿಡಿದು, ತಮ್ಮತಮ್ಮ ವಾಹನಗಳನ್ನೇರಿ, ಸೇನಾಸಮೇತರಾಗಿ ಕೃಷ್ಣನನ್ನು ಬೆನ್ನಟ್ಟಿದರು. ಇತ್ತಲಾಗಿ ಕೆಲವು ಯಾದವಸೈನ್ಯಾಧಿಪತಿಗಳೂ ಧನುಷ್ಟಂಕಾರಮಾಡುತ್ತ ಅವರನ್ನು ತಡೆದರು. ಆನೆಗಳನ್ನೂ, ಕುದುರೆಗಳನ್ನೂ, ರಥಗಳನ್ನೂ ಏರಿ ಯುದ್ಧಮಾಡುವುದರಲ್ಲಿ ಸಮರ್ಥರಾದ ಜರಾಸಂಧಾದಿರಾಜರೆಲ್ಲರೂ, ಮೇಘಗಳು ಪರ್ವತದಮೇಲೆ ಮಳೆಯನ್ನು ಕರೆಯುವಂತೆ, ಯಾದವಸೈನ್ಯದಮೇಲೆ ಅಪರಿಮಿತವಾಗಿ ಬಾಣವರ್ಷವನ್ನು ಕರೆದರು. ಆಗ ರುಕ್ಮಿಣಿಯು, ತನ್ನ ಪತಿಯಾದ ಕೃಷ್ಣನ ಸೈನ್ಯವೆಲ್ಲವೂ ಬಾಣವರ್ಷದಲ್ಲಿ ಮರೆಸಿಹೋಗುತ್ತಿರುವುದನ್ನು ನೋಡಿ, ಭಯದಿಂದ ತತ್ತಳಿಸುತ್ತ, ಲಜ್ಜೆಯೊಡನೆ! ತನ್ನ ಪ್ರಾಣಪ್ರಿಯನಾದ ಕೃಷ್ಣನ ಮುಖವನ್ನು ನೋಡಿದಳು. ಆಗ ಕೃಷ್ಣನು ಅವಳ ಭಯವನ್ನು ನೋಡಿ ನಗುತ್ತ “ಓ ಸುಂದರೀ! ಹೆದರಬೇಡ! ಇದೋ!, ಒಂದು ಕ್ಷಣಮಾತ್ರದಲ್ಲಿ ಈ ನಮ್ಮ ಸೈನ್ಯಗಳಿಂದ ಆ ಶತ್ರುಸೈನ್ಯವೆಲ್ಲವೂ ಧ್ವಂಸವಾಗುವುದನ್ನು ನೀನೇ ನೋ

ಡುವೆ" ಎಂದು ಧೈರ್ಯವನ್ನು ಹೇಳಿದನು. ಇಷ್ಟರಲ್ಲಿ ಇತ್ತಲಾಗಿ, ಬಲರಾಮ, ಗದ, ಮುಂತಾದ ಯಾದವವೀರರೆಲ್ಲರೂ, ಶತ್ರುಗಳು ತಮ್ಮಮೇಲೆ ಬಿದ್ದು ಬರುತ್ತಿರುವುದನ್ನು ನೋಡಿ ಸಹಿಸಲಾರದೆ, ಬಾಣಗಳನ್ನು ಪ್ರಯೋಗಿಸುತ್ತ,ಅವರ ಆನೆಗಳನ್ನೂ, ಕುದುರೆಗಳನ್ನೂ,ರಥಗಳನ್ನೂ ಭೇದಿಸುತ್ತಬಂದರು ಕ್ರಮಕ್ರಮವಾಗಿ ಶತ್ರುಪಕ್ಷದಲ್ಲಿದ್ದ ಅನೇಕರಥಿಕರೂ, ಅಶ್ವಸೈನಿಕರೂ, ಆನೆಯಮೇಲೆ ಕುಳಿತು ಯುದ್ಧಮಾಡುತಿದ್ದವರೂ, ಯಾದವವೀರರ ಬಾಣಗಳಿಂದ ಭೇದಿಸಲ್ಪಟ್ಟು ಕೆಳಗೆ ಬಿದ್ದರು. ಕಿರೀಟಕುಂಡಲಗಳಿಂದಲೂ, ತಲೆಪಾಗುಗಳಿಂದಲೂ ಕೂಡಿದ ಅನೇಕವೀರರ ಶಿರಸ್ಸುಗಳೂ ಅಲ್ಲಲ್ಲಿ ಕತ್ತಿ, ಗದೆ, ಬಿಲ್ಲು, ಮೊದಲಾದ ಆಯುಧಗಳೊಡನೆ ತೋಳುಗಳೂ ಕತ್ತರಿಸಿ ಬಿದ್ದಿದ್ದುವು. ತೊಡೆ, ಕೈ, ಕಾಲು, ಮುಂತಾದ ಅವಯವಗಳೆಲ್ಲವೂ ಬೇರೆಬೇರೆಯಾಗಿ ಬಿದ್ದುವು ಅಲ್ಲಲ್ಲಿ ಕುದುರೆಗಳು, ಹೇಸರಕತ್ತೆಗಳು. ಆನೆಗಳು, ಒಂಟೆಗಳು, ಕತ್ತೆಗಳು, ಕಾಲಾಳುಗಳು, ಮುಂತಾದ ಸೈನ್ಯಗಳ ಶಿರಸ್ಸುಗಳೆಲ್ಲವೂ ಕತ್ತರಿಸಿಬಿದ್ದುವು. ಹೀಗೆ ಸರ್ವತೋಮುಖವಾಗಿ ತಮ್ಮ ಸೈನ್ಯವು ಯಾದವರಿಂದ ಹತವಾಗುತ್ತಿರುವುದನ್ನು ನೋಡಿ, ಜರಾಸಂಧನೇ ಮೊದಲಾದ ರಾಜರೆಲ್ಲರೂ ಮುಂದೆ ಯುದ್ಧಮಾಡಲಾರದೆ, ಹಿಂತಿರುಗಿ ಪಲಾಯನಮಾಡಿದರು. ಇವರೆಲ್ಲರೂ ಗುಂಪಾಗಿ ಕಲೆತು, ಅತ್ತಲಾಗಿ ಆಶಾಭಂಗದಿಂದ ಮನಸ್ಸಿನಲ್ಲಿ ಉತ್ಸಾಹವಿಲ್ಲದೆ ಬಾಡಿದ ಮುಖದಿಂದಿದ್ದ ಶಿಶುಪಾಲನಬಳಿಗೆ ಬಂದು "ಓ ಪುರುಷಶಾರ್ದೂಲಾ! ಮನಸ್ಸಿನ ವಿಷಾದವನ್ನು ಬಿಟ್ಟುಬಿಡು! ಈಗ ನಾವೆಲ್ಲರೂ ಪರಾಜಿತರಾಗಿದ್ದರೂ, ಈ ಜಯಪರಾಜಯಗಳು ಯಾರಿಗೂ ಸ್ಥಿರವಲ್ಲ. ಲೋಕದಲ್ಲಿ ಪ್ರಾಣಿಗಳಿಗೆ ಪ್ರಿಯವಾಗಲಿ, ಅಪ್ರಿಯವಾಗಲಿ ಶಾಶ್ವತವಲ್ಲ. ಸುಖದುಃಖಗಳು ಚಕ್ರದಂತೆ ತಿರುಗಿತಿರುಗಿ ಬರುತ್ತಿರುವುವು. ಆದುದರಿಂದ ಈಗ ನಮಗುಂಟಾದ ಅಪಜಯಕ್ಕಾಗಿ ದುಃಖಿಸಬಾರದು. ಬೊಂಬೆಯಾಟದವರು, ಮರದ ಬೊಂಬೆಯನ್ನು ತಮ್ಮ ಇಷ್ಟಾನುಸಾರವಾಗಿ ಆಡಿಸುವಂತೆ, ಈ ಜಗತ್ತೆಲ್ಲವೂ ಆ ಪರಮೇಶ್ವರನಿಗೆ ಅಧೀನವಾಗಿ ಸುಖದುಃಖಗಳನ್ನು ಅನುಭವಿಸುತ್ತಿರುವುದು. ಅದಕ್ಕೆ ತಕ್ಕಹಾಗೆಯೇ ಕರ್ಮಗಳಲ್ಲಿ ತೊಳ

ಲುತ್ತಿರುವುರು. ಕರ್ಮಾನುಸಾರವಾಗಿ ಸಂಭವಿಸತಕ್ಕ ಸುಖದುಃಖಗಳಿಗಾಗಿ ನಾವು ಚಿಂತಿಸಬಾರದು"ಎಂದರು ಆಮೇಲೆ ಜರಾಸಂಧನು ಮುಂದೆ ಬಂದು, ಶಿಶುಪಾಲನ ಕೈಯನ್ನು ಹಿಡಿದು "ಮಿತ್ರನೆ! ನಾನು ಇದುವರೆಗೆ ಹದಿನೇಳಾವರ್ತಿ ಇಪ್ಪತ್ತುಮೂರು ಅಕ್ಷೋಹಿಣೀಸೈನ್ಯಗಳೊಡನೆ ಹೋಗಿ ಆ ಕೃಷ್ಣನೊಡನೆ ಯುದ್ಧಮಾಡಿ, ಒಂದೊಂದುಸಲವೂ ಪರಾಜಿತನಾಗಿ ಬಂದೆನು. ಆದರೆ? ಹದಿನೆಂಟನೆಯಸಾರಿ ನಾನು ಯುದ್ಧಕ್ಕೆ ಹೋದಾಗ, ಅವನನ್ನು ಸಂಪೂರ್ಣವಾಗಿ ಸೋಲಿಸಿ ಬಂದೆನಲ್ಲವೆ? ಹಿಂದೆ ನನಗುಂಟಾದ ಅಪಜಯಗಳಿಗಾಗಿ ನಾನು ದುಃಖಿಸಿದವನೂ ಅಲ್ಲ, ಈಗಿನ ಜಯಕ್ಕಾಗಿ ಸಂತೋಷಿಸಿದವನೂ ಅಲ್ಲ! ಕಾಲರೂಪಿಯಾದ ಈಶ್ವರನೇ ಹೀಗೆ ಪ್ರಾಣಿಗಳಿಗೆ ಜಯಪರಾಜಯಗಳನ್ನುಂಟು ಮಾಡುತ್ತಿರುವನೆಂಬುದನ್ನು ನಾನು ಬಲ್ಲೆನು ನೀನೂ ಈಗ ಆದೇಭಾವವನ್ನಿಟು ಧೈರ್ಯವನ್ನು ವಹಿಸಬೇಕು. ರಾಜೇಂದ್ರಾ! ಈಗಲೂಚಿಂತೆಯಬಿಡು ಯಾದವರು ಕೃಷ್ಣನ ಪ್ರೇರಣೆಯಿಂದ ಏನೋಕಪಟತಂತ್ರಗಳನ್ನುಮಾಡಿ, ಈ ಯುದ್ಧದಲ್ಲಿ ನಮ್ಮನ್ನು ಜಯಿಸಿಬಿಟ್ಟರು ಅವರಿಗೆ ಈಗ ಕಾಲವು ಅನುಕೂಲವಾದುದರಿಂದ ಅವರು ಜಯಶೀಲರಾದರು ಆದರಂತೆಯೇ ನಮಗೂ ಅನುಕೂಲಕಾಲವು ಒದಗಿಬಂದಾಗ,ನಾವು ಜಯಿಸುವುದರಲ್ಲಿ ಸಂದೇಹವೇನಿದೆ? ಇದಕ್ಕಾಗಿ ಚಿಂತಿಸಬೇಡ" ಎಂದನು. ಓ ಪರೀಕ್ಷಿದ್ರಾಜಾ! ಹೀಗೆ ಶಿಶುಪಾಲನಿಗೆ ಅವನ ಮಿತ್ರರಾದ ಜರಾಸಂಧಾದಿಗಳೆಲ್ಲರೂ ಬೋಧಿಸಿದಮೇಲೆ, ಆತನು ಮನಸ್ಸಿಗೆ ಸ್ವಲ್ಪಸಮಾಧಾನವನ್ನು ತಂದುಕೊಂಡು, ತನ್ನ ಸೈನ್ಯದೊಡನೆ ಪಟ್ಟಣಕ್ಕೆ ಹಿಂತಿರುಗಿ ಹೊರಟನು ಆ ಯುದ್ಧದಲ್ಲಿ ಸತ್ತುಳಿದ ಇತರರಾಜರೂ ತಮ್ಮತಮ್ಮ ಪಟ್ಟಣಕ್ಕೆ ಹೋಗಿ ಸೇರಿದರು. ರುಕ್ಮಿಣೀದೇವಿಯ ಅಣ್ಣನಾದ ರುಕ್ಮಿಯೆಂಬವನಿಗೆ ಮಾತ್ರ, ಕೃಷ್ಣನಲ್ಲಿ ಪ್ರಬಲವಾದ ದ್ವೇಷವಿದ್ದುದರಿಂದ, ತನ್ನ ತಂಗಿಯನ್ನು ಕೃಷ್ಣನು ರಾಕ್ಷಸವಿವಾಹದಿಂದ ಅಪಹರಿಸಿಕೊಂಡು ಹೋದುದನ್ನು ಸಹಿಸಲಾರದೆ, ಒಂದಕ್ಷೋಹಿಣೀಸೈನ್ಯವನ್ನು ತನ್ನೊಡನೆ ಕರೆದುಕೊಂಡು, ಕೃಷ್ಣನನ್ನು ಬೆನ್ನಟ್ಟಿಹೊರಟನು. ಆ ರುಕ್ಮಿಯು ಬಿಲ್ಲು, ಕವಚ ಮೊದಲಾದ ಯುದ್ಧಸಾಧನಗಳನ್ನು ಧರಿಸಿ, ತನ್ನ ಸುತ್ತಲೂ ನೆರೆದ ಸಮಸ್ತರಾ

ಜರೂ ಕೇಳುತ್ತಿರುವಹಾಗೆ, ಹೀಗೆಂದು ಪ್ರತಿಜ್ಞೆಮಾಡುವನು. "ಎಲೈ ರಾಜರೆ! ಯುದ್ಧದಲ್ಲಿ ಆ ಕೃಷ್ಣನನ್ನು ಕೊಂದು, ನನ್ನ ತಂಗಿಯಾದ ಈ ರುಕ್ಮಿಣಿಯನ್ನು ಹಿಂದಕ್ಕೆ ಕರೆತಾರದೆ ನಾನು ತಿರುಗಿ ಈ ಕುಂಡಿನಪುರಕ್ಕೆ ಕಾಲಿಡುವವನಲ್ಲ. ಇದು ಸತ್ಯವು" ಎಂದು ಹೇಳಿ, ರಥದಲ್ಲಿ ಕುಳಿತು, ಸಾರಥಿಯನ್ನು ನೋಡಿ "ಸಂತಾ! ಬೇಗನೆ ಆ ಕೃಷ್ಣನಿರುವ ಸ್ಥಳಕ್ಕೆ ರಥವನ್ನು ಬಿಡು! ಈಗ ನಾನು ಅವನೊಡನೆ ಘೋರಯುದ್ಧವನ್ನು ನಡೆಸಬೇಕಾಗಿರುವುದು ಈಗಲೇ ನಾನು ನನ್ನ ತೀಕ್ಷ್ಣಬಾಣಗಳಿಂದ ದುಷ್ಟನಾದ ಆ ಗೊಲ್ಲನ ಹೆಮ್ಮೆಯನ್ನು ಮುರಿಯದೆ ಬಿಡುವವನಲ್ಲ! ಆ ನೀಚನು ನನ್ನ ತಂಗಿಯನ್ನು ಬಲಾತ್ಕಾರದಿಂದ ಅಪಹರಿಸಿಕೊಂಡು ಹೋಗಿರುವುದಕ್ಕೆ ತಕ್ಕ ಫಲವನ್ನು ತೋರಿಸುವೆನು"? ಎಂದು ಆತುರಪಡಿಸುತಿದ್ದನು ಓ ಪರೀಕ್ಷಿದ್ರಾಜಾ! ಅಲ್ಪಬುದ್ಧಿಯುಳ್ಳ ಆ ರುಕ್ಮಿಯು, ಸರ್ವೇಶ್ವರನಾದ ಶ್ರೀಕೃಷ್ಣನ ನಿಜವಾದ ಪ್ರಭಾವವನ್ನು ಹೇಗೆತಾನೇ ಬಲ್ಲನು? ಬಾಯಿಗೆ ಬಂದಂತೆ ವೀರವಾದಗಳನ್ನು ಮಾಡುತ್ತ ರಥದಲ್ಲಿ ಕುಳಿತು "ಎಲಾ ನಿಲ್ಲು! ನಿಲ್ಲು!" ಎಂದು ಕೂಗುತ್ತ ಬೆನ್ನಟ್ಟಿಹೊರಟನು ಒಡನೆಯೇ ತನ್ನ ದೃಢವಾದ ಬಿಲ್ಲನ್ನು ಆ ಕರ್ಣಾಂತವಾಗಿ ಸೆಳೆದು, ಮೂರುಬಾಣಗಳನ್ನು ಏಕಕಾಲದಲ್ಲಿ ಕೃಷ್ಣನಮೇಲೆ ಪ್ರಯೋಗಿಸಿ, "ಎಲಾ ಕಳ್ಳಾ! ಯಾದವಕುಲಪಾಂಸನಾ! ಕಾಗೆಯು ಯಜ್ಞದ ಹವಿಸ್ಸನ್ನು ಕದ್ದೊಯ್ದುವಂತೆ, ನೀನು ನನ್ನ ತಂಗಿಯನ್ನು ಬಲಾತ್ಕಾರದಿಂದ ಕದ್ದೊಯ್ದುತ್ತಿರುವೆಯಾ? ಇರಲಿ! ಎಲ್ಲಿಗೆ ತಪ್ಪಿಸಿಕೊಂಡು ಹೋಗುವೆಯೋ ನೋಡುವೆನು? ಯುದ್ಧದಲ್ಲಿ ಏಕಾಕಿಯಾಗಿ ನಿಲ್ಲುವುದಕ್ಕೆ ಧೈರ್ಯವಿಲ್ಲದೆ, ಮಾಯಾವಿಯಾಗಿಗುಂಪಿನಲ್ಲಿ ನುಗ್ಗಿಬಂದು, ಮೋಸದಿಂದ ಶತ್ರುಗಳನ್ನು ಹೊಡೆದು ಪಲಾಯನಮಾಡಿದ ನಿನ್ನ ಕೆಚ್ಚನ್ನು ಈಗಲೇ ಮುರಿಯುವೆನು ನೋಡು. ಎಲೆ ಮೂಢಾ! ಈಗಲೂ ಒಳ್ಳೆಯಮಾತಿನಿಂದ ಹೇಳುವೆನು. ನನ್ನಬಾಣದಿಂದ ಹತನಾಗಿ ಈ ರಣರಂಗದಲ್ಲಿ ಸತ್ತು ಮಲಗುವುದರೊಳಗಾಗಿಯೇ, ಆ ಕನ್ಯೆಯನ್ನು ಬಿಟ್ಟುಬಿಡು. ಅನ್ಯಾಯವಾಗಿ ಸಾಯಬೇಡ" ಎಂದನು. ಇದನ್ನು ಕೇಳಿ ಶ್ರೀ ಕೃಷ್ಣನು ಮದಾಂಧನಾದ ಆ ರುಕ್ಮಿಯ ಮಾತಿಗೆ ನಗುತ್ತ, ಒಡನೆಯೇ ಒಂದೇಬಾಣ

ದಿಂದ ಆತನ ಕೈಯಲ್ಲಿದ್ದ ಧನುಸ್ಸನ್ನು ಕತ್ತರಿಸಿ, ಬೇರೆ ಆರುಬಾಣಗಳಿಂದ ಆ ರುಕ್ಮಿಯನ್ನೂ, ಎಂಟುಬಾಣಗಳಿಂದ ಆತನ ನಾಲ್ಕು ರಥಾಶ್ವಗಳನ್ನೂ, ಎರಡು ಬಾಣಗಳಿಂದ ಸಾರಥಿಯನ್ನೂ, ಮೂರುಬಾಣಗಳಿಂದ ಧ್ವಜವನ್ನೂ ಪ್ರಹರಿಸಿದನು. ಆದರೇನು ? ರುಕ್ಮಿಯು ಇವೊಂದಕ್ಕೂ ಹಿಂಜರಿಯದೆ ಆಕ್ಷಣವೇ ರಥದಲ್ಲಿದ್ದ ಬೇರೊಂದು ಧನುಸ್ಸನನ್ನು ಕೈಗೆ ತೆಗೆದುಕೊಂಡು, ಐದುಬಾಣಗಳನ್ನು ಹೂಡಿದನು ಇಷ್ಟರಲ್ಲಿಯೇ ಕೃಷ್ಣನು, ಬೇರೊಂದು ಬಾಣವನ್ನು ಪ್ರಯೋಗಿಸಿ, ಆ ಧನುಸ್ಸನೂ ಕತ್ತರಿಸಿಬಿಟ್ಟನು ಒಡನೆಯೇ ರುಕ್ಮಿಯು ಮತ್ತೊಂದು ಬಿಲ್ಲನ್ನು ಕೈಗೆತ್ತಿಕೊಂಡನು ಕೃಷ್ಣನು ಅದನ್ನೂ ಆಗಲೇ ತನ್ನ ಬಾಣದಿಂದ ಕತ್ತರಿಸಿದನು ಹೀಗೆಯೇ ರುಕ್ಮಿಯು, ತನ್ನಲ್ಲಿದ್ದ ಪರಿಘು, ಪಟ್ಟಸ, ಶೂಲ, ಫಲಕ, ಖಡ್ಗ, ಶಕ್ತಿ, ತೋಮರಗಳೇ ಮೊದಲಾದ ಯಾವಯಾವ ಆಯುಧಗಳನ್ನು ಕೈಗೆತ್ತಿಕೊಂಡರೂ, ಆಗಾಗಲೇ ಕೃಷ್ಣನು ಕತ್ತರಿಸಿ ಕೆಡುಹುತ್ತಬಂದನು ಹೀಗೆ ತನ್ನ ಪ್ರಯತ್ನವೆಲ್ಲವೂ ವಿಫಲವಾದುದನ್ನು ನೋಡಿ ರುಕ್ಮಿಯು, ಕೊನೆಗೆ ಒಂದು ಕತ್ತಿಯನ್ನೂ, ಗುರಾಣಿಯನ್ನು ಕೈಗೆತ್ತಿಕೊಂಡು, ರಥದಿಂದ ಥಟ್ಟನೆ ಕೆಳಕ್ಕೆ ಧುಮಿಕಿ, ಬೆಂಕಿಯಮೇಲೆ ಬೀಳುವ ಪತಂಗದ ಹುಳುವಿನಂತೆ, ಕೃಷ್ಣನಿಗಿದಿರಾಗಿ ಹೊರಟನು. ಅದನ್ನು ನೋಡಿ ಕೃಷ್ಣನು, ತನ್ನ ತೀಕ್ಷ್ಣಬಾಣಗಳಿಂದ ಆ ರುಕ್ಮಿಯ ಕೈಯಲ್ಲಿದ್ದ ಕತ್ತಿಗುರಾಣಿಗಳೆರಡನ್ನೂ ತುಂಡುತುಂಡಾಗಿ ಕತ್ತರಿಸಿ, ಖಡ್ಗಪಾಣಿಯಾಗಿ ತಾನೂ ರಥದಿಂದಿಳಿದು, ಆ ರುಕ್ಮಿಯನ್ನು ಒಂದೇಪ್ರಹಾರದಿಂದ ಕೊಂದುಬಿಡಬೇಕೆಂದು ಮುಂದೆ ಬಂದನು ಆಗ ಸಮೀಪದಲ್ಲಿದ್ದ ರುಕ್ಮಿಣೀದೇವಿಯು, ತನ್ನ ಅಣ್ಣನಿಗೆ ಸಂಭವಿಸಬಹುದಾದ ಮರಣವನ್ನು ಕುರಿತು ಭಯಗ್ರಸ್ತಳಾಗಿ ಕೃಷ್ಣನ ಕಾಲಮೇಲೆ ಬಿದ್ದು ದೈನ್ಯದಿಂದ ಹೀಗೆಂದು ಪ್ರಾರ್ಥಿಸುವಳು “ಓ ಯೋಗೀಶ್ವರಾ ! ನೀನು ಅಪ್ರಮೇಯಮಹಿಮೆಯುಳ್ಳವನು ದೇವತೆಗಳಿಗೂ ಪರದೈವವು! ಲೋಕನಾಥನು ಈ ನಿನ್ನ ಮಹಾಮಹಿಮೆಯನ್ನು ತಿಳಿಯದೆ, ಅಜ್ಞಾನಾದ ಈ ನನ್ನ ಸಹೋದರನು ನಿನ್ನನ್ನು ದ್ವೇಷಿಸುತ್ತಿರುವನು ಯಾವವಿಧದಲ್ಲಿಯೂ ಆತನು ನಿನಗೆ ಸಮಾನನಲ್ಲ ಆದುದರಿಂದ ಅವನು ಅಪ

ರಾಧಿಯಾಗಿದ್ದರೂ, ಅವನಲ್ಲಿ ನೀನು ಕರುಣೆಯನ್ನು ತೋರಿಸಿ ಮನ್ನಿಸಬೇಕು ಅವನ ಅಪರಾಧಕ್ಕಾಗಿ ನಾನು ನಿನ್ನಲ್ಲಿ ಮರೆಹೊಕ್ಕಿರುವೆನು. ನನ್ನಲ್ಲಿಯಾದರೂ ಕೃಪೆಯಿಟ್ಟು ಅವನನ್ನು ಕೊಲ್ಲದೆ ರಕ್ಷಿಸಬೇಕು" ಎಂದಳು. ಓ ಪರೀಕ್ಷಿದ್ರಾಜಾ ! ಹೀಗೆ ರುಕ್ಮಿಣಿಯು ಭಯದಿಂದ ನಡುಗುತ್ತ, ದುಃಖದಿಂದ ಬಾಡಿದ ಮುಖವುಳ್ಳವಳಾಗಿ, ಸ್ಪಷ್ಟವಾಗಿ ಬಾಯೆತ್ತಿ ಮಾತಾಡುವುದಕ್ಕೂ ಸಾಧ್ಯವಿಲ್ಲದೆ ಗದ್ಗದಸ್ವರದಿಂದ ಕೃಷ್ಣನ ಕಾಲುಗಳನ್ನು ಹಿಡಿದು, ದೈನ್ಯದಿಂದ ಪ್ರಾರ್ಥಿಸುತ್ತಿರಲು. ಪರಮದಯಾಳುವಾದ ಕೃಷ್ಣನು, ಅವಳ ಮಾತನ್ನು ನಿರಾಕರಿಸಲಾರದೆ, ಆ ರುಕ್ಮಿಯಲ್ಲಿದ್ದ ಕೋಪವನ್ನಡಗಿಸಿಕೊಂಡು ಸುಮ್ಮನಾದನು. ಆದರೇನು ? ದುಷ್ಟನಾದ ಆ ರುಕ್ಮಿಯನ್ನು ಸುಮ್ಮನೆ ಬಿಡಲಾರದೆ, ಅವನು ಧರಿಸಿದ್ದ ವಸ್ತ್ರವನ್ನೇ ಕಿತ್ತು ಅದರಿಂದ ಅವನ ಕೈಕಾಲುಗಳನ್ನು ಬಿಗಿದು ಕಟ್ಟಿದನು. ಮತ್ತು ತಾನು ಹಿಡಿದಿದ್ದ ಕತ್ತಿಯಿಂದ ಅವನ ತಲೆ ಮತ್ತು ಮೀಸೆಗಳನ್ನು ಮುಪ್ಪಟ್ಟೆಯಾಗಿ ತೆಗೆದು, ಅವನನ್ನು ವಿರೂಪಮಾಡಿಬಿಟ್ಟನು. ಇಷ್ಟರಲ್ಲಿ ಅತ್ತಲಾಗಿ ಯದುವೀರರು, ಆನೆಯು ತಾವರೆಕೊಳವನ್ನು ಕಲಕುವಂತೆ, ಶತ್ರುಸೈನ್ಯವನ್ನು ಉಲ್ಲೋಲಕಲ್ಲೋಲವಾಗಿ ಮಾಡಿ ಕೃಷ್ಣನಬಳಿಗೆ ಬಂದರು. ಆಗ ಬಲರಾಮನು, ಅಲ್ಲಿ ನಾಚಿಕೆಯಿಂದ ತಲೆಯೆತ್ತಲಾರದೆ ಜೀವಚ್ಛವದಂತೆ ನಿಂತಿರುವ ರುಕ್ಮಿಯನ್ನು ನೋಡಿ ಕನಿಕರಗೊಂಡು, ಕೃಷ್ಣನು ಅವನ ಕೈಕಾಲುಗಳಿಗೆ ಬಿಗಿದಿದ್ದ ಕಟ್ಟುಗಳನ್ನು ತನ್ನ ಕೈಗಳಿಂದ ಬಿಚ್ಚಿ, ಕೃಷ್ಣನನ್ನು ನೋಡಿ ಹೀಗೆಂದು ಹೇಳುವನು. « ಕೃಷ್ಣಾ ! ನೀನು ಹೀಗೆ ಮಾಡಿದುದು ಸರಿಯಲ್ಲ ! ಇದು ನಮಗೆ ಯೋಗ್ಯವಾದ ಕಾರ್ಯವಲ್ಲ. ಈತನು ನಮಗೆ ಬಂಧುವಲ್ಲವೆ? ಇವನಿಗೆ ಹೀಗೆ ತಲೆಮೀಸೆಗಳನ್ನು ವಪನಮಾಡಿ ವಿರೂಪಮಾಡಿದುದು ವಧಪ್ರಾಯವೇಹೊರತು ಬೇರೆಯಲ್ಲ ನೀನು ಹೀಗೆ ಮಾಡಬಾರದಾಗಿತ್ತು" ಎಂದು ಹೇಳಿ. ರುಕ್ಮಿಣಿಯನ್ನು ಕುರಿತು « ಅಮ್ಮ ರುಕ್ಮಿಣಿ! ನಿನ್ನ ಅಣ್ಣನಿಗೆ ಈ ಅವಮಾನವುಂಟಾದುದಕ್ಕಾಗಿ ಮನಸ್ಸಿನಲ್ಲಿ ಚಿಂತಿಸಬೇಡ. ಕೃಷ್ಣನು ಉದ್ದೇಶಪೂರ್ವಕವಾಗಿ ಇದನ್ನು ಮಾಡಿದನೆಂದು ನಾವು ತಿಳಿಯಬಾರದು ಮನುಷ್ಯನಿಗೆ,ಸುಖವಾಗಲಿ,ದುಃಖವಾಗಲಿ, ಮಾನವಾಗಲಿ, ಅವಮಾನವಾಗಲಿ,

ಆವನವನ ಕರ್ಮಾನುಸಾರವಾಗಿ ಬಂದು ಸೇರುವುದೇಹೊರತು, ಅದಕ್ಕೆ ಮ ತ್ತೊಬ್ಬರನ್ನು ಕಾರಣವಾಗಿ ತಿಳಿಯಬಾರದು ಕೃಷ್ಣಾ ! ಬಂಧುವಾದವನು ಕೊಲೆಗೆ ಅರ್ಹನಾಗಿದ್ದರೂ ಅವನನ್ನು ಕೊಲ್ಲುವುದು ಸರಿಯಲ್ಲ ಅವರ ವರ ತಪ್ಪಿನಿಂದಲೇ ಅವರು ಹತಪ್ರಾಯರಾಗುವರು ಆದಕ್ಕಾಗಿ ಬೇರೊ ಬ್ಬರು ಶಿಕ್ಷಿಸಬೇಕಾದುದಿಲ್ಲ. ಅಪರಾಧಿಗಳನ್ನು ಮನ್ನಿಸಿ ಕಳುಹಿಸಬೇಕಾ ದುದೇ ಸಜ್ಜನರ ಧರ್ಮವು. ತಮ್ಮ ದೋಷದಿಂದಲೇ ಹತಪ್ರಾಯರಾಗಿರು ವ ಇಂತವರನ್ನು ಕೊಲ್ಲುವುದಕ್ಕೆ ಯತ್ನಿಸುವುದು, ಸತ್ತವರನ್ನು ಕೊಲ್ಲುವು ದಕ್ಕೆ ಹೋದಂತಾಗುವುದಿಲ್ಲವೆ ? " ಎಂದು ಹೇಳಿ, ತಿರುಗಿ ರುಕ್ಮಿಣಿಯನ್ನು ನೋಡಿ “ ಓ ಕುಮಾರೀ! ಲೋಕದಲ್ಲಿ ಕ್ಷತ್ರಿಯರಿಗೆ ಬ್ರಹ್ಮನಿಂದ ನಿಯಮಿತ ವಾದ ಧರ್ಮವೇ ಇದು ! ಅವರು ಒಡಹುಟ್ಟಿದವರನ್ನಾದರೂ ಸಮಯಬಂ ದಾಗ ಕೊಲ್ಲದೆ ಬಿಡುವವರಲ್ಲ ! ನಮ್ಮ ಕ್ಷತ್ರಿಯಕುಲಕ್ಕೆ ಈ ಭಯಂಕರವಾದ ಧರ್ಮವು ದೈವವಿಹಿತವಾಗಿರುವಾಗ, ಇದರಲ್ಲಿ ನಮ್ಮ ತಪ್ಪೇನಿರುವುದು ? ಐಶ್ವರ್ಯಮದಾಂಧರಾದ ಕ್ಷತ್ರಿಯರು, ರಾಜ್ಯಕ್ಕಾಗಿಯೂ, ಭೂಮಿಗಾ ಗಿಯೂ, ಧನಕ್ಕಾಗಿಯೂ, ಐಶ್ವರ್ಯಕ್ಕಾಗಿಯೂತಾವೇ ವೀರರೆಂಬ ಅಭಿಮಾನ ಕ್ಕಾಗಿಯೂ, ತಮ್ಮ ಪರಾಕ್ರಮವನ್ನು ತೋರಿಸುವುದಕ್ಕಾಗಿಯೂ, ಅಥವಾ ಬೇರೆ ಯಾವ ಅಲ್ಪಕಾರಣಕ್ಕಾಗಿಯೂಕೂಡ, ತಮ್ಮ ಬಂಧುಗಳನ್ನು ಪರಾ ಭವಿಸುವರು. ಆದರೆ ನಾವು ಆರೀತಿಯಾಗಿ ಪ್ರವರ್ತಿಸಬಾರದಾಗಿತ್ತು ಓ ! ರುಕ್ಮಿಣಿ ! ನಡೆದುಹೋದುದಕ್ಕಾಗಿ ನೀನು ಚಿಂತಿಸಬಾರದು. ದೇಹಾ ತ್ಮಾಭಿಮಾನವುಳ್ಳ ಅಜ್ಞರಿಗಾದರೋ,ತಮ್ಮ ಇಷ್ಟಜನರಿಗೆ ಕ್ಷೇಮವನ್ನೂ, ಇತರರಿಗೆ ಅಕ್ಷೇಮವನ್ನೂ ಬಯಸುವುದು ಸ್ವಭಾವಧರ್ಮವು ಭಗವನ್ಮಾಯೆ ಯಿಂದ ಮನುಷ್ಯರಿಗೆ ದೇಹಾಭಿಮಾನವು ಹುಟ್ಟಿ, ಅದರಿಂದ ತನಗೆ ಕೆಲ ವರು ಶತ್ರುಗಳೆಂದೂ, ಕೆಲವರು ಮಿತ್ರರೆಂದೂ, ಕೆಲವರು ಉದಾಸೀನ ರೆಂದೂ ಭೇದಬುದ್ಧಿಯು ಜನಿಸುವುದು ನೀನೂ ಅದೇರೀತಿಯಾಗಿ ನಿನ್ನ ಸಹೋದರನ ಅವಮಾನಕ್ಕಾಗಿ, ಚಿಂತಿಸಿದಪಕ್ಷದಲ್ಲಿ, ನಿನ್ನಲ್ಲಿ ವಿಶೇಷವೇ ನಾಯಿತು ? ನೀನೂ ಆ ಅಜ್ಞರಂತೆಯೇ ಆಗುವೆಯಲ್ಲವೆ ? ಮನುಷ್ಯನಿಗೆ ಇತರರಲ್ಲಿ ಶತ್ರುಮಿತ್ರರೆಂಬ ಭೇದಬುದ್ಧಿಯು, ಭಗವನ್ಮಾಯೆಯಿಂದ ಕಲ್ಪಿ

ತವಾದ ಮೋಹವೇಹೊರತು ವಾಸ್ತವವಲ್ಲ. ನಿಜವಾಗಿ ಶತ್ರುವಾವನು ? ಮಿತ್ರನಾವನು ? ಸಮಸ್ತಜೀವರಾಶಿಗಳಿಗೂ ಅಂತರಾತ್ಮನಾಗಿರತಕ್ಕವನು ಈಶ್ವರನೊಬ್ಬನೇ ! ಆದುದರಿಂದ ಎಲ್ಲವನ್ನೂ ಈಶ್ವರಸ್ವರೂಪದಿಂದ ತಿಳಿಯ ಬೇಕು. ಆ ಸರ್ವೇಶ್ವರನು ಕಾಷ್ಠದಲ್ಲಿ ಅಗ್ನಿಯಂತೆ ಗೂಢವಾಗಿರುವನು. ಆಕಾಶದಂತೆ ಒಳಗೂ, ಹೊರಗೂ ವ್ಯಾಪಿಸಿರುವನು. ಹಾಗಿದ್ದರೂ ತಾನು ಸೇರಿರತಕ್ಕ ಆ ವಸ್ತುವಿನ ಗುಣದೋಷಗಳಿಗೆಮಾತ್ರತಾನು ಗುರಿಯಾಗಲಾ ರನು. ಹೀಗೆ ಸರ್ವವ್ಯಾಪಿಯಾದ ಆ ಪರಮಾತ್ಮನಿಗೆ ಈ ಜಗತ್ತೆಲ್ಲವೂ ಶರೀರ ವಾಗಿರುವಾಗ, ಜಗತ್ತಿನಲ್ಲಿ ಒಬ್ಬರಿಗೊಬ್ಬರಿಗೆ ಈ ಶತ್ರುತ್ವಮಿತ್ರತ್ವಾದಿ ಭೇದವು ಹೇಗೆ ತಾನೇ ಸಂಭವಿಸುವುದು ? ಪರಮಾತ್ಮನಿಗೊಬ್ಬನಿಗೆ ಶರೀರ ವಾಗಿರುವ ಈ ಪ್ರಪಂಚವನ್ನು ಬೇರೆಬೇರೆ ರೂಪದಿಂದ ತಿಳಿಯುವುದು. ಕೇವಲಬುದ್ಧಿಮೋಹವಲ್ಲದೆ ಬೇರೆಯಲ್ಲ. ದೇಹವೆಂಬುದು ಭೂಮಿ ಮೊದ ಲಾದ ಪಂಚಭೂತಗಳಿಂದಲೂ, ಗಂಧ ಮೊದಲಾದ ಆ ಪಂಚಭೂತಗುಣ ಗಳಿಂದಲೂ, ಇಂದ್ರಿಯಗಳಿಂದಲೂ ಏರ್ಪಟ್ಟಿರುವುದು ಇದಕ್ಕೆ ಉತ್ಪತ್ತಿ ವಿನಾಶಗಳೆರಡೂ ಉಂಟು. ಆತ್ಮವಾದರೋ ನಿತ್ಯವಾದುದು. ಆ ಆತ್ಮನಿಗೆ ಪ್ರಕೃತಿಯಿಂದಲೇ ದೇಹಸಂಬಂಧವಾಗುವುದು. ಆದರಿಂದ ಜೀವಾತ್ಮನು ಜ ರಾಮರಣರೂಪವಾದ ಸಂಸಾರದಲ್ಲಿ ತೊಳಲುತ್ತಿರುವನು. ಅಮ್ಮ ರುಕ್ಮಿಣಿ! ಜೀವನಿಗಿರುವಂತೆ ಪರಮಾತ್ಮನಿಗೆ ಅಸತ್ಯಾದ ದೇಹದೊಡನೆ ಸಂಬಂಧವಾ ಗಲಿ, ವಿಯೋಗವಾಗಲಿ ಉಂಟಾಗಲಾರದು. ಏಕೆಂದರೆ, ಆ ದೇಹದ ಉತ್ಪತ್ತಿಗಾಗಲಿ, ಅದಕ್ಕೆ, ಜೀವನೊಡನೆ ಸಂಯೋಗವಿಯೋಗಗಳಿಗಾಗಲಿ, ಪರಮಾತ್ಮನ ಸಂಕಲ್ಪವೇ ಮೂಲವು. ಇವು ಆ ಪರಮಾತ್ಮನ ಇಚ್ಛಾನು ಸಾರವಾಗಿಯೇ ನಡೆಯಬೇಕಾದುದರಿಂದ, ಅವನನ್ನು ಕಟ್ಟಿಡಲಾರವು. ಸೂರ್ಯನು ನೇತ್ರೇಂದ್ರಿಯವನ್ನು ಪ್ರಕಾಶಗೊಳಿಸತಕ್ಕವನಾಗಿಯೂ, ಆ ಇಂದ್ರಿಯಕ್ಕೆ ಕಾಣತಕ್ಕ ರೂಪವನ್ನು ತೋರಿಸತಕ್ಕವನಾಗಿಯೂಇದ್ದರೂ, ತಾನು ದೂರಸ್ಥನಾಗಿ, ಅದರ ಸಂಬಂಧವಿಲ್ಲದಿರುವಂತೆ, ಪರಮಾತ್ಮನು ತನ್ನ ಸಂಕಲ್ಪದಿಂದಲೇ ಈ ದೇಹವನ್ನು ನಡೆಸತಕ್ಕವನಾಗಿದ್ದರೂ, ದೂರದಲ್ಲಿ ರುವವನಂತೆ, ಅದರ ಸಂಬಂಧದಿಂದುಂಟಾದ ಭೋಗಕ್ಕೆ ತಾನು ಭಾಗಿಯಾ

ಗುವನಲ್ಲ ಚಂದ್ರನ ಕಳೆಗಳಿಗೆ ಮಾತ್ರವೇ ವೃದ್ಧಿಕ್ಷಯಗಳೇಹೊರತು ಚಂ ದ್ರನಿಗಲ್ಲ ಅದರಂತೆಯೇ ಈ ದೇಹಕ್ಕೆಮಾತ್ರವೇ ಜನ್ಮ,ಯೌವನ,ವಾರ್ಧಕ್ಯ ಮೊದಲಾದ ವಿಕಾರಗಳೇಹೊರತು, ಆ ದೇಹದೊಳಗಿನ ಜೀವಕ್ಕೆ ಯಾವ ವಿಧವಾದ ವಿಕಾರವೂ ಇಲ್ಲ! ಚಂದ್ರನಿಗೆತನ್ನ ಕಳೆಗಳೆಲ್ಲವೂ ಸಂಪೂರ್ಣವಾಗಿ ಕಂದಿಹೋಗುವುದೇ ಅಮಾವಾಸ್ಯೆಯೆನಿಸುವುದಲ್ಲವೆ? ಹಾಗೆಯೇ ಆತ್ಮನಿಗೆ ದೇಹನಾಶವೇ ಮರಣವೇಹೊರತು ಅದರಲ್ಲಿ ಆ ಜೀವನ ಸ್ವರೂಪಕ್ಕೇನೂ ಹಾನಿಯಿಲ್ಲ ಸ್ವಪ್ನಪದಾರ್ಥಗಳೆಲ್ಲವೂ ಅಸ್ಥಿರವಾಗಿದ್ದರೂ, ಕನಸನ್ನು ಕಾಣುವ ಪುರುಷನು, ಆ ಸ್ವಪ್ನವಿಷಯಗಳೆಲ್ಲವನ್ನೂ ಸ್ಥಿರಬುದ್ಧಿಯಿಂದಲೇ ಅನುಭವಿಸುವಂತೆ, ಮನುಷ್ಯನು ಎಚ್ಚರಗೊಂಡಿರುವಾಗಲೂ, ಈ ಲೌಕಿಕ ವಾದ ವಿಷಯಭೋಗಗಳನ್ನು ನಿಜವೆಂದೇ ತಿಳಿದು ಸಂತೋಷಿಸುತ್ತಿರುವನು. ಈ ಬುದ್ಧಿಯು ಬಿಟ್ಟುಹೋಗುವವರೆಗೂ ಅವನಿಗೆ ಸಂಸಾರವು ತಪ್ಪಿದು ದಲ್ಲ! ಈ ತತ್ವವನ್ನು ತಿಳಿದು ಎಚ್ಚರಗೊಂಡವನಿಗೆ, ಆ ಸಂಸಾರವೆಂಬುದು ತಾನಾಗಿಯೇ ಬಿಟ್ಟುಹೋಗುವುದು ಆದುದರಿಂದ ಓ ರುಕ್ಮಿಣಿ! ಅಜ್ಞಾನ ಜನ್ಯವಾಗಿ, ಮನಸ್ಸನ್ನು ಸಂಕಟಗೊಳಿಸತಕ್ಕ ಈ ದುಃಖವನ್ನೂ, ಇತರರು ತನ್ನವರೆಂಬ ಶತ್ರುಮಿತ್ರಭಾವವನ್ನು ಹುಟ್ಟಿಸತಕ್ಕ ಮೋಹವನ್ನೂ, ನೀನು ಬಿಟ್ಟುಬಿಡಬೇಕು. ಈ ಜಗತ್ತೆಲ್ಲವೂ ಆ ಪರಮಾತ್ಮನೊಬ್ಬನಿಗೆ ಶರೀರವೆಂಬ ತತ್ವಜ್ಞಾನದಿಂದ, ನೀನು ಮನಸ್ಸಮಾಧಾನವನ್ನು ತಂದು ಕೊಳ್ಳಬೇಕು" ಎಂದನು ಹೀಗೆ ಬಲರಾಮನು ಹೇಳಿದ ತತ್ವೋಪದೇಶವನ್ನು ಕೇಳಿ ರುಕ್ಮಿ ಣಿಯು ಮನಸ್ಸಿಗೆ ಸಮಾಧಾನವನ್ನು ತಂದುಕೊಂಡಳು. ಆಗ ರುಕ್ಮಿಯು, ತನ್ನ ತೇಜಸ್ಸೂ, ಬಲವೂ, ಶತ್ರುಗಳಿಂದ ನಷ್ಟವಾದುದಕ್ಕಾಗಿ ನಾಚಿಗೆಯಿಂದ ತಲೆಯೆತ್ತಲಾರದೆ, ಜೀವಚ್ಛವದಂತಾಗಿ, ಯಾರಿಗೂ ತನ್ನ ವಿರೂಪವನ್ನು ತೋರಿಸಲಾರದೆ, ಭೋಜಕಟವೆಂಬ ಒಂದಾನೊಂದು ಪಟ್ಟಣಕ್ಕೆ ಹೋಗಿ ಅಲ್ಲಿ ವಾಸಮಾಡುತಿದ್ದನು ಇವನು ತನ್ನ ಪಟ್ಟಣ ಪ್ರವೇಶವನ್ನು ಮಾಡದಿರುವುದಕ್ಕೆ, ತನಗುಂಟಾದ ಅವಮಾನವೊಂದು ಮಾತ್ರವೇ ಕಾರಣವಲ್ಲ. ಹಿಂದೆ ಅವನು ಹೊರಟಾಗ, ತಾನು ಯುದ್ಧದಲ್ಲಿ ಕೃಷ್ಣನನ್ನು ಕೊಲ್ಲದೆ, ತನ್ನ ತಂಗಿಯನ್ನು ಕರೆತಾರದೆ,ಕುಂಡಿನಪುರಕ್ಕೆ ತಿರುಗಿ

ಕಾಲಿಡುವವನಲ್ಲವೆಂದು ಪ್ರತಿಜ್ಞೆಮಾಡಿಬಂದವನಾದುದರಿಂದ, ಅಲ್ಲಿನ ಜನಗಳಿಗೆ ಮುಖವನ್ನು ತೋರಿಸಲಾರದೆ ಈ ಭೋಜಕಟದಲ್ಲಿಯೇ ನಿಂತು. ಕೃಷ್ಣನಮೇಲೆ ಕೋಪದಿಂದ ಕುದಿಯುತಿದ್ದನು.

ರುಕ್ಮಿಣೀ ವಿವಾಹಮಹೋತ್ಸವ.

ಇತ್ತಲಾಗಿ ಕೃಷ್ಣನು ರುಕ್ಮಿಣಿಯನ್ನು ರಥದಮೇಲೆ ಕುಳ್ಳಿರಿಸಿಕೊಂಡು ಬರುವಾಗ, ತನ್ನನ್ನಿದಿರಿಸಿದ ಕ್ಷತ್ರಿಯರೆಲ್ಲರನ್ನೂ ಕ್ಷಣಮಾತ್ರದಲ್ಲಿ ಜಯಿಸಿ, ದ್ವಾರಕಾಪುರಿಗೆ ಬಂದು, ಅಲ್ಲಿ ಶಾಸ್ತ್ರೋಕ್ತವಾಗಿ ರುಕ್ಮಿಣಿಯನ್ನು ವಿವಾಹಮಾಡಿಕೊಂಡನು. ಆಗ ಅಲ್ಲಿನ ಪುರವಾಸಿಗಳೆಲ್ಲರೂ ಮನೆಮನೆಗಳಲ್ಲಿಯೂ ಆ ಕೃಷ್ಣನ ವಿವಾಹಮಹೋತ್ಸವವನ್ನು ಕೊಂಡಾಡುತಿದ್ದರು ಅಲ್ಲಿನ ಸ್ತ್ರೀಪುರುಷರೆಲ್ಲರೂ ಕೃಷ್ಣನಲ್ಲಿಯೇ ನೆಟ್ಟಮನಸ್ಸುಳ್ಳವರಾಗಿ,ತಮ್ಮತಮ್ಮ ಶಕ್ತ್ಯನುಸಾರವಾಗಿ ಉತ್ಸವಗಳನ್ನು ನಡೆಸಿದರು ಹೆಂಗಸರು, ಮಕ್ಕಳು, ಮೊದಲಾಗಿ ಆಬಾಲವೃದ್ಧರೂ ವಸ್ತ್ರಾಭರಣಗಳಿಂದ ದೇಹವನ್ನಲಂಕರಿಸಿಕೊಂಡು,ವಧೂವರರಿಗೆ ಕೈಕಾಣಿಕೆಗಳನ್ನು ತಂದೊಪ್ಪಿಸಿದರು. ಒಂದೊಂದುಮನೆಯ ಬಾಗಿಲುಗಳೂ ಇಂದ್ರಧ್ವಜಗಳಿಂದಲೂ, ರತ್ನತೋರಣಗಳಿಂದಲೂ, ಚಿತ್ರವಿಚಿತ್ರವಾದ ಪುಷ್ಪಮಾಲಿಕೆಗಳಿಂದಲೂ, ವಸ್ತ್ರಗಳಿಂದಲೂ ಅಲಂಕರಿಸಲ್ಪಟ್ಟಿದ್ದುವು. ಒಂದೊಂದು ಮನೆಯ ಬಾಗಿಲಲ್ಲಿಯೂ, ಅರಳು, ಅಕ್ಷತೆ, ದೀಪ, ಧೂಪ,ಪೂರ್ಣಕುಂಭಗಳೇ ಮೊದಲಾದ ಮಂಗಳಾಲಂಕಾರಗಳು ಕಂಗೊಳಿಸುತಿದ್ದುವು. ಮತ್ತು ಈ ರುಕ್ಮಿಣೀಕಲ್ಯಾಣೋತ್ಸವಕ್ಕಾಗಿ ದೇಶದೇಶದಿಂದ ಬಂದಿದ್ದ ರಾಜರ ಮದದಾನೆಗಳು, ಎಡೆಬಿಡದೆ ಬೀದಿಯಲ್ಲಿ ಸಂಚರಿಸುತ್ತ, ತಮ್ಮ ಮದಜಲದಿಂದ ಆ ಪಟ್ಟಣದ ಬೀದಿಗಳೆಲ್ಲವನ್ನೂ ಮದವಾಸನೆಯಿಂದ ಘುಮಘುಮಿಸುತಿದ್ದುವು. ಒಂದೊಂದುಮನೆಯ ಬಾಗಿಲಲ್ಲಿಯೂ, ಬಾಳೆಯ ಕಂಬಗಳೂ, ಅಡಿಕೆಯ ಕೊನೆಗಳೂ ಕಂಗೊಳಿಸುತಿದ್ದುವು. ಮತ್ತು ಆ ಪುರವೀಥಿಗಳಲ್ಲಿ, ಕುರು, ಸೃಂಜಯ, ಕೇಕೆಯ, ವಿದರ್ಭ, ಯದು,ಕುಂತಿ, ದೇಶಾಧಿಪತಿಗಳಾದ ರಾಜರು, ಸಂತೋಷಸಂಭ್ರಮಗಳಿಂದ ಸುತ್ತುತಿದ್ದರು. ಶ್ರೀಕೃಷ್ಣನು ರುಕ್ಮಿಣಿಯನ್ನು ಕರೆತಂದು ವಿವಾಹಮಾಡಿಕೊಂಡ ಸಂಗತಿಯನ್ನು, ಅಲ್ಲಲ್ಲಿ ಬ್ರಾಹ್ಮಣರು

ಸಂತೋಷದಿಂದ ಕೊಂಡಾಡುತ್ತಿರುವುದನ್ನು ಕೇಳಿ, ಅನೇಕರಾಜರೂ ರಾಜಕನ್ಯೆಯರೂ ಆ ಕೃಷ್ಣನ ಸಾಹಸವನ್ನು ಕುರಿತು ಆಶ್ಚರ್ಯಪಡುತಿದ್ದರು. ದ್ವಾರಕಾವಾಸಿಗಳೆಲ್ಲರೂ ಭಗವದಂಶಭೂತನಾದ ಕೃಷ್ಣನಿಗೂ, ಲಕ್ಷ್ಮೀಸ್ವರೂಪೆಯಾದ ರುಕ್ಮಿಣಿಗೂ ನಡೆದ ವಿವಾಹೋತ್ಸವವನ್ನು ಕೇಳಿ ಪರಮಾನಂದಭರಿತರಾಗಿದ್ದರು.

## ಪ್ರದ್ಯುಮ್ನಜನನವು. ಶಂಬರಾಸುರವಧವು.

ಓ ಪರೀಕ್ಷಿದ್ರಾಜಾ! ಪೂರ್ವದಲ್ಲಿ ರುದ್ರನ ಫಾಲನೇತ್ರದಿಂದ ದಗ್ಧನಾದ ಕಾಮದೇವನು ವಾಸುದೇವಾಂಶದವನು. ಆಗ ದಗ್ಧವಾದ ತನ್ನ ದೇಹವನ್ನು ತಿರುಗಿ ಪಡೆಯುವುದಕ್ಕಾಗಿ, ಆ ವಾಸುದೇವನನ್ನೇ ಮರೆಹೊಕ್ಕು ಪ್ರಾರ್ಥಿಸಿದನು. ಅದರಮೇಲೆ ಆ ಕಾಮನೇ ಭಗವಂತನ ಸಂಕಲ್ಪದಿಂದ ರುಕ್ಮಿಣೀದೇವಿಯಲ್ಲಿ ಪ್ರದ್ಯುಮ್ನನೆಂಬ ಹೆಸರಿನಿಂದ ಕೃಷ್ಣನಿಗೆ ಮಗನಾಗಿ ಹುಟ್ಟಿ, ರೂಪಾದಿಗುಣಗಳಲ್ಲಿ ತನ್ನ ತಂದೆಯಾದ ಕೃಷ್ಣನಿಗೆ ಸಮಾನನೆನಿಸಿಕೊಂಡಿದ್ದನು. ಈ ಪ್ರದ್ಯುಮ್ನನು ಹುಟ್ಟಿ ಹತ್ತುದಿವಸಗಳು ಕಳೆಯುವುದಕ್ಕೆ ಮೊದಲೇ, ಶಂಬರನೆಂಬ ರಾಕ್ಷಸನೊಬ್ಬನು, ಆತನು ತನಗೆ ಶತ್ರುವಾಗುವನೆಂದು ನಾರದನಮುಖದಿಂದ ತಿಳಿದು, ಆಗಲೇ ಶತ್ರುಶೇಷವನ್ನಡಗಿಸಿಬಿಡಬೇಕೆಂದು,ಆ ಶಿಶುವನ್ನು ರೂಪಾಂತರದಿಂದ ಕದ್ದೊಯ್ದು, ಸಮುದ್ರದಲ್ಲಿ ಬಿಸುಟು, ತನ್ನಮನೆಗೆ ಹೊರಟುಹೋದನು ಆ ಸಮುದ್ರದಲ್ಲಿದ್ದ ಬಲಿಷ್ಠವಾದ ಒಂದಾನೊಂದು ಮೀನು, ಆ ಮಗುವನ್ನು ನುಂಗಿ ಬಿಟ್ಟಿತು ಬೆಸ್ತರು ಮೀನುಗಳನ್ನು ಹಿಡಿಯುವುದಕ್ಕಾಗಿ ಬಲೆಯನ್ನು ಬೀಸಿದಾಗ,ಬೇರೆ ಮೀನುಗಳ ಗುಂಪಿನಲ್ಲಿ ಆ ದೊಡ್ಡ ಮತ್ಸ್ಯವೂ ಅವರ ಬಲೆಗೆ ಸಿಕ್ಕಿಬಿದ್ದಿತು. ಆ ಬೆಸ್ತರು ತಮ್ಮ ರಾಜನಾದ ಶಂಬರನಿಗೆ ಆ ಮೀನನ್ನು ಕಾಣಿಕೆಯಾಗಿ ತಂದೊಪ್ಪಿಸಿದರು. ಅಡಿಗೆಯವರು ಅದನ್ನು ಪಾಕಮಾಡುವುದಕ್ಕಾಗಿ ಕೊಡಲಿಯಿಂದ ಕಡಿಯುತ್ತಿರುವಾಗ, ಆ ಮೀನಿನ ಗರ್ಭದಲ್ಲಿ ಅದ್ಭುತರೂಪವುಳ್ಳ ಆ ಶಿಶುವು ಅವರ ಕಣ್ಣಿಗೆ ಕಾಣಿಸಿತು. ಒಡನೆಯೇ ಅವರು ಆ ಶಿಶುವನ್ನು ತಂದು, ಶಂಬರನ ಅಂತಃಪುರದಲ್ಲಿ ಸೆರೆಹಿಡಿಯಲ್ಪಟ್ಟು ಗೌಡಿಯ ಕೆಲಸದಲ್ಲಿದ್ದ, ಮಾಯಾವತಿಯ ಕೈಗೆ ತಂದುಕೊಟ್ಟರು. ಓ! ಪರೀಕ್ಷಿದ್ರಾಜಾ

ಆ ಮಾಯಾವತಿಯೆಂಬವಳೇ ಹಿಂದೆ ಮನ್ಮಥಪತ್ನಿಯಾಗಿದ್ದ ರತಿದೇವಿ ! ಶಂಬರನು ಆವಳನ್ನು ಸೆರೆಹಿಡಿದುತಂದು, ತನ್ನ ಅಡಿಗೆಯ ಮನೆಯಲ್ಲಿ ಗೌಡಿಯನ್ನಾಗಿ ನಿಯಮಿಸಿದ್ದನು. ಆಗ ಮಾಯಾವತಿಯು, ಆ ಮಗುವನ್ನು ನೋಡಿ ಆಶ್ಚರ್ಯದಿಂದ “ಏನಿದು? ಈ ಶಿಶುವಿನಲ್ಲಿ ನನ್ನ ಪತಿಯ ಲಕ್ಷಣಗಳೆಲ್ಲವೂ ಕಾಣುತ್ತಿರುವುದಲ್ಲಾ! ಹಿಂದೆ ರುದ್ರನ ಫಾಲನೇತ್ರದಿಂದ ದಗ್ಧನಾದ ನನ್ನ ಪತಿಯೇ ಹೀಗೆ ಹುಟ್ಟಿರಬಹುದೆ” ಎಂದು ಮನಸ್ಸಿನಲ್ಲಿ ಶಂಕಿಸುತ್ತಿರುವಾಗ, ನಾರದನು ಬಂದು, ಆ ಶಿಶುವಿನ ಪೂರ್ವೋತ್ತರಗಳೆಲ್ಲವನ್ನೂ ತಿಳಿಸಿ, ಈಗ ಆ ಶಿಶುವು ಆಮೀನಿನ ಗರ್ಭದಲ್ಲಿ ಸಿಕ್ಕುವುದಕ್ಕೆ ಕಾರಣವನ್ನೂ ವಿವರಿಸಿದನು. ಆಕೆಯು ನಾರದನಿಂದ ಆ ಶಿಶುವಿನ ಪೂರ್ವವೃತ್ತಾಂತವನ್ನು ಕೇಳಿದಮೇಲೆ, ಅವನೇ ಪೂರ್ವಜನ್ಮದಲ್ಲಿ ತನ್ನ ಪತಿಯೆಂದು ತಿಳಿದು, ಅತಿ ಪ್ರೀತಿಯಿಂದ ಪೋಷಿಸುತಿದ್ದಳು. ಕ್ರಮಕ್ರಮವಾಗಿ ಆ ಶಿಶುವಿಗೆ ಯೌವನವುಂಟಾಯಿತು. ಅವನ ರೂಪವು ನೋಡಿದ ಸ್ತ್ರೀಯರೆಲ್ಲರಿಗೂ ಮೋಹಕರವಾಗಿತ್ತು. ಕಮಲದಳದಂತಿರುವ ಕಣ್ಣುಗಳಿಂದಲೂ, ಆಜಾನುಬಾಹುಗಳಿಂದಲೂ, ಲೋಕೈಕಸುಂದರನಾದ ಆ ತರುಣನನ್ನು ನೋಡಿ, ಮಾಯಾವತಿಯು, ಅವನಲ್ಲಿಯೇ ಪತಿಭಾವವನ್ನಿಟ್ಟು, ಲಜ್ಜಾವಿಶಿಷ್ಟವಾದ ಮಂದಹಾಸದಿಂದಲೂ, ಪ್ರೀತಿಸೂಚಕವಾದ ಹುಬ್ಬಿನಾಟಗಳಿಂದಲೂ ಅವನಲ್ಲಿ ಮೋಹವನ್ನು ತೋರಿಸುತ್ತ, ಅವನೊಡನೆ ದೇಹಾಲಿಂಗನಸೌಖ್ಯವನ್ನು ಬಯಸುತಿದ್ದಳು.

ಆಗ ತರುಣನಾದ ಆ ಪ್ರದ್ಯುಮ್ನನು, ಆಕೆಯನ್ನು ಕುರಿತು, “ಅಮ್ಮಾ ! ಇದೇನಿದು? ನಿನ್ನ ಬುದ್ಧಿಯು ಹೀಗೆ ವಿಪರೀತವಾಗಿ ಪರಿಣಮಿಸಿರುವುದು? ಬಾಲ್ಯದಿಂದಲೂ ನೀನು ನನ್ನನ್ನು ತಾಯಿಯಂತೆ ಪೋಷಿಸಿದವಳಲ್ಲವೆ. ಈಗ ಆ ಮಾತೃಭಾವವನ್ನು ಬಿಟ್ಟು, ಕಾಮಾತುರರಾದ ಸ್ತ್ರೀಯರಂತೆ ನಡೆಯುತ್ತಿರುವೆಯಲ್ಲಾ !” ಎಂದನು. ಅದಕ್ಕಾ ರತಿಯು “ಓ ಸೌಮ್ಯಾ! ನೀನು ಸಾಕ್ಷಾನ್ನಾರಾಯಣನ ಪುತ್ರನು. ನೀನು ಹುಟ್ಟಿದ ಹತ್ತು ದಿನಗಳೊಳಗಾಗಿಯೇ ಶಂಬರನು ನಿನ್ನನ್ನು ಸಮುದ್ರದಲ್ಲಿ ಬಿಸುಟನು. ಅಲ್ಲಿದ್ದ ಒಂದಾನೊಂದು ಮತ್ಸ್ಯವು ನಿನ್ನನ್ನು ನುಂಗಿತು. ಆ ಮತ್ಸ್ಯವನ್ನು ಬೆಸ್ತರು ಈ ಶಂಬರನಿಗೆ ತಂದೊಪ್ಪಿಸಿದರು, ಅದರ ಗರ್ಭದಿಂದ ನೀನು ಸಿಕ್ಕಿದೆ.

ಆದರೇನು? ಪೂರ್ವಜನ್ಮದಲ್ಲಿ ನೀನೇ ಕಾಮದೇವನು ನಾನೇ ನಿನ್ನ ಪತ್ನಿಯಾದ ರತಿಯು, ಓ, ಭದ್ರಾ! ಈ ಶಂಬರನು ನಿನಗೆ ಆಜನ್ಮಶತ್ರುವಾಗಿರುವನು ಇವನು ಎಂತವರಿಗೂ ದುರ್ಜಯನಾಗಿ ವೀರ್ಯಮದದಿಂದ ಬೀಗಿ ಬೆರೆಯುತ್ತಿರುವನು ಈತನು ಅನೇಕಮಾಯೆಗಳನ್ನು ಬಲ್ಲವನು. ಆದುದರಿಂದ ಈಗ ನೀನೂ ಅವನಿಗೆ ತಕ್ಕ ಮಾಯೆಗಳನ್ನೇ ಉಪಯೋಗಿಸಿ, ಅವನನ್ನು ಕೊಲ್ಲುವ ಪ್ರಯತ್ನವನ್ನುಮಾಡು ಅತ್ತಲಾಗಿ ನಿನ್ನ ಹೆತ್ತತಾಯಿಯಾದ ರುಕ್ಮಿಣಿಯು ನಿನ್ನನ್ನು ಕಾಣದೆ, ಕರುವನ್ನು ಕಳೆದುಕೊಂಡ ಹೆಣ್ಣು ಜಿಂಕೆಯಂತೆ ಪರಿತಪಿಸುತ್ತ, ಪುತ್ರಸ್ನೇಹದಿಂದ ಕುದಿಯುತ್ತಿರುವಳು. ಆದುದರಿಂದ ಈಗಲೇ ನೀನು ನಿನ್ನ ಶತ್ರುವನ್ನು ಕೊಂದು, ನಿನ್ನ ತಾಯಿಗೆ ಸಂತೋಷವನ್ನುಂಟುಮಾಡು” ಎಂದಳು. ಹೀಗೆಂದು ಹೇಳಿ ಆ ಮಾಯಾವತಿಯು, ಮಹಾತ್ಮನಾದ ಆ ಪ್ರದ್ಯುಮ್ನನಿಗೆ, ಇತರಸಮಸ್ತಮಾಯೆಗಳನ್ನೂ ನಿಗ್ರಹಿಸತಕ್ಕ ಮಹಾಮಾಯೆಯೆಂಬ ಒಂದು ವಿದ್ಯೆಯನ್ನು ಉಪದೇಶಿಸಿದಳು ಒಡನೆಯೇ ಪ್ರದ್ಯುಮ್ನನು, ಶಂಬರನ ಬಳಿಗೆ ಹೋಗಿ ಆತನಿಗೆ ಕಿವಿಯಿಂದ ಕೇಳಬಾರದ ನಿಂದಾವಾಕ್ಯಗಳಿಂದ ಕೋಪವನ್ನು ಹೆಚ್ಚಿಸಿ ಯುದ್ಧಕ್ಕಾಗಿ ಕರೆದನು. ಹೀಗೆ ಕ್ರೂರವಾಕ್ಯಗಳಿಂದ ತಿರಸ್ಕರಿಸಲ್ಪಟ್ಟ ಆ ಶಂಬರನು, ಕಾಲಿಂದ ಮೆಟ್ಟಿದ ಸರ್ಪದಂತೆ ಕೋಪದಿಂದ ಬುಸುಗುಟ್ಟುತ್ತ, ಕೆಂಪೇರಿದ ಕಣ್ಣಾಲೆಗಳುಳ್ಳವನಾಗಿ, ಗದೆಯನ್ನು ಕೈಗೆತ್ತಿಕೊಂಡು ಹೊರಗೆ ಬಂದು, ಆ ಗದೆಯನ್ನು ಗಿರುಗಿರನೆ ತಿರುಗಿಸಿ, ಪ್ರದ್ಯುಮ್ನನಮೇಲೆ ಪ್ರಯೋಗಿಸಿ, ವಜ್ರಘಾತಕ್ಕೆ ಸದೃಶವಾದ ಸಿಂಹನಾದದಿಂದ ಗರ್ಜಿಸಿದನು. ಇಷ್ಟರಲ್ಲಿಯೇ ಪ್ರದ್ಯುಮ್ನನು ತನ್ನ ಕೈಯಲ್ಲಿದ್ದ ಗದೆಯಿಂದ ಆ ಶಂಬರನ ಗದೆಯನ್ನು ಎರಡುತುಂಡಾಗಿ ಕತ್ತರಿಸಿ, ಸಿಂಹನಾದದೊಡನೆ ಅದೇಗದೆಯನ್ನು ಶಂಬರನಮೇಲೆಯೂ ಪ್ರಯೋಗಿಸಿದನು ಇಷ್ಟರಲ್ಲಿ ಶಂಬರನು, ಮಯನಿಂದ ತನಗೆ ಉಪದೇಶಿಸಲ್ಪಟ್ಟ ದೈತ್ಯಮಾಯೆಯನ್ನು ಹಿಡಿದು, ಕಣ್ಮರೆಯಾಗಿ ಆಕಾಶಕ್ಕೆ ಹಾರಿ, ಅಲ್ಲಿಂದ ಪ್ರದ್ಯುಮ್ನನ ಮೇಲೆ ಶಿಲಾವರ್ಷವನ್ನು ಕರೆಯಲಾರಂಭಿಸಿದನು. ಆಗ ಪ್ರದ್ಯುಮ್ನನು ತನ್ನಮೇಲೆ ಬೀಳುತ್ತಿರುವ ಶಿಲಾವರ್ಷವನ್ನು ತಡೆಯಲಾರದೆ, ಕೇವಲಸತ್ವಗುಣಪ್ರಚುರವಾಗಿ,

ಸಮಸ್ತಮಾಯೆಗಳನ್ನೂ ನಿಗ್ರಹಿಸತಕ್ಕ ಮಹಾವಿದ್ಯೆಯೆಂಬ ತನ್ನ ಮಾಯೆಯನ್ನು ಪ್ರಯೋಗಿಸಿದನು. ಇದರಿಂದ ಶಂಬರನು ಪ್ರಯೋಗಿಸಿದ್ದ ದೈತ್ಯಮಾಯೆಯು ಅಡಗಿಹೋಯಿತು ಆಗ ಶಂಬರನು, ಮೊದಲಿಗಿಂತಲೂ ಅಧಿಕವಾದ ಕೋಪಾವೇಶದಿಂದ, ಗುಹ್ಯಕ, ಗಂಧರ್ವ, ಪಿಶಾಚ, ಉರಗ, ರಾಕ್ಷಸಜಾತಿಗಳಿಗೆ ಸಂಬಂಧಪಟ್ಟ ಬೇರೆಬೇರೆ ನೂರಾರುಮಾಯೆಗಳನ್ನು ಪ್ರಯೋಗಿಸಲಾರಂಭಿಸಿದನು ಅವೆಲ್ಲವನ್ನೂ ಪ್ರದ್ಯುಮ್ನನು ಮಾಯಾವತಿಯಿಂದ ತನಗೆ ಉಪದೇಶಿಸಲ್ಪಟ್ಟ ಮಹಾವಿದ್ಯೆಯೆಂಬ ಮಾಯೆಯಿಂದ ಕ್ಷಣಮಾತ್ರದಲ್ಲಿ ನಿಗ್ರಹಿಸುತ್ತ ಬಂದನು ಹೀಗೆ ಶಂಬರನ ಮಾಯಾಬಲವೆಲ್ಲವೂ ಮುರಿದಮೇಲೆ, ಪ್ರದ್ಯುಮ್ನನು ತೀಕ್ಷ್ಣವಾದ ಒಂದಾನೊಂದು ಖಡ್ಗವನ್ನು ಕೈಗೆತ್ತಿಕೊಂಡು, ಕೆಂಪು ಮೀಸೆಗಳುಳ್ಳ ಆ ಶಂಬರನ ತಲೆಯನ್ನು ಕಿರೀಟಕುಂಡಲಗಳೊಡನೆ ಕತ್ತರಿಸಿ ಕೆಡಹಿದನು ಒಡನೆಯೇ ದೇವತೆಗಳು ಆಕಾಶದಿಂದ ಜಯಶಬ್ದಗಳೊಡನೆಪ್ರದ್ಯುಮ್ನನಮೇಲೆಪುಷ್ಪವರ್ಷವನ್ನು ಕರೆದರು. ಆಗ ಮಾಯಾಬಲದಿಂದ ಗಗನಸಂಚಾರಿಣಿಯಾಗಿ ನೋಡುತಿದ್ದ ಮಾಯಾವತಿಯು, ಪ್ರದ್ಯುಮ್ನನನ್ನು ಆಕಾಶಮಾರ್ಗದಿಂದ ತನ್ನ ಪಟ್ಟಣಕ್ಕೆ ಕರೆತರುತಿದ್ದಳು. ಮಿಂಚಿನೊಡಗೂಡಿದ ಮೇಘದಂತೆ, ಆ ಪ್ರದ್ಯುಮ್ನನು ತನ್ನ ಭಾರ್ಯೆಯಾದ ಆಕೆಯೊಡನೆ ಆಕಾಶಮಾರ್ಗದಿಂದಲೇ ಬಂದು, ಅನೇಕಸ್ತ್ರೀರತ್ನಗಳಿಂದ ನಿಬಿಡವಾದ ತನ್ನ ಅಂತಃಪುರವನ್ನು ಪ್ರವೇಶಿಸಿದನು. ಆಗ ಆ ಪ್ರದ್ಯುಮ್ನನ ಸೌಂದರ್ಯವಿಲಾಸಗಳನ್ನು ಕೇಳಬೇಕೆ ? ಮೇಘದಂತೆ ಶ್ಯಾಮಲವರ್ಣವಾದ ಮೈ! ನಡುವಿನಲ್ಲಿ ಹೊಂಬಣ್ಣದ ಪಟ್ಟೆಮಡಿ! ನೀಡಿದ ತೋಳುಗಳು! ಕಮಲದಳದಂತ ಕೆಂಪಾದ ಕಣ್ಣುಗಳು ! ಮುಗುಳ್ನಗೆಯಿಂದ ಕೂಡಿದ ಮುಖದ ಸೊಗಸು! ಸುರುಳಿಗಟ್ಟಿದ ಮುಂಗುರುಳುಗಳಿಂದ ಚಿತ್ರಿಸಿದಂತೆ ಶೋಭಿಸುತ್ತಿರುವ ಹಣೆ! ಹೀಗೆ ಅಪೂರ್ವಸೌಂದರ್ಯವಿಶಿಷ್ಟನಾದ ಆ ಪ್ರದ್ಯುಮ್ನನನ್ನು ನೋಡಿದೊಡನೆ, ಅಲ್ಲಿದ್ದ ಅಂತಃಪುರಸ್ತ್ರೀಯರೆಲ್ಲರೂ ಆತನೇ ಕೃಷ್ಣನೆಂದು ಭ್ರಮಿಸಿ, ಲಜ್ಜೆಯಿಂದ ಅಲ್ಲಲ್ಲಿ ಅಡಗಿಕೊಂಡರು. ಆಮೇಲೆ ಆ ಸ್ತ್ರೀಯರು ಸ್ವಲ್ಪಸ್ವಲ್ಪವಾಗಿ ನಾಚಿಕೆಯನ್ನು ಬಿಟ್ಟು, ಅವನ ಮುಖವನ್ನು ಚೆನ್ನಾಗಿ ನೋಡಿದಾಗ, ಕೆಲವು ವೈಲಕ್ಷಣ್ಯಗ

ಳಿಂದ ಆತನು ಕೃಷ್ಣನಲ್ಲವೆಂದು ತಿಳಿಯಿತು ಶ್ರೀವತ್ಸಕೌಸ್ತುಭಾದಿಚಿಹ್ನೆಗಳೊಂದೂ ಅವನಲ್ಲಿ ಕಾಣದಿರುವುದನ್ನೂ, ಅವನೊಡನೆ ಸುಂದರಾಂಗಿಯಾದ ಬೇರೊಬ್ಬ ಹೊಸಹೆಂಗಸು ಬಂದಿರುವುದನ್ನೂ ನೋಡಿ, ಅವರಿಗೆ ಆತನು ಕೃಷ್ಣನಲ್ಲವೆಂಬ ನಿಶ್ಚಯವೂ ಹುಟ್ಟಿತು ಎಲ್ಲರೂ ಆಶ್ಚರ್ಯದಿಂದನಗುತ್ತ ಮುಂದೆ ಬಂದರು. ರುಕ್ಮಿಣಿಯೂ ಮುಂದೆ ಬಂದಳು. ಆ ಪುರುಷನನ್ನು ನೋಡಿದೊಡನೆ ರುಕ್ಮಿಣಿಗೆ ಯಾವುದೋ ಒಂದುವಿಧವಾದ ಪುತ್ರಸ್ನೇಹದಿಂದ ಸ್ತನಗಳಲ್ಲಿ ಹಾಲು ತೊರೆಯಿಕ್ಕುತಿತ್ತು. ಅದರಮೇಲೆ ಆಕೆಗೆ ಹಿಂದೆ ತಾನು ಪ್ರಸವಿಸಿದ ಹತ್ತುದಿನಗಳೊಳಗಾಗಿಯೇ ಕೈತಪ್ಪಿ ಹೋದ ಮಗುವಿನ ಸ್ಮರಣೆಯುಂಟಾಯಿತು. ಆಗ ರುಕ್ಮಿಣಿಯು ತನ್ನಲ್ಲಿ ತಾನು "ಆಹಾ! ಏನಿದು? ಈ ಪುರುಷರತ್ನವಾವುದು? ಕಮಲನೇತ್ರನಾದ ಈ ಕುಮಾರನು ಯಾರ ಮಗನಾಗಿರಬಹುದು? ಇವನನ್ನು ಗರ್ಭದಲ್ಲಿ ಧರಿಸಿದ್ದ ಭಾಗ್ಯವತಿಯಾವಳೋ! ಇವನಿಗೆ ಈ ನಾರೀಮಣಿಯೆಲ್ಲಿ ಸಿಕ್ಕಿದಳು? ನಾನು ಪ್ರಸವಗೃಹದಲ್ಲಿದ್ದಾಗಲೇ ಯಾರೋ ಪಾಪಿಗಳು ನನ್ನ ಮಗುವನ್ನು ಮಾಯೆಯಿಂದ ಸಾಗಿಸಿಬಿಟ್ಟರು. ಆ ಮಗುವು ಇದುವರೆಗೂ ಎಲ್ಲಿಯಾದರೂ ಬದುಕಿದ್ದಪಕ್ಷದಲ್ಲಿ, ವಯಸ್ಸಿನಲ್ಲಿಯೂ, ಆಕೃತಿಯಲ್ಲಿಯೂ, ರೂಪದಲ್ಲಿಯೂ ಇವನಂತೆಯೇ ಆಗಿರಬೇಕು ಅದೂ ಹಾಗಿರಲಿ! ಇವನು ನನ್ನ ಮಗನಲ್ಲದಿದ್ದಪಕ್ಷದಲ್ಲಿ, ನನ್ನ ಪತಿಯಾದ ಶ್ರೀಕೃಷ್ಣನ ರೂಪಸಾದೃಶ್ಯವು ಇವನಲ್ಲಿ ತೋರುವುದಕ್ಕೆ ಕಾರಣವೇನು? ಅವಯವಸನ್ನಿವೇಶಗಳಿಂದಲೂ, ನಡೆನುಡಿಗಳಿಂದಲೂ, ನಗೆನೋಟಗಳಿಂದಲೂ, ಇವನು ನನ್ನ ಪತಿಯಾದ ಕೃಷ್ಣನನ್ನೇ ಹೋಲುತ್ತಿರುವನು. ಓಹೋ! ಇನ್ನು ಸಂದೇಹವೇಕೆ? ಕೃಷ್ಣಾಂಶದಿಂದ ನನ್ನ ಗರ್ಭದಲ್ಲಿ ಹುಟ್ಟಿದ ಕುಮಾರನೇ ಇವನಾಗಿರಬೇಕು ಇದರಲ್ಲಿ ಸಂದೇಹವೇ ಇಲ್ಲ. ನನಗೆ ಆಕಸ್ಮಿಕವಾಗಿ ಇವನಲ್ಲಿ ಹುಟ್ಟಿದ ಪುತ್ರಸ್ನೇಹವೇ ಇದಕ್ಕೆ ಸೂಚಕವಾಗಿರುವುದು. ಇದಲ್ಲದೆ ಈಗ ನನಗೆ ಶುಭವನ್ನು ಸೂಚಿಸುವಂತೆ ಎಡದ ಭುಜವು ಅದಿರುತ್ತಿರುವುದು" ಎಂದು ಮನಸ್ಸಿನಲ್ಲಿ ನಾನಾವಿಧವಾಗಿ ಆಲೋಚಿಸುತ್ತಿರುವಾಗಲೇ, ದೇವಕೀವಸುದೇವರೊಡನೆ ಶ್ರೀಕೃಷ್ಣನೂ ಆ ಸ್ಥಲಕ್ಕೆ ಬಂದನು. ಸರ್ವಜ್ಞನಾದ

ಆ ಭಗವಂತನಿಗೆ ಇಲ್ಲಿ ನಡೆದ ಅಂಶಗಳೆಲ್ಲವೂ ಜ್ಞಾನಗೋಚರವಾಗಿ ತಿಳಿದಿದ್ದರೂಕೂಡ, ಅಲ್ಲಿ ಕೃಷ್ಣನು ಏನೂ ತಿಳಿಯದವನಂತೆ ಸುಮ್ಮನೆ ನಿಂತಿದ್ದನು. ಈ ಕಾಲಕ್ಕೆ ಸರಿಯಾಗಿ ಅಲ್ಲಿಗೆ ಬಂದಿದ್ದ ನಾರದಮುನಿಯು, ಶಂಬರವೃತ್ತಾಂತವೇ ಮೊದಲಾದ ಪೂರ್ವೋತ್ತರಗಳೆಲ್ಲವನ್ನೂ ಆ ಅಂತಃಪುರಸ್ತ್ರೀಯರ ಮುಂದೆ ವಿವರವಾಗಿ ಹೇಳಿದನು. ಆಗ ಸ್ತ್ರೀಯರೆಲ್ಲರೂ ಅದನ್ನು ಕೇಳಿ ಆಶ್ಚರ್ಯಭರಿತರಾದರು. ಸತ್ತವನು ಬದುಕಿಬಂದಂತೆ, ಬಹುಕಾಲದಿಂದ ನಷ್ಟನಾಗಿದ್ದ ಕುಮಾರನು ತಮಗೆ ತಿರುಗಿ ಲಭಿಸಿದುದಕ್ಕಾಗಿ ಅಪಾರಸಂತೋಷದಿಂದ ಹಿಗ್ಗುತಿದ್ದರು. ಆಮೇಲೆ ಕ್ರಮವಾಗಿ ದೇವಕೀವಸುದೇವರೂ, ಬಲರಾಮಕೃಷ್ಣರೂ, ಅಂತಃಪುರಸ್ತ್ರೀಯರೂ, ರುಕ್ಮಿಣೀದೇವಿಯೂ, ಪತ್ನೀಸಮೇತನಾದ ತನ್ನ ಕುಮಾರನನ್ನು ಪ್ರೇಮದಿಂದ ಆಲಿಂಗಿಸಿ ಸಂತೋಷಸಲ್ಲಾಪಗಳನ್ನು ನಡೆಸುತಿದ್ದರು. ದ್ವಾರಕಾವಾಸಿಗಳೆಲ್ಲರೂ ಈ ವೃತ್ತಾಂತವನ್ನು ಕೇಳಿ ಒಬ್ಬರಿಗೊಬ್ಬರು, “ಆಹಾ! ದೈವವ್ಯಾಪಾರವು ಅತಿವಿಚಿತ್ರವಾದುದು! ಸತ್ತವನು ಇಷ್ಟುದಿನಗಳಮೇಲೆ ಬದುಕಿ ಬಂದನಲ್ಲವೆ?” ಎಂದು ಸಂತೋಷದಿಂದಲೂ, ಆಶ್ಚರ್ಯದಿಂದಲೂ ಸ್ತಬ್ಧರಾಗಿದ್ದರು ಓ ಪರೀಕ್ಷಿದ್ರಾಜಾ! ಆ ಅಂತಃಪುರದಲ್ಲಿದ್ದ ಸ್ತ್ರೀಯರೆಲ್ಲರೂ ಮೊದಲು ಪ್ರದ್ಯುಮ್ನನ ರೂಪವನ್ನು ನೋಡಿ ಮೋಹಿತರಾದುದೇನೂ ಆಶ್ಚರ್ಯವಲ್ಲ! ಆ ಪ್ರದ್ಯುಮ್ನನು ಸರ್ವವಿಧದಲ್ಲಿಯೂ ಶ್ರೀಕೃಷ್ಣನನ್ನೇ ಹೋಲುತ್ತಿರುವನು. ಅವನನ್ನು ನೋಡಿದಾಗ ಎಂತವರಿಗಾದರೂ ಸಾಕ್ಷಾತ್ತಾಗಿ ಕೃಷ್ಣನೇ ಅವನೆಂಬ ಭ್ರಾಂತಿಯು ಹುಟ್ಟುವುದು. ಹೀಗಿರುವಾಗ ಆ ಸ್ತ್ರೀಯರು ಅವನನ್ನು ಕಂಡು ಮೋಹಿಸಿದುದೇನಾಶ್ಚರ್ಯವು? ಇದಲ್ಲದೆ ಸ್ಮರಿಸಿದಮಾತ್ರಕ್ಕೆ ಮನಸ್ಸನ್ನು ಕಲಗಿಸುತ್ತಿರುವ ಆ ಕಾಮದೇವನು, ಸಾಕ್ಷಾತ್ತಾಗಿ ಮುಂದೆ ಬಂದುನಿಂತು,ಶ್ರೀಕೃಷ್ಣನ ಪ್ರತಿಬಿಂಬವೋ ಎಂಬಂತೆ ಮೋಹನಾಕೃತಿಯಿಂದೊಪ್ಪುತ್ತಿರುವಾಗ,ಅವನನ್ನು ನೋಡಿ ಯಾರ ಮನಸ್ಸು ತಾನೇ ಚಲಿಸದು? ಕೃಷ್ಣನ ಪತ್ನಿಯರಿಗೇ ಈ ಸ್ಥಿತಿಯುಂಟಾದಮೇಲೆ ಇನ್ನು ಸಾಮಾನ್ಯಸ್ತ್ರೀಯರ ಮಾತೇನು? ಇದು ಐವತ್ತೈದನೆಯ ಅಧ್ಯಾಯವು.

---

## ಸ್ಯಮಂತಕೋಪಾಖ್ಯಾನವು.

"ಪರೀಕ್ಷಿದ್ರಾಜಾ! ಕೇಳು. ಕೃಷ್ಣನಿಗೆ ಈ ರುಕ್ಮಿಣಿಯೊಬ್ಬಳಲ್ಲದೆ ಜಾಂಬವತಿ, ಸತ್ಯಭಾಮೆ ಮೊದಲಾದ ಇನ್ನೂ ಅನೇಕಪತ್ನಿಯರಾದರು ಸತ್ರಾಜಿತ್ತೆಂಬವನು ಹಿಂದೊಮ್ಮೆ ಕೃಷ್ಣನಲ್ಲಿ ಯಾವುದೋ ಒಂದು ಅಪರಾಧವನ್ನು ಮಾಡಿ, ಆ ಅಪರಾಧಕ್ಷಾಪಣಕ್ಕಾಗಿ ತನ್ನಲ್ಲಿದ್ದ ಸ್ಯಮಂತಕವೆಂಬ ಒಂದು ಉತ್ತಮರತ್ನದೊಡನೆ,ತನ್ನ ಮಗಳಾದ ಸತ್ಯಭಾಮೆಯೆಂಬ ಕನ್ಯೆಯನ್ನು ಕೃಷ್ಣನಿಗೆ ಕೊಟ್ಟು ವಿವಾಹಮಾಡಿದನು." ಎಂದು ಶುಕಮುನಿಯು ಹೇಳಿದುದನ್ನು ಕೇಳಿ ಪರೀಕ್ಷಿದ್ರಾಜನು. "ಓ ಮುನೀಂದ್ರಾ! ಸತ್ರಾಜಿತ್ತು ಕೃಷ್ಣನವಿಷಯದಲ್ಲಿ ಮಾಡಿದ ಅಪರಾಧವೇನು? ಆ ಸತ್ರಾಜಿತ್ತಿಗೆ ಸ್ಯಮಂತಕವೆಂಬ ರತ್ನವು ಎಲ್ಲಿಂದ ಬಂದಿತು?ಅವನು ಆ ರತ್ನವನ್ನೂ, ತನ್ನ ಮಗಳನ್ನೂ ಶ್ರೀಕೃಷ್ಣನಿಗೆ ಕೊಡಲು ಕಾರಣವೇನು? ಆ ಕಥೆಯನ್ನು ವಿಸ್ತರಿಸಿ ಹೇಳಬೇಕು"ಎಂದನು ಅದಕ್ಕಾ ಶುಕಮುನಿಯು, "ರಾಜಾ ಕೇಳು! ಸತ್ರಾಜಿತ್ತೆಂಬವನು ಯಾವಾಗಲೂ ಭಕ್ತಿಯಿಂದ ಸೂರ್‍ಯೋಪಾಸನೆ ಮಾಡುತ್ತಿದ್ದನು. ಕೊನೆಗೆ ಸೂರ್ಯನು ಅವನ ಭಕ್ತಿಗೆ ಮೆಚ್ಚಿ, ಅವನಿಗೆ ಸ್ಯಮಂತಕವೆಂಬ ಒಂದಾನೊಂದು ರತ್ನವನ್ನು ಅನುಗ್ರಹಿಸಿಕೊಟ್ಟನು. ಆ ರತ್ನವನ್ನು ಸತ್ರಾಜಿತ್ತು ತನ್ನ ಕಂಠದಲ್ಲಿ ಧರಿಸಿ, ಸಾಕ್ಷಾತ್ತಾಗಿ ಸೂರ್ಯನಂತೆಯೇ ದಿವ್ಯತೇಜಸ್ಸಿನಿಂದ ಜ್ವಲಿಸುತ್ತ, ತನ್ನ ಪುರಪ್ರವೇಶವನ್ನು ಮಾಡಿದಾಗ ಆ ಅದ್ಭುತತೇಜಸ್ಸಿಂದ ಪುರವಾಸಿಗಳ ಕಣ್ಣುಗಳೆಲ್ಲವೂ ಕೋರೈಸಿದವು ಆ ತೇಜಸ್ಸಿನಲ್ಲಿ ಸತ್ರಾಜಿತ್ತನ ಆಕೃತಿಯೇ ಯಾರಿಗೂ ಕಾಣಿಸದೆ ಹೋಯಿತು ಚೆನ್ನಾಗಿ ಕಣ್ಣುಬಿಟ್ಟು ನೋಡುವುದಕ್ಕೂ ಯಾರಿಗೂ ಸಾಧ್ಯವಿಲ್ಲದಂತಾಯ್ತು ಹೀಗೆ ಆಕಸ್ಮಾತ್ತಾಗಿ ತಮ್ಮ ಪಟ್ಟಣದಲ್ಲಿ ಅಪೂರ್‍ವವಾದ ತೇಜಸ್ಸು ಕಾಣಿಸುತ್ತಿರುವುದನ್ನು ನೋಡಿ, ಎಲ್ಲರೂ ಆಶ್ಚರ್ಯಪರವಶರಾಗಿ, ಸೂರ್ಯನೇ ಆಕಾಶದಿಂದ ಕೆಳಗಿಳಿದು ತಮ್ಮ ಪಟ್ಟಣಕ್ಕೆ ಬಂದಿರಬೇಕೆಂದು ನಿಶ್ಚಯಿಸಿ, ಕೃಷ್ಣನಬಳಿಗೆ ಓಡಿಹೋದರು. ಆಗ ಕೃಷ್ಣನು ರುಕ್ಮಿಣೀದೇವಿಯೊಡನೆ ವಿನೋದದಿಂದ ಪಗಡೆಯಾಡುತ್ತಿದ್ದನು. ಆಗ ಜನರೆಲ್ಲರೂ ಆತುರದಿಂದ ಮುಂದೆ ಬಂದು, ತಲೆಯಮೇಲೆ ಕೈಜೋ

ಡಿಸಿ “ಓ ನಾರಾಯಣಾ! ನಿನಗೆ ನಮಸ್ಕಾರವು. ಶಂಖಚಕ್ರಗಧಾಧಾರಿಯಾದ ಓ ಪರಮಾತ್ಮಾ! ನಿನಗೆ ವಂದನವು! ಹೇ ದಾಮೋದರಾ! ಅರವಿಂದಾಕ್ಷಾ! ಗೋವಿಂದಾ! ನಂದನಂದನಾ! ನಮ್ಮ ವಿಜ್ಞಾಪನೆಯನ್ನು ಲಾಲಿಸಬೇಕು ಲೋಕನಾಯಕನಾದ ನಿನ್ನ ದರ್ಶನಕ್ಕಾಗಿ ಸೂರ್ಯದೇವನೇ ಆಕಾಶದಿಂಇಳಿದು ಬಂದುಬಿಟ್ಟಿರುವನು ತನ್ನ ತೀಕ್ಷ್ಣಕಿರಣಗಳಿಂದ ಇಲ್ಲಿನ ಜನರಿಗೆ ಕಣ್ಣೇ ಕಾಣದಂತೆ ಮಾಡಿರುವನು. ಹೀಗಾದರೆ ನಮ್ಮ ಗತಿಯೇನು ? ಆದರೆ ಇದು ಅವನ ತಪ್ಪಲ್ಲ! ದೇವಾದಿದೇವತೆಗಳಾದರೂ ನೀನಿರತಕ್ಕ ಸ್ಥಳವನ್ನು ಹುಡುಕಿಕೊಂಡು ಬರುವುದು ಸಹಜವು ಓ ನಾರಾಯಣಾ! ನೀನು ಈ ಯಾದವಕುಲದಲ್ಲಿ ಹುಟ್ಟಿ, ನಿನ್ನ ಪರಸ್ವರೂಪವನ್ನು ಮರೆಸಿಕೊಂಡು ಗೂಢವಾಗಿರುವುದನ್ನು ತಿಳಿದು, ಸೂರ್ಯನೇ ನಿನ್ನನ್ನು ನೋಡುವುದಕ್ಕಾಗಿ ಅದೋ ಬರುತ್ತಿರುವನು ಅವನ ತೀಕ್ಷ್ಣಕಿರಣಗಳಿಂದ ನಮ್ಮ ದೃಷ್ಟಿಯು ಇನ್ನೂ ಸಂಪೂರ್ಣವಾಗಿ ಕೆಟ್ಟುಹೋಗುವುದಕ್ಕೆ ಮೊದಲು, ನೀನಾಗಿಯೇ ಹೋಗಿ ಅವನಿಗೆ ದರ್ಶನವನ್ನು ಕೊಟ್ಟು ಸಮಾಧಾನಮಾಡಿ ಕಳುಹಿಸಬೇಕು” ಎಂದರು.ಆಗ ಕೃಷ್ಣನು. ಅಜ್ಞತೆಯಿಂದ ಹೇಳಿದ ಅವರ ಮಾತುಗಳನ್ನು ಕೇಳಿ ನಗುತ್ತ, “ಓ! ಪುರಜನರೆ! ಅವನು ಸೂರ್ಯನಲ್ಲ! ಸತ್ರಾಜಿತ್ತೆಂಬವನು ಸೂರ್ಯಾನುಗ್ರಹದಿಂದ ತನಗೆ ಬಂದ ಒಂದಾನೊಂದು ರತ್ನವನ್ನು ಧರಿಸಿಕೊಂಡು ಬರುತ್ತಿರುವನು. ಭಯಪಡಬೇಡಿರಿ” ಎಂದು ಸಮಾಧಾನಮಾಡಿ ಕಳುಹಿಸಿಬಿಟ್ಟನು. ಇಷ್ಟರಲ್ಲಿ ಇತ್ತಲಾಗಿ, ಸತ್ರಾಜಿತ್ತು ಹಿಂತಿರುಗಿಬರುವನೆಂಬ ಸಂಗತಿಯನ್ನು ತಿಳಿದು, ಅವನ ಬಂಧುಜನರೆಲ್ಲರೂ ತಮ್ಮ ಮನೆಗೆ ಮಂಗಳಾಲಂಕಾರಗಳೆಲ್ಲವನ್ನೂ ಮಾಡಿ ಅತ್ಯಾದರದಿಂದ ನಿರೀಕ್ಷಿಸುತಿದ್ದರು. ಸತ್ರಾಜಿತ್ತು ಮಹಾವೈಭವದಿಂದ ತನ್ನ ಮನೆಗೆ ಬಂದು, ತನ್ನಲ್ಲಿದ್ದ ಆ ರತ್ನವನ್ನು ಬ್ರಾಹ್ಮಣರಮೂಲಕವಾಗಿ ದೇವತಾಸಾನ್ನಿಧ್ಯದಲ್ಲಿ ಇಡಿಸಿದನು. ಓ ಪರೀಕ್ಷಿದ್ರಾಜಾ! ಆ ಸ್ಯಮಂತಕರತ್ನದ ಪ್ರಭಾವವು ಅತ್ಯದ್ಭುತವಾದುದು. ಅದು ದಿನದಿನವೂ ಎಂಟೆಂಟು ಭಾರದ ತೂಕದಷ್ಟು ಚಿನ್ನವನ್ನು ಕೊಡುತ್ತಿರುವುದು ಆ ರತ್ನವನ್ನು ಎಲ್ಲಿ ಆರಾಧಿಸುತ್ತಿರುವರೋ, ಅಲ್ಲಿ ದುರ್ಭಿಕ್ಷವಾಗಲಿ, ಮಾರಿಕಾದಿರೋಗಗಳಾಗಲಿ, ಅ

ನಿಷ್ಟ್ಯಗಳಾಗಲಿ, ಆಧಿವ್ಯಾಧಿಗಳಾಗಲಿ, ಬೇರೆ ಯಾವವಿಧವಾದ ಅಶುಭಗ ಳಾಗಲಿ ತಲೆದೋರಲಾರವು. ಆ ರತ್ನವಿದ್ದಕಡೆಯಲ್ಲಿ ಮಾಯೆ, ವಂಚನಾ ದಿಗಳೊಂದೂ ಕೆಂದಲಾರವು. ಹೀಗಿರುವಾಗ ಒಮ್ಮೆ ಶ್ರೀ ಕೃಷ್ಣನು, ಸತ್ರಾಜಿತ್ತಿನಬಳಿಗೆ ಬಂದು, ಆ ರತ್ನವನ್ನು ತಮ್ಮ ರಾಜನಾದ ಉಗ್ರಸೇನ ನಿಗೆ ಕೊಡುವಂತೆ ಕೇಳಿದನು. ದೇವದೇವನಾದ ಸಾಕ್ಷಾದ್ಭಗವಂತನೇ ಹೀಗೆ ಯಾಚಿಸುತ್ತಿರುವಾಗಲೂ, ಲೋಭಬುದ್ಧಿಯುಳ್ಳ ಸತ್ರಾಜಿತ್ತು, ಅದನ್ನು ಕೊಡಲಾರದೆ ಕೃಷ್ಣನನ್ನು ನಿರಾಕರಿಸಿಬಿಟ್ಟನು. ಕೆಲವುದಿನಗಳು ಕಳೆದ ಮೇಲೆ, ಆ ಸತ್ರಾಜಿತ್ತಿನ ತಮ್ಮನಾದ ಪ್ರಸೇನನೆಂಬವನು, ಮಹಾತೇಜ ಸ್ಸುಳ್ಳ ಆ ರತ್ನವನ್ನು ಕಂಠದಲ್ಲಿ ಧರಿಸಿ, ಬೇಟೆಯಾಡುವುದಕ್ಕಾಗಿ ಕುದುರೆ ಯನ್ನೇರಿ ಕಾಡಿಗೆ ಹೋದನು ಆ ಕಾಡಿನಲ್ಲಿ ಒಂದಾನೊಂದು ಸಿಂಹವು, ಪ್ರಸೇನನನ್ನು ಕೊಂದು, ಆ ರತ್ನವನ್ನು ಬಾಯಲ್ಲಿ ಕಚ್ಚಿ ಕೊಂಡು ಹೋಗಿ ಒಂದು ಬೆಟ್ಟದ ಗವಿಯನ್ನು ಪ್ರವೇಶಿಸಿತು. ಇಷ್ಟರಲ್ಲಿ ಭಲ್ಲೂಕಶ್ರೇಷ್ಠನಾ ದ ಜಾಂಬವಂತನು,ಆ ಸಿಂಹವನ್ನು ಕೊಂದು,ಆ ರತ್ನವನ್ನು ತನ್ನ ಗುಹೆಗೆ ತೆಗೆ ದುಕೊಂಡುಹೋಗಿ, ಅದನ್ನು ತನ್ನ ಮಗನಿಗೆ ಆಡುವುದಕ್ಕಾಗಿ ಕೊಟ್ಟುಬಿ ಟ್ಟನು.ಹೀಗೆ ಕೆಲವುದಿನಗಳು ಕಳೆದುವು.ಇತ್ತಲಾಗಿ ಸತ್ರಾಜಿತ್ತು ಬೇಟೆಗಾಗಿ ಕಾಡಿಗೆಹೋದ ತನ್ನ ತಮ್ಮನು ಹಿಂತಿರುಗಿಬಾರದಿದ್ದುದನ್ನು ನೋಡಿ, ಅಲ್ಲಲ್ಲಿ ಅವನನ್ನು ಹುಡುಕಿಸುತಿದ್ದನು. ತನ್ನ ತಮ್ಮನಿಗಾಗಿಯೂ, ಆ ರತ್ನಕ್ಕಾಗಿ ಯೂ, ಅನವರತವೂ ಕೊರಗಿ ಸಂಕಟಪಡುತಿದ್ದನು, ಕೊನೆಕೊನೆಗೆ ಆತನಿಗೆ ಕೃಷ್ಣನಮೇಲೆ ಅನುಮಾನವು ಹುಟ್ಟಿತು. ತನ್ನ ತಮ್ಮನು ಆ ರತ್ನವನ್ನು ಕಂಠದಲ್ಲಿ ಧರಿಸಿ ಕಾಡಿಗೆ ಹೋದಾಗ,ಆ ರತ್ನದ ಆಸೆಗಾಗಿ ಕೃಷ್ಣನೇ ಅವ ನನ್ನು ಕೊಂದಿರಬೇಕೆಂದು ಅಲ್ಲಲ್ಲಿ ಆಡಿಕೊಳ್ಳುತಿದ್ದನು. ಕರ್ಣಾಕರ್ಣಿಕೆ ಯಾಗಿ ಇದು ಆ ಊರಿನ ಜನರೆಲ್ಲರ ಕಿವಿಗೂ ಬಿದ್ದು, ಕೊನೆಗೆ ಕೃಷ್ಣನ ಕಿವಿಗೂ ಮುಟ್ಟಿತು.ಆಗ ಕೃಷ್ಣನು,ತನ್ನ ಮೇಲಿನ ಅಪವಾದವನ್ನು ಹೇಗಾದರೂ ತಪ್ಪಿಸಿಕೊಳ್ಳುವುದಕ್ಕಾಗಿ,ಕೆಲವು ಪುರಜನರನ್ನು ತನ್ನೊಡನೆ ಕರೆದುಕೊಂಡು,ತಾನೇ ಆ ಪ್ರಸೇನನನ್ನು ಹುಡುಕುವುದಕ್ಕಾಗಿ ಹೊರಟನು. ಆ ಪ್ರಸೇನನು ಹೋದ ದಾರಿಯನ್ನೇ ಹಿಂಬಾಲಿಸಿ ಹೋದಾಗ ಅಲ್ಲಿ

ಆಪ್ರಸೇನನೂ, ಅವನ ಕುದುರೆಯೂ, ಸತ್ತುಬಿದ್ದಿರುವುದನ್ನೂ, ಅಲ್ಲಿಂದ ಮುಂದೆಸಿಂಹದಹೆಜ್ಜೆಯ ಗುರುತುಗಳನ್ನೂ ಕಂಡನು. ಹೆಜ್ಜೆಯ ಗುರುತನ್ನೇ ಹಿಂಬಾಲಿಸಿ, ಇನ್ನೂ ಸ್ವಲ್ಪದೂರ ಹೋದಮೇಲೆ,ಒಂದಾನೊಂದು ಪರ್ವತದ ತಪ್ಪಲಲ್ಲಿ ಆ ಸಿಂಹವುಸಂಹೃತವಾಗಿದ್ದ ಗುರುತುಗಳು ಕಂಡುಬಂದುವು.ಅದರ ಸಮೀಪದಲ್ಲಿ ಗಾಢಾಂಧಕಾರದಿಂದ ಕವಿದಿದ್ದ ಒಂದಾನೊಂದು ಗುಹೆಯನ್ನೂ ಕಂಡನು.

ತನ್ನೊಡನೆ ಬಂದಿದ್ದ ಜನರೆಲ್ಲರನ್ನೂ ಆ ಗುಹೆಯ ಬಾಗಿಲಲ್ಲಿ ನಿಲ್ಲಿಸಿ, ತಾನೊಬ್ಬನೇ ಆ ಬಿಲದೊಳಗೆ ಪ್ರವೇಶಿಸಿದನು. ಆ ಗುಹೆಯಲ್ಲಿ ಒಂದಾನೊಂದು ಕರಡಿಯ ಮರಿಯು, ಆ ಮಣಿಯನ್ನು ಕೈಯಲ್ಲಿಟ್ಟುಕೊಂಡು ಆಡುತಿತ್ತು.ಕೃಷ್ಣನು ಆ ಕರಡಿಯನ್ನು ಕೊಂದು ರತ್ನವನ್ನು ತರಬೇಕೆಂದು ನಿಶ್ಚಯಿಸಿ, ಸಮಯವನ್ನು ನಿರೀಕ್ಷಿಸುತ್ತ, ಸ್ವಲ್ಪಹೊತ್ತಿನವರೆಗೆ ಅಲ್ಲಿಯೇ ನಿಂತಿದ್ದನು ಹೀಗೆ ಅಪೂರ್ವತೇಜಸ್ಸುಳ್ಳ ಮನುಷ್ಯನೊಬ್ಬನು ನಿರ್ಭಯವಾಗಿ ತನ್ನ ಗುಹೆಯೊಳಗೆ ಬಂದುದನ್ನು ಕಂಡು,ಮಗುವಿಗೆ ಕಾವಲಾಗಿದ್ದ ಒಂದಾನೊಂದು ಹೆಣ್ಣುಕರಡಿಯು ಭಯದಿಂದ ಅರಚಿಕೊಂಡಿತು. ಈ ಶಬ್ದವನ್ನು ಕೇಳಿದೊಡನೆ ಮಹಾಬಲಾಢ್ಯನಾದ ಜಾಂಬವಂತನು, ಕೋಪದಿಂದ ಗರ್ಜಿಸುತ್ತ ಅಲ್ಲಿಗೆ ಬಂದನು. ಆ ಕೋಪಾವೇಶದಲ್ಲಿ ಜಾಂಬವಂತನು, ಆ ಕೃಷ್ಣನೇ ತನ್ನ ಪ್ರಭುವೆಂಬುದನ್ನು ತಿಳಿಯಲಾರದೆ, ಯಾವನೋ ಸಾಮಾನ್ಯಮನುಷ್ಯನೆಂಬ ಭಾವದಿಂದ, ಕೃಷ್ಣನೊಡನೆ ಯುದ್ಧವನ್ನಾರಂಭಿಸಿದನು. ಕೃಷ್ಣಜಾಂಬವಂತರಿಬ್ಬರಿಗೂ ಭಯಂಕರವಾದ ದ್ವಂದ್ವಯುದ್ಧವು ನಡೆಯಿತು. ಅವರಿಬ್ಬರೂ ಒಬ್ಬರನ್ನೊಬ್ಬರು ಜಯಿಸಬೇಕೆಂಬ ಹಟದಿಂದ ಸಮಾನಬಲವನ್ನು ತೋರಿಸಿ,ಮಾಂಸಕ್ಕಾಗಿ ಹೋರಾಡುವ ಗಿಡುಗಗಳಂತೆ, ಒಬ್ಬರಿಗೊಬ್ಬರು ವಿವಿಧಾಯುಧಗಳಿಂದಲೂ, ಮರಗಳಿಂದಲೂ, ಕಲ್ಲುಗಳಿಂದಲೂ, ತೋಳುಗಳಿಂದಲೂ, ಹೊಡೆದಾಡುತಿದ್ದರು. ಕೊನೆಗೆ ಇಬ್ಬರೂ ವಜ್ರಮುಷ್ಟಿಗಳಿಂದ ಹೊಡೆದಾಡುವುದಕ್ಕೆ ಆರಂಭಿಸಿದರು. ಇಪ್ಪತ್ತೆಂಟು ದಿನಗಳವರೆಗೆ ಹಗಲುರಾತ್ರಿಯೂ ವಿಚ್ಛಿತ್ತಿಯಿಲ್ಲದೆ ಯುದ್ಧವು ನಡೆಯಿತು. ಕೊನೆಕೊನೆಗೆ ಜಾಂಬವಂತನ ಬಲವು ತಗ್ಗುತ್ತಬಂದಿತು. ವಜ್ರಪಾತದಂತೆ

ದೃಢವಾದ ಶ್ರೀಕೃಷ್ಣನ ಮುಷ್ಟಿಪ್ರಹಾರದಿಂದ ಜಾಂಬವಂತನ ಮೈಕಟ್ಟುಗಳೆಲ್ಲವೂ ಸಡಿಲಿಹೋದುವು ಅವನ ಸತ್ವವು ಕುಂದಿತು. ಅವನ ದೇಹವೆಲ್ಲವೂ ಬೆವರಿತು ಆಗ ಜಾಂಬವಂತನು, ತನ್ನ ಅಪಜಯಕ್ಕಾಗಿ ತಾನೇ ಆಶ್ಚರ್ಯಪಡುತ್ತ, ಅಲ್ಲಿಗೆ ಬಂದವನು ಸಾಮಾನ್ಯಮನುಷ್ಯನಲ್ಲವೆಂದು ನಿಶ್ಚಯಿಸಿ, ಅವನನ್ನು ಕುರಿತು ಹೀಗೆಂದು ಹೇಳುವನು. “ಓ! ಮಹಾತ್ಮಾ! ನಿನ್ನನ್ನು ನೋಡಿದರ ಮನುಷ್ಯನಂತೆ ತೋರುವುದಿಲ್ಲ. ಸಮಸ್ತಭೂತಗಳಿಗೂ ನೀನೇ ಪ್ರಾಣಭೂತನೆಂದು ತೋರುವುದು. ಪ್ರಾಣಿಗಳ ಓಜಸ್ಸು, ಸಹಸ್ಸು, ಬಲ, ಇವೆಲ್ಲವೂ ನೀನೇ ಆಗಿರಬೇಕು. ಮತ್ತು ಜಗತ್ಕಾರಣನಾಗಿಯೂ, ಪುರಾಣಪುರುಷನಾಗಿಯೂ, ಜಗದ್ರೂಪದಿಂದ ಸರ್ವವ್ಯಾಪಿಯಾಗಿಯೂ, ಸರ್ವೇಶ್ವರನಾಗಿಯೂ, ಸರ್ವಾಂತರ್ಯಾಮಿಯಾಗಿಯೂ ಇರುವ ವಿಷ್ಣುವೇ ನೀನೆಂಬುದರಲ್ಲಿ ಸಂದೇಹವಿಲ್ಲದು. ಮಹತ್ತು ಮೊದಲಾಗಿ ಪೃಥಿವಿಯವರಗಿನ ತತ್ವಗಳೆಲ್ಲಕ್ಕೂ ನೀನೇ ಸೃಷ್ಟಿಕರ್ತನು. ನಿನ್ನಿಂದ ಸೃಷ್ಟಿಸಲ್ಪಡತಕ್ಕ ಆ ಮಹದಾದಿಗಳಲ್ಲಿ ಉಪಾದಾನಕಾರಣವಾಗಿರತಕ್ಕವನೂ ನೀನೇ! ಜಗತ್ತನ್ನು ತನ್ನ ವಶವಾಗಿ ಮಾಡಿಕೊಂಡಿರತಕ್ಕ ಬ್ರಹ್ಮಾದಿಗಳೂ ನಿನ್ನ ವಶರಾಗಿರುವರು. ಅವರೆಲ್ಲರನ್ನೂ ಕಟ್ಟಿಡತಕ್ಕ ಕಾಲಪುರುಷನೂ ನೀನೇ! ಕಾಲವು ನಿನ್ನ ಶರೀರವು ಜೀವಾತ್ಮರಿಗೆ ಅಂತರ್ಯಾಮಿಯಾಗಿ ನಿಯಾಮಕನಾದ ಪರಮಾತ್ಮನೂ ನೀನೇ ಓ! ದೇವಾ! ಯಾವನ ಕೋಪಸೂಚಕವಾದ ಕಟಾಕ್ಷಮಾತ್ರದಿಂದಲೇ ತಿಮಿತಿಮಿಂಗಿಲಾದಿಗಳಿಗೆಲ್ಲವೂ ಆಶ್ರಯವಾದ ಸಮುದ್ರವೂ ಕೂಡ ಭಯಪಟ್ಟು ದಾರಿಯನ್ನು ಕೊಟ್ಟಿತೋ, ಯಾವನು ತನ್ನ ಕೀರ್ತಿಮಹಿಮೆಯನ್ನು ತೋರಿಸುವಂತೆ ಆ ಸಮುದ್ರದಮೇಲೆ ಸೇತುವನ್ನು ಕಟ್ಟಿದನೋ, ಯಾವನು ಲಂಕೆಯನ್ನು ಧ್ವಂಸಮಾಡಿದನೋ, ಯಾವನ ತೀಕ್ಷ್ಣಬಾಣಗಳಿಂದ ರಾವಣನ ಹತ್ತು ತಲಗಳೂ ಕತ್ತರಿಸಿ ನೆಲಕ್ಕೆ ಬಿದ್ದುವೋ, ಆ ನನ್ನ ಪ್ರಭುವಾದ, ರಘುನಾಥನಾದ ಶ್ರೀರಾಮನೇ ನೀನಾಗಿರಬೇಕು. ಆತನುಹೊರತು ಈ ಲೋಕದಲ್ಲಿ ನನ್ನನ್ನು ಜಯಿಸತಕ್ಕವರು ಬೇರೊಬ್ಬರಿಲ್ಲ! ದೇವಾ! ನಿನ್ನ ನಿಜರೂಪವನ್ನು ತೋರಿಸಿ ನನಗೆ ಪ್ರಸನ್ನನಾಗಬೇಕು” ಎಂದು ಬದ್ಧಾಂಜಲಿಯಾಗಿ ಮುಂದೆ ನಿಂತಿದ್ದನು. ಹೀಗೆ ಜಾಂಬವಂತನು, ತನ್ನ

ನಿಜತತ್ವವನ್ನು ತಿಳಿದುಕೊಂಡು ಭಕ್ತಿಯಿಂದ ನಿಂತಿರುವುದನ್ನು ನೋಡಿ, ದೇವಕೀಪುತ್ರನಾದ ಕೃಷ್ಣನು ಅವನಲ್ಲಿ ಪ್ರಸನ್ನನಾಗಿ, ಮಂಗಳಕರವಾದ ತನ್ನ ಹಸ್ತಕಮಲದಿಂದ ಅವನ ಬೆನ್ನನ್ನು ಸವರಿ, ಮೇಘಗಂಭೀರಧ್ವನಿಯಿಂದ ಹೀಗೆಂದು ಹೇಳುವನು “ಓ ಭಲ್ಲೂಕರಾಜಾ! ಈ ಸ್ಯಮಂತಕಮಣಿಗಾಗಿಯೇ ನಾನು ಈ ನಿನ್ನ ಬಿಲಕ್ಕೆ ಬರಬೇಕಾಯಿತು. ಆದರ ಈ ಮಣಿಗಾಗಿ ನಾನು ಆಸೆಪಟ್ಟವನಲ್ಲ ಈ ರತ್ನದಮೂಲಕವಾಗಿ ನನ್ನ ಮೇಲೆ ಬಿದ್ದ ವೃಥಾಪವಾದವನ್ನು ತಪ್ಪಿಸಿಕೊಳ್ಳುವುದಕ್ಕಾಗಿ ನಾನು ಇಷ್ಟುಪ್ರಯತ್ನವನ್ನು ಮಾಡಬೇಕಾಯಿತು” ಎಂದನು. ಆಗ ಜಾಂಬವಂತನು ಪರಮಸಂತೋಷದಿಂದ ಆ ರತ್ನದೊಡನೆ ತನ್ನ ಮಗಳಾದ ಜಾಂಬವತಿಯೆಂಬ ಕನ್ಯೆಯನ್ನೂ ಕೂಡ ಆ ಕೃಷ್ಣನಿಗೆ ಕೊಟ್ಟನು. ಆಗ ಕೃಷ್ಣನು ಆ ಜಾಂಬವಂತನ ಸತ್ಕಾರಗಳಿಗೆ ಸಂತುಷ್ಟನಾಗಿ, ಪುನರಾವರ್ತಿಯಿಲ್ಲದ ಮುಕ್ತಿಯನ್ನೇ ಅವನಿಗೆ ಅನುಗ್ರಹಿಸಿದನು. ಓ ಪರೀಕ್ಷಿದ್ರಾಜಾ! ಇಷ್ಟರಲ್ಲಿ ಆ ಬಿಲದ್ವಾರದ ಹೊರಗಿದ್ದ ಜನಗಳಿಗೆ ಮನಸ್ಸಿನಲ್ಲಿ ಭಯವು ಹೆಚ್ಚುತ್ತ ಬಂದಿತು. ಅವರು ಹನ್ನೆರಡುದಿನಗಳವರೆಗೆ ಹೊರಗೆ ನಿಂತು ನಿರೀಕ್ಷಿಸುತಿದ್ದು, ಆಗಲೂ ಕೃಷ್ಣನು ಹಿಂತಿರುಗಿ ಬಾರದಿದ್ದುದನ್ನು ನೋಡಿ, ಆತನವಿಷಯದಲ್ಲಿ ನಿರಾಶರಾಗಿ ದುಃಖದಿಂದ ತಮ್ಮ ತಮ್ಮ ಪಟ್ಟಣಗಳಿಗೆ ಹಿಂತಿರುಗಿಬಿಟ್ಟರು. ಈ ವೃತ್ತಾಂತವು ಅಲ್ಲಲ್ಲಿ ಹರಡಿಕೊಂಡಿತು. ಬಿಲಕ್ಕೆ ಹೋದ ಕೃಷ್ಣನು ಹಿಂತಿರುಗಿ ಬಾರಲಿಲ್ಲವೆಂಬ ವೃತ್ತಾಂತವನ್ನು ಕೇಳಿ, ದೇವಕೀವಸುದೇವರೂ, ರುಕ್ಮಿಣೀದೇವಿಯೂ, ಕೃಷ್ಣನ ಇಷ್ಟಮಿತ್ರಬಂಧುಗಳೂ ಸಂಕಟದಿಂದ ಕುದಿಯುತಿದ್ದರು. ದ್ವಾರಕಾವಾಸಿಗಳೆಲ್ಲರೂ ಬಾಯಿಗೆ ಬಂದಹಾಗೆ ಸತ್ರಾಜಿತ್ತನ್ನು ನಿಂದಿಸುತಿದ್ದರು. ಕೊನೆಗೆ ಆ ಜನರೆಲ್ಲರೂ, ತಿರುಗಿ ತಮಗೆ ಕೃಷ್ಣನ ದರ್ಶನವು ಲಭಿಸುವುದಕ್ಕಾಗಿ, ತಮ್ಮ ನಗರದೇವತೆಯಾದ ಮಹಾಮಾಯೆಯೆಂಬ ದುರ್ಗಾದೇವಿಗೆ ಹರಕೆಯನ್ನು ಕಟ್ಟಿ ಉಪಾಸನೆಮಾಡುತಿದ್ದರು ಆ ದುರ್ಗಾದೇವಿಯು ಅವರಲ್ಲಿ ಪ್ರಸನ್ನಳಾಗಿ ಅನುಗ್ರಹಿಸುತ್ತಿರುವಲ್ಲಿ, ಕೃಷ್ಣನು ಸ್ಯಮಂತಕರತ್ನವನ್ನು ಕೈಯಲ್ಲಿಟ್ಟುಕೊಂಡು, ಜಾಂಬವತಿಯೊಡನೆ ಅವರಮುಂದೆ ಗೋಚರಿಸಿದನು.

ಆಗ ಆ ಜನಗಳ ಸಂತೋಷವನ್ನು ಕೇಳಬೇಕೆ? ಸತ್ತವನು ಎದ್ದು ಬಂದಂತೆ ಬಹುದಿನಗಳವರೆಗೆ ಕಾಣದಿದ್ದ ಕೃಷ್ಣನು, ಈಗ ಹೊಸಪತ್ನಿಯೊಡಗೂಡಿ, ಸ್ಯಮಂತಕರತ್ನವನ್ನು ಧರಿಸಿ ಬಂದುದನ್ನು ನೋಡಿ ಎಲ್ಲರೂ ಪರಮಸಂತೋಷದಿಂದ ಅವನನ್ನು ಆಲಿಂಗಿಸಿದರು. ಆಮೇಲೆ ಕೃಷ್ಣನು ರಾಜನಾದ. ಉಗ್ರಸೇನನ ಬಳಿಗೆ ಬಂದು,ಅಲ್ಲಿ ದೊಡ್ಡಸಭೆಯನ್ನು ಸೇರಿಸಿ,ಅಲ್ಲಿಗೆ ಸತ್ರಾಜಿತ್ತನ್ನು ಕರೆಸಿ, ಆ ರತ್ನವು ತನಗೆ ಸಿಕ್ಕಿದ ಪೂರ್ವೋತ್ತರಗಳೆಲ್ಲವನ್ನೂ ವಿವರವಾಗಿ ತಿಳಿಸಿ, ಅದನ್ನು ಅವನ ಕೈಗೆ ಕೊಟ್ಟುಬಿಟ್ಟನು ಕೃಷ್ಣನ ಮೇಲೆ ವ್ಯರ್ಥವಾಗಿ ಅಪವಾದವನ್ನು ಹೇಳುತಿದ್ದ ಸತ್ರಾಜಿತ್ತು, ನಾಚಿಕೆಯಿಂದ ತಲೆಯೆತ್ತಲಾರದೆ, ತನ್ನ ತಪ್ಪಿಗಾಗಿ ತಾನೇ ಪಶ್ಚಾತ್ತಾಪದಿಂದ ಕುದಿಯುತ್ತ ಮನೆಗೆ ಹೊರಟುಹೋದನು. ಅವನಿಗೆ ಯಾವಯಾವ ವಿಧದಿಂದಲೂ ಮನಸ್ಸಿಗೆ ಸಮಾಧಾನವಾಗಲಿಲ್ಲ ಅನವರತವೂ ತನ್ನಲ್ಲಿ ತಾನು ‘‘ಅಯ್ಯೋ! ಮೂಢನಾದ ನಾನು ಅನ್ಯಾಯವಾಗಿ ಕೃಷ್ಣನಮೇಲೆ ಇಲ್ಲದ ದೂರನ್ನು ಹೇಳಿದೆನಲ್ಲಾ ! ಸರ್ವಲೋಕಪ್ರಿಯನಾಗಿಯೂ, ಬಲಾಢ್ಯನಾಗಿಯೂ ಇರುವ ಆ ಕೃಷ್ಣನೊಡನೆ ವಿರೋಧವನ್ನು ಕಟ್ಟಿಕೊಂಡಮೇಲೆ,ನಾನು ಬದುಕುವುದು ಹೇಗೆ? ನಾನು ಮಾಡಿದ ತಪ್ಪನ್ನು ಹೇಗೆ ಕಳೆದುಕೊಳ್ಳಲಿ! ಯಾವ ರೀತಿಯಿಂದ ಆ ಕೃಷ್ಣನು ನನ್ನಲ್ಲಿ ಪ್ರಸನ್ನನಾಗುವಂತೆ ಮಾಡಿಕೊಳ್ಳಲಿ ! ಮುಂದೆ ಯಾವ ಉಪಾಯದಿಂದ ನನಗೆ ಕ್ಷೇಮವುಂಟಾಗುವುದು? ಜನಗಳು ನನ್ನನ್ನು ನಿಂದಿಸದಹಾಗೆ ಏನುಪಾಯವನ್ನು ಮಾಡಲಿ! ಮುಂದಾಲೋಚನೆಯಿಲ್ಲದೆ ಹಣದಾಸೆಯಿಂದ ಆ ಕೃಷ್ಣನಲ್ಲಿ ಮಹಾಪರಾಧವನ್ನು ಮಾಡಿದ ನನ್ನ ಜನ್ಮವನ್ನು ಸುಡಬೇಕಲ್ಲವೆ?” ಎಂದು ಯೋಚಿಸಿ, ಕೊನೆಗೆ ‘‘ಇದಕ್ಕೆ ಬೇರೆ ಉಪಾಯವೇನೂ ತೋರಲಿಲ್ಲ. ಈಗ ನಾನಾಗಿಯೇ ಆ ಕೃಷ್ಣನಬಳಿಗೆ ಹೋಗಿ, ನನ್ನ ಮಗಳಾದ ಸತ್ಯಭಾಮೆಯೆಂಬ ಕನ್ಯಾರತ್ನವನ್ನೂ ಈ ಸ್ಯಮಂತಕರತ್ನವನ್ನೂ ಅವನಿಗೇ ಒಪ್ಪಿಸಿಬಿಡುವೆನು. ಇದೇ ಕಾಲೋಚಿತವಾದ ಉಪಾಯವು! ಇದುಹೊರತು ನನ್ನ ಅಪರಾಧಕ್ಕೆ ಬೇರೆ ವಿಧವಾದ ಪ್ರತೀಕಾರವಿಲ್ಲ.” ಎಂದು ನಿಶ್ಚಯಸಿಕೊಂಡನು, ಒಡನೆಯೇ ತನ್ನ ಮಗಳನ್ನೂ, ಆ ಸ್ಯಮಂತಕರತ್ನವನ್ನೂ ತಾನಾಗಿಯೇ ಕೃಷ್ಣನಿಗೆ ತಂದೊ

ಪ್ಪಿಸಿ ನಮಸ್ಕರಿಸಿದನು. ಆಗ ಕೃಷ್ಣನು ಸತ್ರಾಜಿತ್ತಿನಲ್ಲಿ ಪ್ರಸನ್ನನಾಗಿ, ಶಾಸ್ತ್ರೋಕ್ತವಾಗಿ ಸತ್ಯಭಾಮೆಯನ್ನು ಮದುವೆಮಾಡಿಕೊಂಡನು. ಓ ಪರೀಕ್ಷಿದ್ರಾಜಾ! ರೂಪದಲ್ಲಿಯೂ, ಗುಣದಲ್ಲಿಯೂ, ಔದಾರ್ಯದಲ್ಲಿಯೂ, ಲೋಕೋತ್ತರಯೆನಿಸಿಕೊಂಡಆ ಸತ್ಯಭಾಮೆಯನ್ನು ಇದುವರೆಗೆ ಎಷ್ಟೋರಾಜಾಧಿರಾಜರೆಲ್ಲರೂ ಪ್ರಾರ್ಥಿಸಿದ್ದರು. ಅವರೊಬ್ಬರನ್ನೂ ಮೋಹಿಸದಿದ್ದ ಸತ್ಯಭಾಮೆಯು,ಸಾಕ್ಷಾದ್ಭಗವಂತನಾದ ಶ್ರೀಕೃಷ್ಣನ ಕೈಸೇರಿದಳು! ಶಾಸ್ತ್ರೋಕ್ತವಾಗಿ ವಿವಾಹವು ನಡೆದಮೇಲೆ,ಕೃಷ್ಣನು ಸತ್ರಾಜಿತ್ತನ್ನು ನೋಡಿ, “ಓ, ಸೌಮ್ಯಾ ! ಈ ಸ್ಯಮಂತಕರತ್ನವು ನಿನ್ನಲ್ಲಿಯೇ ಇರಲಿ ! ಇದನ್ನು ಸೂರ್ಯದೇವನು ಭಕ್ತನಾದ ನಿನಗೆ ಅನುಗ್ರಹಿಸಿಕೊಟ್ಟಿರುವನು ಆದುದರಿಂದ ಇದು ನಿನ್ನಲ್ಲಿರಬೇಕಾದುವೇ ಉಚಿತವು ! ಇದು ನಿನ್ನಲ್ಲಿದ್ದರೂ, ಇದರ ಪ್ರಭಾವದಿಂದ ಕ್ಷಾಮಡಾಮರಾದಿ ಬಾಧೆಗಳೆಲ್ಲವೂ ನೀಗುವುದರಿಂದ, ಆ ಫಲಕ್ಕೆ ನಾವೆಲ್ಲರೂ ಭಾಗಿಗಳಾಗುವೆವಲ್ಲವೆ?” ಎಂದು ಆ ರತ್ನವನ್ನು ಹಿಂತಿರುಗಿ ಕೊಟ್ಟುಬಿಟ್ಟನು. ಇದು ಐವತ್ತಾರನೆಯ ಅಧ್ಯಾಯವು.

---

ಶತಧನ್ವನೆಂಬವನು ಸತ್ರಾಜಿತ್ತನ್ನು ಕೊಂದು, ಅವನಲ್ಲಿದ್ದ ಸ್ಯಮಂತಕರತ್ನವನ್ನು ಅಪಹರಿಸಿಕೊಂಡು ಹೋಗಲು, ಕೃಷ್ಣನು ಶತಧನ್ವನನ್ನು ಕೊಂದುದು.

ಓ ಪರೀಕ್ಷಿದ್ರಾಜಾ ! ಇಷ್ಟರಲ್ಲಿ ಅತ್ತಲಾಗಿ ಪಾಂಡವರೂ, ಕುಂತಿಯೂ ಅರಗಿನ ಮನೆಯಲ್ಲಿ ದಗ್ಧರಾದರೆಂಬ ಸುದ್ದಿಯು, ಎಲ್ಲೆಲ್ಲಿಯೂ ಹರಡಿಕೊಂಡಿತು ಕ್ರಮಕ್ರಮವಾಗಿ ಈ ವೃತ್ತಾಂತವು ಕೃಷ್ಣನ ಕಿವಿಗೂ ಬಿದ್ದಿತು ಸರ್ವಜ್ಞನಾದ ಕೃಷ್ಣನು ನಿಜಸ್ಥಿತಿಯನ್ನು ಬಲ್ಲವನಾಗಿದ್ದರೂ, ರಹಸ್ಯವನ್ನು ಹೊರಪಡಿಸದೆ, ಮನುಷ್ಯಲೀಲೆಯನ್ನೇ ನಟಿಸುತ್ತಾ, ತನ್ನ ಬಂಧುಗಳಾದ ಪಾಂಡವರಿಗೂ, ಕುಂತಿಗೂ, ಕಾಲೋಚಿತವಾದ ಅಪರಸಂಸ್ಕಾರಗಳನ್ನು ನಡೆಸಬೇಕೆಂದು ಬಲರಾಮನನ್ನೂ ಸಂಗಡಕರೆದುಕೊಂಡು ಹಸ್ತಿನಾವತಿಗೆ ಬಂದನು. ಅಲ್ಲಿ ಪಾಂಡವರ ಮರಣಕ್ಕಾಗಿ ದುಃಖಿ

ಸುತಿದ್ದ ಭೀಷ್ಮ, ಕೃಪ, ವಿದುರ, ಗಾಂಧಾರಿ, ಮೊದಲಾದವರನ್ನು ಕಂಡು ಮಾತಾಡಿಸಿ, ಅವರೊಡನೆ ಸಮಾನದುಃಖವನ್ನು ನಟಿಸುತ್ತ, “ಅಯ್ಯೋ! ಪಾಂಡವರಿಗೆ ಎಂತಹ ದುರ್ಗತಿಯುಂಟಾಯಿತು” ಎಂದು ತಾನೂ ವಿಲಪಿಸುತಿದ್ದನು ಇದೇ ಸಮಯದಲ್ಲಿ, ಇತ್ತಲಾಗಿ ದ್ವಾರಕೆಯಲ್ಲಿ ಕೃಷ್ಣನಿಲ್ಲದ ಸಮಯವನ್ನು ನೋಡಿ, ಅಕ್ರೂರಕೃತವರ್ಮರೆಂಬ ಯಾದವರಿಬ್ಬರೂ * ಕ್ರೂರಬುದ್ಧಿಯುಳ್ಳ ಶತಧನ್ವನೆಂಬವನ ಬಳಿಗೆ ಬಂದು ಹೀಗೆಂದು ಉದ್ಬೋಧಿಸುವರು. “ಅಯ್ಯಾ! ಮಿತ್ರನೇ! ಸತ್ರಾಜಿತ್ತು ನಿನಗೆ ಮಾಡಿದ ಮೋಸವನ್ನು ನೋಡಿದೆಯಾ? ತನ್ನ ಮಗಳನ್ನು ನಿನಗೆ ಕೊಡುವುದಾಗಿ ಹೇಳಿ, ಕೃಷ್ಣನಿಗೆ ಕೊಟ್ಟುಬಿಟ್ಟಿರುವನು! ಆದುದರಿಂದ ಈಗಲೇ ನಾವು ಏನಾದರೂ ಉಪಾಯದಿಂದ, ಅವನಲ್ಲಿರುವ ಸ್ಯಮಂತಕರತ್ನವನ್ನಪಹರಿಸಿಬಿಡಬೇಕು” ಎಂದನು. ಅವರ ಪ್ರೇರಣೆಯಿಂದ ಶತಧನ್ವನ ಬುದ್ಧಿಯು ಕಪಲಿತ! ಆವನಿಗೆ ರತ್ನದಲ್ಲಿ ಆಸೆ ಹುಟ್ಟಿತು. ಅವನಿಗೆ ಕೊನೆಗಾಲವು ಸಮೀಪಿಸಿದುದರಿಂದಲೇ ಈ ವಿಪರೀತಬುದ್ಧಿಯು ಹುಟ್ಟಿತು ಆ ಪಾಪಾತ್ಮನು ಅಂತಃಪುರದಲ್ಲಿ, ಮೈಮರೆತು ಮಲಗಿದ್ದ ಸತ್ರಾಜಿತ್ತನ್ನು ಕಟುಕನು ಪಶುವನ್ನು ಕೊಲ್ಲುವಂತೆ ಕೊಂದು, ಆತನ ಅಂತಃಪುರ ಸ್ತ್ರೀಯರೆಲ್ಲರೂ ಕಣ್ಣಾರೆ ನೋಡುತ್ತ ದಿಕ್ಕುಕಾಣದೆ ಅಳುತ್ತಿರುವಾಗಲೇ, ಅವನಲ್ಲಿದ್ದ ರತ್ನವನ್ನೂ ಅಪಹರಿಸಿಕೊಂಡು ಹೋದನು. ಸತ್ಯಭಾಮೆಯು, ತನ್ನ ತಂದೆಯ ಮರಣವನ್ನು ನೋಡಿ ಸಂಕಟವನ್ನು ತಡೆಯಲಾರದೆ “ಹಾಜನಕಾ! ಜನಕಾ! ಕೆಟ್ಟೆನು! ಇನ್ನೇನುಗತಿ!” ಎಂದು ಗೋಳಿಡುತ್ತಿದ್ದಳು ಆಮೇಲೆ ಆ ಸತ್ಯಭಾಮೆಯು ತನ್ನ ತಂದೆಯ ಮೃತದೇಹವನ್ನು ಒಂದು ಎಣ್ಣೆಯಕೊಪ್ಪರಿಗೆಯಲ್ಲಿಡಿಸಿ, ಹಸ್ತಿನಾವತಿಗೆ ಹೋಗಿ, ನಡೆದ ಸಂಗತಿಯನ್ನು ತನ್ನ ಪತಿಯಾದ ಕೃಷ್ಣನಿಗೆ ತಿಳಿಸಿದಳು. ಸರ್ವಜ್ಞನಾದ ಕೃಷ್ಣನು ಮೊದಲೇ ಈ ವೃತ್ತಾಂತವನ್ನು ಬಲ್ಲವನಾಗಿದ್ದರೂ, ಮನುಷ್ಯಲೀಲೆಯನ್ನು ನಟಿಸುತ್ತ ಆ

---

* ಕ್ರೂರನಾದ ಶತಧನ್ವನನ್ನು ಕೊಲ್ಲುವುದಕ್ಕಾಗಿ ಕೃಷ್ಣನೇ ಆ ಯಾದವರಿಗೆ ಈ ಬುದ್ಧಿಯನ್ನು ಹುಟ್ಟಿಸಿರಬೇಕೆಂದೂಹ್ಯವು.

ಣ್ಣನಾದ ಬಲರಾಮನೊಡನೆ “ಆಹಾ! ನಮಗೆ ಎಂತಹ ಕಷ್ಟವು ಬಂದೊ ದಗಿತು!” ಎಂದು ಕಣ್ಣೀರುಬಿಟ್ಟು ರೋದಿಸಿದನು ಒಡನೆಯೇ ಕೃಷ್ಣನು ಬಲರಾಮನನ್ನೂ, ಸತ್ಯಭಾಮೆಯನ್ನೂ ತನ್ನಸಂಗಡಕರೆದು ಕೊಂಡು ದ್ವಾ ರಕೆಗೆ ಬಂದನು ಅಲ್ಲಿ ಶತಧನ್ವನನ್ನು ಕೊಂದು ಅವನಲ್ಲಿದ್ದ ಮಣಿಯನ್ನ ತರ ಬೇಕೆಂದು ಯತ್ನಿಸುತ್ತಿದ್ದಾಗ, ಶತಧನ್ವನು ಹೇಗೋ ಈ ಸಂಚನ್ನು ತಿಳಿದು, ಹಿಂದೆ ತನ್ನನ್ನು ಆ ದುಷ್ಕಾರ್ಯಕ್ಕೆ ಪ್ರೇರಿಸಿದ ತನ್ನ ಮಿತ್ರನಾದ ಕೃತವರ್ಮ ನಿಗೆ ಈ ವಿಚಾರವನ್ನು ತಿಳಿಸಿ, ತನ್ನ ಪ್ರಾಣರಕ್ಷಣೆಗಾಗಿ ಅವನ ಸಹಾಯವ ನ್ನು ಬೇಡಿದನು. ಆಗ ಕೃತವರ್ಮನು “ಓ ಮಿತ್ರನೆ! ಬೇರೆ ಯಾವ ಕೆಲಸವ ನ್ನಾದರೂ ಹೇಳು. ಲೋಕೇಶ್ವರರಾದ ಆ ರಾಮಕೃಷ್ಣರೊಡನೆ ಮಾತ್ರ ನಾನು ವೈರವನ್ನು ಬೆಳೆಸಲಾರೆನು ಅವರನ್ನು ವಿರೋಧಿಸಿಕೊಂಡಮೇಲೆ ಲೋಕದಲ್ಲಿ ಕ್ಷೇಮದಿಂದ ಬದುಕಿದವರುಂಟೆ? ಆಕೃಷ್ಣನು ನಡೆಸಿದ ಅದ್ಭು ತಕಾರ್ಯಗಳನ್ನು ನೀನು ಇದುವರೆಗೆ ಕಿವಿಯಿಂದಾದರೂ ಕೇಳಲಿಲ್ಲವೆ! ಆತನ ವಿರೋಧದಿಂದಲ್ಲವೇ ಮಹಾಬಲಾಢ್ಯನಾದ ಕಂಸನು, ತನ್ನ ಸಮಸ್ತರಾ ಜ್ಯಸಂಪತ್ತನ್ನೂ ಕಳೆದುಕೊಂಡು, ತನ್ನ ಸಮಸ್ತಪರಿವಾರಗಳೊಡನೆ ಹತ ನಾದನು. ಜರಾಸಂಧನು ಹದಿನೇಳಾವರ್ತಿ ಯುದ್ಧದಲ್ಲಿ ಅವನಿಂದ ಪರಾಜಿತ ನಾಗಿ ಓಡಿಹೋದನು. ಅವರ ಸ್ಥಿತಿಯೇ ಹೀಗಿರುವಾಗ, ಇನ್ನು ನಮ್ಮ ಪಾ ಡೇನು?” ಎಂದನು ಆಮೇಲೆ ಶತಧನ್ವನು ಅಕ್ರೂರನಬಳಿಗೆ ಹೋಗಿ “ಅ ಯ್ಯಾ! ನೀನಾದರೂ ಈಗ ನನಗೆ ಸಹಾಯಮಾಡಲಾರೆಯಾ?” ಎಂದು ಕೇಳಲು, ಅದಕ್ಕಾ ಅಕ್ರೂರನು “ಓ! ಶತಧನ್ವಾ! ಆ ಬಲರಾಮಕೃಷ್ಣರ ಶಕ್ತಿಯನ್ನು ತಿಳಿದವನೊಬ್ಬನೂ ಅವರಸಂಗಡ ವಿರೋಧಿಸಲಾರನು. ಆತ ನನ್ನು ಸಾಮಾನ್ಯನಾದವನೆಂದು ತಿಳಿಯಬೇಡ! ತನ್ನ ಲೀಲೆಯಿಂದ ಲೋಕದ ಸೃಷ್ಟಿಸ್ಥಿತಿಸಂಹಾರಗಳನ್ನು ನಡೆಸತಕ್ಕ ಸರ್ವೇಶ್ವರನೇ ಅವನು! ಆತನ ಮಾ ಯೆಯಿಂದ ಮೋಹಿತರಾದವರಿಗೆ ಇದು ತಿಳಿಯಲಾರದು. ಆ ಕೃಷ್ಣನು ಏಳುವರುಷದ ಬಾಲಕನಾಗಿರುವಾಗಲೇ ತನ್ನ ಒಂದೇ ಕೈಯಿಂದ ಗೋವ ರ್ಧನಪರ್ವತವನ್ನು ಕಿತ್ತು, ಸಣ್ಣಮಕ್ಕಳು ಹೂವಿನ ಚಂಡನ್ನು ಎತ್ತಿಹಿಡಿಯು ವಂತೆ ತನ್ನ ಕಿರುಬೆರಳಿನಿಂದ ಹಿಡಿದು ನಿಂತನು.” ಎಂದು ಹೇಳಿ ಹಾಗೆಯೇ

ಆ ಕೃಷ್ಣನಲ್ಲಿ ತನಗುಂಟಾದ ಭಕ್ತಿಯಿಂದ ಪರವಶನಾಗಿ “ಅದ್ಭುತಮಹಿಮೆಯುಳ್ಳ ಆಕೃಷ್ಣನಿಗೆ ನಮಸ್ಕಾರವು. ಅಪ್ರಮೇಯಸ್ವರೂಪನಾಗಿಯೂ, ಜಗತ್ಕಾರಣನಾಗಿಯೂ, ಸ್ವರೂಪಸ್ವಭಾವಗಳಲ್ಲಿ ವಿಕಾರವಿಲ್ಲದವನಾಗಿಯೂ, ಸರ್ವಾಂತರಾತ್ಮನಾಗಿಯೂ ಇರುವ ಆ ಭಗವಂತನಿಗೆ ನಮಸ್ಕಾರವು”. ಎಂದು ಧ್ಯಾನಿಸುತ್ತ ನಿಂತುಬಿಟ್ಟನು. ಹೀಗೆ ಅಕ್ರೂರನೂ ತಿರಸ್ಕರಿಸಿ ಬಿಟ್ಟಮೇಲೆ, ಶತಧನ್ವನು ಬೇರೆ ಉಪಾಯವೇನೂ ತೋರದೆ, ತನ್ನಲ್ಲಿದ್ದ ಸ್ಯಮಂತಕಮಣಿಯನ್ನು ಅಕ್ರೂರನ ಕೈಗೆ ಕೊಟ್ಟು, ನೂರುಯೋಜನಗಳ ದೂರದಿಂದಾಚೆಗಿರುವ ಯಾವುದೋ ಒಂದು ದೇಶಕ್ಕೆ ಹೋಗಿ ಅವಿತುಕೊಂಡನು. ಇಷ್ಟರಲ್ಲಿ ರಾಮಕೃಷ್ಣರಿಬ್ಬರೂ ಗರುಡಧ್ವಜವುಳ್ಳ ತಮ್ಮ ರಥವನ್ನೇರಿ, ವೇಗದಿಂದ ಕುದುರೆಗಳನ್ನು ನಡೆಸಿಕೊಂಡು, ಆ ಶತಧನ್ವನ ದಾರಿಯನ್ನು ಹಿಂಬಾಲಿಸಿಹೊರಟರು. ಕೃಷ್ಣನು ತನ್ನ ಮಾವನನ್ನು ಕೊಂದ ಆ ಶತಧನ್ವನನ್ನು ಹೇಗಾದರೂ ಸಂಹರಿಸಬೇಕೆಂದು ದೃಢಸಂಕಲ್ಪದಿಂದಿದ್ದನು. ಶತಧನ್ವನು ಬಹುದೂರದವರೆಗೆ ಪಲಾಯನಮಾಡಿ, ಕೊನೆಗೆ ಮಿಥಿಲಾಪಟ್ಟಣದ ಉಪವನಕ್ಕೆ ಬರುವಷ್ಟರಲ್ಲಿ, ಅವನ ಕುದುರೆಗಳು ನಡೆಯಲಾರದೆ ಅಲ್ಲಿ ಬಿದ್ದುಹೋದುವು. ಆಮೇಲೆ ಆ ಶತಧನ್ವನು ಕಾಲುನಡೆಯಿಂದಲೇ ಓಡಲಾರಂಭಿಸಿದನು. ಕೃಷ್ಣನೂ ಹಾಗೆಯೇ ಕಾಲುನಡೆಯಿಂದ ಅವನನ್ನು ಬೆನ್ನಟ್ಟಿ ಹೋಗಿ, ಸ್ವಲ್ಪಕಾಲದೊಳಗಾಗಿಯೇ ಅವನನ್ನು ಹಿಡಿದು, ತೀಕ್ಷ್ಣಧಾರೆಯುಳ್ಳ ತನ್ನ ಚಕ್ರದಿಂದ ಅವನ ತಲೆಯನ್ನು ಕತ್ತರಿಸಿ ಕೆಡಹಿದನು. ಕೃಷ್ಣನು ಸರ್ವಜ್ಞನಾಗಿದ್ದರೂ, ಬಲರಾಮನ ಮಾತಿಗಾಗಿ ಆ ಶತಧನ್ವನ ಬಟ್ಟೆಗಳೆಲ್ಲವನ್ನೂ ಶೋಧಿಸಿ ಸ್ವಲ್ಪಹೊತ್ತಿನವರೆಗೆ ಹುಡುಕುತಿದ್ದು, ಅಲ್ಲಿ ರತ್ನವನ್ನು ಕಾಣದೆ, ಬಲರಾಮನಬಳಿಗೆ ಬಂದು ಆಶಾಭಂಗವನ್ನು ನಟಿಸುತ್ತ “ಅಣ್ಣಾ! ನಾವು ನಿಷ್ಪ್ರಯೋಜನವಾಗಿ ಆ ಶತಧನ್ವನನ್ನು ಕೊಂದ ಹಾಗಾಯಿತು. ಅವನಲ್ಲಿ ಈಗ ರತ್ನವೇನೂ ಕಾಣಲಿಲ್ಲ! ಈಗ ಮಾಡುವುದೇನು?” ಎಂದನು. ಆಗ ಬಲರಾಮನು, “ಕೃಷ್ಣಾ! ಆ ಶತಧನ್ವನು ಬೇರೆ ಯಾವನಲ್ಲಿಯೋ ಆ ರತ್ನವನ್ನು ಬಚ್ಚಿಟ್ಟಿರಬೇಕು. ಆದುದರಿಂದ ನೀನು ತಿರುಗಿ ದ್ವಾರಕಾಪುರಕ್ಕೆ ಹೋಗಿ, ಅಲ್ಲಿ ಚೆನ್ನಾಗಿ ಹುಡುಕಿನೋಡು! ನಾನು

ಈಗಲೇ ಮಿಥಿಲಾಪುರಿಗೆ ಹೋಗಿ, ಅಲ್ಲಿ ವಿದೇಹರಾಜನನ್ನು ನೋಡ ಬೇಕೆಂದಿರುವೆನು. ಇನ್ನು ನಾನು ಹೋಗುವೆನು.” ಎಂದು ನೆಟ್ಟಗೆ ಮಿಥಿಲಾ ಪುರಿಗೆ ಬಂದು ಬಿಟ್ಟನು. ಅಲ್ಲಿ ಮಿಥಿಲರಾಜನು ಬಲರಾಮನನ್ನು ಕಂಡೊಡನೆ ಅತ್ಯಾದರದಿಂದ ಸತ್ಕರಿಸಿ ಮನ್ನಿಸಿದನು. ಬಲರಾಮನು ಅಲ್ಲಿಯೇ ಕೆಲವು ವರುಷಗಳವರೆಗೆ ವಾಸಮಾಡುತಿದ್ದನು. ಈ ಕಾಲದಲ್ಲಿಯೇ ಧೃತ ರಾಷ್ಟ್ರನ ಮಗನಾದ ದುರ್ಯೋಧನನು ಬಲರಾಮನಲ್ಲಿ ಗದಾಯುದ್ಧವನ್ನು ಕ್ರಮವಾಗಿ ಕಲಿತನು. ಇಷ್ಟರಲ್ಲಿ ಇತ್ತಲಾಗಿ ಕೃಷ್ಣನು ದ್ವಾರಕೆಗೆಬಂದು, ತಾನು ಶತಧನ್ವನನ್ನು ಕೊಂದುಬಂದ ವೃತ್ತಾಂತವನ್ನೂ, ಅಲ್ಲಿ ತನಗೆ ಸ್ಯಮಂತಕರತ್ನವು ಸಿಕ್ಕದೆ ಹೋದುದನ್ನೂ ಸತ್ಯಭಾಮೆಗೆ ತಿಳಿಸಿದನು. ಮತ್ತು ಅಲ್ಲಿ ತಾನೇ ಮುಂದಾಗಿ ನಿಂತು ಶತಧನ್ವನಿಗೆ, ಅವನ ಬಂಧುಗಳಿಂದ ಅಪರಕ್ರಿಯೆಗಳನ್ನು ಕ್ರಮವಾಗಿ ಮಾಡಿಸಿದನು. ಶತಧನ್ವನು ಕೃಷ್ಣ ನಿಂದ ಹತನಾದ ಸಂಗತಿಯು, ಅಕ್ರೂರಕೃತವರ್ಮರಿಗೂ ತಿಳಿಯಿತು. ಶತಧನ್ವನನ್ನು ಆ ಕಾರ್ಯಕ್ಕೆ ಪ್ರೇರಿಸಿದವರು ಅವರೇ ಆದುದರಿಂದ, ಕೃಷ್ಣ ನಿಗೆ ಆ ಸಂಗತಿಯು ತಿಳಿದುಬಂದರೆ, ತಮ್ಮನ್ನೇನುಮಾಡುವನೋ ಎಂಬ ಭಯದಿಂದ, ಅವರಿಬ್ಬರೂ ಆಕ್ಷಣವೇ ದ್ವಾರಕೆಯನ್ನು ಬಿಟ್ಟು, ಎಲ್ಲಿಯೋ ತಲೆತಪ್ಪಿಸಿಕೊಂಡು ಓಡಿಹೋದರು. ಅಕ್ರೂರನು ದ್ವಾರಕೆಯನ್ನು ಬಿಟ್ಟು ಹೊರಟುಹೋದಕೂಡಲೆ, ಅಲ್ಲಿನ ಜನರಿಗೆ ಆಕಾಶದಲ್ಲಿಯೂ, ಭೂಮಿಯಲ್ಲಿಯೂ ಅವರವರ ಶರೀರಗಳಲ್ಲಿಯೂ, ನಾನಾವಿಧವಾಗಿ ಮಹೋತ್ಪಾತಗಳು ಕಂಡು ಬಂದುವು. “ಓ ಪರೀಕ್ಷಿದ್ರಾಜಾ! ಅಕ್ರೂ ರನು ಬಿಟ್ಟು ಹೋದುದರಿಂದ ಅಲ್ಲಿ ಉತ್ಪಾತಗಳುಂಟಾದುವೆಂದು ಕೆಲವರು ಆಡಿಕೊಳ್ಳುತಿದ್ದರು. ಇದು ಭ್ರಮೆಯೇಹೊರತು ವಾಸ್ತವವೆಂದು ತೋರ ಲಿಲ್ಲ. ತಮ್ಮ ನಿವಾಸಮಾತ್ರದಿಂದಲೇ ಸಮಸ್ತದೋಷಗಳನ್ನೂ ನೀಗಿಸ ತಕ್ಕ ಮಹರ್ಷಿಗಳಿಗೂ ಯಾವನು ಆಶ್ರಯಭೂತನಾಗಿರುವನೋ, ಅಂತಹ ಕೃಷ್ಣನೇ ಸಾಕ್ಷಾತ್ತಾಗಿ ವಾಸಮಾಡುತ್ತಿರುವಾಗ, ಅಲ್ಲಿ ಉತ್ಪಾತಗಳು ಕಾಣುವುದೆಂದರೇನು? ಇದಲ್ಲದೆ ಕೆಲವುವೃದ್ಧರು “ಹಿಂದೆ ಕಾಶಿಯಲ್ಲಿ ಬಹು ಕಾಲದವರೆಗೆ ಮಳೆಯಿಲ್ಲದೆ ಹೋಗಲು, ಕಾಶೀರಾಜನು ತನ್ನಲ್ಲಿಗೆ ಬಂದ

ಶ್ವಫಲ್ಕನೆಂಬವನಿಗೆ ಗಾಂಧಿನಿಯೆಂಬ ತನ್ನ ಮಗಳನ್ನು ಕೊಟ್ಟು ಮದಿವೆ ಮಾಡಿದಮೇಲೆ, ಅಲ್ಲಿ ಮಳೆಯಾಯಿತೆಂದು ಹೇಳುವರು ಆ ಶ್ವಫಲ್ಕನ ಮಗ ನಾದ ಅಕ್ರೂರನಲ್ಲಿಯೂ ಆ ವಿಧವಾದ ಮಹಿಮೆಯೇ ಇರಬೇಕೆಂ ದೂ, ಅವನಿದ್ದ ಕಡೆಯಲ್ಲಿ ಯಾವಾಗಲೂ ಸುವೃಷ್ಟಿಯಾಗುವುದೆಂದೂ,ಅಲ್ಲಿ ಅಪಮೃತ್ಯುಗಳೊಂದೂ ತಲೆದೋರಲಾರವೆಂದೂ ಹೇಳಿ ಕೊಳ್ಳುತ್ತಿದ್ದರು. ಈ ಮಾತು ಕರ್ಣಾಕರ್ಣಿಕೆಯಾಗಿ ಕೃಷ್ಣನ ಕಿವಿಗೂ ಬಿದ್ದಿತು ಕೃಷ್ಣನು ಸರ್ವಜ್ಞನಾದುದರಿಂದ, ಅಕ್ರೂರನಿದ್ದ ಕಡೆಯಲ್ಲಿ ಸುವೃಷ್ಟಿ ಮೊದ ಲಾದ ಶುಭಗಳೆಲ್ಲವೂ ಕಾಣುವುದು ಸ್ಯಮಂತಕಮಣಿಯ ಪ್ರಭಾವವಾಗಿರ ಬೇಕೇಹೊರತು, ಅಕ್ರೂರನ ಪ್ರಭಾವವಲ್ಲವೆಂಬುದನ್ನು ತಿಳಿದುಕೊಂಡು, ಮೇಲೆಮಾತ್ರ ಅಲ್ಲಿನ ಜನಗಳನ್ನು ಮೆಚ್ಚಿಸುವುದಕ್ಕಾಗಿ ಅವರ ಅಭಿಪ್ರಾಯ ವನ್ನೇ ಅನುಮೋದಿಸುತ್ತ, ದೂತರನ್ನು ಕಳುಹಿಸಿ ಅಕ್ರೂರನನ್ನು ಕರೆತರಿಸಿ ದನು. ಮತ್ತು ಅವನನ್ನು ಯಥೋಚಿತವಾಗಿ ಪೂಜಿಸಿ, ಪ್ರಿಯವಾಕ್ಯಗಳಿಂದ ಸಂತೋಷಪಡಿಸಿದಮೇಲೆ, ಮಂದಹಾಸಪೂರ್ವಕವಾಗಿ ಅವನನ್ನು ಕುರಿತು “ಶತಧನ್ವನು ನಿನ್ನಲ್ಲಿಟ್ಟುಹೋದ ರತ್ನವು ಈಗಲೂ ನಿನ್ನಲ್ಲಿರಬೇಕಲ್ಲವೆ? ಈ ಸಂಗತಿಯನ್ನು ನಾನು ಮೊದಲೇ ಬಲ್ಲೆನು? ಸತ್ರಾಜಿತ್ತಿಗೆ ಮಕ್ಕಳಿಲ್ಲದು ದರಿಂದ, ಅವನ ದೌಹಿತ್ರರೇ ಅವನಿಗೆ ಪಿಂಡತಿಲೋದಕಾದಿಗಳನ್ನು ಕೊಟ್ಟು ಪಿತೃಋಣವನ್ನು ತೀರಿಸಿರುವುದರಿಂದ. ಅವನ ಸ್ವತ್ತಿಗೆಲ್ಲಾ ಅವರೇ ಬಾಧ್ಯ ರೆಂಬುದನ್ನು ನೀನೂ ಬಲ್ಲೆಯಷ್ಟೆ! ಆದರೆ ಆ ರತ್ನವನ್ನು ಮಾತ್ರ ಇಟ್ಟುಕೊಳ್ಳುವುದಕ್ಕೆ ಅವರಿಗೆಸಾಧ್ಯವಲ್ಲ, ಕೊಟ್ಟರೂ ಅದನ್ನು ಅವರು.ಧರಿ ಸಲಾರರು. ಆದುದರಿಂದ ಮಹಾವ್ರತನಿಷ್ಠನಾದ ನಿನ್ನಲ್ಲಿಯೇ ಆ ರತ್ನ ವಿರಲಿ! ಆದರೆ ಒಂದು ಸಂಗತಿಯುಂಟು. ಈ ರತ್ನದ ವಿಷಯವಾಗಿ ಬಲರಾಮನು ನನ್ನಲ್ಲಿ ಬಹಳವಾಗಿ ಸಂದೇಹಿಸುತ್ತಿರುವನು. ಆದುದರಿಂದ ಆ ರತ್ನವು ನಿನ್ನಲ್ಲಿರುವುದೆಂಬುದನ್ನು ತಿಳಿಸುವುದಕ್ಕಾಗಿ, ನಮ್ಮ ಬಂಧುಗ ಳೆಲ್ಲರಿಗೂ ಅದನ್ನು ನೀನು ಒಂದಾವರ್ತಿ ತೋರಿಸಿ ಬಿಟ್ಟರೆ ಸಾಕು! ನನ್ನ ಮೇಲಿನ ಅಪವಾದವು ತಪ್ಪಿ, ಎಲ್ಲರಿಗೂ ನಂಬಿಕೆಯುಂಟಾಗುವುದು ನನ್ನ ಮನಸ್ಸಿಗೂ ನೆಮ್ಮದಿಯುಂಟಾಗುವುದು. ಅಕ್ರೂರಾ! ಆ ರತ್ನದ ಸಂಗತಿಯು

ಹಾಗಿರಲಿ ! ನಿನಗೆ ಕ್ಷೇಮವಷ್ಟೆ? ನಿನ್ನ ಯಜ್ಞಕಾರ್ಯಗಳೆಲ್ಲವೂ ಅವಿಚ್ಛಿನ್ನ ವಾಗಿ ನಡೆಯುತ್ತಿರುವುವಷ್ಟೆ ?" ಎಂದು ನಾನಾವಿಧಗಳಾದ ಪ್ರಿಯ ವಾಕ್ಯಗಳಿಂದ ಆ ಅಕ್ರೂರನನ್ನು ಪ್ರೋತ್ಸಾಹಿಸಿದಮೇಲೆ, ಅಕ್ರೂರನು ತನ್ನ ಬಟ್ಟೆಯಲ್ಲಿ ಬಚ್ಚಿಟ್ಟುಕೊಂಡಿದ್ದ ಸೂರ್ಯತೇಜಸ್ಸುಳ್ಳ ಆ ರತ್ನವನ್ನು ತೆಗೆದು ಕೃಷ್ಣನ ಕೈಗೆ ಕೊಟ್ಟನು ಕೃಷ್ಣನು ತನ್ನ ಬಂಧುಗಳೆಲ್ಲರಿಗೂ ಅದನ್ನು ತೋರಿಸಿ, ತನ್ನ ಮೇಲಿನ ಅಪವಾದವನ್ನು ತಪ್ಪಿಸಿಕೊಂಡು. ಆ ಮೇಲೆ ತಿರುಗಿ ಅದನ್ನು ಅಕ್ರೂರನ ಕೈಗೇ ಕೊಟ್ಟುಬಿಟ್ಟನು ಓ ಪರೀಕ್ಷಿ ದ್ರಾಜಾ ! ಸರ್ವೇಶ್ವರನಾದ ಆ ಭಗವಂತನ ಸ್ಯಮಂತಕಾಹರಣವೆಂಬ ಈ ವೃತ್ತಾಂತವು ಸಮಸ್ತಪಾಪನಿವಾರಕವಾದುದು. ಮಂಗಳಕರವಾದುದು. ಈ ಉಪಾಖ್ಯಾನವನ್ನು ಭಕ್ತಿಯಿಂದ ಕೇಳುವವರೂ, ಹೇಳುವವರೂ, ಮನಸ್ಸಿನಿಂದ ಧ್ಯಾನಿಸುವವರೂ, ಆ ಕೃಷ್ಣನಂತೆಯೇ ತಮ್ಮಮೇಲೆ ಬಿದ್ದ ವೃಥಾಪವಾದಗಳನ್ನು ತಪ್ಪಿಸಿಕೊಂಡು ಮನಶ್ಶಾಂತಿಯನ್ನು ಹೊಂದುವರು ಇದು ಐವತ್ತೇಳನೆಯ ಅಧ್ಯಾಯವು.

---

{ ಶ್ರೀಕೃಷ್ಣನು ಕಾಳಿಂದಿ. ಮಿತ್ರವಿಂದೆ, ಸತ್ಯೆಯೆಂಬ ಇವರನ್ನು ಮದುವೆಯಾದುದು. }

ಓ ಪರೀಕ್ಷಿದ್ರಾಜಾ ! ಆಮೇಲೆ ಶ್ರೀಕೃಷ್ಣನು, ಪಾಂಡವರು ಅರಗಿನ ಮನೆಯಲ್ಲಿ ದಗ್ಧರಾದಂತೆ ಜನರೆಲ್ಲರಿಗೂ ನಂಬಿಕೆ ಹುಟ್ಟಿಸಿ, ದ್ರುಪದನ ಪಟ್ಟಣಕ್ಕೆ ಬಂದು ಸೇರಿರುವರೆಂಬ ಸುದ್ದಿಯನ್ನು ಕೇಳಿ, ಸಾತ್ಯಕಿ ಮೊದಲಾದವರೊಡನೆ ಹೊರಟು, ಆ ಪಾಂಡವರನ್ನು ನೋಡಬೇಕೆಂದು ತಿರುಗಿ ಇಂದ್ರಪ್ರಸ್ಥಕ್ಕೆ ಬಂದನು. ಸರ್ವೇಶ್ವರನಾದ ಕೃಷ್ಣನು ಬಂದು ದನ್ನು ನೋಡಿ ಪಾಂಡವರೆಲ್ಲರೂ, ಹೋಗಿದ್ದ ಪ್ರಾಣವೇ ತಿರುಗಿ ಬಂದಂತೆ ಸಂತೋಷಗೊಂಡು,ಪ್ರತ್ಯುತ್ಥಾನಮಾಡಿ,ಅವನನ್ನು ಪ್ರೀತಿಯಿಂದಾಲಿಂಗಿಸಿ ಕೊಂಡರು. ಆ ಭಗವಂತನ ದೇಹಸ್ಪರ್ಶದಿಂದ ಪಾಪವಿಮುಕ್ತರಾಗಿ, ಮಂದಹಾಸವಿಶಿಷ್ಟವಾದ ಆ ಕೃಷ್ಣನ ಮುಖಕಮಲವನ್ನು ನೋಡುತ್ತ ಸಂತೋಷಸಾಗರದಲ್ಲಿ ಮುಳುಗಿದಂತಾದರು. ಆಗ ಕೃಷ್ಣನು ಯುಧಿಷ್ಠಿ

ರನಿಗೂ, ಭೀಮನಿಗೂ, ಪಾದಾಭಿವಂದನವನ್ನು ಮಾಡಿದನು ತನಗೆಸಮಾ ನಸ್ಕಂಧನಾದ ಅರ್ಜುನನ್ನು ಆಲಿಂಗಿಸಿಕೊಂಡನು. ತನಗೆ ನಮಸ್ಕಾರವೂ ಡಿದ ನಕುಲಸಹದೇವರಿಬ್ಬರನ್ನೂ ಶುಭಾಶೀರ್ವಾದಗಳಿಂದ ಮನ್ನಿಸಿ ದನು. ಪಂಚಪಾಂಡವರೂ ಆಗ ಕೃಷ್ಣನಿಗೆ ಉತ್ತಮಾಸನವನ್ನು ಕೊಟ್ಟು ಕುಳ್ಳಿರಿಸಿದರು. ಹೊಸಮದುಮಗಳಾದ ದ್ರೌಪದಿಯು, ಲಜ್ಜೆ ಯೊಡನೆ ಮುಂದೆ ಬಂದು, ಶ್ರೀ ಕೃಷ್ಣನ ಪಾದಗಳನ್ನು ಹಿಡಿದು ನಮಸ್ಕ ರಿಸಿದಳು. ಕೃಷ್ಣನೊಡನೆ ಬಂದಿದ್ದ ಸಾತ್ಯಕಿ ಮೊದಲಾದವರೂ ಕೂಡ, ಪಾಂಡವರಿಂದ ಯಥೋಚಿತವಾಗಿ ಸತ್ಕರಿಸಲ್ಪಟ್ಟು ಉಚಿತಾ ಸನದಲ್ಲಿ ಕುಳಿತಿದ್ದರು ಸ್ವಲ್ಪಹೊತ್ತಿನಮೇಲೆ ಕೃಷ್ಣನು, ತನ್ನ ಅತ್ತೆಯಾದ ಕುಂತಿಗೆ ನಮಸ್ಕರಿಸುವುದಕ್ಕಾಗಿ ಅವಳ ಬಳಿಗೆ ಹೋದನು ಕೃಷ್ಣನನ್ನು ಕಂಡೊಡನೆ ಕುಂತೀದೇವಿಯು, ಸಂತೋಷದಿಂದ ಕಣ್ಣುಗಳಲ್ಲಿ ಆನಂದ ಬಾಷ್ಪವನ್ನು ಸುರಿಸುತ್ತ, ಆತನನ್ನಾಲಂಗಿಸಿ, ವಸುದೇವನೇ ಮೊದಲಾದ ತನ್ನ ಬಂಧುಗಳ ಕ್ಷೇಮವನ್ನು ವಿಚಾರಿಸಿದಳು. ಕೃಷ್ಣನೂಕೂಡ ಆ ಕುಂತಿ ಯ ಮತ್ತು ಅವಳ ಸೊಸೆಯ ಕ್ಷೇಮವನ್ನು ವಿಚಾರಿಸಿದನು. ಹೀಗೆ ಕುಶಲ ಪ್ರಶ್ನೆಗಳಾಗುವಾಗ, ಕುಂತಿಯು ಕಣ್ಣುಗಳಲ್ಲಿ ಧಾರೆಧಾರೆಯಾಗಿ ನೀರು ಸುರಿಸುತ್ತ, ಸಮಸ್ತ ದುಃಖನಿವಾರಕನಾದ ಆ ಶ್ರೀ ಕೃಷ್ಣನನ್ನು ನೋಡಿ, ಹಿಂದೆ ತನಗುಂಟಾದ ಅನೇಕಕಷ್ಟಗಳನ್ನು ಸ್ಮರಿಸಿಕೊಂಡು, ಗದ್ಗದಸ್ವರ ದಿಂದ ಹೀಗೆಂದು ಹೇಳುವಳು “ಕೃಷ್ಣಾ! ನೀನು ಬಂಧುಪ್ರೇಮವನ್ನಿಟ್ಟು ಯಾವಾಗ ನಮ್ಮನ್ನು ಸ್ಮರಿಸುತ್ತಿರುವೆಯೋ, ಆಗಲೇ ನಮ್ಮ ಕಷ್ಟಗಳೆಲ್ಲ ವೂ ನೀಗಿದಂತಲ್ಲದೆ ಬೇರೆಯಲ್ಲ. ನೀನೊಬ್ಬನೇ ನಮಗೆ ದಿಕ್ಕು! ಹಿಂದೆ ನೀನು ನಮ್ಮ ಕಷ್ಟವನ್ನು ವಿಚಾರಿಸುವುದಕ್ಕಾಗಿ, ನಮ್ಮ ಜ್ಞಾತಿಯಾದ ಅಕ್ರೂರ ನನ್ನು ಕಳುಹಿಸಿದಾಗಲೇ ನಮ್ಮ ಸಂಕಟಗಳೆಲ್ಲವೂ ನೀಗಿದುವು ನಿನಗೆ ತನ್ನವರೆಂದೂ, ಇತರರೆಂದೂ ಭೇದಬುದ್ಧಿಯಿಲ್ಲದುದರಿಂದ, ಸರ್ವಸು ಹೃತ್ತೆನಿಸಿಕೊಂಡಿರುವೆ ಸಮಸ್ತಲೋಕಗಳಿಗೂ ಅಂತರಾತ್ಮನಾದ ನಿನಗೆ ಆ ವಿಧವಾದ ಭೇದಬುದ್ಧಿಯಿಲ್ಲದಿರುವುದೇನೂ ಆಶ್ಚರ್ಯವಲ್ಲ. ಹೀಗೆ ನೀನು ಸರ್ವಸಮನಾಗಿದ್ದರೂ, ನಿನ್ನನ್ನು ಮರೆಯದೆ ಯಾವಾಗಲೂ ಸ್ಮರಿ



೨೧೫೩. ಶ್ರೀಕೃಷ್ಣನು ರುಕ್ಮಿಣೀದೇವಿಯನ್ನು ರಥದಲ್ಲಿ ಕರೆದುಕೊಂಡು ಹೋಗುವುದು.

ಸತಕ್ಕವರ ಹೃದಯದಲ್ಲಿದ್ದು, ಅವರಿಗೆ ಬಂದ ಕಷ್ಟಗಳೆಲ್ಲವನ್ನೂ ಆಗಾಗಲೇ ನೀಗಿಸುತ್ತಿರುವೆ" ಎಂದಳು. ಆಗ ಸಮೀಪದಲ್ಲಿದ್ದ ಧರ್ಮರಾಜನು, ಕೃಷ್ಣನನ್ನು ಕುರಿತು, “ಓ ಲೋಕೇಶ್ವರಾ! ಪೂರ್ವಜನ್ಮದಲ್ಲಿ ನಾವು ಎಷ್ಟು ಪುಣ್ಯವನ್ನು ಮಾಡಿದ್ದೆವೋ ತಿಳಿಯೆವು. ಯೋಗೀಶ್ವರರಿಗೂ ಅಗೋಚರನಾದ ನೀನು,ಅಲ್ಪರಾದ ನಮ್ಮ ಕಣ್ಣಿಗೆ ಗೋಚರಿಸುತ್ತಿರುವೆಯಲ್ಲವೆ? ಇದಕ್ಕಿಂತಲೂ ಭಾಗ್ಯವೇನುಂಟು? ಕೃಷ್ಣಾ ! ಈ ಮಳೆಗಾಲವು ಮುಗಿಯುವವರೆಗೆ ನೀನು ಈ ಇಂದ್ರಪ್ರಸ್ಥದಲ್ಲಿಯೇ ಸುಖವಾಗಿದ್ದು, ಇಲ್ಲಿನ ಜನರೆಲ್ಲರಿಗೂ ನಿನ್ನ ದರ್ಶನಾನಂದವನ್ನು ಕರುಣಿಸಬೇಕು" ಎಂದು ಪ್ರಾರ್ಥಿಸಲು,ಕೃಷ್ಣನು ಕೆಲವುಕಾಲದವರೆಗೆ ಅಲ್ಲಿಯೇ ವಾಸಮಾಡುತ್ತಿದ್ದನು. ಹೀಗಿರುವಾಗ ಒಮ್ಮೆ ಅರ್ಜುನನು,ಅಕ್ಷಯಬಾಣವುಳ್ಳ ಬತ್ತಳಿಕೆಯನ್ನೂ,ಗಾಂಡೀವವೆಂಬ ತನ್ನ ಮಹಾಧನುಸ್ಸನ್ನೂ ತೆಗೆದುಕೊಂಡು, ವಾನರಚಿಹ್ನೆಯುಳ್ಳ ತನ್ನ ರಥದಲ್ಲಿ ಕೃಷ್ಣನನ್ನೂ ಕುಳ್ಳಿರಿಸಿಕೊಂಡು, ವನವಿಹಾರಕ್ಕಾಗಿ ಹೊರಟನು. ಅನೇಕಕ್ರೂರಮೃಗಗಳಿಂದ ಕೂಡಿದ ನಿರ್ಜನವಾದ ಒಂದಾನೊಂದು ಮಹಾರಣ್ಯವನ್ನು ಪ್ರವೇಶಿಸಿ, ಆಲ್ಲಿ, ಹುಲಿ, ಹಂದಿ, ಕಾಡೆಮ್ಮೆ, ಜಿಂಕೆ, ಎಂಟಡಿ (ಶರಭ), ಕಡವೆ, ಖಡ್ಗಮೃಗ, ಹುಲ್ಲೆ, ಮೊಲ, ಮುಳ್ಳುಹಂದಿ, ಮೊದಲಾದ ಅನೇಕಕ್ರೂರಮೃಗಗಳನ್ನು ಬಾಣಗಳಿಂದ ಕೊಂದು ಕೆಡಹುತ್ತಬಂದನು ಈನಡುವೆ ಪರ್ವದಿನಗಳು ಬಂದಾಗ, ಸೇವಕರು ಆ ಮೃಗಗಳಲ್ಲಿ ಶ್ರೇಷ್ಠವಾದುವುಗಳನ್ನು ಧರ್ಮರಾಜನಿಗೆ ತಂದೊಪ್ಪಿಸುತಿದ್ದರು. ಹೀಗೆ ಬೇಟೆಯಾಡುತ್ತಿರುವಾಗ, ಅರ್ಜುನನು,ಹಸಿವುಬಾಯಾರಿಕೆಗಳಿಂದಬಹಳವಾಗಿ ಬಳಲಿ ಯಮುನಾತೀರಕ್ಕೆ ಬಂದನು. ಅಲ್ಲಿ ಕೃಷ್ಣಾರ್ಜುನರಿಬ್ಬರೂ ಸ್ನಾನಾಚಮನಗಳನ್ನು ಮಾಡಿ, ಜಲಪಾನವನ್ನು ಮಾಡುತ್ತಿರುವಾಗ, ಮುಂದೆ ಸುಂದರಸ್ತ್ರೀಯೊಬ್ಬಳು ಸಂಚರಿಸುತ್ತಿರುವುದನ್ನು ಕಂಡರು. ಸರ್ವಾವಯವಸೌಂದರ್ಯವುಳ್ಳ ಆ ಕನ್ಯೆಯನ್ನು ಕಂಡೊಡನೆ,ಶ್ರೀಕೃಷ್ಣನು, ಅವಳು ಯಾರೆಂಬುದನ್ನು ವಿಚಾರಿಸಿ ಬರುವಂತೆ ಅರ್ಜುನನನ್ನು ಪ್ರೇರಿಸಲು, ಅರ್ಜುನನು ಅವಳ ಬಳಿಗೆ ಬಂದು, “ಓ ಕಲ್ಯಾಣಿ ! ನೀನು ಯಾರು! ಯಾರ ಮಗಳು! ಎಲ್ಲಿಂದ ಬಂದಿರುವೆ? ಯಾವ ಉದ್ದೇಶದಿಂದ ಇಲ್ಲಿ ಸಂಚರಿಸು

ತ್ತಿರುವೆ! ನಿನ್ನನ್ನು ನೋಡಿದರೆ ಅನುರೂಪನಾದ ಪತಿಯನ್ನು ಪಡೆಯಬೇಕೆಂಬ ಉದ್ದೇಶವು ನಿನ್ನ ಮನಸ್ಸಿನಲ್ಲಿರುವಂತಿದೆ. ಓ ಮಂಗಳಾಂಗಿ! ನಿನ್ನ ಪೂರ್ವೋತ್ತರವನ್ನು ತಿಳಿಸು" ಎಂದನು. ಅದಕ್ಕಾ ಕಾಳಿಂದಿಯು "ಓ ಸೌಮ್ಯಾ! ನಾನು ಸವಿತೃದೇವನ ಮಗಳು. ನಾನು ಪತಿಯನ್ನು ಕೋರಿಯೇ ಇಲ್ಲಿ ವರಪ್ರದನಾದ ವಿಷ್ಣುವನ್ನು ಕುರಿತು ತಪಸ್ಸು ಮಾಡುತ್ತಿರುವೆನು. ಆ ಶ್ರೀವಿಷ್ಣುವನ್ನು ಹೊರತು ಬೇರೆ ಯಾವ ಪುರುಷನನ್ನೂ ನಾನು ವರಿಸತಕ್ಕವಳಲ್ಲ. ಅನಾಥರಕ್ಷಕನಾದ ಆ ಭಗವಂತನೇ ನನ್ನಲ್ಲಿ ಪ್ರಸನ್ನನಾಗಲೆಂದು ಅನವರತವೂ ಹಂಬಲಿಸುತ್ತಿರುವೆನು. ನನಗೆ ಕಾಳಿಂದಿಯೆಂದು ಹೆಸರು ನನ್ನ ತಂದೆಯಾದ ಸವಿತೃದೇವನು, ಈ ಯಮುನಾಜಲದೊಳಗೆ ನನಗಾಗಿ ಒಂದು ದಿವ್ಯಭವನವನ್ನು ಕಟ್ಟಿಸಿಕೊಟ್ಟಿರುವನು ಭಗವಂತನ ಸಾಕ್ಷಾತ್ಕಾರವಾಗುವವರೆಗೆ ನಾನು ಇಲ್ಲಿಯೇ ಕಾಲವನ್ನು ಕಳೆಯಬೇಕಾಗಿರುವುದು" ಎಂದಳು ಅವಳು ಹೇಳಿದ ಸಂಗತಿಗಳೆಲ್ಲವನ್ನೂ ಅರ್ಜುನನು. ಕೃಷ್ಣನಿಗೆ ಯಥಾವತ್ತಾಗಿ ತಿಳಿಸಿದನು ಕೃಷ್ಣನು ಮೊದಲೇ ಇದೆಲ್ಲವನ್ನೂ ಬಲ್ಲವನಾಗಿದ್ದರೂ, ಅರ್ಜುನನ ಮಾತಿಗೆ ಸಂತೋಷವನ್ನು ನಟಿಸುತ್ತ, ಆ ಕನ್ಯೆಯನ್ನು ಕರೆತರಿಸಿ ರಥದಮೇಲೆ ಕುಳ್ಳಿರಿಸಿಕೊಂಡು ಧರ್ಮರಾಜನ ಪುರಕ್ಕೆ ಹಿಂತಿರುಗಿ ಬಂದನು. ಕೃಷ್ಣನು ಆ ಇಂದ್ರಪ್ರಸ್ಥದಲ್ಲಿರುವಾಗಲೇ ಪಾಂಡವರ ಪ್ರಾರ್ಥನೆಯಿಂದ,ವಿಶ್ವಕರ್ಮನಮೂಲಕವಾಗಿ ಅವರಿಗೆ ಅದ್ಭುತವಾಗಿಯೂ, ವಿಚಿತ್ರವಾಗಿಯೂ ಇರುವ ಒಂದು ಪಟ್ಟಣವನ್ನು ಕಲ್ಪಿಸಿಕೊಟ್ಟನು. ಅಗ್ನಿಗೆ ಖಾಂಡವವನವನ್ನು ಆಹಾರವಾಗಿ ಕೊಡಿಸುವನೆವದಲ್ಲಿ, ಅರ್ಜುನನಿಗೆ ತಾನೇ ಸಾರಥಿಯಾಗಿದ್ದನು. ಇದರಿಂದ ಸಂತುಷ್ಟನಾದ ಅಗ್ನಿಯು, ಅರ್ಜುನನಿಗೆ ಆಗ ಗಾಂಡೀವವೆಂಬ ಧನುಸ್ಸನ್ನೂ, ಶುಭ್ರವಾದ ನಾಲ್ಕು ಕುದುರೆಗಳನ್ನೂ, ಅಕ್ಷಯಬಾಣವುಳ್ಳ ಎರಡು ಬತ್ತಳಿಕೆಗಳನ್ನೂ, ಒಂದು ದಿವ್ಯರಥವನ್ನೂ, ಅಭೇದ್ಯಕವಚವನ್ನೂ ಅನುಗ್ರಹಿಸಿಕೊಟ್ಟನು. ಈ ಖಾಂಡವದಹನಕಾಲದಲ್ಲಿ, ಮಯನಿಗೆ ಅಗ್ನಿಯಿಂದುಂಟಾದ ಅಪಾಯವು ತಪ್ಪಿದುದರಿಂದ, ಅವನೂ ಅರ್ಜುನನಲ್ಲಿ ಪ್ರಸನ್ನನಾಗಿ, ತನ್ನ ಮಾಯೆಯಿಂದ ಆಶ್ಚರ್ಯಕರವಾದ ಒಂದು ಸಭೆಯನ್ನು ನಿರ್ಮಿಸಿಕೊಟ್ಟನು. ಓ ಪರೀಕ್ಷಿ

ದ್ರಾಜಾ! ಈ ಮಯನಿರ್ಮಿತವಾದ ಸಭೆಯಲ್ಲಿಯೇ ದುರ್ಯೋಧನನು, ನೀರೆಂದೂ, ನೆಲವೆಂದೂ ತಿಳಿಯದೆ, ಬುದ್ಧಿ ಭ್ರಮದಿಂದ ಮೋಸಹೋಗಿ ಅವಮಾನಪಟ್ಟನು. ಈ ಕಾರ್ಯಗಳೆಲ್ಲವೂ ಕೃಷ್ಣನು ಇಂದ್ರಪ್ರಸ್ಥದಲ್ಲಿದ್ದಾಗಲೇ ನಡೆದುವು. ವರ್ಷಾಕಾಲದ ಆ ನಾಲ್ಕುತಿಂಗಳುಗಳು ಕಳೆದಮೇಲೆ ಶ್ರೀಕೃಷ್ಣನು, ಧರ್ಮರಾಜನ ಮತ್ತು ಇತರಬಂಧುಮಿತ್ರರ ಅನುಜ್ಞೆಯನ್ನು ಪಡೆದು, ಸಾತ್ಯಕಿ ಮೊದಲಾದವರೊಡನೆ ಅಲ್ಲಿಂದ ಹಿಂತಿರುಗಿದನು. ದ್ವಾರಕಿಗೆ ಬಂದಮೇಲೆ, ಒಂದಾನೊಂದು ಶುಭಮಾಸದ ಶುಭನಕ್ಷತ್ರದಲ್ಲಿ ಗ್ರಹಬಲಸಂಪತ್ತಿಯಿಂದ ಕೂಡಿದ ಶುಭಮುಹೂರ್ತದಲ್ಲಿ, ಆ ದ್ವಾರಕಾವಾಸಿಗಳೆಲ್ಲರಿಗೂ ನೇತ್ರಾನಂದವುಂಟಾಗುವಂತೆ ಕಾಳಿಂದಿಯನ್ನು ವಿವಾಹ ಮಾಡಿಕೊಂಡನು.

ಓ ಪರೀಕ್ಷಿದ್ರಾಜಾ! ಇನ್ನೊಂದು ವೃತ್ತಾಂತವನ್ನು ತಿಳಿಸುವೆನು ಕೇಳು. ಅವಂತೀದೇಶದಲ್ಲಿ ವಿಂದಾನುವಿಂದರೆಂಬ ಇಬ್ಬರು ರಾಜರಿದ್ದರು. ಅವರು ದುರ್ಯೋಧನನಿಗೆ ವಶವರ್ತಿಗಳಾಗಿದ್ದರು ಇವರಿಗೆ ಮಿತ್ರವಿಂದೆಯೆಂಬ ತಂಗಿಯೊಬ್ಬಳಿದ್ದಳು. ಇವರ ತಾಯಿಗೆ ರಾಜಾಧಿದೇವಿಯೆಂದು ಹೆಸರು. ಆಕೆಯು ಕೃಷ್ಣನಿಗೆ ಅತ್ತೆಯಾಗಿದ್ದುದರಿಂದ, ತನ್ನ ಮಗಳಾದ ಮಿತ್ರವಿಂದೆಯನ್ನು ಕೃಷ್ಣನಿಗೇ ಕೊಡಬೇಕೆಂದಿದ್ದಳು. ಆ ಮಿತ್ರವಿಂದೆಗೂ ಕೃಷ್ಣನಲ್ಲಿಯೇ ವಿಶೇಷವಾದ ಅನುರಾಗವು ಹುಟ್ಟಿತು. ವಿಂದಾನುವಿಂದರಿಬ್ಬರೂ ದುರ್ಯೋಧನನ ಪಕ್ಷದವರಾದುದರಿಂದ, ತಮ್ಮ ತಂಗಿಗುಂಟಾದ ಆ ಅಭಿಪ್ರಾಯವನ್ನು ತಪ್ಪಿಸುವುದಕ್ಕೆ ಯತ್ನಿಸುತಿದ್ದರು. ಇಷ್ಟರಲ್ಲಿ ಕೃಷ್ಣನು. ಆ ರಾಜರೆಲ್ಲರೂ ಕಣ್ಣೆದಿರಿಗೆ ನೋಡುತ್ತಿರುವಾಗಲೇ, ಅವಳನ್ನು ಬಲಾತ್ಕಾರದಿಂದಪಹರಿಸಿಕೊಂಡು ಅವಳ ಕೋರಿಕೆಯಂತೆ ತಾನೇ ವಿವಾಹವಾದನು.

ಓ ಪರೀಕ್ಷಿದ್ರಾಜಾ! ಕೋಸಲದೇಶಕ್ಕೆ ನಗ್ನಜಿತ್ತೆಂಬ ರಾಜನೊಬ್ಬನಿದ್ದನು. ಆತನು ಬಹಳ ಧಾರ್ಮಿಕನು. ಅವನಿಗೆ ಪರಮಸುಂದರಿಯಾದ ಸತ್ಯೆಯೆಂಬೊಬ್ಬ ಕನ್ಯೆಯಿದ್ದಳು. ಅವಳಿಗೆ ವಿವಾಹಕಾಲವು ಸಮೀಪಿಸಿತು. ಅವಳ ವಿವಾಹಕ್ಕಾಗಿ ಒಂದು ವಿಚಿತ್ರವಾದ ಪದ್ಧತಿಯು ಏರ್ಪಟ್ಟಿದ್ದಿತು.

ಏನೆಂದರೆ, ಆ ರಾಜನಲ್ಲಿ ಮಹಾಮದದಿಂದ ಕೊಬ್ಬಿದ ಏಳು ವೃಷಭಗಳುಂಟು. ತೀಕ್ಷ್ಣವಾದ ಕೊಂಬುಗಳುಳ್ಳ ಆ ವೃಷಭಗಳನ್ನು ನಿಗ್ರಹಿಸುವುದು ಯಾರಿಂದಲೂ ಸಾಧ್ಯವಿಲ್ಲ. ಆ ವೃಷಭಗಳು ತಮಗಿದಿರಾಗಿ ನಿಲ್ಲತಕ್ಕ ವೀರರ ಗಂಧಮಾತ್ರವನ್ನೂ ಸಹಿಸದೆ, ಯಾರ ಕೈಗೂ ಅಡಗದೆ, ಬಹಳ ದುಷ್ಟಸ್ವಭಾವವುಳ್ಳವುಗಳಾಗಿದ್ದುವು. ಆ ಏಳುವೃಷಭಗಳನ್ನು ಯಾರು ಜಯಿಸುವರೋ, ಅಂತವರೇ ಆ ಸತ್ಯೆಯೆಂಬವಳನ್ನು ವರಿಸಬಹುದೆಂಬ ನಿಯಮವಿತ್ತು. ಇದಕ್ಕಾಗಿ ಎಷ್ಟೋ ರಾಜರು ಪ್ರಯತ್ನಿಸಿ, ವಿಫಲಪ್ರಯತ್ನರಾಗಿ ಹೊರಟುಹೋದರು. ಈಸಂಗತಿಯು ಕೃಷ್ಣನಿಗೆ ತಿಳಿಯಿತು. ಆಗ ಕೃಷ್ಣನು ದೊಡ್ಡಸೈನ್ಯವನ್ನು ತೆಗೆದುಕೊಂಡು ಕೋಸಲದೇಶಕ್ಕೆ ಹೋದನು ಕೃಷ್ಣನನ್ನು ಕಂಡೊಡನೆ, ಧಾರ್ಮಿಕನಾದ ಕೋಸಲರಾಜನು ಇದಿರೆದ್ದು ಬಂದು, ಆಸನಾದಿಗಳನ್ನು ಕೊಟ್ಟು ಅವನನ್ನು ಪೂಜಿಸಿದನು ಆಗ ಆ ರಾಜನ ಮಗಳೂ ಕೂಡ, ಕೃಷ್ಣನ ರೂಪವನ್ನು ನೋಡಿ, ತನ್ನ ಮನಸ್ಸಿಗೆ ಒಪ್ಪಿದ ವರನು ಆತನೇ ಎಂದು ನಿಶ್ಚಯಿಸಿ, ಅವನಲ್ಲಿ ಮೋಹವನ್ನು ತೋರಿಸಿದಳು. ಈ ಮೋಹದಿಂದ ಆಕೆಯು “ಈತನೇ ನನಗೆ ಪತಿಯಾಗಲಿ! ನಾನು ಪೂರ್ವಜನ್ಮದಲ್ಲಿ ಯಾವುದಾದರೂ ವ್ರತವನ್ನು ನಡೆಸಿದ್ದರೆ, ಅದರ ಫಲದಿಂದ ಸಾಕ್ಷಾಚ್ಛ್ರೀಪತಿಯಾದ ಈತನೇ ನನ್ನ ಮನಸ್ಸಿನ ಕೋರಿಕೆಯನ್ನು ಈಡೇರಿಸಲಿ” ಎಂದು ಧ್ಯಾನಿಸುತಿದ್ದಳು ಇಷ್ಟರಲ್ಲಿ ನಗ್ನಜಿತ್ತು ಕೃಷ್ಣನನ್ನು, ನೋಡಿ, “ಓ! ನಾರಾಯಣಾ! ಜಗತ್ಪತೇ! ನೈಜಾನಂದಪೂರ್ಣನಾದ ನಿನ್ನನ್ನು, ಅತ್ಯಲ್ಪನಾದ ನಾನು ಯಾವವಿಧದಿಂದ ಸಂತೋಷಪಡಿಸಬಲ್ಲೆನು! ಸಾಕ್ಷಾನ್ಮಹಾಲಕ್ಷ್ಮಿಯೂ, ಬ್ರಹ್ಮರುದ್ರರೂ, ಇಂದ್ರಾದಿಲೋಕಪಾಲಕರೂ, ಯಾವನ ಪಾದಧೂಳಿಯನ್ನು ಶಿರಸಾಧಾರಣಮಾಡುವರೋ, ಯಾವನು, ತಾನು ಮೊದಲು ವೇದದಮೂಲಕವಾಗಿ ನಿರ್ಣಯಿಸಿದ ಧರ್ಮಮರ್ಯಾದೆಯನ್ನು ಕಾಪಾಡುವುದಕ್ಕಾಗಿ, ಆಗಾಗ ಲೀಲಾರ್ಥವಾದ ಬೇರೆಬೇರೆ ಶರೀರಗಳನ್ನು ಪರಿಗ್ರಹಿಸುವನೋ, ಅಂತಹ ಭಗವಂತನನ್ನು, ಈಗ ನಾನು ಯಾವವಿಧವಾದ ಸೇವೆಯಿಂದ ಸಂತೋಷಪಡಿಸಬಲ್ಲೆನು” ಎಂದು ಹಿಂದುಮುಂದುತೋರದೆ ಚಿಂತಿಸುತ್ತಿದ್ದನು. ಆಗ ಸುಖಾ

ಸೀನನಾದ ಕೃಷ್ಣನು, ಮೇಘಘಂಭೀರಧ್ವನಿಯಿಂದ,ಮಂದಹಾಸಪೂರ್ವಕ ವಾಗಿ ಹೀಗೆಂದು ಹೇಳುವನು ‘‘ಓ ನರೇಂದ್ರಾ ! ಲೋಕದಲ್ಲಿ ಸ್ವಧರ್ಮ ದಲ್ಲಿರತಕ್ಕ ನಮ್ಮಂತಹ ಕ್ಷತ್ರಿಯರು ಪರರಲ್ಲಿ ಯಾಚಿಸುವುದು ಬಹಳ ನಿಂದ್ಯವಾಗಿದ್ದರೂ, ಈಗ ನಾನು ನಿನ್ನ ಬಂಧುತ್ವವನ್ನು ಕೋರಿ,ನಿನ್ನಕನ್ಯೆ ಯನ್ನು ಯಾಚಿಸುತ್ತಿರುವೆನು. ಆದರೆ ನೀನು, ಈ ನಿನ್ನ ಮಗಳ ವಿವಾಹ ಕ್ಕಾಗಿ ಏರ್ಪಡಿಸಿರುವ ಕನ್ಯಾಶುಲ್ಕವನ್ನುಮಾತ್ರ ನಾವು ಕೊಡತಕ್ಕವರಲ್ಲ” ಎಂದನು ಆದಕ್ಕಾ ರಾಜನು ‘‘ಓ ! ನಾಥಾ ! ಸಮಸ್ತಕಲ್ಯಾಣಗುಣ ಗಳಿಗೂ ನಿಧಿಯಾಗಿ, ಸಾಕ್ಷಾಲ್ಲಕ್ಷ್ಮಿದೇವಿಯನ್ನೇ ಎದೆಯಲ್ಲಿ ಧರಿಸಿರತಕ್ಕ ನಿನಗಿಂತಲೂ ನನ್ನ ಮಗಳಿಗೆ ಉತ್ತಮವರನು ಎಲ್ಲಿ ಸಿಕ್ಕುವನು ? ಹಾಗಿ ದ್ದರೂ, ನಾವು ಕ್ಷತ್ರಿಯರಾದುದರಿಂದ, ಮೊದಲು ಮಾಡಿದ ನಿರ್ಣಯಕ್ಕೆ ತಪ್ಪಿ ನಡೆಯಲಾರೆವು ಈ ನನ್ನ ಮಗಳಿಗೆ ತಕ್ಕ ವರನಾರೆಂಬುದನ್ನು ತಿಳಿ ಯುವುದಕ್ಕಾಗಿ ನಾನೊಂದು ನಿಯಮವನ್ನು ಮಾಡಿರುವೆನು ಅದರಿಂದ ಪುರು ಷರ ಶಕ್ತಿಯನ್ನು ಪರೀಕ್ಷಿಸಿದಮೇಲೆಯೇ ಈ ಕನ್ಯೆಯನ್ನು ವಿವಾಹಮಾಡಿ ಕೊಡಬೇಕಾಗಿರುವುದು. ಇದೋ ! ನನ್ನಲ್ಲಿ ಏಳು ವೃಷಭಗಳುಂಟು. ಇವುಗ ಳನ್ನು ನಿಗ್ರಹಿಸುವುದಕ್ಕೆ ಇದುವರೆಗೆ ಯಾವ ಕ್ಷತ್ರಿಯರೂ ಸಮರ್ಥರಾಗ ಲಿಲ್ಲ. ಅನೇಕರಾಜಕುಮಾರರು ಇದಕ್ಕಾಗಿ ಪ್ರಯತ್ನಪಟ್ಟು, ವಿಫಲ ಪ್ರಯತ್ನರಾಗಿ ಮೈಮುರಿದು ಹೊರಟು ಹೋದರು. ಈಗ ನೀನಾದರೂ ಇವುಗಳನ್ನು ನಿಗ್ರಹಿಸಿದಪಕ್ಷದಲ್ಲಿ. ನನ್ನ ಮಗಳಿಗೆ ವರನಾಗಬಹುದು ” ಎಂದನು ಇದನ್ನು ಕೇಳಿದೊಡನೆ ಕೃಷ್ಣನು, ನಡುಪಟ್ಟಿಯನ್ನು ಬಿಗಿ ದು, ತನ್ನ ಆಕಾರವನ್ನು ಏಳುವಿಧವಾಗಿ ಮಾಡಿಕೊಂಡು, ಲೀಲಾ ಮಾತ್ರದಲ್ಲಿಯೇ ಆ ಏಳುವೃಷಭಗಳ ಕೊಂಬುಗಳನ್ನು ಮುರಿದು, ಅವುಗಳ ಹೆಮ್ಮೆಯನ್ನಡಗಿಸಿ, ಸಣ್ಣಮಕ್ಕಳು ಮರದ ಬೊಂಬೆಗಳನ್ನು ಬಿಗಿದು ಕಟ್ಟು ವಂತೆ, ಅವುಗಳನ್ನು ಹಗ್ಗಗಳಿಂದ ಬಿಗಿದು ಎಳೆದಾಡಿದನು. ಆಗ ರಾಜನು ಕೃಷ್ಣನ ಮಹಿಮೆಗೆ ಆಶ್ಚರ್ಯಗೊಂಡು, ತನ್ನ ಮಗಳನ್ನು ಸಂತೋಷಪೂರ್ವಕ ವಾಗಿ ವಿವಾಹಮಾಡಿಕೊಟ್ಟನು. ಕೃಷ್ಣನೂಕೂಡ,ತನಗೆ ಅನುರೂಪಳಾದ ಕನ್ಯೆಯು ದೊರೆತುದಕ್ಕಾಗಿ ಸಂತೋಷದಿಂದ ಅವಳನ್ನು ಸ್ವೀಕರಿಸಿದನು.

ರಾಜಪತ್ನಿಯರೂ ತಮ್ಮ ಮಗಳಿಗೆ ಇಷ್ಟನಾದ ವರನು ಲಭಿಸಿದ ನೆಂದು ಪರಮಾನಂದಭರಿತರಾದರು. ಆ ಪಟ್ಟಣದಲ್ಲಿ ಎಲ್ಲೆಲ್ಲಿ ನೋಡಿ ದರೂ ಮಹೋತ್ಸವಗಳು ನಡೆಸಲ್ಪಟ್ಟುವು ಶಂಖ, ಭೇರಿ, ಆನಕ ಮೊದ ಲಾದ ವಾದ್ಯಗಳೂ, ಗಾನಗಳೂ, ಬ್ರಾಹ್ಮಣರ ಆಶೀರ್ವಾದಗಳೂ ನಾನಾ ಕಡೆಯಿಂದ ಹೊರಡುತಿದ್ದುವು. ಆ ಪಟ್ಟಣದಲ್ಲಿರುವ ಸ್ತ್ರೀಪುರುಷರೆಲ್ಲರೂ ವಸ್ತ್ರಾಭರಣಗಳಿಂದಲಂಕೃತರಾಗಿ, ಆ ವಿವಾಹಮಹೋತ್ಸವವನ್ನು ಕೊಂ ಡಾಡಿದರು. ಆಗ ನಗ್ನಜಿತ್ತು, ಹತ್ತು ಸಾವಿರಧೇನುಗಳನ್ನೂ, ಸ್ವರ್ಣಾಲಂಕಾರ ಭೂಷಿತರಾದ ಮೂರುಸಾವಿರಮಂದಿ ಸುವಾಸಿನಿಯರನ್ನೂ, ಒಂಬತ್ತು ಸಾವಿರ ಆನೆಗಳನ್ನೂ, ಆ ಆನೆಗಳಿಗೆ ನೂರರಷ್ಟು ರಥಗಳನ್ನೂ, ಆ ರಥಗ ಳಿಗೆ ನೂರರಷ್ಟು ಕುದುರೆಗಳನ್ನೂ, ಆ ಕುದುರೆಗಳಿಗೆ ನೂರರಷ್ಟು ಪದಾತಿ ಗಳನ್ನೂ ಬಳುವಳಿಯಾಗಿ ಕೊಟ್ಟು ಈ ದೊಡ್ಡಸೈನ್ಯದೊಡನೆ, ಆ ದಂ ಪತಿಗಳನ್ನು ರಥದಲ್ಲಿ ಕುಳ್ಳಿರಿಸಿ, ಅವರ ಪಟ್ಟಣಕ್ಕೆ ಕಳುಹಿಸಿಕೊಟ್ಟನು. ಹೀಗೆ ಕೃಷ್ಣನು ರಾಜಕನ್ಯೆಯನ್ನು ಕರೆದುಕೊಂಡು ದ್ವಾರಕೆಗೆ ಹೊರಟು ಬರುತ್ತಿರುವಾಗ, ಹಿಂದೆ ಇದೇಕಾರ್ಯಕ್ಕಾಗಿ ಪ್ರಯತ್ನಿಸಿ ಆಶಾಭಂಗಹೊಂ ದಿದ ಕೆಲವುರಾಜರು ದಾರಿಯಲ್ಲಿ ಕೃಷ್ಣನನ್ನು ತಡೆದರು ಆಗ ಅರ್ಜುನನು ತನ್ನ ಗಾಂಡೀವಧನುಸ್ಸನ್ನು ತೆಗೆದುಕೊಂಡು, ಸಿಂಹವು ಕ್ಷುದ್ರಮೃಗಗ ಳನ್ನು ಹೇಗೋ ಹಾಗೆ ಅವರೆಲ್ಲರನ್ನೂ ಜಯಿಸಿ ಓಡಿಸಿಬಿಟ್ಟನು. ಕೃಷ್ಣನೂ ಸುಖವಾಗಿ ಆ ಬಳುವಳಿಗಳೊಡನೆ ದ್ವಾರಕೆಗೆ ಬಂದು ಅಲ್ಲಿ ಸತ್ಯಾದೇವಿ ಯೊಡನೆ ಸಂತೋಷದಿಂದ ರಮಿಸುತಿದ್ದನು.

ಓ ಪರೀಕ್ಷಿದ್ರಾಜಾ! ಅದರಿಂದಾಚೆಗೆ ಕೃಷ್ಣನು, ಭದ್ರೆಯೆಂಬ ಮ ತ್ತೊಬ್ಬಳನ್ನು ಮದುವೆಮಾಡಿಕೊಂಡನು ಈ ಭದ್ರೆಯೆಂಬವಳು ಈತನಿಗೆ ಅತ್ತೆಯಾದ ಶ್ರುತಕೀರ್ತಿಯೆಂಬವಳ ಮಗಳು. ಆಕೆಯ ತಂದೆ ಕೇಕಯ ರಾಜನು. ಅವಳಿಗೆ ಸಂತರ್ದನನೇ ಮೊದಲಾದ ಕೆಲವುಮಂದಿ ಸಹೋದರ ರಿದ್ದರು ಆ ಸಹೋದರರೆಲ್ಲರೂ ಮನಃಪೂರ್ವಕವಾಗಿಯೇ ಕೃಷ್ಣನಿಗೆ ಆಕೆಯನ್ನು ಕೊಟ್ಟು ವಿವಾಹಮಾಡಿದರು.

ಅದರಿಂದಾಚೆಗೆ ಕೃಷ್ಣನು,ಗರುಡನು ಅಮೃತವನ್ನು ಹೇಗೋಹಾಗೆ ಮದ್ರರಾಜನ ಮಗಳಾದ ಲಕ್ಷಣೆಯೆಂಬ ಕನ್ಯಾರತ್ನವನ್ನು ತನ್ನ ಸಾಹಸದಿಂದ ಕೈವಶಮಾಡಿಕೊಂಡು ಅವಳನ್ನೂ ಮದುವೆಯಾದನು ಓ ಪರೀಕ್ಷಿದ್ರಾಜಾ ! ಹೀಗೆಯೇ ಕೃಷ್ಣನಿಗೆ, ಇನ್ನೂ ಸಾವಿರಾರುಮಂದಿ ಪತ್ನಿಯರಾದರು. ಭೂದೇವಿಯ ಮಗನಾದ ನರಕಾಸುರನನ್ನು ಕೊಂದು, ಅವನ ಸೆರೆಯಲ್ಲಿದ್ದ ಅನೇಕಸುಂದರೀಮಣಿಯರನ್ನೂ ತಾನೇ ವಿವಾಹಮಾಡಿಕೊಂಡನು. ಇದು ಐವತ್ತೆಂಟನೆಯ ಅಧ್ಯಾಯವು.

---

ನರಕಾಸುರವಧೆ.

ಆಗ ಪರೀಕ್ಷಿದ್ರಾಜನು ಶುಕಮುನಿಯನ್ನು ಕುರಿತು. “ಓ ಮುನೀಂದ್ರಾ ! ಕೃಷ್ಣನು ನರಕಾಸುರನನ್ನು ಕೊಂದ ಕಾರಣವೇನು? ಆ ನರಕಾಸುರನು ಯಾವಾಗ, ಯಾವ ಕಾರಣಕ್ಕಾಗಿ ಸ್ತ್ರೀಯರನ್ನು ಸೆರೆಯಲ್ಲಿರಿಸಿದ್ದನು? ಕೃಷ್ಣನು ಅಲ್ಲಿ ತೋರಿಸಿದ ಪರಾಕ್ರಮವೆಂತದು?” ಎಂದನು. ಅದಕ್ಕೆ ಶುಕಮುನಿಯು ‘ ರಾಜೇಂದ್ರಾ ! ಕೇಳು! ಆ ನರಕಾಸುರನ ಪರಾಕ್ರಮವು ಮಹಾದ್ಭುತವಾದುದು. ಒಮ್ಮೆ ಆತನು, ವರುಣನ ರಾಜಚಿಹ್ನವಾದ ಚಕ್ರವನ್ನೂ, ಅದಿತಿದೇವಿಯ ಕಿವಿಯೋಲೆಗಳನ್ನೂ ಬಲಾತ್ಕಾರದಿಂದ ಕಿತ್ತುತಂದನು. ಮೇರುಪರ್ವತದಲ್ಲಿದ್ದ ಮಣಿಪರ್ವತವೆಂಬ ಸ್ಥಾನವನ್ನು ಅಲ್ಲಿಂದ ಸಾಗಿಸಿಬಿಟ್ಟನು. ದೇವೇಂದ್ರನು ಆ ನರಕಾಸುರನ ದುಶ್ಚೇಷ್ಟೆಗಳನ್ನು ನೋಡಿ ಸಹಿಸಲಾರದೆ, ಕೃಷ್ಣನಿಗೆ ತಿಳಿಸಲು, ಕೃಷ್ಣನು *ತನ್ನ ಪತ್ನಿಯಾದ ಸತ್ಯಭಾಮೆಯನ್ನೂ ತನ್ನೊಡನೆ ಕರೆದುಕೊಂಡು, ಗರು

---

* ಇಲ್ಲಿ ಕೃಷ್ಣನು ಸತ್ಯಭಾಮೆಯನ್ನು ತನ್ನೊಡನೆ ಕರೆದುಕೊಂಡು ಹೋಗುವುದಕ್ಕೆ ಮೂರುಕಾರಣಗಳುಂಟು ಯುದ್ಧದರ್ಶನಕ್ಕಾಗಿ ಕುತೂಹಲಪಡುತಿದ್ದ ಆಕೆಯ ಮನಸ್ಸಂತೋಷಾರ್ಥವೆಂಬುದೊಂದು. ಅವಳು ಭೂದೇವಿಯ ಅಂಶಭೂತೆಯಾದುದರಿಂದ, ಅವಳ ಅನುಜ್ಞೆಯನ್ನು ಪಡೆದೇ ಭೂಪುತ್ರನಾದ ನರಕಾಸುರನನ್ನು ಕೊಲ್ಲಬೇಕೆಂಬುದೊಂದು. ಅವಳಿಗೆ ಪಾರಿಜಾತವನ್ನು ತರಿಸಿಕೊಡುವುದೊಂದು, ಈ ಮೂರು ಕಾರಣಗಳನ್ನು ಹೇಳುವರು. ನರಕಾಸುರನ ಪಟ್ಟಣಕ್ಕೆ ಅಭೇದ್ಯ

ಡಾರೂಢನಾಗಿ ಆ ನರಕಾಸುರನ ರಾಜಧಾನಿಯಾದ ಪ್ರಾಗ್ಜ್ಯೋತಿಷಪುರಕ್ಕೆ ಬಂದನು ಓ ಪರೀಕ್ಷಿದ್ರಾಜಾ ! ಆ ಪಟ್ಟಣದ ಸನ್ನಿವೇಶವಾದರೋ ಅದ್ಭುತವಾದುದು, ಗಿರಿದುರ್ಗ, ಜಲದುರ್ಗ, ಅಗ್ನಿದುರ್ಗ, ಶಸ್ತ್ರದುರ್ಗ, ವಾಯುದುರ್ಗಗಳೆಂಬ ಐದುಬಗೆಯ ದುರ್ಗಗಳಿಂದ ಆ ಪಟ್ಟಣವು ಎಂತವರಿಗೂ ಪ್ರವೇಶಿಸಲಸಾಧ್ಯವಾಗಿರುವುದು ಮತ್ತು* ಮುರಪಾಶಗಳೆಂಬ ಸಾವಿರಾರುಪಾಶಗಳು ಆ ಪಟ್ಟಣದ ಸುತ್ತಲೂ ಭಯಂಕರವಾಗಿ ಸುತ್ತಿಕೊಂಡಿರುವುವು. ಹೀಗೆ ಎಂತವರಿಗೂ ದುರ್ಭೇದ್ಯವಾದ ಆ ನರಕಾಸುರನ ಪಟ್ಟಣವನ್ನು ಪ್ರವೇಶಿಸುವಾಗ, ಕೃಷ್ಣನು ಮೊದಲು ಅದರ ಸುತ್ತಿನ ಗಿರಿದುರ್ಗಗಳನ್ನು ತನ್ನ ಗದೆಯಿಂದ ಭೇದಿಸಿದನು. ಅದರಿಂದಾಚೆಗೆ ಕ್ರಮವಾಗಿ ಆ ಪಟ್ಟಣದ ಶಸ್ತ್ರಾವರಣಗಳನ್ನು ತನ್ನ ಬಾಣಗಳಿಂದಲೂ, ಅಗ್ನ್ಯಾವರಣವನ್ನು ತನ್ನ ಚಕ್ರದಿಂದಲೂ. ಜಲಾವರಣವನ್ನೂ, ವಾತಾವರಣವನ್ನೂ, ಮುರಪಾಶಗಳನ್ನೂ ತನ್ನ ಕತ್ತಿಯಿಂದಲೂ ಭೇದಿಸಿದನು. ಆಮೇಲೆ ತನ್ನ ಮಹಾಗದೆಯಿಂದ ಆ ಪಟ್ಟಣದ ಸುತ್ತಿನ ಪ್ರಾಕಾರಗಳನ್ನು ಭೇದಿಸಿ ಮುಂದೆ ಹೋಗಿ,ತನ್ನ ಪಾಂಚಜನ್ಯವೆಂಬ ಶಂಖವನ್ನು ಧ್ವನಿಮಾಡಿದನು ಈ ಶಂಖಧ್ವನಿಯಿಂದ, ಅಲ್ಲಿನ ಬೇರೆಬೇರೆ ಯಂತ್ರದ ಕಟ್ಟುಗಳೆಲ್ಲವೂ ಸಡಿಲಿದುವು ಮುರನರಕಾದಿಗಳ ಹೃದಯವೂ ಭೇದಿಸುವಂತಾಯಿತು ಪ್ರಳಯಕಾಲದ ಸಿಡಿಲಿನಂತೆ ಭಯಂಕರವಾದ ಈ ಶಂಖಧ್ವನಿಯನ್ನು ಕೇಳಿದೊಡನೆ, ಆ ಪಟ್ಟಣದಲ್ಲಿ ಅದುವರೆಗೆ ನಿಶ್ಚಿಂತನಾಗಿ ಮಲಗಿದ್ದ ಐದುತಲೆಯುಳ್ಳ ಮುರಾಸುರನೆಂಬ ರಾಕ್ಷಸನು, ತಟ್ಟನೆ ಎಚ್ಚರಗೊಂಡು,ತಾನು ಮಲಗಿದ್ದ ಜಲಶಯ್ಯೆಯಿಂದ ಮೇಲೆದ್ದು ಬಂದನು. ಕಾಲಸೂರ್ಯನಂತೆಯೂ. ಕಾಲಾಗ್ನಿಯಂತೆಯೂ ದುಸ್ಸಹವಾದ ತೇಜಸ್ಸುಳ್ಳ ಆ ರಾಕ್ಷಸನು, ತನ್ನ ಐದುಮುಖಗಳಿಂದ ಮೂರುಲೋಕವನ್ನೂ ಒಂದೇ

---

ಗಳಾದ ಐದು ದುರ್ಗಗಳಿದ್ದುದರಿಂದ, ಅದನ್ನು ದಾಟುವುದಕ್ಕಾಗಿ ಗರುಡಾರೂಢನಾಗಿ ಹೋದನು.

* ಮುರಪಾಶಗಳೆಂದರೆ ಮುರಾಸುರನಿಂದ ನಿರ್ಮಿತಗಳಾದ ಪಾಶಗಳು. ಇವು ಸಮೀಪಕ್ಕೆ ಬಂದ ಶತ್ರುಗಳಮೇಲೆ ಬಲವಾಗಿ ಸುತ್ತಿಕೊಂಡು, ಅವರನ್ನು ಕೆಡಹಿಕೊಲ್ಲುತಿದ್ದುವು.

ತುತ್ತಾಗಿ ನುಂಗಿಬಿಡುವನೋ ಎಂಬಷ್ಟು ಭಯಂಕರರೂಪದಿಂದ, ಕೈಯಲ್ಲಿ ತ್ರಿಶೂಲವನ್ನು ಹಿಡಿದು, ಗರುಡನನ್ನು ಹಿಡಿಯುವುದಕ್ಕೆ ಹೋಗುವ ಹಾವಿನಂತೆ ಕೃಷ್ಣನನ್ನಿದಿರಿಸುವುದಕ್ಕಾಗಿ ವೇಗದಿಂದೋಡಿಬಂದನು ಆ ರಾಕ್ಷಸನು ಕೃಷ್ಣನನ್ನು ಸಮೀಪಿಸಿದೊಡನೆ, ತನ್ನ ಕೈಯಲ್ಲಿದ್ದ ಶೂಲವನ್ನು ಗರುಡನಮೇಲೆ ಪ್ರಯೋಗಿಸುತ್ತ, ತನ್ನ ಐದುಮುಖಗಳಿಂದಲೂ ಭಯಂಕರವಾದ ಸಿಂಹನಾದವನ್ನು ಮಾಡಿದನು. ಈ ಮಹಾಧ್ವನಿಯು ಭೂಮ್ಯಾಕಾಶಗಳನ್ನೂ, ದಿಕ್ಕುವಿದಿಕ್ಕುಗಳನ್ನೂ ವ್ಯಾಪಿಸಿ, ಬ್ರಹ್ಮಾಂಡಕಟಾಹವನ್ನೇ ಭೇಧಿಸುವಂತೆ ಕೇಳಿಸಿತು. ಇಷ್ಟರಲ್ಲಿ ಕೃಷ್ಣನು, ಗರುಡನಿಗಿದಿರಾಗಿ ಬರುತಿದ್ದ ಆ ತ್ರಿಶೂಲವನ್ನು, ನಡುದಾರಿಯಲ್ಲಿಯೇ ತನ್ನ ಬಾಣಗಳಿಂದ ಮೂರುತುಂಡಾಗಿ ಕತ್ತರಿಸಿಕೆಡಹಿದನು. ಬೇರೆ ಕೆಲವುಬಾಣಗಳನ್ನು ಮುರಾಸುರನ ಮುಖಗಳಿಗೆ ಗುರಿಯಿಟ್ಟು ಹೊಡೆದನು. ಮುರಾಸುರನೂ ಕೂಡ, ಕೋಪದಿಂದ ತನ್ನ ಮಹಾಗದೆಯನ್ನು ಕೃಷ್ಣನಮೇಲೆ ಬೀಸಲು, ಕೃಷ್ಣನು ಅರ್ಧದಾರಿಯಲ್ಲಿಯೇ ಆ ಗದೆಯನ್ನೂ ತುಂಡುತುಂಡಾಗಿ ಕತ್ತರಿಸಿಕೆಡಹಿದನು. ಹೀಗೆ ತನ್ನ ಆಯುಧಗಳೆಲ್ಲವೂ, ವಿಫಲವಾದುದನ್ನು ನೋಡಿ ಸಹಿಸಲಾರದೆ,ಮುರಾಸುರನು ಎರಡು ಕೈಗಳಿಂದಲೂ ವಜ್ರಮುಷ್ಟಿಯನ್ನು ಹಿಡಿದು ಕೃಷ್ಣನಿಗಿದಿರಾಗಿ ಹೊರಟನು. ಇಷ್ಟರಲ್ಲಿಯೇ ಕೃಷ್ಣನು ತನ್ನ ಚಕ್ರಾಯುಧದಿಂದ ಅವನ ತಲೆಗಳನ್ನು ಭೇದಿಸಿದನು. ಇದರಿಂದ ಮುರಾಸುರನು ಗತಪ್ರಾಣನಾಗಿ, ಇಂದ್ರನ ವಜ್ರಪ್ರಹಾರದಿಂದ ತಲೆಮುರಿದುಬಿದ್ದ ಪರ್ವತದಂತೆ, ತಾನು ಮೊದಲು ಮಲಗಿದ್ದ ನೀರಿನಲ್ಲಿಯೇ ಬಿದ್ದನು. ಈ ಮುರಾಸುರನಿಗೆ ಏಳುಮಂದಿ ಮಕ್ಕಳಿದ್ದರು. ಇವರಿಗೆ ಕ್ರಮವಾಗಿ. ತಾಮ್ರ, ಅಂತರಿಕ್ಷ, ಶ್ರವಣ, ವಿಭಾವಸು, ವಸು, ನಭಸ್ವಂತ, ಅರಣರೆಂದು ಹೆಸರು. ಈ ಏಳುಮಂದಿ ರಾಕ್ಷಸಕುಮಾರರೂ ತಮ್ಮ ತಂದೆಯ ಮರಣವನ್ನು ಕೇಳಿ ತಡೆಯಲಾರದ ಕೋಪಾವೇಶದಿಂದ, ಕೃಷ್ಣನ ಮೇಲೆ ಹೇಗಾದರೂ ಹಗೆತೀರಿಸಿಕೊಳ್ಳಬೇಕೆಂದು ನಿರ್ಧರಿಸಿ, ನರಕಾಸುರನ ಅನುಮತಿಯನ್ನು ಪಡೆದು, ಆಯುಧಧಾರಿಗಳಾಗಿ ಕೃಷ್ಣನಮೇಲೆ ಯುದ್ಧಕ್ಕೆ ಹೊರಟರು. ಇವರ ಸೈನ್ಯಗಳಿಗೆ ಪೀಠನೆಂಬವನು ಸೇನಾಪತಿ

ಯಾಗಿದ್ದನು ಇವರೆಲ್ಲರೂ ಒಟ್ಟಾಗಿ ಸೇರಿ ಬಂದು, ಕೃಷ್ಣನಮೇಲೆ, ಕತ್ತಿ, ಗದೆ, ಶಕ್ತಿ, ಶೂಲ, ಮೊದಲಾದ ಆಯುಧಗಳನ್ನೂ, ಇತರಬಾಣಗಳನ್ನೂ ಪರಂಪರೆಯಾಗಿ ವರ್ಷಿಸತೊಡಗಿದರು ಅಮೋಘಪರಾಕ್ರಮವುಳ್ಳ ಕೃಷ್ಣನು, ಈ ಆಯುಧಸಮೂಹಗಳೆಲ್ಲವನ್ನೂ ಕ್ಷಣಮಾತ್ರದಲ್ಲಿ ತನ್ನ ಬಾಣಗಳಿಂದ ಪುಡಿಪುಡಿಯಾಗಿ ಬೀಳುವಂತೆ ಕತ್ತರಿಸಿ ಕೆಡಹಿದನು. ಮತ್ತು ಬೇರೆ ಕೆಲವುಬಾಣಗಳನ್ನು ಪ್ರಯೋಗಿಸಿ, ಆ ರಾಕ್ಷಸವೀರರ, ಕೈ. ಕಾಲು, ತೊಡೆ, ತಲೆ.ಕವಚ, ಮುಂತಾದ ಅವಯವಗಳೆಲ್ಲವನ್ನೂ ಭೇದಿಸಿ,ಅವರನ್ನೂ ಯಮಪುರಿಗೆ ಕಳುಹಿಸಿದನು. ಹೀಗೆ ಕೃಷ್ಣನ ಬಾಣಗಳಿಂದಲೂ, ಅವನ ಚಕ್ರಾಯುಧದಿಂದಲೂ, ತನ್ನ ಕಡೆಯ ಸೇನಾಪತಿಗಳೆಲ್ಲರೂ ಹತರಾಗುತ್ತಿರುವುದನ್ನು ನೋಡಿ, ಭೂದೇವಿಯ ಮಗನಾದ ನರಕಾಸುರನು, ಸಮುದ್ರಸಂಭವಗಳಾದ ಅನೇಕ ಮದಗಜಗಳ ಸೈನ್ಯವನ್ನು ಸೇರಿಸಿಕೊಂಡು, ತಾನೇ ಯುದ್ಧಕ್ಕಾಗಿ ಹೊರಟುಬಂದನು. ಸೂರ್ಯಮಂಡಲಕ್ಕೆ ಉಪರಿಭಾಗದಲ್ಲಿ, ಮಿಂಚಿನೊಡಗೂಡಿದ ಮೇಘದಂತೆ, ಗರುಡನಮೇಲೆ ಸತ್ಯಭಾಮಾಸಮೇತನಾಗಿ ಕುಳಿತಿರುವ ಶ್ರೀಕೃಷ್ಣನನ್ನು ನೋಡಿ ಆ ನರಕಾಸುರನು,ಶತಘ್ನಿಯೆಂಬ ಒಂದು ದೊಡ್ಡ ಶಕ್ತ್ಯಾಯುಧವನ್ನು ತೆಗೆದು ಅವನಮೇಲೆ ಬೀಸಿದನು. ಇದೇಕಾಲದಲ್ಲಿ ಈ ನರಕಾಸುರನ ಕಡೆಯ ಯುದ್ಧಭಟರೂ ಕೂಡ, ತಮ್ಮ ತಮ್ಮ ಆಯುಧಗಳನ್ನು ಆ ಕೃಷ್ಣನಮೇಲೆ ಏಕಕಾಲದಲ್ಲಿ ಪ್ರಯೋಗಿಸಿದರು. ಆದರೇನು? ಆ ಆಯುಧಗಳು ತನ್ನಮೇಲೆ ಬೀಳುವುದಕ್ಕೆ ಮೊದಲೇ ಕೃಷ್ಣನು, ತನ್ನ ತೀಕ್ಷ್ಣಬಾಣಗಳಿಂದ ಮೊದಲು ಆ ರಾಕ್ಷಸಸೈನಿಕರ ತೋಳು, ತೊಡೆ, ತಲೆ, ಕಾಲು, ಮುಂತಾದ ಅವಯವಗಳೆಲ್ಲವನ್ನೂ ಭೇದಿಸಿ, ಆ ನರಕಾಸುರನು ತಂದಿದ್ದ ಆನೆಕುದುರೆಯ ಸೈನ್ಯಗಳೆಲ್ಲವನ್ನೂ ಕ್ಷಣಮಾತ್ರದಲ್ಲಿ ಧ್ವಂಸಮಾಡಿ, ಆಮೇಲೆ ಅವರು ಪ್ರಯೋಗಿಸಿದ್ದ ಶಸ್ತ್ರಾಸ್ತ್ರಗಳಲ್ಲಿ ಒಂದೊಂದನ್ನೂ ತನ್ನ ಮೂರುಮೂರು ಬಾಣಗಳಿಂದ ಕತ್ತರಿಸಿ ಕೆಡಹಿದನು. ಇಷ್ಟರಲ್ಲಿ ಗರುತ್ಮಂತನೂಕೂಡ, ಕೃಷ್ಣನು ತನ್ನಮೇಲೆ ಕುಳಿತಿದ್ದಹಾಗೆಯೇ, ನರಕಾಸುರನ ಸೈನ್ಯದಮೇಲೆ ಬಿದ್ದು, ತನ್ನ ರೆಕ್ಕೆಗಳಿಂದಲೂ, ಕೊಕ್ಕಿನಿಂದಲೂ, ಉಗುರುಗಳಿಂದಲೂ, ಅವನ ಗಜಸೈನ್ಯಗಳೆಲ್ಲ

ವನ್ನೂ ಬಡಿದು ಕೆಡಹುತ್ತ ಬಂದನು. ಇದನ್ನು ತಡೆಯಲಾರದೆ ಆ ಗಜ ಸೈನ್ಯಗಳೆಲ್ಲವೂ ಆರ್ತಧ್ವನಿಯಿಂದ ಕೂಗುತ್ತ, ಹಿಂತಿರುಗಿ ಪಟ್ಟಣದ ಕಡೆಗೆ ಓಡಿದುವು. ಇಷ್ಟಾದರೂ ನರಕಾಸುರನು ಧೈರ್ಯಗುಂದದೆ, ತಾನೊಬ್ಬನೇ ಕೃಷ್ಣನೊಡನೆ ಯುದ್ಧಕ್ಕೆ ನಿಂತನು. ಗರುಡನ ಪ್ರಹಾರದಿಂದ ತನ್ನ ಸೈನ್ಯ ವೆಲ್ಲವೂ ಪರಾಜಿತವಾಗಿ ಓಡಿ ಹೋದುದನ್ನು ನೋಡಿ, ನರಕಾಸುರನು ಸಹಿಸ ಲಾರದ ಕೋಪದಿಂದ ಮುಂದೆ ಬಂದು, ತನ್ನ ಭಯಂಕರವಾದ ಶಕ್ತ್ಯಾ ಯುಧವನ್ನು ಗರುಡನಮೇಲೆ ಬೀಸಿದನು. ಓ ಪರೀಕ್ಷಿದ್ರಾಜಾ! ಈ ಶಕ್ತ್ಯಾ ಯುಧವು ಹಿಂದೆ ಅನೇಕಾವರ್ತಿ ದೇವೇಂದ್ರನ ವಜ್ರಾಯುಧವನ್ನೇ ನಿಗ್ರಹಿ ಸಿದ್ದರೂ, ಅದು ಗರುತ್ಮಂತನ ಮೈಮೇಲೆ ಬಿದ್ದಾಗ, ಆನೆಯನ್ನು ಪುಷ್ಪ ಮಾಲೆಯಿಂದ ಹೊಡೆದಂತಾಯಿತೇಹೊರತು, ಆದರಿಂದ ಅವನು ಸ್ವಲ್ಪ ಮಾತ್ರವೂ ಕದಲಲಿಲ್ಲ, ಇದರಲ್ಲಿಯೂ ತನ್ನ ಪ್ರಯತ್ನವು ವಿಫಲವಾದು ದನ್ನು ನೋಡಿ ನರಕಾಸುರನು, ಅತ್ಯಾಕ್ರೋಶಗೊಂಡವನಾಗಿ, ಕೃಷ್ಣನನ್ನೇ ಮೊದಲು ತೀರಿಸಿಬಿಡಬೇಕೆಂಬ ಹಟದಿಂದ, ಶೂಲವನ್ನು ಕೈಗೆತ್ತಿಕೊಂಡನು. ಅದನ್ನು ಪ್ರಯೋಗಿಸುವಷ್ಟರಲ್ಲಿಯೇ ಕೃಷ್ಣನು ಆನೆಯಮೇಲೇರಿ ಬರುತಿದ್ದ ಆ ನರಕಾಸುರನ ತಲೆಯನ್ನು ತೀಕ್ಷ್ಣಧಾರೆಯುಳ್ಳ ತನ್ನ ಚಕ್ರಾ ಯುಧದಿಂದ ಕತ್ತರಿಸಿ ಕೆಳಕ್ಕೆ ಕೆಡಹಿದನು. ಕಿರೀಟಕುಂಡಲಗಳಿಂದಲಂ ಕೃತವಾದ ಆ ನರಕಾಸುರನ ತಿರಸ್ಸು ನೆಲದಮೇಲೆ ಬಿದ್ದು ಹೊರಳಾಡುತ್ತ ಅದ್ಭುತಕಾಂತಿಯಿಂದ ಜ್ವಲಿಸುತಿತ್ತು, ಆಕಾಶದಲ್ಲಿ ಇದನ್ನು ನೋಡುತಿದ್ದ ದೇವತೆಗಳೂ, ಋಷಿಗಳೂ, "ಭಲೆ, ಭಲೆ!" ಎಂದು ಕೊಂಡಾಡುತ್ತ, ಕೃಷ್ಣನ ಮೇಲೆ ಪುಷ್ಪವೃಷ್ಟಿಯನ್ನು ಕರೆದರು ನರಕಾಸುರನಬಂಧುಗಳೆಲ್ಲರೂ ಹಾಹಾ ಕಾರದಿಂದ ಕೂಗುತಿದ್ದರು. ಈ ನರಕಾಸುರನ ತಲೆಯು ಕೆಳಗೆ ಬಿದ್ದ ಕೂಡಲೆ, ಆತನ ತಾಯಿಯಾದ ಭೂದೇವಿಯು, ಪುತ್ರಶೋಕದಿಂದ ಕೃಷ್ಣನ ಬಳಿಗೆ ಬಂದು ಹಿಂದೆ ನರಕಾಸುರನು ಅದಿತಿದೇವಿಯ ಕಿವಿಯಿಂದ ಅಪಹರಿಸಿತಂ ದಿದ್ದ ರತ್ನಖಚಿತವಾದ ಕುಂಡಲಗಳನ್ನೂ, ವರುಣನ ಛತ್ರವನ್ನೂ, ಮೇರು ಪರ್ವತದ ಭಾಗವಾದ ಮಹಾಮಣಿಯೆಂಬ ಶಿಖರವನ್ನೂ, ವೈಜಯಂತಿಯೆಂಬ ಮಾಲಿಕೆಯನ್ನೂ ಆತನಿಗೊಪ್ಪಿಸಿ, ಭಕ್ತಿಯಿಂದ ಕೈಮುಗಿದು ಹೀಗೆಂದು

ಸ್ತುತಿಸುವಳು "ದೇವದೇವಾ, ನಿನಗೆ ನಮಸ್ಕಾರವು! ಓ ಶಂಖಚಕ್ರಗದಾ ಧರಾ! ನಿನಗೆ ವಂದನವು. ಭಕ್ತರ ಇಷ್ಟಾನುಸಾರವಾಗಿ ನಾನಾಮೂರ್ತಿ ಗಳನ್ನು ಧರಿಸತಕ್ಕ ಪರಮಾತ್ಮನಾದ ನಿನಗೆ ನಮಸ್ಕಾರವು. ಓ ಪದ್ಮ ನಾಭಾ! ಪದ್ಮಮಾಲಾಲಂಕೃತಾ! ಓ ಪುಂಡರೀಕಾಕ್ಷಾ! ಕಮಲದಂತೆ ಪಾದವುಳ್ಳ ಓ ಕೃಷ್ಣಾ! ನಿನಗೆ ನಮಸ್ಕಾರವು. ವಾಸುದೇವಾ! ಷಾಡ್ಗುಣ್ಯಪರಿಪೂರ್ಣಕನೂ, ಸರ್ವಾಂತರಾತ್ಮನೂ, ಜಗತ್ತಿಗೆಲ್ಲಾ ಆದಿಕಾ ರಣನೂ,ಮನ್ವಾದಿಪುರುಷರೂಪನೂ ಆದ ನಿನಗೆ ನಮಸ್ಕಾರವು! ನಿತ್ಯಾನಂದ ಪೂರ್ಣನಾದ ನಿನಗೆ ನಮಸ್ಕಾರವು! ದೇವಾ! ನೀನು ಉತ್ಪತ್ತಿಯಿಲ್ಲದವನು. ಈ ಸಮಸ್ತಜಗತ್ತಿಗೂ ಉತ್ಪತ್ತಿಕಾರಣನು ಪರಬ್ರಹ್ಮನು ಅನಂತಶಕ್ತಿ ಯುಳ್ಳವನು ಉಚ್ಚಾವಚಗಳಾದ ಸಮಸ್ತಭೂತಗಳಲ್ಲಿಯೂ ಅಂತ ರಾತ್ಮನು. ಆ ಜೀವಾತ್ಮಗಳೆಲ್ಲಕ್ಕಿಂತಲೂ ಬೇರೆಯಾದ ಪರಮಾತ್ಮನು. ಇಂತಹ ನಿನಗೆ ನಮಸ್ಕಾರವು! ಓ ವಿಭೂ! ನೀನೇ ಈ ಜಗತ್ತಿನ ಸೃಷ್ಟಿಕಾರ್ಯ ಕ್ಕಾಗಿ ಪೂರ್ಣವಾದ ರಜೋಗುಣವನ್ನೂ, ಸ್ಥಿತಿಕಾರ್ಯಕ್ಕಾಗಿ ಸತ್ವಗುಣ ವನ್ನೂ, ಸಂಹಾರಕಾರ್ಯಕ್ಕಾಗಿ ತಮೋಗುಣವನ್ನೂ ಸ್ವೀಕರಿಸಿ, ಬ್ರಹ್ಮ ವಿಷ್ಣುರುದ್ರರೂಪದಿಂದ ಆಯಾ ಕಾರ್ಯಗಳನ್ನು ನಡೆಸುತ್ತಿರುವೆ. ನೀನು ಸೃಷ್ಟಿಸಂಹಾರಕಾರ್ಯಗಳಿಗಾಗಿ ಬ್ರಹ್ಮರುದ್ರಾದಿಜೀವಗಳಲ್ಲಿ ಅನುಪ್ರ ವೇಶಮಾಡತಕ್ಕವನಾದರೂ,ಒಮ್ಮೊಮ್ಮೆ ರಕ್ಷಣಕಾರ್ಯದಲ್ಲಿಮಾತ್ರ, ಹಾಗೆ ಇತರಜೀವಗಳಲ್ಲಿ ಅನುಪ್ರವೇಶವಿಲ್ಲದಂತೆ ನಿನ್ನ ಪೂರ್ಣಾಂಶದಿಂದಲೇ ಅವತ ರಿಸಿ ಲೋಕವನ್ನುದ್ಧರಿಸುವೆ! ಪ್ರಕೃತಿ ಪುರುಷ ಕಾಲವೆಂಬಿವುಗಳೆಲ್ಲವೂ ನೀನೇ! ಮತ್ತು ಭೂಮಿಯಾದ ನಾನೂ, ಅಗ್ನಿ, ಜಲ, ವಾಯು, ಆಕಾಶ ವೆಂಬ ಇತರಭೂತಗಳೂ, ಶಬ್ದಾದಿತನ್ಮಾತ್ರಗಳೂ, ಇಂದ್ರಿಯಗಳೂ, ಆ ಇಂದ್ರಿಯಗಳಿಗೆ ಅಷ್ಠಾತೃಗಳಾದ ದಿಕ್ಕು, ವಾಯು, ಮೊದಲಾದ ದೇವತೆ ಗಳೂ, ಅಹಂಕಾರ ಮಹತ್ತತ್ವಗಳೂ, ಸಮಸ್ತಚರಾಚರಗಳೂ ನಿನ್ನ ಸ್ವ ರೂಪವೇ ಆಗಿರುವುದರಿಂದ, ನಿನ್ನನ್ನು ಬಿಟ್ಟು ಬೇರೆ ವಸ್ತುವಿಲ್ಲ. ನಿನಗೆ ಶರೀ ರಭೂತಗಳಾದ ಈವಸ್ತುಗಳನ್ನು ಸ್ವತಂತ್ರವೆಂದು ಭಾವಿಸುವುದು ಕೇವಲ ಭ್ರಮವು. ಮಣ್ಣಿನಿಂದ ಗಡಿಗೆಗಳು ಹೇಗೋ ಹಾಗೆ, ಇವೆಲ್ಲವೂ ನಿನ್ನಸ್ವ

ರೂಪದಿಂದಲೇ ಏರ್ಪಟ್ಟಿರುವುವು. ಓ ಭಗವಂತಾ ! ಇದೋ ! ನಿನ್ನಿಂದ ಸಂಹೃತನಾದ ನರಕಾಸುರನ ಮಗನು, ಭಯದಿಂದ ಬಂದು ನಿನ್ನ ಪಾದಾರವಿಂದಗಳಲ್ಲಿ ಮರೆಹೊಕ್ಕಿರುವನು. ಇವನನ್ನು ರಕ್ಷಿಸು! ಸರ್ವಪಾಪನಿವಾರಕವಾದ ನಿನ್ನ ಹಸ್ತಕಮಲವನ್ನು ಇವನ ಶಿರಸ್ಸಿನಲ್ಲಿಟ್ಟು ಅಭಯಪ್ರದಾನವನ್ನು ಮಾಡು!" ಎಂದು ಪ್ರಾರ್ಥಿಸಿದಳು. ಹೀಗೆ ಭೂದೇವಿಯು ಭಕ್ತಿವಿನಯಗಳಿಂದ ಸ್ತುತಿಸಿ ಪ್ರಾರ್ಥಿಸುತ್ತಿರಲು, ಕೃಷ್ಣನು ಅವಳ ಕೋರಿಕೆಯಂತೆಯೇ ನಡೆಸುವುದಾಗಿ ಅಭಯವನ್ನು ಕೊಟ್ಟು, ಅಲ್ಲಿಂದ ಸಕಲಸಂಪತ್ಸಮೃದ್ಧವಾದ ನರಕಾಸುರನ ಅರಮನೆಗೆ ಬಂದನು ಅಲ್ಲಿ ನರಕಾಸುರನು ಬಲಾತ್ಕಾರದಿಂದ ಅಪಹರಿಸಿತಂದು ಸೆರೆಯಲ್ಲಿಟ್ಟಿದ್ದ ಎಷ್ಟೋಮಂದಿ ರಾಜಕನ್ಯೆಯರನ್ನು ನೋಡಿದನು. ಅಂತಹ ರಾಜಕನ್ಯೆಯರು ಅಲ್ಲಿ ಅರುವತ್ತು ಸಾವಿರ ಮಂದಿಗಿಂತಲೂ ಹೆಚ್ಚಾಗಿಯೇ ಇದ್ದರು. ಕೃಷ್ಣನು ಅಲ್ಲಿಗೆ ಪ್ರವೇಶಿಸಿದೊಡನೆಯೇ, ಆ ರಾಜಕನ್ಯೆಯರೆಲ್ಲರೂ, ಅವನ! ದಿವ್ಯಾದ್ಭುತಸೌಂದರ್ಯಕ್ಕೆ ಮೋಹಗೊಂಡು, ಭಾಗ್ಯವಶದಿಂದ ತಮಗೆ ಅನುರೂಪನಾದ ಪತಿಯು ಲಭಿಸಿದನೆಂದು ಸಂತುಷ್ಟರಾಗಿ, ಮನಸ್ಸಿನಲ್ಲಿ ಅವನನ್ನೇ ತಮ್ಮ ಪತಿಯನ್ನಾಗಿ ಸಂಕಲ್ಪಿಸಿಕೊಂಡರು.ಅವರಲ್ಲಿ ಒಬ್ಬೊಬ್ಬರೂ"ನನಗೆ ಇವನು ಪತಿಯಾಗಲಿ! ನಾನೇ ಇವನನ್ನು ವರಿಸುವೆನು. ದೈವವು ನನ್ನ ಕೋರಿಕೆಯನ್ನೀಡೇರಿಸಲಿ!" ಎಂದು, ತದೇಕಧ್ಯಾನದಲ್ಲಿದ್ದರು ಆಗ ಕೃಷ್ಣನು, ಅವರೆಲ್ಲರಿಗೂಸ್ನಾನಮಾಡಿಸಿ, ವಸ್ತ್ರಾಭರಣಗಳಿಂದ ಅಲಂಕಾರಮಾಡಿಸಿ, ಪಲ್ಲಕ್ಕಿಗಳಮೇಲೆ ದ್ವಾರಕಾಪುರಿಗೆ ಕಳುಹಿಸಿದನು. ಅವರೊಡನೆ ಧನಸಮೃದ್ಧಗಳಾದ ಅನೇಕ ರಥಗಳನ್ನೂ, ಐರಾವತಕುಲದಲ್ಲಿ ಹುಟ್ಟಿದ ನಾಲ್ಕುಕೊಂಬುಗಳುಳ್ಳ ಅರುವತ್ತುನಾಲ್ಕು ಬಿಳೀಆನೆಗಳನ್ನೂ ಕಳುಹಿಸಿಕೊಟ್ಟನು.

## ಪಾರಿಜಾತಾಪಹರಣವು.

ಆಮೇಲೆ ಕೃಷ್ಣನು ಅಲ್ಲಿಂದ ಹೊರಟು, ಸ್ವರ್ಗದಲ್ಲಿ ದೇವೇಂದ್ರನ ಅರಮನೆಗೆ ಬಂದನು. ಹಿಂದೆ ನರಕಾಸುರನು ತಂದಿದ್ದ ಅದಿತಿದೇವಿಯ ಕುಂಡಲಗಳೆರಡನ್ನೂ ದೇವೇಂದ್ರನ ಕೈಗೆ ಕೊಟ್ಟನು. ಆಗ ದೇವೇಂದ್ರನೂ, ಅವನ ಪತ್ನಿಯಾದ ಶಚೀದೇವಿಯೂ, ಪರಮಸಂತೋಷದಿಂದ ಸತ್ಯಭಾಮಾಸ

ಮೇತನಾದ ಶ್ರೀ ಕೃಷ್ಣನನ್ನು ಅನೇಕವಿಧವಾಗಿ ಸತ್ಕರಿಸಿ ಪೂಜಿಸಿದರು. ಅಲ್ಲಿ ಕೃಷ್ಣನು ತನ್ನ ಪ್ರಿಯಪತ್ನಿಯಾದ ಸತ್ಯಭಾಮೆಯ ಪ್ರೇರಣೆಯಿಂದ ನಂದನವನದಲ್ಲಿದ್ದ ಪಾರಿಜಾತವೃಕ್ಷವನ್ನು ಕಿತ್ತು ಗರುಡನಮೇಲೇರಿಸಿ ಕೊಂಡು ಹಿಂತಿರುಗಿದನು. ಇದನ್ನು ನೋಡಿ ಸಹಿಸಲಾರದೆ ಇಂ ದ್ರಾದಿದೇವತೆಗಳೆಲ್ಲರೂ ಇದಿರಿಸಿ ನಿಲ್ಲಲು, ಅವರೆಲ್ಲರನ್ನೂ ಪರಾಭವಿಸಿದನು. ಆ ಪಾರಿಜಾತವೃಕ್ಷವನ್ನು ಸತ್ಯಭಾಮಾದೇವಿಯ ಗೃಹೋದ್ಯಾನದಲ್ಲಿ ನಡಿಸಿ ದನು. ನಂದನವನದಲ್ಲಿದ್ದ ಭ್ರಮರಗಳೆಲ್ಲವೂಕೂಡ, ಆ ವೃಕ್ಷದ ವಾಸನೆ ಗಾಗಿ ಅದನ್ನೇ ಹಿಂಬಾಲಿಸಿ ಬಂದುಬಿಟ್ಟುವು ಕೊನೆಗೆ ಪರಾಜಿತನಾದ ಇಂ ದ್ರನು,ಕೃಷ್ಣನಲ್ಲಿಯೇ ಶರಣಾಗತನಾಗಿ, ಅವನ ಪಾದಗಳನ್ನು ಹಿಡಿದು ನಮ ಸ್ಕರಿಸಿ, ದೇವತೆಗಳಿಗೆ ಸರ್ವಾಭೀಷ್ಟಪ್ರದವಾದ ಆ ಪಾರಿಜಾತವನ್ನು ಹಿಂತಿ ರುಗಿ ಕೊಡಬೇಕೆಂದು ದೈನ್ಯದಿಂದ ಯಾಚಿಸಿದಮೇಲೆ, ಕೃಷ್ಣನು ಅದನ್ನು ಇಂದ್ರನಿಗೇ ಹಿಂತಿರುಗಿಕೊಟ್ಟುಬಿಟ್ಟನು. ಇದರಿಂದ ಇಂದ್ರನು ಕೃತಾರ್ಥ ನಾಗಿ ಸಂತೋಷದಿಂದಿದ್ದನು. ಓ ಪರೀಕ್ಷಿದ್ರಾಜಾ ! ಆ ಇಂದ್ರಾ ದಿದೇವತೆಗಳ ಮೌಢ್ಯವನ್ನು ನೋಡಿದೆಯಾ ? ಅಲ್ಪವಾದ ಆ ಪಾರಿಜಾ ತವೃಕ್ಷಕ್ಕಾಗಿ, ಪರಮಪುರುಷಾರ್ಥಪ್ರದನಾದ ಕೃಷ್ಣನೊಡನೆ ವಿರೋಧವ ನ್ನು ಬೆಳೆಸಿದುದಲ್ಲದೆ, ಆ ಕೃಷ್ಣನಲ್ಲಿ ಶರಣಾಗತಿಯನ್ನುಮಾಡಿ, ಅವನು ಪ್ರಸನ್ನನಾಗಿರುವಾಗಲೂ, ಅವನಿಂದ ತಾವು ಪಡೆಯಬೇಕಾದ ಉತ್ತಮ ಪುರುಷಾರ್ಥವೇನೆಂಬುದನ್ನು ತಿಳಿಯದೆ, ಆ ಪಾರಿಜಾತವೃಕ್ಷವು ಸಿಕ್ಕಿದಮಾ ತ್ರಕ್ಕೆ ಸಂತುಷ್ಟರಾಗಿ ಹೊರಟುಹೋದರು. ಇದು ತಮೋಗುಣಜನ್ಯವಾದ ಅಜ್ಞಾನವಲ್ಲದೆ ಬೇರೇನು ? ಅದು ಹಾಗಿರಲಿ!

ಕೃಷ್ಣನು ನರಕಾಸುರನ ಗೃಹದಿಂದ ಹದಿನಾರುಸಾವಿರಮಂದಿ ರಾಜಕನ್ಯೆಯರನ್ನೂ ದ್ವಾರಕೆಗೆ ಕಳುಹಿಸಿದ್ದನಲ್ಲವೆ ? ಅವರೆಲ್ಲರಿಗೂ ತನ್ನ ಸಂಕಲ್ಪಶಕ್ತಿಯಿಂದ ಬೇರೆಬೇರೆ ಅರಮನೆಗಳನ್ನು ಮಾಡಿ, ಅವರನ್ನು !ಪ್ರತ್ಯೇ ಕವಾಗಿ ಇರಿಸಿದ್ದನು. ತಾನೂ ಅಷ್ಟೇ ಆಕೃತಿಗಳನ್ನು ತಾಳಿ, ಶುಭಮುಹೂ ರ್ತದಲ್ಲಿ ಅವರನ್ನು ವಿವಾಹಮಾಡಿಕೊಂಡು, ಆಯಾಮನೆಗಳಲ್ಲಿ ಅವರವ ರೊಡನೆ ವಿಹರಿಸುತಿದ್ದನು. ಹೀಗೆ ಏಕಕಾಲದಲ್ಲಿ ಅನೇಕರೂಪಗಳನ್ನು ತಾಳಿ,

ಆ ಸ್ತ್ರೀಯರೊಬ್ಬೊಬ್ಬರ ಗೃಹದಲ್ಲಿಯೂ ಯಾವಾಗಲೂ ನೆಲೆಗೊಂಡು, ಪ್ರಾಕೃತಜನದಂತೆ ಕುಟುಂಬಧರ್ಮವನ್ನಾಚರಿಸುತಿದ್ದರೂ, ಆ ಕೃಷ್ಣನು ತನ್ನ ಅಸಾಧಾರಣದಿವ್ಯ ಪ್ರಭಾವವನ್ನು ಬಿಡದೆ ತಾನು ನೈಜಾನಂದ ಪರಿಪೂರ್ಣನಾಗಿದ್ದರೂ, ಆ ಮನೆಗಳಲ್ಲಿರುವ ಈಡು ಜೋಡಿಲ್ಲದ ಭೋಗ ಸಾಮಗ್ರಿಗಳಿಂದ ಆನಂದಿಸುವಂತೆ ನಟಿಸುತಿದ್ದನು. ಓ ಪರೀಕ್ಷಿದ್ರಾಜಾ! ಹೀಗೆ ಆ ಕೃಷ್ಣನು, ಅನೇಕರೂಪಗಳಿಂದ ಆ ಸ್ತ್ರೀಯರೊಡನೆ ಕಲೆತು ಅವರನ್ನು ಯಾವಾಗಲೂ ಸಂತೋಷಗೊಳಿಸುತಿದ್ದುದು ಅವನ ಮಹಿಮೆಗೆ ಒಂದು ವಿಶೇಷವೆಂದು ತಿಳಿಯಬೇಡ! ಏಕೆಂದರೆ, ಆತನು ತನ್ನ ಭಕ್ತರಿಗೆ ಅವರವರ ಇಷ್ಟಾನುಸಾರವಾದ ರೂಪಗಳಿಂದ ಗೋಚರಿಸತಕ್ಕವನು. ಇದಲ್ಲದೆ, ಯೋಗೀಶ್ವರನಾದ ಆ ಕೃಷ್ಣನು ಸರ್ವಾಂತರಾತ್ಮನಾದುದರಿಂದ ಯಾವಾಗಲೂ, ಎಲ್ಲಾವಸ್ತುಗಳ ಒಳಗೂ, ಹೊರಗೂ ವ್ಯಾಪಿಸಿರತಕ್ಕವನು ಎಲ್ಲರಹೃದಯದಲ್ಲಿಯೂ ಸರ್ವದಾ ನೆಲೆಗೊಂಡಿರುವವನು.ಭಕ್ತಿಪರಿಪಾಕವುಳ್ಳವರಿಗೆ, ಒಳಗೂ, ಹೊರಗೂ ನಾನಾಕಡೆಗಳಲ್ಲಿಯೂ ನೂರಾರು ರೂಪಗಳಿಂದ ಆಗಾಗ ಗೋಚರಿಸತಕ್ಕವನ್ನು. ಹೀಗೆ ಸರ್ವವ್ಯಾಪಿಯಾದ ಆಭಗವಂತನ ಸಮಾಗಮವನ್ನು ಈಗ ಈ ಸ್ತ್ರೀಯರಿಗೆ ಹೊಸದೆಂದು ಹೇಳಬಹುದೆ?

ಹೀಗೆ ಬ್ರಹ್ಮಾದಿಗಳಿಗೂ ಅಗೋಚರನಾದ ಆ ಕೃಷ್ಣನೇ ತಮಗೆ ಕೈಹಿಡಿದ ಪತಿಯಾಗಿದ್ದು, ತಮ್ಮನ್ನು ಸಂತೋಷಪಡಿಸುತ್ತಿದ್ದಾಗ, ಆರಾಜಕನ್ಯೆಯರ ಭಾಗ್ಯವನ್ನೇನೆಂದು ಹೇಳಬಹುದು? ಆ ಸ್ತ್ರೀಯರೆಲ್ಲರೂ, ಸಾಕ್ಷಾಲ್ಲಕ್ಷ್ಮೀನಾಥನೇ ತಮಗೆ ನಾಥನಾದುದರಿಂದ ಪರಮಾನಂದಭರಿತರಾಗಿ, ಎಣೆಯಿಲ್ಲದ ಅನುರಾಗದಿಂದಲೂ, ನಗೆನೋಟಗಳಿಂದಲೂ, ದೇಹಸ್ಪರ್ಶದಿಂದಲೂ, ಪ್ರಿಯವಾಕ್ಯಗಳಿಂದಲೂ ಅವನನ್ನು ಸಂತೋಷಪಡಿಸುತಿದ್ದರು. ನೂರಾರುಮಂದಿ ಗೌಡಿಯರು ತಾವು ಹೇಳಿದ ಕೆಲಸವನ್ನು ಮಾಡುವುದಕ್ಕೆ ಕೈಕಟ್ಟಿನಿಂತಿದ್ದಾಗಲೂ,ಅವರುತಮ್ಮಕೈಯಿಂದತಾವೇ ಕೃಷ್ಣನಿಗೆ ದಾಸ್ಯವನ್ನುಮಾಡುತ್ತಿದ್ದರು, ಆಕೃಷ್ಣನನ್ನು ಕಂಡೊಡನೆ ಇದಿರೆದ್ದುಬಂದು ಕೈ

ಕೊಟ್ಟು ಕರೆತರುವುದು! ಸುಖಾಸನವನ್ನು ತಂದಿಡುವುದು ! ಅರ್ಘ್ಯಪಾ ದ್ಯಾದಿಗಳನ್ನು ತಂದೊಪ್ಪಿಸುವುದು!ತಾಂಬೂಲವನ್ನು ಮಡಿಸಿಕೊಡುವುದು! ಕಾಲೊತ್ತುವುದು, ಬೀಸುವುದು,ಹೂಗಂಧಗಳನ್ನು ತಂದು ಅವನ ದೇಹವನ್ನ ಲಂಕರಿಸುವುದು, ತಲೆಬಾಚುವುದು, ಹಾಸಿಗೆಹಾಸುವುದು, ಎಣ್ಣೆಯೊತ್ತಿ ಅ ಭ್ಯಂಗನವನ್ನು ಮಾಡಿಸುವುದು, ಉಪಹಾರಗಳನ್ನು ತಂದಿಡುವುದು, ಇವೇಮೊ ದಲಾದ ಉಪಚಾರಗಳನ್ನೆಲ್ಲಾ ತಾವಾಗಿಯೇ ನಡೆಸುತಿದ್ದರು. ಇಲ್ಲಿಗೆ ಐವ ತ್ತೊಂಭತ್ತನೆಯ ಅಧ್ಯಾಯವು.

---

## ರುಕ್ಮಿಣೀಕೃಷ್ಣರ ವಿನೋದಸಂಭಾಷಣೆಗಳು

ಓ ಪರೀಕ್ಷಿದ್ರಾಜಾ ! ಅದರಿಂದಾಚೆಗೆ ಒಮ್ಮೆ ರುಕ್ಮಿಣೀದೇವಿಯು, ಮಂಚದಮೇಲೆ ಸುಖವಾಗಿ ಕುಳಿತಿದ್ದ ತನ್ನ ಪತಿಯಾದ ಕೃಷ್ಣನನ್ನು ಬೀಸ ಣಿಗೆಯಿಂದ ಬೀಸುತ್ತ, ತನ್ನ ಸಖೀಜನರಿಂದಲೂ ಅವನಿಗೆ ಬೇಕುಬೇಕಾದ ಉಪಚಾರಗಳನ್ನು ಮಾಡಿಸುತಿದ್ದಳು. ಯಾವನು ತನ್ನ ಲೀಲಾರ್ಥವಾಗಿಯೇ ಈ ಸಮಸ್ತಜಗತ್ತಿನ ಸೃಷ್ಟಿಸ್ಥಿತಿಸಂಹಾರಗಳನ್ನು ನಡೆಸುತ್ತಿರುವನೋ, ಯಾವನು ಜನ್ಮಾದಿಗಳಿಲ್ಲದವನಾಗಿದ್ದರೂ, ಲೋಕದಲ್ಲಿ ಧರ್ಮಮರ್ಯಾದೆಯ ನ್ನು ರಕ್ಷಿಸುವುದಕ್ಕಾಗಿ, ಯದುಕುಲದಲ್ಲಿ ಕ್ಷತ್ರಿಯಕುಮಾರನಾಗಿ ಅವತರಿ ಸಿರುವನೋ, ಅಂತಹ ಸಾಕ್ಷಾತ್ಪರಮಪುರುಷನು, ಆ ರುಕ್ಮಿಣಿಯ ಉಪಚಾರ ಗಳನ್ನು ಸಂತೋಷದಿಂದ ಕೈಕೊಳ್ಳುತ್ತ, ಮಂಚದಮೇಲೆ ಕುಳಿತಿದ್ದನು. ಆ ಶಯನಗೃಹದ ಸೊಬಗನ್ನು ಕೇಳಬೇಕೆ?ವಿಚಿತ್ರವಾದ ಮೇಲುಕಟ್ಟುಗಳು! ಅದರ ಸುತ್ತಲೂ ಮುತ್ತಿನ ಜಾಲರಿಗಳು ! ಗೋಡೆಯಸುತ್ತಲೂ ರತ್ನದೀಪ ಗಳು ! ಅಲ್ಲಲ್ಲಿ ಭ್ರಮರಝುಂಕಾರವಿಶಿಷ್ಟವಾಗಿ ತೂಗಾಡುತ್ತಿರುವ ಮಲ್ಲಿ ಗೆಯ ಹಾರಗಳು ! ಬೆಳಗಾಗುತ್ತಿರುವಾಗ ಸಂಧ್ಯಾರಾಗದಿಂದ ಕೂಡಿ ದ ಚಂದ್ರಕಿರಣಗಳು ಗವಾಕ್ಷರಂಧ್ರಗಳಿಂದ ಹೊರಟುಬಂದು, ಆ ಮನೆಯ ಅಂಗಳಕ್ಕೆ ಅಪೂರ್ವಶೋಭೆಯನ್ನು ಬೀರುತ್ತಿರುವುವು! ಗೃಹೋದ್ಯಾ

ನದಲ್ಲಿರುವ ಪಾರಿಜಾತವೃಕ್ಷದ ಸುವಾಸನೆಯೊಡನೆ ಕಲೆತು, ಬೆಳಗಿನಗಾಳಿ ಯು ತಣ್ಣಗೆ ಬೀಸುತ್ತಿರುವುದು ಅಗರುಗಂಧವುಳ್ಳ ಧೂಪದ ಹೊಗೆಯು ಗವಾಕ್ಷರಂಧ್ರಗಳಿಂದ ಹೊರಟುಬರುತ್ತಿರುವುದು. ಇಂತಹ ದಿವ್ಯಭವನದಲ್ಲಿ, ಹಾಲಿನ ನೊರೆಯಂತೆ ಶುಭ್ರಮಯವಾದಮೇಲುಹೊದ್ದಿಕೆಯುಳ್ಳಮಂಚದ ಮೇಲೆ, ಕೃಷ್ಣನು ಸಂತೋಷದಿಂದ ಕುಳಿತಿದ್ದನು. ಆಗ ರುಕ್ಮಿಣೀದೇವಿಯು ಸಕಲಜಗದೀಶ್ವರನಾದ ಆ ತನ್ನ ಪತಿಯನ್ನು ಪಚರಿಸುವದಕ್ಕಾಗಿ, ತನ್ನಸಖಿ ಯ ಕೈಯಲ್ಲಿದ್ದ ರತ್ನದಂಡವುಳ್ಳ ಚಾಮರವನ್ನು ತಾನೇ ಕೈಗೆ ತೆಗೆದುಕೊಂ ಡು, ಕೃಷ್ಣನಿದೆ ಶ್ರಮಪರಿಹಾರವಾಗುವಂತೆ ಬೀಸತೊಡಗಿದಳು ಅವಳುಚಾ ಮರವನ್ನು ಹಿಡಿದು ಬೀಸುತ್ತಿರುವಾಗ,ಅವಳ ಕೈಬಳೆಮತ್ತು ಕಾಲಂದುಗೆಗಳ ಘುಲ್ಘುಲಧ್ವನಿ ! ಬೆರಳುಗಳಲ್ಲಿ ರತ್ನಖಚಿತಗಳಾದ ಉಂಗುರಗಳ ಕಾಂತಿ! ಸ್ತ ನಾಗ್ರದಲ್ಲಿ ಕುಂಕುಮದ ಬಣ್ಣದಿಂದ ಕೂಡಿ ತೂಗಾಡುತ್ತಿರುವ ಮುತ್ತಿನ ಸರಗಳು ! ನಿತಂಬಪ್ರದೇಶದಲ್ಲಿ ಝುಗಝುಗಿಸುತ್ತಿರುವ ರತ್ನದ ಡಾಬು! ಇವುಗಳಿಂದ ಅಪೂರ್ವಶೋಭೆಯನ್ನು ಬೀರುತ್ತಿದ್ದಳು ಓ ಪರೀಕ್ಷಿದ್ರಾಜಾ! ಆ ರುಕ್ಮಿಣಿಯು ಸಾಕ್ಷಾನ್ಮಹಾಲಕ್ಷ್ಮಿಯಲ್ಲದೆ ರಾಜಕುಲದವಳಲ್ಲ! ಆಭಗವಂ ತನು ಯಾವಯಾವ ಅವತಾರದಲ್ಲಿ ಯಾವಯಾವ ರೂಪಗಳನ್ನು ಕೈಕೊ ಳ್ಳುವನೋ, ಅದಕ್ಕೆ ತಕ್ಕಂತೆ ಅವಳೂ ಬೇರೆಬೇರೆ ಆಕಾರದಿಂದವತರಿಸತಕ್ಕ ವಳು ಹೀಗೆ ತನಗೆ ಅನುರೂಪವಾದ ಮನುಷ್ಯರೂಪದಿಂದ ಜನಿಸಿ, ತನ್ನ ನ್ನು ವರಿಸಿದ ಮಹಾಲಕ್ಷ್ಮೀಸ್ವರೂಪಿಣಿಯಾದ ಆರುಕ್ಮಿಣಿಯನ್ನು ನೋಡಿ ಕೃಷ್ಣನು ಮಂದಹಾಸದಿಂದ, ನಕ್ಕನು. ಮುಂಗುರುಗಳಿದಲೂ, ಕಿವಿಯೋ ಲೆಗಳಿಂದಲೂ, ಕಂಠದಲ್ಲಿ ಪದಕಗಳಿಂದಲೂ, ಶೋಭಿತೆಯಾಗಿ,ಅಮೃತಧಾರೆ ಯಂತೆ ಮುಖದಲ್ಲಿ ಮಂದಹಾಸವನ್ನು ಬೀರುತ್ತ ನಿಂತಿದ್ದ ರುಕ್ಮಿಣಿಯನ್ನು ನೋಡಿ ಹೀಗೆಂದು ಹೇಳುವನು. “ಓ ರುಕ್ಮಿಣಿ ! ನೀನಾದರೋ ರಾಜಕು ಲದಲ್ಲಿ ಹಟ್ಟಿದವಳು. ಲೋಕಪಾಲರಂತೆ ಭಾಗ್ಯಸಮೃದ್ಧಿಯಿಂದ ಕೂಡಿದ ವರಾಗಿಯೂ, ಅದ್ಭುತಪರಾಕ್ರಮವುಳ್ಳವರಾಗಿಯೂ, ರೂಪ, ಕುಲ, ಔದಾ ರ್ಯಾದಿಗಳಿಂದ ಮೇಲೆನಿಸಿದವರಾಗಿಯೂ ಇದ್ದ ಅನೇಕರಾಜಾಧಿರಾಜರು, ನಿನ್ನ ರೂಪಕ್ಕೆ ಮೋಹಿಸಿ, ತಾವಾಗಿ ನಿನ್ನನ್ನು ಪ್ರಾರ್ಥಿಸಿದರು ! ಅದರಲ್ಲಿಯೂ

ಶಿಶುಪಾಲನೇನು ಸಾಮಾನ್ಯನೆ? ಅವನ ಪರಾಕ್ರಮವೂ, ಪ್ರಖ್ಯಾತಿಯೂ ಅಪಾರವಾದುದು ಮತ್ತು ಅವನು ಮೈಕೊಬ್ಬಿ ಕಾಮಮದದಿಂದಿದ್ದವನು. ಅವನ ಸೌಭಾಗ್ಯವನ್ನು ನೋಡಿಯೇ ನಿನ್ನ ಸಹೋದರರೂ, ನಿನ್ನ ತಾಯಿತಂದೆಗಳೂ ಅವನಿಗೇನಿನ್ನನ್ನು ಕೊಟ್ಟು ವಿವಾಹಮಾಡಬೇಕೆಂದು ದೃಢಸಂಕಲ್ಪರಾಗಿದ್ದರು ಅಂತವನನ್ನು ನೀನು ವರಿಸದೆ ಹೋದೆಯಲ್ಲ! ನಿನ್ನ ಹುಚ್ಚುತನವನ್ನೇನೆಂದು ಹೇಳಬಹುದು? ನಿನಗೆ ಸರ್ವವಿಧದಲ್ಲಿಯೂ ಅನುರೂಪರಾಗಿದ್ದ ಆ ರಾಜಾಧಿರಾಜರೆಲ್ಲರನ್ನೂ ನಿರಾಕರಿಸಿ ಬಂದೆಯಲ್ಲ! ಎಲೆ ಸುಭ್ರು! ನಮ್ಮ ಸ್ಥಿತಿಯನ್ನು ನೋಡು! ನಾವು ಆ ರಾಜರಿಗೆ ಭಯಪಟ್ಟೇ ಸಮುದ್ರಮಧ್ಯದ ಯಾವುದೋ ಒಂದು ದ್ವೀಪದಲ್ಲಿ ಅವಿತುಕೊಂಡಿರುವೆವು. ಇದಲ್ಲದೆ ಬಲಾಢ್ಯರಾದ ಆ ರಾಜರ ದ್ವೇಷಕ್ಕೂ ಪಾತ್ರರಾಗಿರುವೆವು ನಮಗೆ ರಾಜಸಿಂಹಾಸನವನ್ನೇರುವುದಕ್ಕೂ ಯೋಗ್ಯತೆಯಿಲ್ಲ. ಹೀಗೆ ಯಾವವಿಧದಲ್ಲಿಯೂ ನಿನಗೆ ಅನುರೂಪನಲ್ಲದ ನನ್ನನ್ನು ಕೈಹಿಡಿದ ನಿನಗೆ ಯಾವವಿಧದಲ್ಲಿ ಸುಖವುಂಟು? ಇದರಮೇಲೆ ನಮ್ಮ ಕುಲವೋ ಇಂತದೆಂದು ನಿರ್ಣಯಿಸುವುದಕ್ಕೇ ಸಾಧ್ಯವಿಲ್ಲ! ತಮ್ಮ ಜಾತಿಯಾವುದೆಂದು ಯಾರಿಗೂ ತಿಳಿಯದು. ಕೆಲವರು ವಸುದೇವಪುತ್ರನೆಂದು ತಿಳಿದಿರುವರು ಮತ್ತೆ ಕೆಲವರು ಗೊಲ್ಲನಾದ ನಂದನ ಮಗನೆಂದು ಹೇಳುವರು ನಾವು ಆಗಾಗ ನಡೆಸಿದ ಕಾರ್ಯಗಳೂ ಲೋಕವಿರುದ್ಧವಾಗಿಯೇ ತೋರುತ್ತಿರುವುವು ಹೀಗೆ ಹದ್ದುಮೀರಿ ನಡೆಯತಕ್ಕ ನಮ್ಮಂತವರನ್ನು ನಂಬಿದ ಸ್ತ್ರೀಯರಿಗೆ ಯಾವವಿಧದಲ್ಲಿ ಸುಖವುಂಟು?! ನಾವು ಯಾವುದಕ್ಕೂ ಗತಿಯಿಲ್ಲದ ಬಡವರು. ಅಂತಹ ಬಡಜನರನ್ನೇ ವಿಶೇಷವಾಗಿ ಪ್ರೀತಿಸತಕ್ಕವರು. ಸಾಮಾನ್ಯವಾಗಿ ಲೋಕದಲ್ಲಿ ಭಾಗ್ಯವಂತರು ನಮ್ಮನ್ನು ಮನಸ್ಸಿನಿಂದಲಾದರೂ ಸ್ಮರಿಸಲಾರರು. ಲೋಕದಲ್ಲಿ, ಕುಲದಲ್ಲಿಯೂ, ಐಶ್ವರ್ಯದಲ್ಲಿಯೂ, ರೂಪದಲ್ಲಿಯೂ, ಸಮಾನರಾಗಿದ್ದವರಲ್ಲಿಯೇ ಪರಸ್ಪರಸ್ನೇಹವೂ, ವಿವಾಹಸಂಬಂಧವೂ ಚೆನ್ನಾಗಿ ಶೋಭಿಸುತ್ತಿರುವುದೇಹೊರತು, ಈ ವಿಷಯಗಳಲ್ಲಿ ತಾರತಮ್ಯವು ಕಂಡುಬಂ

---

* ಯಯಾತಿಶಾಪದಿಂದ ಯಾದವಕುಲದವರಿಗೆ ರಾಜಸಿಂಹಾಸನವನ್ನೇರುವ ಅರ್ಹತೆಯಿಲ್ಲವೆಂದ್ದ ಪೂರ್ವಕಥೆ.

ದಾಗ ಆ ಸಂಬಂಧವು ಸರಿಬೀಳದು ಅಂತಹ ಸಂಬಂಧವು ನಡೆಯುವು ದೂ ಅಸಂಭವವು! ಓ ರಾಜಕುಮಾರೀ! ನೀನು ದೂರದೃಷ್ಟಿಯುಳ್ಳವಳಾಗಿ ದ್ದರೂ, ಇದೊಂದನ್ನೂ ಯೋಚಿಸದೆ, ನನ್ನಲ್ಲಿ ಯಾವುದೊಂದು ಗುಣವೂ ಇಲ್ಲದಿದ್ದರೂ ನನ್ನನ್ನು ವರಿಸಿಬಿಟ್ಟೆಯಲ್ಲಾ! ಲೋಕದಲ್ಲಿ ಕೆಲವುಮಂದಿ ಭಿಕ್ಷುಜನಗಳು ಹೊರತು, ನಮ್ಮನ್ನು ಕೊಂಡಾಡತಕ್ಕವರು ಬೇರೊಬ್ಬರಿಲ್ಲ. ನಮ್ಮನ್ನು ಕೈಹಿಡಿದು ನೀನು ಅನ್ಯಾಯವಾಗಿ ನಿನ್ನ ಇಹಲೋಕಸುಖಗಳ ನ್ನೇ ಕೆಡಿಸಿಕೊಂಡಹಾಗಾಯಿತು. ರುಕ್ಮಿಣಿ! ಈಗಲೂ ಆದುದಾಯಿತು! ನಿನಗೊಂದುಪಾಯವನ್ನು ಹೇಳುವೆನು ಈಗಲಾದರೂ ನೀನು ಕುಲದಲ್ಲಿ ಯೂ,ಐಶ್ವರ್ಯದಲ್ಲಿಯೂ,ನಿನಗೆ ಅನುರೂಪನಾದ ಬೇರೆಯಾವನಾದರೂ ರಾ ಜಶ್ರೇಷ್ಠರನ್ನು ಆಶ್ರಯಿಸಿ ಸುಖದಿಂದಿರು! ಯಾವನನ್ನು ವರಿಸುವುದರಿಂದ ನಿನಗೆ ಮುಂದೆ ಇಹಲೋಕದಲ್ಲಿಯೂ, ಪರಲೋಕದಲ್ಲಿಯೂ, ಕ್ಷೇಮವುಂ ಟೋ ಅಂತವನನ್ನು ಭಜಿಸು. “ಆದರೆ ನನ್ನನ್ನು ನೀನು ಬಲಾತ್ಕಾರದಿಂದ ಅಪಹರಿಸಿ ತಂದುದೇಕೆ?” ಎಂದು ಕೇಳುವೆಯಾ! ಓ ರಾಜಪುತ್ರಿ! ನಿನ್ನನ್ನು ವರಿಸಬೇಕೆಂದು ನಾನು ತಂದವನಲ್ಲ! ಶಿಶುಪಾಲ, ಸಾಲ್ವ, ದಂತವಕ್ತ್ರ, ರುಕ್ಮಿ,ಮೊದಲಾದವರೆಲ್ಲರೂ ಬಹುಕಾಲದಿಂದ ನನ್ನನ್ನು ದ್ವೇಷಿಸುತಿದ್ದರು. ವೀರ್ಯಮದದಿಂದ ಕೊಬ್ಬಿದ ಅವರ ಗರ್ವವನ್ನು ಮುರಿಯುವುದಕ್ಕಾಗಿ ನಾನು ನಿನ್ನನ್ನು ತಂದೆನೇಹೊರತು ಬೇರೆಯಲ್ಲ? ದುಷ್ಟಜನರ ಗರ್ವವನ್ನು ಮುರಿಯ ಬೇಕೆಂಬುದೇ ನನ್ನ ಸಂಕಲ್ಪವು. 'ನಮಗೆ ಮನೆಮಂದಿಮಕ್ಕಳೆಂಬ ಮೋಹ ವು ಸ್ವಲ್ಪಮಾತ್ರವೂ ಇಲ್ಲ. ದಾರೇಷಣ, ಪುತ್ರೇಷಣ, ಉದರೇಷಣ ವೆಂಬ ಈಷಣತ್ರಯಗಳೂ ನಮ್ಮನ್ನು ಬಾಧಿಸಲಾರವು ಏಕೆಂದರೆ, ನಮ್ಮೊ ಳಗೆ ನಾವು ನಮ್ಮ ಅನುಭವದಿಂದಲೇ ತೃಪ್ತರಾಗಿರುವೆವು. ನಮಗೆ ಈಲೋ ಕದಲ್ಲಿ ಆಸೆಪಟ್ಟು ಪಡೆಯಬೇಕಾದ ವಸ್ತುವೊಂದೂ ಇಲ್ಲ. ಸ್ವಯಂಪ್ರಕಾ ಶವಾದ ಆತ್ಮಸ್ವರೂಪದರ್ಶನದಿಂದ ತೃಪ್ತರಾಗಿ, ಬೇರೆ ಪ್ರಾಕೃತವ್ಯಾಪಾ ರಗಳೆಲ್ಲವನ್ನೂ ಬಿಟ್ಟು, ನಮ್ಮ ಮನೆಯಲ್ಲಿ ನಾವು ನಿರಾತಂಕವಾಗಿರುವೆವು. ಹೀಗೆ ಈ ಲೋಕವ್ಯಾಪಾರವನ್ನೇ ತ್ಯಜಿಸಿದ ನಾವೆಲ್ಲಿ? ವಿಲಾಸವತಿಯರಾದ ನಿಮ್ಮಂತಹ ಸ್ತ್ರೀಯರೆಲ್ಲಿ?” ಎಂದನು.

ರುಕ್ಮಿಣಿಯ ಮನಸ್ಸಿನಲ್ಲಿ ‹‹ ತನಗಿಂತಲೂ ಕೃಷ್ಣನಿಗೆ ಬೇರೆ ಪ್ರಿಯ ಜನವಿಲ್ಲವೆಂದೂ, ತನ್ನನ್ನು ಕ್ಷಣಮಾತ್ರವೂ ಬಿಟ್ಟಿರಲಾರನೆಂದೂ, ಹುಟ್ಟಿದ ಹೆಮ್ಮೆಯನ್ನು ನೀಗಿಸುವುದಕ್ಕಾಗಿ ಕೃಷ್ಣನು ಇಷ್ಟುಮಾತ್ರವನ್ನು ಹೇಳಿ ಸುಮ್ಮನಾದನು. ತ್ರೀಲೋಕಾಧಿಪತಿಯಾಗಿಯೂ, ತನಗೆ ಪ್ರಾಣೇಶ ನಾಗಿಯೂ ಇರುವ ಕೃಷ್ಣನ ಬಾಯಿಂದ ಹೊರಟ ಲೋಕವಿಪರೀತವಾದ ವಾಕ್ಯವನ್ನು ಕೇಳಿ ರುಕ್ಮಿಣಿಯ ಎದೆಯು ನಡುಗಿತು ಮಹತ್ತಾದ ಚಿಂತೆ ಯಿಂದ ನಡುಗುತ್ತ ಅಳುವುದಕ್ಕೂ ತೊಡಗಿದಳು. ತಲೆಯೆತ್ತಲಾರದೆ ತನ್ನ ಕಾಲುಗುರುಗಳಿಂದ ನೆಲವನ್ನು ಗೀರುತಿದ್ದಳು. ಸ್ತನದ ಮೇಲಿನ ಕುಂಕುಮ ವೆಲ್ಲವೂ ಕದಲುವಂತೆ ಅವಳ ಕಣ್ಣುಗಳಿಂದ ಧಾರೆಧಾರೆಯಾಗಿ ನೀರು ಹರಿ ಯುತಿತ್ತು ಬಾಯಿಂದ ಮಾತುಗಳು ಹೊರಡದಂತಾದುವು ಭಯದಿಂದಲೂ, ದುಃಖದಿಂದಲೂ ಹಾಗೆಯೇ ಪ್ರಜ್ಞೆತಪ್ಪಿದಂತಾಯಿತು, ಅವಳಿಗೂ ತಿಳಿಯ ದಹಾಗೆ ಅವಳು ಹಿಡಿದಿದ್ದ ಚಾಮರವು ಜಾರಿಬಿದ್ದಿತು ಬಿರುಗಾಳಿಯಿಂದ ಮುರಿದುಬಿದ್ದ ಬಾಳೆಯ ಗಿಡದಂತೆ ಅವಳೂ ಮೂರ್ಛೆಯಿಂದ ಕೆಳಗೆ ಬಿದ್ದು ಬಿಟ್ಟಳು. ಅವಳ ತಲೆಕೂದಲುಗಳೆಲ್ಲವೂ ಕೆದರಿಹೋದುವು ಇದನ್ನು ನೋಡಿ ಕೃಷ್ಣನು, ಅವಳಿಗೆ ತನ್ನಲ್ಲಿರುವ ಅಸಾಧಾರಣವಾದ ಪ್ರೇಮಪಾಶವನ್ನು ತಿಳಿ ದು,ಮನಸ್ಸಿನಲ್ಲಿ ಸಂತೋಷಪಡುತಿದ್ದನು ತಾನು ಕೇವಲಹಾಸ್ಯಕ್ಕಾಗಿ ಹೇಳಿ ದ ಆಮಾತಿನ ರಹಸ್ಯವನ್ನು ತಿಳಿಯಲಾರದೆ, ಸಂಕಟದಿಂದ ಮೂರ್ಛಿತಳಾದ ಆಕೆಯವಿಷಯದಲ್ಲಿ ಅವನಿಗೆ ಕನಿಕರವು ಹುಟ್ಟಿತು. ಭಯಚಕಿತನಾ ದಂತೆ ತೋರಿಸುತ್ತ, ತಾನು ಕುಳಿತಿದ್ದ ಮಂಚದಿಂದ ಥಟ್ಟನೆ ಕೆಳಗಿಳಿದು ಬಂದು, ಅವಳನ್ನು ಕೈಹಿಡಿದು ಮೇಲಕ್ಕೆತ್ತಿದನು. ಆವಳ ಕೆದರಿದ ಕೇಶಪಾ ಶಗಳನ್ನು ತಿದ್ದಿ ಸರಿಮಾಡಿದನು. ಕಮಲದಂತಿರುವ ತನ್ನ ಕೈಯಿಂದ ಅವಳ ಮುಖದ ಬೆವರನ್ನೊರೆಸಿದನು. ಕಣ್ಣುಗಳಲ್ಲಿಯೂ, ಸ್ತನಾಗ್ರದಲ್ಲಿಯೂ, ಬಿದ್ದಿದ್ದ ಕಣ್ಣೀರನ್ನೊರಸಿದನು. ತನ್ನಲ್ಲಿಯೇ ನಟ್ಟ ಮನಸ್ಸುಳ್ಳ ಆಕೆಯನ್ನು ಎರಡು ತೋಳುಗಳಿಂದಲೂ ಆಲಿಂಗಿಸಿದನು ತಾನು ಕೇವಲಹಾಸ್ಯಕ್ಕಾಗಿ ಹೇಳಿದ ಮಾತನ್ನೂ ಸಹಿಸಲಾರದೆ, ದೈನ್ಯದಿಂದ ಕಳವಳಿಸುತ್ತಿದ್ದ ಸುಕು ಮಾರಾಂಗಿಯಾದ ಆಕೆಯನ್ನು ಹೀಗೆಂದು ಸಮಾಧಾನಪಡಿಸತೊಡಗಿದನು.

“ಓ ವೈದರ್ಭೀ! ಕೋಪಿಸಬೇಡ ! ನೀನು ನನ್ನನ್ನೇ ನಂಬಿದವಳೆಂಬುದನ್ನು ನಾನು ಬಲ್ಲೆನು. ಆದರೂ ನೀನು ಏನು ಹೇಳುವೆಯೋ ಎಂಬುದನ್ನು ತಿಳಿಯುವುದಕ್ಕಾಗಿ ಸುಮ್ಮನೆ ವಿನೋದಾರ್ಥವಾಗಿ ಈ ಮಾತನ್ನಾಡಿದೆನು. ಇದಲ್ಲದೆ, ಓ ಕಾಮಿನೀ! ಪ್ರಣಯಕೋಪದಲ್ಲಿ, ನಡುಗುತ್ತಿರುವ ತುಟಿಯಿಂದಲೂ! ಕೆಂಪೇರಿದ ಕಡೆಗಣ್ಣಿಂದಲೂ,ಅಂದವಾದ ಹುಬ್ಬುಗಂಟಿನಿಂದಲೂ, ಶೋಭಿತವಾದ ನಿನ್ನ ಮುಖಸೌಂದರ್ಯವನ್ನು ಒಂದಾವರ್ತಿ ನೋಡಬೇಕೆಂಬ ಆಸೆಯೂ ನನಗೆ ಹುಟ್ಟಿತು. “ಹೀಗೆ ನಿಷ್ಕಾರಣವಾಗಿ ನನಗೆ ಕೋಪವನ್ನು ಹುಟ್ಟಿಸಿ ಸಂಕಟಗೊಳಿಸುವುದರಿಂದ ನನಗೆ ಬಂದ ಲಾಭವೇನು” ಎಂದು ಕೇಳುವೆಯಾ ? ಎಲೆ ಭೀರು! ಹೀಗೆ ಪತ್ನಿಯೊಡನೆ ಪ್ರಣಯಕಲಹದಿಂದ ವಿನೋದಿಸುತ್ತ ಕಾಲವನ್ನು ಕಳೆಯುವುದಲ್ಲವೇ ಗೃಹಸ್ಥರಿಗೆ ಸರ್ವೋತ್ತಮವಾದ ಲಾಭವು! ಇದೇ ಸಂಸಾರದಲ್ಲಿರುವ ಪರಮಸುಖವು” ಎಂದನು. ಹೀಗೆ ಕೃಷ್ಣನು ಹೇಳಿದ ಪ್ರಿಯವಾಕ್ಯವನ್ನು ಕೇಳಿದಮೇಲೆ ರುಕ್ಮಿಣಿಯು, ಅದನ್ನು ಪರಿಹಾಸೋಕ್ತಿಯೆಂದು ತಿಳಿದು, ಮನಸ್ಸಿನಲ್ಲಿ ಸ್ವಲ್ಪಸ್ವಲ್ಪವಾಗಿ ಧೈರ್ಯವನ್ನು ತಂದುಕೊಂಡಳು. ಅವಳ ಭಯವು ನೀಗಿತು ಆಗ ಮೆಲ್ಲಗೆ ತಲೆಯನ್ನೆತ್ತಿ, ಕೃಷ್ಣನ ಮುಖವನ್ನು ನೋಡುತ್ತ, ಲಜ್ಜಾಸೂಚಕವಾದ ಮಂದಹಾಸವೊಡನೆ ಹೀಗೆಂದು ಹೇಳುವಳು.* “ಓ ! ಪುಂಡರೀಕಾಕ್ಷಾ! “ನನಗೆ ನೀನು ಯಾವವಿಧದಲ್ಲಿಯೂ ಸಾಟಿಯಲ್ಲವೆಂದೂ, ಹೀಗಿರುವಾಗ ನನ್ನನ್ನೇಕೆ ವರಿಸಿದೆ” ಯೆಂದೂ ಕೇಳಿದೆಯಲ್ಲವೆ? ನೀನು ಹೇಳಿದುದೇನೋ ವಾಸ್ತವವೇ! ನಾನೂ ಅದನ್ನು ಮೊದಲೇ ಬಲ್ಲೆನು. ನಮ್ಮಿಬ್ಬರಿಗೆ ಯಾವವಿಧದಲ್ಲಿಯೂ ಸಾಮ್ಯವಿಲ್ಲ. ಅಷ್ಟೇಕೆ ? ಕೃಷ್ಣಾ ! ನಿನ್ನ ನೇತ್ರಸೌಂದರ್ಯವೊಂದರಿಂದಲೇ ನಿನಗೆ ಸಾಟಿಯೊಬ್ಬರೂ ಇಲ್ಲವೆಂದು ಸ್ಪಷ್ಟವಾಗುವುದು. ಹೀಗಿರುವಾಗ ನಾನು ನಿನಗೆ ಅನುರೂಪಭಾರ್ಯೆಯಾ

* ಹಿಂದೆ ಕೃಷ್ಣನು ತನ್ನಲ್ಲಿ ಹೀನತೆಯನ್ನಾರೋಪಿಸಿಕೊಂಡು ಹೇಳಿದ ಒಂದೊಂದು ಮಾತೂ, ಆತನ ಪರಸ್ವರೂಪವನ್ನೇ ಸೂಚಿಸುವುವು. ಇಲ್ಲಿಂದ ಮುಂದೆ ರುಕ್ಮಿಣಿಯು ಆ ಒಂದೊಂದು ಮಾತಿಗೂ ಉತ್ತರವನ್ನು ಕೊಡುವ ನೆಪದಿಂದ ಆ ತತ್ವಾರ್ಥವನ್ನೇ ಹೊರಪಡಿಸುವಳೆಂದು ಗ್ರಹಿಸಬೇಕು

ಗುವೆನೆ? ಸ್ವರೂಪಸ್ವಭಾವಗಳಲ್ಲಿ ಅಪರಿಚ್ಛಿನ್ನನಾದ ನಿನಗೆ, ನಾನು ಹೇಗೆ ತಾನೇ ಸಾಟಿಯಾಗುವೆನು. ಷಾಡ್ಗುಣ್ಯಪರಿಪೂರ್ಣನಾಗಿಯೂ, ಮೂರು ಲೋಕಕ್ಕೂ ಏಕಾಧಿಪತಿಯಾಗಿಯೂ, ನಿತ್ಯವಿಭೂತಿವಿಶಿಷ್ಟನಾಗಿಯೂ ಇರುವ ನೀನೆಲ್ಲಿ? ಪ್ರಕೃತಿಗುಣಗಳಿಗೂ, ನಿನ್ನ ಸಂಕಲ್ಪಕ್ಕೂ ಅಧೀನಳಾದ ನಾನೆಲ್ಲಿ! ಓ ದೇವಾ! ನಾನು ನಿನಗೆ ಪರತಂತ್ರಳೆಂಬುದನ್ನು ತಿಳಿಯದ ವರುಮಾತ್ರ ನನ್ನನ್ನು ಗೌರವದಿಂದ ಭಾವಿಸಬಹುದು! ಆಗೌರವವು ನನಗುಂಟಾದುದೂ ನಿನ್ನ ಸಂಬಂಧದಿಂದಲ್ಲದೆ ಬೇರೆಯಲ್ಲ. ಕೃಷ್ಣಾ! "ನೀನು ರಾಜರಿಗೆ ಹೆದರಿ ಸಮುದ್ರಮಧ್ಯದಲ್ಲಿ ಸೇರಿರುವುದಾಗಿ ಹೇಳಿದೆಯಲ್ಲವೆ? ಅದೂ ವಾಸ್ತವವೇ! ನೀನು ಭಯಪಟ್ಟವನಂತೆ ನಟಿಸಿಹೋದವನೇಹೊರತು ನಿಜವಾಗಿ ಭಯಪಟ್ಟವನಲ್ಲ. ಮೂರಡಿಗಳಿಂದಲೇ ಮೂರುಲೋಕವನ್ನೂ ಸಾಧಿಸಿದ ನೀನು ರಾಜರಿಗೆ ಭಯಪಡುವೆಯೆಂಬುದು ನಿಜವೆ? ನೀನು ಸಮುದ್ರದಲ್ಲಿರುವುದೂ ನನ್ನಲ್ಲಿ ನಿನಗಿರುವ ಅಸಾಧರಣಪ್ರೀತಿಯಿಂದಲೇ! ಏಕೆಂದರೆ, ನಾನು ಕ್ಷೀರಸಾಗರಕನ್ಯೆಯಾದ ಲಕ್ಷ್ಮಿಯೆಂದೇ ಕೆಲವರು ಹೇಳುವರು. ಈಗ ನೀನು ಆಶ್ರಯಿಸಿರತಕ್ಕ ಲವಣಸಮುದ್ರವೂ ನನ್ನ ತಂದೆಯ ಮೇರೆಗೇ ಸೇರಿರುವುದರಿಂದ, ನನ್ನಲ್ಲಿರುವ ಪ್ರೀತಿಯಿಂದಲೇ ನೀನು ಅಲ್ಲಿ ಹೋಗಿ ಸೇರಿರಬೇಕು. ನಾಥಾ! "ನಾನು ಬಲವದ್ವಿರೋಧಕ್ಕೆ ಪಾತ್ರನೆಂದು ಹೇಳಿದೆಯಲ್ಲವೆ" ಅದೂ ಸುಳ್ಳಲ್ಲ! ಕುತ್ಸಿತಗಳಾದ ಶಬ್ದಾದಿ ವಿಷಯಗಳಲ್ಲಿ ಬಿದ್ದು, ಭೋಗಮದದಿಂದ ಬೀಗಿ ಬೆರೆಯತಕ್ಕವರೊಡನೆ ನಿನಗೆ ವಿರೋಧವು ಸಹಜವಾಗಿಯೇ ಇರುವುದು. ಅದನ್ನು ನಿನ್ನಲ್ಲಿ ದೋಷವೆಂದು ಹೇಳಬಹುದೆ? "ನಮಗೆ ರಾಜಾಸನವನ್ನೇರುವುದಕ್ಕೆ ಅರ್ಹತೆಯಿಲ್ಲ" ವೆಂದು ಹೇಳಿದೆ. ಆ ರಾಜಾಸನದಿಂದ ನಿನಗಾಗಬೇಕಾದುದೇನು! ರಾಜಾಸನವೆಂಬುದು ತಮಸ್ಸಿನಂತೆ ಕೇವಲ ನರಕಾವಹವೆನಿಸುವುದು. ನಿನ್ನ ಪಾದಸೇವಕರೇ ಅದನ್ನು ತೃಣಪ್ರಾಯವಾಗಿ ಎಣಿಸುತ್ತಿರುವಾಗ, ಉಭಯ ವಿಭೂತಿನಾಯಕನಾದ ನಿನಗೆ ಆ ರಾಜಾಸನವೆಂಬುದು ಎಷ್ಟುಮಾತ್ರವಾಗಿರುವುದು? "ನನ್ನ ಜಾತಿಮತಗಳೊಂದೂ ಗೊತ್ತಿಲ್ಲ" ವೆಂದು ಹೇಳಿದೆಯಲ್ಲವೆ? ಅದರಲ್ಲಿ ಸಂದೇಹವೇನಿದೆ? ಮಹಾಜ್ಞಾನಿಗಳಾದ ಯೋಗೀಶ್ವರ

ರಿಗೇ ನಿನ್ನ ಮೂಲವನ್ನು ಹೀಗೆಂದು ತಿಳಿಯಲು ಸಾಧ್ಯವಿಲ್ಲದಿರುವಾಗ,ಬೇರೆ ಸಾಮಾನ್ಯಜನರಿಗೆ ನಿನ್ನ ಕುಲರೂಪಜನ್ಮಾದಿಗಳು ಹೇಗೆತಾನೇ ತಿಳಿಯು ವುವು? ಆಹಾರ, ನಿದ್ರೆ ಮೈಥುನಾದಿಗಳಲ್ಲಿ ಮಾತ್ರ ಕಾಲವನ್ನು ಕಳೆಯುತ್ತ ಪಶುಪ್ರಾಯರಾಗಿರುವ ಪ್ರಾಕೃತಮನುಷ್ಯರಿಗೆ ನಿನ್ನ ಸ್ಥಿತಿಯನ್ನು ಹೀಗೆಂ ದೂಹಿಸಿನೋಡುವುದಕ್ಕೂ ಶಕ್ಯವಲ್ಲ. “ನನ್ನ ನಡತೆಯು ಲೋಕವಿಪರೀತ ವಾದು” ದೆಂದು ಹೇಳಿದೆಯಲ್ಲವೆ? ನಿನ್ನದುಮಾತ್ರವೇನು? ನಿನ್ನನ್ನು ಅನುವ ರ್ತಿಸಿ ಸೇವಿಸತಕ್ಕವರ ನಡತೆಯೂ, ಲೋಕವಿಲಕ್ಷಣವಾಗಿಯೇ ಇರುವುದು. ಹೀಗಿರುವಾಗ ಅಪರಿಚ್ಛಿನ್ನನಾಗಿಯೂ, ಸರ್ವೇಶ್ವರನಾಗಿಯೂ ಇರುವ ನಿನ್ನ ನಡತೆಯು ಲೋಕಮರ್ಯಾದೆಯನ್ನು ಮೀರಿರುವುದೆಂದು ಹೇಳಬೇಕಾದು ದೇನು? “ನಾವು ಅಕಿಂಚನರೆಂದು ಹೇಳಿದೆಯಲ್ಲವೆ? ನಾಥಾ! ನೀನು ಹೊಂದಬೇಕಾದುದು ಕಿಂಚಿತ್ತಾದರೂ (ಸ್ವಲ್ಪಮಾತ್ರವೂ) ಇಲ್ಲದುದರಿಂದ ನೀನು ನಿಷ್ಕಿಂಚನನೆಂಬುದೂ ವಾಸ್ತವವೇ. ಲೋಕಪೂಜ್ಯರಾದ ಬ್ರಹ್ಮಾದಿ ಗಳೂ ಯಾವ ನಿನಗೆ ಪೂಜೆಯನ್ನರ್ಪಿಸುವರೋ, ಅಂತಹ ಸರ್ವೇಶ್ವರನಾದ ನಿನ್ನಐಶ್ವರ್ಯಕ್ಕೆ ಕಡಿಮೆಯೇನಿರುವುದು? “ನಾವು ಬಡವರನ್ನೇ ಪ್ರೀತಿಸುವೆ” ವೆಂದು ನೀನು ಹೇಳಿದ ಮಾತೂ ನಿಜವೇ? ಏಕೆಂದರೆ, ಅನನ್ಯಪ್ರ ಯೋಜನರಾದ ಯೋಗಿಗಳನ್ನೇ ನೀನು ಪ್ರೀತಿಸುವೆ! ಕುಲ, ರೂಪ, ಭಾಗ್ಯ ಮೊದಲಾದುವುಗಳಿಂದ ಮದಾಂಧರಾಗಿರುವವರು ನಿನ್ನನ್ನು ನೆನೆಯ ಲಾರರು ಅವರು ತಮ್ಮ ಇಂದ್ರಿಯಗಳನ್ನು ತೃಪ್ತಿಪಡಿಸುವುದರಲ್ಲಿಯೇ ನಿರತರಾಗಿರುವರು. “ಕುಲ, ರೂಪ, ಧನಾದಿಗಳಲ್ಲಿ ಅನುರೂಪರಾಗಿದ್ದಾಗಲೇ ವಿವಾಹವೂ, ಸ್ನೇಹವೂ ಶೋಭಿಸುವು” ದೆಂದು ಹೇಳಿದೆ! ನಾಥಾ! ನೀನೇ ಸಮಸ್ತ ಪುರುಷಾರ್ಥಸ್ವರೂಪನು ಚತುರ್ವಿಧಪುರುಷಾರ್ಥನಿರ್ವಾ ಹಕನಾಗಿಯೂ, ಪೂರ್ಣಕಾಮನಾಗಿಯೂ, ನಿತ್ಯಾನಂದಸ್ವರೂಪನಾ ಗಿಯೂ ಇರುವ ನಿನಗೆ ಅಲ್ಪಸುಖಸಾಧಕಗಳಾದ, ಗೃಹಧನಾದಿಗಳಲ್ಲಿ ಆಸೆ ಯುಳ್ಳವರೊಡನೆ ಹೇಗೆತಾನೇ ಹೋಲಿಕೆಯುಂಟಾಗುವುದು? “ಹಾಗೆ ಯಾರೂ ನನಗೆ ಸಮಾನರಲ್ಲದುದರಿಂದಲೇ, ನಿನಗೂ, ನನಗೂ ವಿವಾಹ ಸಂಬಂಧವೂ ಸರಿಯಲ್ಲ” ವೆಂದು ಹೇಳುವೆಯೇನು? ನಾಥಾ! ನಾನು ನಿನಗೆ

ಯಾವ ವಿಧದಲ್ಲಿಯೂ ಸಮಾನನಲ್ಲವೆಂಬುದೇನೋ ನಿಜವೇ! ಆದರೆ ಈಗ ನಾನು ನಿನ್ನೊಡನೆ ಸಾಮ್ಯಬುದ್ಧಿಯಿಂದ ಬಂದವಳಲ್ಲ. ನಿನ್ನ ದಾಸ್ಯವನ್ನುದ್ದೇಶಿಸಿಯೇ ನಿನ್ನನ್ನಾಶ್ರಯಿಸಿರುವೆನು. ಯಾರು ನಿನ್ನ ದಾಸ್ಯದಲ್ಲಿಯೇ ಆಸೆಯುಳ್ಳವರಾಗಿ, ಬೇರೆ ಯಾವುದನ್ನೂ ಅಪೇಕ್ಷಿಸದಿರುವರೋ,ಅಂಥವರೇ ಲೋಕದಲ್ಲಿ ಧೀಮಂತರು. ಅಂತವರನ್ನು ಕೈಹಿಡಿದು ಉದ್ಧರಿಸಬೇಕಾದುದು ನಿನಗೂ ಉಚಿತವೇ! ಕೇವಲಭೋಗಾಸಕ್ತಿಯಿಂದ ನಿನ್ನನ್ನಾಶ್ರಯಿಸತಕ್ಕ ಪುರುಷರಿಗಾಗಲಿ, ಸ್ತ್ರೀಯರಿಗಾಗಲಿ, ನಿನ್ನ ಸಾಂಗತ್ಯವು ಫಲಕಾರಿಯಾಗದು. ಇದಲ್ಲದೆ “ಭಿಕ್ಷುಕರೇ ನನ್ನನ್ನು ಹೊಗಳುವರೇಹೊರತು, ಶ್ರೀಮಂತರು ನನ್ನನ್ನು ಲಕ್ಷ್ಯಮಾಡಲಾರರೆಂದು ಹೇಳಿದೆಯಲ್ಲವೆ? ಅದೂ ವಾಸ್ತವವೇ? ಕ್ರೌರ್ಯಸ್ವಭಾವವನ್ನು ಬಿಟ್ಟು, ಸರ್ವಭೂತಸುಹೃತ್ತುಗಳಾಗಿರುವ ಯೋಗಿಗಳೇ ನಿನ್ನ ಪ್ರಭಾವವನ್ನು ತಿಳಿದು, ನಿನ್ನನ್ನು ಹೊಗಳುವರು ನೀನು ಮೂರುಲೋಕಕ್ಕೂ ಆತ್ಮನೆಂದೂ, ಆಶ್ರಿತರಿಗೆ ನಿನ್ನನ್ನೇ ನೀನು ಕೊಡತಕ್ಕವನೆಂದೂ ಅವರು ಚೆನ್ನಾಗಿ ಬಲ್ಲರು ಇದನ್ನು ತಿಳಿದೇ ಅವರು ನಿನ್ನ ಮಹಿಮೆಯನ್ನು ಕೊಂಡಾಡುವರು ನಾಥಾ! ಆ ನಿನ್ನ ಮಹಿಮೆಯನ್ನು ನಾನೂ ಕೇಳಿಬಲ್ಲವಳಾದುದರಿಂದಲೇ, ಈಗ ನಿನ್ನನ್ನು ಆಶ್ರಯಿಸಿದೆನು ನಿನ್ನ ಹುಬ್ಬಿನಾಟಗಳಿಂದ ನಡೆಯುತ್ತಿರುವ ಕಾಲಗತಿಯೆಂಬ ವೇಗಕ್ಕೆ ಸಿಕ್ಕಿ, ಆಗಾಗ ಆಶಾಭಂಗವನ್ನು ಹೊಂದುತ್ತಿರುವ ಬ್ರಹ್ಮೇಂದ್ರಾದಿಗಳನ್ನೂ ನಾನು ಲಕ್ಷ್ಯಮಾಡದೆ ನಿರಾಕರಿಸಿದೆನು ಹೀಗಿರುವಾಗ ಅಲ್ಪರಾದ ಆ ಶಿಶುಪಾಲಾದಿಗಳನ್ನು ಕಣ್ಣೆತ್ತಿಯಾದರೂ ನೋಡುವೆನೆ? ಮತ್ತು ನೀನು ಆ ರಾಜರಿಗೆ ಹೆದರಿದವನೆಂದು ಹೇಳಿದೆಯಲ್ಲವೆ? ಇದೆಲ್ಲವೂ ನಿನ್ನ ನಟನವೇ ಹೊರತು ಬೇರೆಯಲ್ಲ ಶಾರ್ಙ್ಗಧ್ವನಿಯಿಂದಲೇ ಶತ್ರುರಾಜರನ್ನೋಡಿಸಿ, ಸಿಂಹವು ಕ್ಷುದ್ರಮೃಗಗಳನ್ನಟ್ಟಿ ತನ್ನ ಭಾಗವನ್ನು ಎತ್ತಿಕೊಂಡು ಓಡುವಂತೆ ನನ್ನನ್ನು ಇಲ್ಲಿಗೆ ಕರೆತಂದೆಯಲ್ಲವೆ? ಹೀಗಿರುವಾಗಲೂ ಆ ರಾಜರಿಗೆ ಭಯಪಟ್ಟು ಸಮುದ್ರಮಧ್ಯದಲ್ಲಿ ಸೇರಿರುವೆನೆಂದು ಹೇಳಿದನಿನ್ನ ಮಾತು ತಿಳುವಳಿಕೆಯಿಲ್ಲದಅಜ್ಞರಿಗಾದರೂಎಂದಿಗೂನಂಬುಗೆಯನ್ನು ಹುಟ್ಟಿಸಲಾರದು. “ಕುಲಶೀಲಗಳೊಂದನ್ನೂ ಹೀಗೆಂದು ನಿರ್ಣಯಿಸುವುದಕ್ಕಿಲ್ಲದ ನನ್ನನ್ನು

ಕೈ ಹಿಡಿದ ಹೆಂಗಸರು ಕಷ್ಟಕ್ಕೊಳಗಾಗಬೇ”ಕೆಂದು ಹೇಳಿದೆಯಲ್ಲವೆ? ನಾಥಾ! ನಿನ್ನ ದಾಸ್ಯವನ್ನು ಪಡೆಯಬೇಕೆಂಬ ಅಭಿಲಾಷೆಯಿಂದಲ್ಲವೇ ರಾಜಶ್ರೇಷ್ಠರೆನಿಸಿಕೊಂಡ ಪೃಥು, ಭರತ, ಯಯಾತಿ, ಗಯ, ಮೊದಲಾದವರೆಲ್ಲರೂ, ತಮ್ಮ ಸರ್ವೋತ್ತಮವಾದಾ ರಾಜ್ಯಾಧಿಪತ್ಯವನ್ನೂ ಬಿಟ್ಟು ವನವನ್ನು ಪ್ರವೇಶಿಸಿ, ನಿನ್ನ ಪದವಿಯನ್ನು ಹುಡುಕಲಾರಂಭಿಸಿದರು. ಈಗ ಅವರೆಲ್ಲರೂ, ಯಾವವಿಧವಾದ ಕಷ್ಟವನ್ನಾದರೂ ಅನುಭವಿಸುತ್ತಿರುವರೇನು ! ಅವರೆಲ್ಲರೂ, ಈಗ ಸಾಂಸಾರಿಕವಾದ ಈ ಲೋಕವನ್ನು ಬಿಟ್ಟು. ನಿನ್ನೊಡನೆ ಸಾಥ ರ್ಮ್ಯರೂಪವಾದ ಶಾಶ್ವತಸುಖದಲ್ಲಿರುವರಲ್ಲವೆ ? ನಿನ್ನನ್ನು ಕೈ ಹಿಡಿದಮೇಲೆ ದುಃಖವೆಂಬುದೆಲ್ಲಿಯದು? ನಾಥಾ! ನನಗೆ ಅನುರೂಪನಾದ ಬೇರೆ ಯಾವನಾದರೂ ಕ್ಷತ್ರಿಯನನ್ನಾಶ್ರಯಿಸುವಂತೆ ಹೇಳಿದೆ. ಸಮಸ್ತಕಲ್ಯಾಣಗುಣಗಳಿಗೂ ಆಶ್ರಯವಾಗಿ, ಸಮಸ್ತಪುಣ್ಯಗಳಿಗೂ ಫಲರೂಪವಾಗಿ, ಲಕ್ಷ್ಮೀದೇವಿಗೆ ನಿವಾಸವಾಗಿರುವ ನಿನ್ನ ಪಾದಪದ್ಮಗಳನ್ನು ಬಿಟ್ಟು, ಮರಣಶೀಲರಾಗಿಯೂ, ಯಾವಾಗಲೂ, ಮಹಾಭಯದಲ್ಲಿ ಮುಳುಗಿದವರಾಗಿಯೂ, ಇರುವ ಬೇರೆ ಪುರುಷರನ್ನು ನಾನು ಮನಸ್ಸಿನಿಂದಲಾದರೂ ಸ್ಮರಿಸುವೆನೆ? ವಿವೇಕವುಳ್ಳ ಯಾವ ಸ್ತ್ರೀಯೂ ಸ್ಮರಿಸಲಾರಳು ಸರ್ವಲೋಕಾಧೀಶ್ವರನಾಗಿ, ಸರ್ವಾಂತರಾತ್ಮನಾಗಿ, ಇಹಲೋಕಪರಲೋಕವೆರಡರಲ್ಲಿಯೂ ಸುಖಪ್ರದನಾಗಿರುವ ನಿನಗಿಂತಲೂ ನನಗೆ ಅನುರೂಪನಾದವನು ಬೇರೆ ಯಾರುಂಟು? ನಾನು ನಿನ್ನನ್ನೇ ನಂಬಿರುವೆನು ಜನ್ಮಜನ್ಮದಲ್ಲಿಯೂ ನಿನಗೆ ನಾನು ಸಹಧರ್ಮಚಾರಿಣಿಯಾಗಿರಬೇಕೆಂಬುದೇ ನನ್ನ ಕೋರಿಕೆ! ಸಮಸ್ತಪಾಪವನ್ನೂ, ತನ್ಮೂಲಕವಾದ ಸಂಸಾರವನ್ನೂ ನೀಗಿಸತಕ್ಕ ನಿನ್ನ ಪಾದಪದ್ಮಗಳೇ ನನಗೆ ಜನ್ಮಜನ್ಮಕ್ಕೂ ಆಶ್ರಯವಾಗಿರಲಿ! ನಾಥಾ! ಇದೇ ನನ್ನ ಪ್ರಾರ್ಥನೆ ಅನೇಜರಾಜಾಧಿರಾಜರು ನನ್ನನ್ನು ಕಾಮಿಸಿದರೆಂದು ಹೇಳಿದೆಯಲ್ಲವೆ? ಓ! ಅಚ್ಯುತಾ! ಯಾರ ಮನೆಗಳಲ್ಲಿ ಸ್ತ್ರೀಯರೇ ಸ್ವತಂತ್ರಾಧಿಕಾರವುಳ್ಳವರಾಗಿ, ತಮ್ಮ ಗಂಡಂದಿರನ್ನು ಕತ್ತೆಗಳಂತೆಯೂ, ಎತ್ತುಗಳಂತೆಯೂ, ನಾಯಿಗಳಂತೆಯೂ ಬೆಕ್ಕುಗಳಂತೆಯೂ, ತಮ್ಮ ಸೇವಾಕಾರ್ಯದಲ್ಲಿ ಇರಿಸಿಕೊಂಡಿರುವರೋ, ಮತ್ತು ಯಾವ ಸ್ತ್ರೀಯರು ಬ್ರಹ್ಮರುದ್ರಾದಿಗಳ ಸಭೆಗಳಲ್ಲಿ ಕೀರ್ತಿಸಲ್ಪಡು

ವ ನಿನ್ನ ಕಥೆಗಳನ್ನು ಒಂದಾವರ್ತಿಯಾದರೂ ಕಿವಿಯಿಂದ ಕೇಳುವ ಭಾಗ್ಯಕ್ಕೆ ಪಾತ್ರರಲ್ಲವೋ, ಅಂತಹ ದುರ್ಭಾಗ್ಯಸ್ತ್ರೀಯರಿಗೆ ಆ ರಾಜರು ಪತಿಗಳಾಗಲಿ! ಓ, ದೇವಾ! ನಿನ್ನ ಪಾದಾರವಿಂದಮಕರಂದವನ್ನು ಒಂದಾವರ್ತಿಯಾದರೂ ಅನುಭವಿಸದ ಸ್ತ್ರೀಯರುಮಾತ್ರವೇ, ಇತರಪುರುಷರನ್ನು ತಮಗೆ ಪತಿಯೆಂಬ ಮೋಹಬುದ್ಧಿಯಿಂದ ಭಜಿಸಬೇಕಲ್ಲದೆ ಬೇರೆಯಲ್ಲ. ಹೊರಗೆ, ಚರ್ಮ, ಉಗುರು, ಕೂದಲು, ಮೀಸೆ, ಮುಂತಾದುವುಗಳಿಂದ ಮುಚ್ಚಲ್ಪಟ್ಟು,ಒಳಗೆ ರಕ್ತ, ಮಾಂಸ, ಮೂಳೆ, ಕ್ರಿಮಿಗಳು, ಮಲಮೂತ್ರಗಳು, ವಾತ,ಪಿತ್ತ.ಕಫ ಮೊದಲಾದುವುಗಳಿಂದ ತುಂಬಿ, ಜೀವಚ್ಛವವೆನಿಸಿಕೊಳ್ಳತಕ್ಕ ಪುರುಷ ಶರೀರವನ್ನು ತನಗೆ ಪತಿಯೆಂಬ ಭಾವದಿಂದ ಮೋಹಿಸುವುದು ಕೇವಲ ಮೌಢ್ಯವಲ್ಲವೆ? ಅಂತಹ ಪುರುಷಾಧಮನನ್ನು ಕೇವಲಮೂಢಸ್ತ್ರೀಯರೇ ತನಗೆ ಕಾಂತನೆಂದು ತಿಳಿದು ಭಜಿಸುವರು ನೀನು ಸಮಸ್ತವಿಷಯದಲ್ಲಿಯೂ ಉದಾಸೀನನೆಂದು ಹೇಳಿಕೊಂಡೆಯಲ್ಲವೆ? ಅದೂ ನ್ಯಾಯವೆ? ಪೂರ್ಣ ಕಾಮನಾಗಿ, ಆತ್ಮಾರಾಮನಾಗಿರುವ ನಿನಗೆ ಬೇರೆ ಯಾವುದರಲ್ಲಿ ತಾನೇ ಆಸೆಗೆ ಕಾರಣವುಂಟು ನೀನು ನನ್ನವಿಷಯದಲ್ಲಿ ಕಾಮರಹಿತನಾಗಿದ್ದರೂ, ನನಗೆ ನಿನ್ನ ಪಾದಸೇವೆಯಲ್ಲಿ ನಿತ್ಯವಾದ ಅನುರಾಗವಿರಲಿ! ನೀನು ವಾಸ್ತವದಲ್ಲಿ ಸಮಸ್ತಲೋಕಸುಖಗಳಲ್ಲಿಯೂ ಉದಾಸೀನನಾಗಿ, ಹೊರಗೆ ಮಾತ್ರ ಗೃಹಸ್ಥಧರ್ಮಗಳನ್ನು ಅಭಿನಯಿಸುತ್ತಿರುವೆಯಲ್ಲವೆ? ನನಗೂ ಹಾಗೆಯೇ ನಿನ್ನ ಪಾದಸೇವೆಯಲ್ಲಿಮಾತ್ರ ಅನುರಾಗವಿದ್ದರೆ ಸಾಕು! ಅದಕ್ಕಿಂತ ಹೆಚ್ಚಾಗಿ ಬೇರೆಸುಖವನ್ನು ನಾನೇನೂ ಅಪೇಕ್ಷಿಸುವಹಾಗಿಲ್ಲ ಓ! ದೇವಾ! ಯಾವಾಗ ನೀನು ಈ ಜಗತ್ತನ್ನು ವೃದ್ಧಿಗೊಳಿಸುವುದಕ್ಕಾಗಿ ಸೃಷ್ಟಿಕಾರ್ಯಕ್ಕೆ ಸಾಧನವಾದ ರಜೋಗುಣವನ್ನು ಹೆಚ್ಚಾಗಿ ಸ್ವೀಕರಿಸುವೆಯೋ,ಆಗ ಅದೇ ರಜೋಗುಣದ ಪ್ರಾಬಲ್ಯದಿಂದ ನನ್ನನ್ನು ಪ್ರೇಮಪೂರ್ವಕವಾಗಿ ನೋಡುವೆ. ಆ ನಿನ್ನ ನೋಟಕ್ಕಿಂತಲೂ ನನಗೆ ನೀನು ತೋರಿಸತಕ್ಕ ಅತಿಶಯವಾದ ಅನುಗ್ರಹವೇನಂಟು? ಮಧುಸೂಧನಾ! ನೀನು ನನ್ನನ್ನು ಕುರಿತು ‹‹ನಿನಗೆ ಅನುರೂಪನಾದ ಬೇರೆ ಯಾವನಾದರೂ ಪತಿಯನ್ನು ನೋಡಿಕೊಳ್ಳುವಂತೆ ಹೇಳಿದೆಯಲ್ಲವೆ! ಸಾಮಾನ್ಯಸ್ತ್ರೀಯರ ವಿಷಯದಲ್ಲಿ

ಈವಾಕ್ಯವು ಸುಳ್ಳಲ್ಲವೆಂದೇ ನನಗೂ ತೋರುವುದು.ಕಾಶೀರಾಜಪುತ್ರಿಯಾದ ಅಂಬಿಕೆಗೆ ಕನ್ಯಾವಸ್ಥೆಯಲ್ಲಿಯೇ ಸಾಲ್ವನಲ್ಲಿ ದೃಢಾನುರಾಗವು ಹುಟ್ಟಿದಂತೆ, ಸಾಮಾನ್ಯವಾಗಿ ಕನ್ಯೆಯರಿಗೆ ಒಬ್ಬಾನೊಬ್ಬಪುರುಷನಲ್ಲಿ ಅನುರಾಗಹುಟ್ಟುವುದು ಸಹಜವು. ವಿವಾಹವಾದಮೇಲೆಯೂ ಅಸತ್ಸ್ವಭಾವವುಳ್ಳ ಸ್ತ್ರೀಯರಿಗೆ, ಹೊಸಹೊಸಪುರುಷರಲ್ಲಿ ಮನಸ್ಸು ಪ್ರವರ್ತಿಸುವುದೂ ಸಹಜವು. ಆದುದರಿಂದ ವಿವೇಕಿಯಾದವನು ಸ್ತ್ರೀಯರ ಸ್ವಭಾವವನ್ನು ಮೊದಲೇ ಪರೀಕ್ಷಿಸಿ ದುಷ್ಟೆಯಾದವಳನ್ನು ಮದಿವೆಯಾಗಬಾರದು. ಹಾಗೆ ಸ್ತ್ರೀಸ್ವಭಾವವನ್ನು ಪರೀಕ್ಷಿಸದೆ ವಿವಾಹಮಾಡಿಕೊಂಡವನು,ಇಹಪರಸೌಖ್ಯಗಳೆರಡಕ್ಕೂ ಹೊರಗಾಗುವನು. ಅಂತಹಸ್ತ್ರೀಯರ ಕೋಟಿಯಲ್ಲಿ ನೀನು ನನ್ನನ್ನೂ ಸೇರಿಸಬಹುದೆ"? ಎಂದಳು.

ಆಗ ಕೃಷ್ಣನು "ಓಸಾಧ್ವಿ!ರಾಜಪುತ್ರಿ! ನಿನ್ನ ಬಾಯಿಂದ ಈವಿಧವಾದ ಪ್ರಿಯವಾಕ್ಯಗಳನ್ನು ಕೇಳಬೇಕೆಂಬುದಕ್ಕಾಗಿಯೇ, ಪರಿಹಾಸ್ಯಕ್ಕಾಗಿ ನಾನು ಈ ಮಾತುಗಳನ್ನಾಡಿದೆನೇಹೊರತು ಬೇರೆಯಲ್ಲ ನಾನು ಹೇಳಿದ ಒಂದೊಂದುಮಾತಿನ ತಾತ್ಪರ್ಯವನ್ನೂ ನೀನು ಗ್ರಹಿಸಿ, ನನ್ನ ಅಭಿಪ್ರಾಯಕ್ಕೆ ತಕ್ಕಂತೆ ಉತ್ತರವನ್ನು ಕೊಟ್ಟುದರಿಂದ, ನಾನು ಬಹಳಸಂತೋಷಪಟ್ಟೆನು. ನೀನು ಹೇಳಿದುದೆಲ್ಲವೂ ಸತ್ಯವು. ಓ ಮಾನಿನೀ! ಈಗ ನೀನು ನನ್ನ ಪಾದಸೇವೆ ಮೊದಲಾದ ಯಾವಯಾವ ಕೋರಿಕೆಗಳನ್ನು ಅಪೇಕ್ಷಿಸಿದೆಯೋ, ನನಗೆ ಏಕಾಂತಭಕ್ತಳಾದ ನಿನ್ನಲ್ಲಿ ಅವೆಲ್ಲವೂ ಈಗಾಗಲೇ ಸಿದ್ಧಿಸಿರುವುದು. ಈಗ ನೀನು ನನ್ನಲ್ಲಿ ಹೊಸದಾಗಿ ಕೇಳಬೇಕಾದುದಾಗಲಿ, ನಾನು ನಿನಗೆ ಹೊಸದಾಗಿ ಕೊಡತಕ್ಕುದಾಗಲಿ ಯಾವುದೊಂದೂ ಇರುವುದಿಲ್ಲ. ಆದರೆ ನಿನಗೆ ನನ್ನಲ್ಲಿರತಕ್ಕ ಪ್ರೇಮಾತಿಶಯವೂ, ಪಾತಿವ್ರತ್ಯವೂ, ಈಗ ಲೋಕಕ್ಕೆ ಸ್ಪಷ್ಟವಾಗಿ ತಿಳಿಯವಂತಾಯಿತು. ನಾನು ಆಡಬಾರದ ಮಾತುಗಳನ್ನಾಡಿ ನಿನ್ನನ್ನು ಧಿಕ್ಕರಿಸಿದರೂ, ನೀನು ಮನಸ್ಸು ಕಲಗದೆ ನನ್ನಲ್ಲಿ ದೃಢಭಕ್ತಿಯನ್ನೇ ತೋರಿಸಿದೆ! ಲೋಕದಲ್ಲಿ ಯಾವಜನರು ಅಲ್ಪಸುಖಕ್ಕಾಸೆಪಟ್ಟು, ಅದರಿಂದ ಮನಸ್ಸು ಕಲಗಿ, ನಾನು ಮೋಕ್ಷಪ್ರದನಾಗಿರುವಾಗಲೂ, ದಾಂಪತ್ಯಸುಖಕ್ಕೆಮಾತ್ರವೇ ಆಸೆಪಟ್ಟು, ತಪಸ್ಸಿನಿಂದ

ಲೂ, ವ್ರತಗಳಿಂದಲೂ ನನ್ನನ್ನು ಆರಾಧಿಸುವವರೋ ಅವರೆಲ್ಲರೂ ನನ್ನ ಮಾಯೆಯಿಂದ ಮೋಹಿತರೆಂದೇ ತಿಳಿ! ಮೋಕ್ಷಲಕ್ಷ್ಮಿಗೆ ಮುಖ್ಯಾಧಾರನಾಗಿರುವ ನನ್ನನ್ನು, ತಪಸ್ಸುಮೊದಲಾದುವುಗಳಿಂದ ಪ್ರಸನ್ನನನ್ನಾಗಿ ಮಾಡಿಕೊಂಡಮೇಲೆಯೂ, ಯಾರು,ನನ್ನಿಂದ ಪಡೆಯಬಹುದಾದ ಆ ಉತ್ತಮಪುರುಷಾರ್ಥವನ್ನು ಬಿಟ್ಟು,ಅಲ್ಪಸುಖವನ್ನು ಕೋರುವರೋ,ಅಂಥವರನ್ನು ಮಂದಭಾಗ್ಯರೆಂದು ಹೇಳುವುದರಲ್ಲಿ ಸಂದೇಹವೇನಿದೆ! ಲೌಕಿಕಗಳಾದ ಸುಖಗಳೆಲ್ಲವೂ ಅತ್ಯಲ್ಪಗಳು! ನರಕದಲ್ಲಿಯೂ ಅಂತವುಗಳನ್ನನುಭವಿಸಬಹುದು ಆದುದರಿಂದ ದಾಂಪತ್ಯಸುಖವನ್ನು ನರಕವೆಂದೇ ಹೇಳಬಹುದು. ಓ ಗೃಹೇಶ್ವರೀ! ನೀನು ಸಂಸಾರವಿಮೋಚನಕ್ಕೆ ಕಾರಣವಾದ, ನಿಷ್ಕಾಮವಾದ ಅನುವೃತ್ತಿಯನ್ನು ತೋರಿಸಿದೆಯಲ್ಲವೆ ? ಇದು ನಿನಗೆ ದೈವಾನುಗ್ರಹದಿಂದುಂಟಾದುದೆಂದು ತಿಳಿ! ಇದು ಪುಣ್ಯಪರಿಪಾಕವಿಲ್ಲದ ಅಲ್ಪಜನರಿಗೆ ಎಂದೆಂದಿಗೂ ಸಿದ್ಧಿಸಲಾರದು! ಕೇವಲ ಇಂದ್ರಿಯತೃಪ್ತಿಪರಾಯಣರಾಗಿ, ತಮ್ಮ ಹಾವಭಾವವಿಳಾಸಗಳಿಂದ ಪತಿಯನ್ನು ವಂಚಿಸುವ ಸ್ವಭಾವವುಳ್ಳ ಸಾಮಾನ್ಯಸ್ತ್ರೀಯರಿಗೆ, ಇದು ಸ್ವಪ್ನದಲ್ಲಿಯೂ ಸಾಧ್ಯವಲ್ಲವೆಂಬುದನ್ನು ಹೇಳಬೇಕಾದುದೇನು ? ಓ ಮಾನಿನೀ! ಮುಖ್ಯವಾಗಿ ಒಂದು ಮಾತಿನಲ್ಲಿ ಹೇಳುವೆನು ಕೇಳು! ಕುಟುಂಬಿಗಳಲ್ಲಿ ನಿನ್ನಂತೆ ಪತಿಪರಾಯಣೆಯಾದ ಸ್ತ್ರೀಯನ್ನು ಇದುವರೆಗೆ ನಾನು ಕಂಡುಕೇಳಿದುದಿಲ್ಲ!ಇದಕ್ಕೆ ಬೇರೆ ನಿದರ್ಶನವೇಕೆ! ನಿನ್ನ ವಿವಾಹಕಾಲದಲ್ಲಿ ಎಷ್ಟೋಮಂದಿ ರಾಜಾಧಿರಾಜರು ನಿನ್ನನ್ನು ತಾವಾಗಿ ಮೋಹಿಸಿಬಂದರೂ, ಅವರೆಲ್ಲರನ್ನೂ ಅನಾದರಿಸಿ, ಬ್ರಾಹ್ಮಣೋತ್ತಮನ ಮೂಲಕವಾಗಿ ನನಗೆ ರಹಸ್ಯಸಂದೇಶವನ್ನು ಹೇಳಿಕಳುಹಿಸಿದೆಯಲ್ಲವೆ? ಅದೂ ಹಾಗಿರಲಿ! ನಾನು ನಿನ್ನಣ್ಣನನ್ನು ಯುದ್ಧದಲ್ಲಿ ಪರಾಭವಿಸಿದೆನು!ಅವನಿಗೆ ವೈರೂಪ್ಯವನ್ನೂ ಉಂಟುಮಾಡಿದೆನು!ಅನಿರುದ್ಧನವಿವಾಹಕಾಲದಲ್ಲಿ ನಡೆದ ದ್ಯೂತಸಭೆಯಲ್ಲಿ, ಅವನ ಪ್ರಾಣವನ್ನೂ ನೀಗಿಸಿದೆವು. ಇವೆಲ್ಲವನ್ನೂ ನೋಡುತಿದ್ದಾಗಲೂ ನೀನು, ಮನಸ್ಸಿನ ದುಃಖವನ್ನು ಹೊರಕ್ಕೆ ಕಾಣಿಸದೆ, ನನ್ನ ಮನಸ್ಸಿಗೆ ಏನಾದರೂ ಅಸಮಾಧಾನವುಂಟಾಗುವುದೆಂಬ ಭಯದಿಂದ ಸುಮ್ಮನಿದ್ದೆಯಲ್ಲವೆ! ಇದೇ ನಿನಗೆ ನನ್ನಲ್ಲಿರುವ ಪ್ರೇಮದ ಪರಾ

ಕಾಷ್ಠೆಯನ್ನು ತೋರಿಸುವುದು. ಈ ವಿಧವಾದ ನಿನ್ನ ಪ್ರೇಮವೇ ನನ್ನನ್ನು ನಿನಗೆ ವಶಮಾಡಿರುವುದು. ಇದಲ್ಲದೆ ಹಿಂದೆ ನೀನು ಬ್ರಾಹ್ಮಣನಮೂಲಕ ವಾಗಿ ನನಗೆ ಸಂದೇಶವನ್ನು ಹೇಳಿಕಳುಹಿಸಿದಾಗ, ನಾನು ಅದಕ್ಕೆ ಸಮ್ಮತಿ ಸದ ಪಕ್ಷದಲ್ಲಿ ಪ್ರಾಣವನ್ನೇ ನಿಗ್ರೀಬಿಡುವುದಾಗಿ ಸೂಚಿಸಿದೆ! ನಾನು ಹೊರಟುಬರುವುದಕ್ಕೆ ಒಂದೆರಡು ನಿಮಿಷಗಳು ವಿಳಂಬವಾದುದನ್ನು ನೋಡಿ ಸಹಿಸಲಾರದೆ, ಈ ಜಗತ್ತನ್ನೇ ಶೂನ್ಯವಾದಂತೆ ಭಾವಿಸಿ, ಪ್ರಾಣತ್ಯಾಗಕ್ಕೂ ಯತ್ನಿಸುತಿದ್ದೆಯಲ್ಲವೆ! ಈ ನಿನ್ನ ಪ್ರೇಮಕ್ಕೆ ನಾನು ಯಾವವಿಧವಾದ ಪ್ರತಿ ಫಲವನ್ನೂ ತೋರಿಸಲಾರೆನು. ಈ ವಿಷಯದಲ್ಲಿ ನನ್ನ ಮನಃಪೂರ್ವಕವಾದ ಸಂತೋಷವನ್ನು ತೋರಿಸುವುದೊಂದೇ,ನಾನು ನಿನಗೆ ಕೊಡುವ ಪ್ರತಿಫಲ ವು. ಹೀಗೆಂದು ಕೃಷ್ಣನು ವಿನೋದಸಲ್ಲಾಪಗಳಿಂದ ರುಕ್ಮಿಣಿಯನ್ನು ಸಂ ತೋಷಗೊಳಿಸುತ್ತ, ತಾನು ಆತ್ಮಾರಾಮನಾಗಿದ್ದರೂ, ಮನುಷ್ಯಲೀಲೆಯ ನ್ನು ನಟಿಸುವುದಕ್ಕಾಗಿ, ಲಕ್ಷ್ಮ್ಯಂಶಭೂತೆಯಾದ, ಆಕೆಯೊಡನೆ ಕುಟುಂಬ ಭೋಗಗಳನ್ನು ಅನುಭವಿಸುತಿದ್ದನು. ಹಾಗೆಯೇ ಲೋಕನಾಥನಾದ ಆ ಭ ಗವಂತನು, ತನ್ನನ್ನು ಮೋಹದಿಂದ ವರಿಸಿದ ಇತರಸ್ತ್ರೀಯರ ಮನೆಗಳಲ್ಲಿ ಯೂ ಇದ್ದು, ಗೃಹಸ್ಥಾಶ್ರಮಿಯಂತೆ ಗೃಹಧರ್ಮಗಳನ್ನು ನಡೆಸುತಿದ್ದನು. ಇದು ಅರುವತ್ತನೆಯ ಅಧ್ಯಾಯವು.

---

ಶ್ರೀಕೃಷ್ಣನು ತನ್ನ ಹದಿನಾರುಸಾವಿರಮಂದಿ ಸ್ತ್ರೀ ಯರನ್ನೂ ಸಮಾನುರಾಗದಿಂದ ಮೋಹ ಗೊಳಿಸಿ ಸಂತೋಷಪಡಿಸಿದುದು.

ಓ ಪರೀಕ್ಷಿದ್ರಾಜಾ! ಕೃಷ್ಣನು ತನ್ನಲ್ಲಿಮೋಹಿಸಿ ಬಂದ ಹದಿನಾ ರುಸಾವಿರಮಂದಿ ಸ್ತ್ರೀಯರನ್ನೂ ಸಮಾನುರಾಗದಿಂದ ಸಂತೋಷಪಡಿಸು ತ್ತಿದ್ದನು. ಅವರಲ್ಲಿ ಒಬ್ಬೊಬ್ಬರಿಗೂ ಹತ್ತುಮಂದಿಮಕ್ಕಳು ಜನಿಸಿದರು. ಆ ಕುಮಾರರೆಲ್ಲರೂ, ಗುಣ, ಶೀಲ, ಸೌಭಾಗ್ಯಗಳಿಂದ ತಮ್ಮ ತಂದೆಯಾದ ಕೃಷ್ಣನನ್ನೇ ಹೋಲುತ್ತಿದ್ದರು. ಆ ಹದಿನಾರುಸಾವಿರಮಂದಿ ರಾಜಕು ಮಾರಿಯರೂ ಬೇರೆಬೇರೆ ಅರಮನೆಯಲ್ಲಿರುತ್ತಿದ್ದರೂ, ಕೃಷ್ಣನು, ಅವರೊ

ಬ್ಬೊಬ್ಬರ ಮನೆಯಲ್ಲಿಯೂ ಯಾವಾಗಲೂ ಇದ್ದಂತೆ ತನ್ನ ಮಾಯೆಯಿಂದ ಅವರನ್ನು ಮೋಹಗೊಳಿಸುತ್ತಿದ್ದನು ಅವರೊಬ್ಬೊಬ್ಬರಿಗೂ, ಕೃಷ್ಣನಿಗೆ ತನ್ನಂತೆ ಪ್ರಿಯೆಯಿಲ್ಲವೆಂಬ ಭಾವವು ಹುಟ್ಟಿತು. ಆಸ್ತ್ರೀಯರೊಬ್ಬೊಬ್ಬರೂ, ತಮ್ಮ ಸೌಂದರ್ಯದಿಂದ ಕೃಷ್ಣನನ್ನೂ ತಾವು ಮೋಹಪರವಶನ್ನಾಗಿ ಮಾಡಿಬಿಟ್ಟಂತೆ ಹೆಮ್ಮೆಗೊಂಡಿದ್ದರು ಆದರೇನು? ಸ್ವರೂಪಸ್ವಭಾವಗಳಲ್ಲಿ ಕಂದುಕುಂದಿಲ್ಲದೆ, ಪರಿಪೂರ್ಣನಾದ ಆ ಶ್ರೀಕೃಷ್ಣನ ಮುಖಕಮಲವನ್ನೂ, ಆತನ ಆಜಾನುಬಾಹುಗಳನ್ನೂ, ಮಂದಹಾಸವಿಶಿಷ್ಟವಾದ ಮುಖವನ್ನೂ, ಪ್ರಸನ್ನದೃಷ್ಟಿಯನ್ನೂ ನೋಡಿ, ಆತನ ಸರಸಸಲ್ಲಾಪಾದಿಗಳಿಗೆ ತಾವು ಮೈಮರೆತು ಮರುಳಾಗುತಿದ್ದರೇಹೊರತು, ತಮ್ಮ ಹಾವಭಾವವಿಲಾಸಗಳಿಂದ ಅತನ ಮನಸ್ಸನ್ನು ಜಯಿಸಲಾರದೆಹೋದರು. ಆ ಹದಿನಾರುಸಾವಿರಮಂದಿ ಸ್ತ್ರೀಯರೂ ಮನ್ಮಥಬಾಣದಂತೆ ಮೋಹಜನಕವಾದ ತಮ್ಮ ಮಂದಹಾಸಗಳಿಂದಾಗಲೀ ಕಟಾಕ್ಷಸೌಂದರ್ಯದಿಂದಾಗಲಿ, ಹುಬ್ಬಿನಾಟಗಳಿಂದಾಗಲಿ, ಶೃಂಗಾರಸೂಚಕಗಳಾದ ಅಂಗಸಂಜ್ಞೆಗಳಿಂದಾಗಲಿ, ಕಾಮಶಾಸ್ತ್ರಪ್ರಸಿದ್ಧಗಳಾದ ಬೇರೆ ಯಾವವಿಧದಿಂದಾಗಲಿ, ಆ ಕೃಷ್ಣನ ಮನಸ್ಸನ್ನು ಕದಲಿಸಲು ಸಮರ್ಥರಾಗಲಿಲ್ಲ. ಹೀಗೆ ಆ ರಾಜಕುಮಾರಿಯರು, ಬ್ರಹ್ಮಾದಿದೇವತೆಗಳೂಯಾವನ ನಿಜವನ್ನುಕಾಣಲಾರರೋ,ಅಂತಹಲಕ್ಷ್ಮೀಪತಿಯಾದಶ್ರೀಹರಿಯನ್ನೇತಮಗೆ ಪತಿಯನ್ನಾಗಿ ಪಡೆದು, ಆತನು ಎಡೆಬಿಡದೆ ತಮ್ಮ ಬಳಿಯಲ್ಲಿದ್ದು ತಮ್ಮನ್ನು ನಾನಾವಿಧವಾದ ಅನುರಾಗಚೇಷ್ಟೆಗಳಿಂದ ಸಂತೋಷಪಡಿಸುತ್ತಿರುವುದನ್ನು ನೋಡಿ ಪರಮಾನಂದಭರಿತರಾಗಿ, ತಮ್ಮಲ್ಲಿ ಬೇರೆಬೇರೆ ನೂರಾರುಮಂದಿ ದಾಸಿಯರಿದ್ದರೂ ಕೃಷ್ಣನಲ್ಲಿ ತಮಗಿರುವ ಪ್ರೇಮದಿಂದ, ಅವರು ತಮ್ಮ ಕೈಯಿಂದಲೇ ಉಪಚರಿಸುತಿದ್ದರು. ಕೃಷ್ಣನನ್ನು ಕಂಡೊಡನೆ ಪ್ರತ್ಯುತ್ಥಾನಮಾಡುವುದು! ಆಸನವನ್ನು ತಂದಿಡುವುದು! ಅರ್ಘ್ಯಪಾದ್ಯಾದಿಗಳನ್ನು ಕೊಡುವುದು!ತಾಂಬೂಲವನ್ನು ಮಡಿಸಿಕೊಡುವುದು! ಬಳಲಿಕೆಯನ್ನಾರಿಸುವುದು!ಬೀಸುವುದು! ಗಂಧಪುಷ್ಪಗಳಿಂದಲಂಕರಿಸುವುದು! ತಲೆಬಾಚುವುದು! ಹಾಸಿಗೆಹಾಸುವುದು! ಅಭ್ಯಂಗನಮಾಡಿಸುವುದು! ಉಪಹಾರಗಳನ್ನು ತಂದಿಡುವುದು! ಇವೇ ಮೊದಲಾದ

ಸೇವಾವೃತ್ತಿಗಳಿಂದ ಅವನನ್ನು ಸಂತೋಷಪಡಿಸುತಿದ್ದರು. ಓ ರಾಜಾ! ಮೇಲೆ ಹೇಳಿದ ಹದಿನಾರುಸಾವಿರಮಂದಿ ಸ್ತ್ರೀಯರಿಗೂ ಬೇರೆಬೇರೆಯಾಗಿ ಹತ್ತುಮಂದಿ ಪುತ್ರರಂತೆ ಜನಿಸಿದರೆಂದು ಹೇಳಿದೆನಲ್ಲವೆ? ಆಸ್ತ್ರೀಯರಲ್ಲಿ ಎಂಟು ಮಂದಿಮಾತ್ರ ಪ್ರಮುಖರೆನಿಸಿದುದರಿಂದ, ಈ ಅಷ್ಟಮಹಿಷಿಯರಲ್ಲಿ ಹುಟ್ಟಿದ ಕುಮಾರರ ಹೆಸರನ್ನು ಮಾತ್ರ ಹೇಳುವೆನು ಕೇಳು.

ರುಕ್ಮಿಣಿಯಲ್ಲಿ, ಪ್ರದ್ಯುಮ್ನ, ಚಾರುದೇಷ್ಣ, ಸುದೇಷ್ಣ, ಚಾರುದೇಹ, ಸುಚಾರು, ಚಾರುಗುಪ್ತ, ಭದ್ರಚಾರು, ಚಾರುಚಂದ್ರ, ಅತಿಚಾರು, ಚಾರುಮಂತರೆಂಬ ಹತ್ತುಮಂದಿ ಪುತ್ರರು ಹುಟ್ಟಿದರು. ಸತ್ಯಭಾಮೆಯಲ್ಲಿ ಭಾನು, ಸುಭಾನು, ಸ್ವರ್ಭಾನು, ಪ್ರಭಾನು, ಭಾನುಮಂತ, ಚಂದ್ರಭಾನು, ಬೃಹದ್ಭಾನು, ಅತಿಭಾನು, ಶ್ರೀಭಾನು, ಪ್ರತಿಭಾನುವೆಂಬ ಹತ್ತು ಮಂದಿ ಮಕ್ಕಳಾದರು. ಜಾಂಬವತಿಗೆ, ಸಾಂಬ, ಸುಮಿತ್ರ, ಪುರುಜಿತ್ತು, ಶತಜಿತ್ತು, ಸಹಸ್ರಜಿತ್ತು, ವಿಜಯ, ಚಿತ್ರಕೇತು, ವಸುಮಂತ, ದ್ರವಿಣ, ಕ್ರತುಗಳೆಂಬ ಹತ್ತುಮಂದಿ ಪುತ್ರರಾದರು. ನಾಗ್ನಜಿತಿಯೆಂಬವಳಲ್ಲಿ, ಭಾನು, ಚಂದ್ರ, ಅಶ್ವಸೇನ, ಚಿತ್ರಗು, ವೇಗವಂತ, ವೃಷ, ಆಮ, ಶಂಕು, ವಸು, ಧೃತಿಯೆಂಬ ಹತ್ತುಮಂದಿ ಮಕ್ಕಳಾದರು. ಕಾಳಿಂದಿಯೆಂಬವಳಲ್ಲಿ, ಶ್ರುತಿ, ಕವಿ, ವೃಷ, ವೀರ, ಸುಬಾಹು, ಭದ್ರ, (ಏಕಲ) ಶಾಂತಿ, ದರ್ಶ, ಪೂರ್ಣಮಾಸ, ಸೋಮಕರೆಂಬ ಹತ್ತುಮಂದಿ ಮಕ್ಕಳಾದರು. ಲಕ್ಷಣೆಯೆಂಬವಳಲ್ಲಿ, ಪ್ರಘೋಷ, ಗಾತ್ರವಾನ್, ಸಿಂಹ, ಬಲ, ಪ್ರಬಲ, ಊರ್ಧ್ವಗ, ಮಹಾಶಕ್ತಿ, ಸಹ, ಓಜಸ್ಸು, ಅಪರಾಜಿತರೆಂಬವರು ಜನಿಸಿದರು. ಮಿತ್ರವಿಂದೆಯಲ್ಲಿ, ವೃಕ, ಅರ್ಕ, ಅನಿಲ, ಗೃಧ್ರ, ಬಹ್ವನ್ನ, ಅನ್ನಾದ,ಮಹಾಶ, ಪವನ, ವಹ್ನಿ, ಕ್ಷುಧಿಯೆಂಬವರು ಜನಿಸಿದರು. ಭದ್ರೆಯೆಂಬವಳಲ್ಲಿ, ಸಂಗ್ರಾಮಜಿತ್ತು, ಬೃಹತ್ಸೇನ, ಶೂರ, ಪ್ರಹಣ, ಅರಿಜಿತ್ತು, ಜಯ, ಸುಭದ್ರ, ವಾಮ, ಆಯುಸ್ಸು, ಸತ್ಯಕರೆಂಬವರು ಹುಟ್ಟಿದರು. ಹೀಗೆಯೇ ಇತರಸ್ತ್ರೀಯರಿಗೂ ಹತ್ತುಮಂದಿ ಕುಮಾರರಂತೆ ಜನಿಸಿದರು. ಬಲರಾಮನ ಪತ್ನಿಯಾದ ರೋಹಿಣಿಯಲ್ಲಿಯೂ ದೀಪ್ತಿಮಂತ, ತಾಮ್ರಪತ್ರ,ಮುಂತಾದವರು ಹುಟ್ಟಿದರು, ಹಿಂದೆ ಹೇಳಿದ ಕುಮಾರರಲ್ಲಿ ಪ್ರದ್ಯುಮ್ನನೆಂಬವನಿಗೆ, ರುಕ್ಮವತಿಯೆಂಬ ಭಾ

ರ್ಭೆಯಲ್ಲಿ ಮಹಾಬಲಾಢ್ಯನಾದ ಅನಿರುದ್ಧನೆಂಬ ಮಗನಾದನು. ಅನಿರುದ್ಧನ ಪತ್ನಿಯಾದ ರುಕ್ಮವತಿಯೆಂಬವಳು ರುಕ್ಮಿಯಮಗಳು ಈದಂಪತಿಗಳಿಬ್ಬರೂ ಭೋಜಕಟವೆಂಬ ಪಟ್ಟಣದಲ್ಲಿ ವಾಸಿಸುತ್ತಿದ್ದರು ಪ್ರದ್ಯುಮ್ನನಿಗೆ ಮಾತ್ರವಲ್ಲದೆ,ಕೃಷ್ಣನಬೇರೆಮಕ್ಕಳಿಗೂ ಬೇರೆಬೇರೆ ಅನೇಕಪುತ್ರರು ಜನಿಸಿ, ಅವರ ಸಂತಾನಗಳೆಲ್ಲವೂ ಪುತ್ರಪೌತ್ರಪರಂಪರೆಯಾಗಿ ವಿಸ್ತರಿಸುತ್ತಬಂದಿತು. ಕೃಷ್ಣನ ಹದಿನಾರುಸಾವಿರಮಂದಿ ಸ್ತ್ರೀಯರೂ ಸಂತಾನಸಮೃದ್ಧಿಯಿಂದ ಶೋಭಿಸುತಿದ್ದರು" ಎಂದನು. ಈನಡುವೆ ಪರೀಕ್ಷಿದ್ರಾಜನು ಶುಕಮುನಿಯನ್ನು ಕುರಿತು "ಓ ಮುನೀಂದ್ರಾ! ರುಕ್ಮಿಯೆಂಬವನು ಕೃಷ್ಣನಲ್ಲಿ ಆಜನ್ಮದ್ವೇಷವನ್ನು ಬೆಳೆಸುತಿದ್ದವನಲ್ಲವೆ! ಆತನು ತನ್ನ ವೈರಿಯಾದ ಕೃಷ್ಣನ ಮಗನಿಗೆ ತನ್ನಮಗಳನ್ನು ಕೊಟ್ಟು ವಿವಾಹಮಾಡಿದುದುಹೇಗೆ! ಆ ರುಕ್ಮಿಯು ಕೃಷ್ಣನಿಂದ ಅವಮಾನಿತನಾಗಿ, ಅವನನ್ನು ಕೊಲ್ಲುವುದಕ್ಕೂ ಅವಕಾಶವನ್ನು ಹುಡುಕುತಿದ್ದವನಲ್ಲವೆ? ಅಂತವನು ಕೃಷ್ಣನೊಡನೆ ಸಂಬಂಧವನ್ನು ಬೆಳೆಸಿದನೆಂದರೆ, ನನಗೆ ಆಶ್ಚರ್ಯವಾಗಿರುವುದು. ಇದರರಹಸ್ಯವೇನೆಂಬುದನ್ನು ನನಗೆ ತಿಳಿಸಬೇಕು ನಿಮ್ಮಂತಹ ಯೋಗಿಗಳು ಯೋಗದೃಷ್ಟಿಯಿಂದಲೇ ಭೂತಭವಿಷ್ಯದ್ವರ್ತಮಾನಗಳೆಲ್ಲವನ್ನೂ ತಿಳಿಯಬಲ್ಲವರು. ಇಂದ್ರಿಯಗೋಚರಗಳಲ್ಲದ ಪರೋಕ್ಷವಿಷಯಗಳನ್ನೂ ನೀವು ಸಾಕ್ಷಾತ್ಕರಿಸಬಲ್ಲವರು. ಆದುದರಿಂದ ಪರಸ್ಪರವೈರಿಗಳಲ್ಲಿ ವಿವಾಹಸಂಬಂಧವು ಹೇಗೆ ಬೆಳೆಯಿತೆಂಬ ವೃತ್ತಾಂತವನ್ನು ನನಗೆ ತಿಳಿಸಬೇಕು" ಎಂದು ಕೇಳಲು. ಅದಕ್ಕಾ ಶುಕಮುನಿಯು, "ರಾಜಾ! ಕೇಳು! ಕೃಷ್ಣನಿಂದ ಅವಮಾನಿತನಾದ ರುಕ್ಮಿಯು, ಆತನಲ್ಲಿ ಬದ್ಧದ್ವೇಷವನ್ನು ತೋರಿಸುತಿದ್ದರೂ, ತನ್ನ ತಂಗಿಯಾದ ರುಕ್ಮಿಣಿಯ ಮನಸ್ಸನ್ನು ನೋಯಿಸಬಾರದೆಂಬ ದಾಕ್ಷಿಣ್ಯಕ್ಕಾಗಿ, ಅವಳ ಮಗನಾದ ಪ್ರದ್ಯುಮ್ನನಿಗೇ ತನ್ನ ಮಗಳನ್ನು ವಿವಾಹಮಾಡಿಕೊಟ್ಟನು. ಆಗಲೂ ರುಕ್ಮಿಯುತಾನಾಗಿಪ್ರದ್ಯುಮ್ನನಿಗೆ ತನ್ನ ಮಗಳನ್ನು ಕೊಟ್ಟವನಲ್ಲ. ಆ ವಿವಾಹವು ನಡೆದ ರೀತಿಯೇ ಬೇರೆ! ಆ ರುಕ್ಮವತಿಯ ಸ್ವಯಂವರಕ್ಕಾಗಿ ಬಹಳಮಂದಿ ರಾಜರು ಬಂದು ನೆರೆದಿದ್ದರು. ಆದರೆ ರುಕ್ಮವತಿಗೂ, ಪ್ರದ್ಯುಮ್ನನಿಗೂ ಮೊದಲಿಂದಲೂ

ಅನ್ಯೋನ್ಯಾನುರಾಗವು ಹುಟ್ಟಿದ್ದಿತು. (ಕೃಷ್ಣನು ರುಕ್ಮಿಣಿಯನ್ನು ವರಿಸಿದಂತೆಯೇ) ಪ್ರದ್ಯುಮ್ನನೂಕೂಡ ಆ ಸ್ವಯಂವರಕಾಲದಲ್ಲಿ ರಥಮಾತ್ರಸಹಾಯನಾಗಿಬಂದು, ಅಲ್ಲಿದ್ದ ಇತರರಾಜರೆಲ್ಲರನ್ನೂ ಜಯಿಸಿ, ಆ ಕನ್ಯೆಯನ್ನಪಹರಿಸಿಕೊಂಡು ಹೋದನು. ರುಕ್ಮಿಗೆ ಈ ವಿವಾಹವು ಸಮ್ಮತವಲ್ಲದಿದ್ದರೂ, ಮಿಂಚಿಹೋದ ಕಾರ್ಯಕ್ಕೆ ಅಡ್ಡಿಮಾಡಲಾರದೆ, ತನ್ನ ತಂಗಿಯಾದ ರುಕ್ಮಿಣಿಗೂ ಅದು ಸಮ್ಮತವಾಗಿರುವುದನ್ನು ತಿಳಿದು, ಸುಮ್ಮನಿದ್ದನು ಕೃಷ್ಣಭಾರ್ಯೆಯರಲ್ಲಿ ಗಂಡುಮಕ್ಕಳುಮಾತ್ರವೇ ಅಲ್ಲದೆ, ಒಬ್ಬೊಬ್ಬಳಲ್ಲಿ ಒಂದೊಂದು ಕನ್ಯಾಶಿಶುವೂ ಜನಿಸಿತು. ಆ ಕನ್ಯೆಯರಲ್ಲಿ ರುಕ್ಮಿಣಿಯ ಮಗಳಾದ ಚಾರುಮತಿಯೆಂಬವಳನ್ನು ಕೃತವರ್ಮನ ಮಗನು ವರಿಸಿದನು. ರುಕ್ಮಿಗೂ, ಕೃಷ್ಣನಿಗೂ ಬದ್ಧವೈರವಿದ್ದರೂ, ಆ ರುಕ್ಮಿಕೃಷ್ಣರಿಗೆ ಹಿಂದೆ ಹೇಳಿದುದೊಂದಲ್ಲದೆ ಮತ್ತೊಂದು ವಿಧದ ಬಾಂಧವ್ಯವೂ ಬೆಳೆಯಿತು. ರುಕ್ಮಿಯು ತನ್ನ ದೌಹಿತ್ರನಾದ ಅನಿರುದ್ಧನಿಗೆ, ತನ್ನ ಪೌತ್ರಿಯಾದ ರೋಚನೆಯೆಂಬವಳನ್ನು ಕೊಟ್ಟು ವಿವಾಹಮಾಡಿಸಿದನು. ಇದೂ ತನ್ನ ತಂಗಿಯಾದ ರುಕ್ಮಿಣಿಯ ನಿರ್ಬಂಧಕ್ಕಾಗಿಯೇಹೊರತು ಮನಃಪೂರ್ವಕವಾಗಿ ನಡೆದುದಲ್ಲ. ಶತ್ರುಗಳಲ್ಲಿ ಪರಸ್ಪರಬಾಂಧ್ಯವವೂ, ಭೋಜನಪ್ರತಿಭೋಜನಗಳೂ ಯುಕ್ತವಲ್ಲವೆಂಬ ಅಂಶವನ್ನು ರುಕ್ಮಿಯು ಚೆನ್ನಾಗಿ ಬಲ್ಲವನಾಗಿದ್ದರೂ, ಅವನಿಗೆ ತನ್ನ ತಂಗಿಯಲ್ಲಿದ್ದ ಪ್ರೇಮಪಾಶವು ಅಂತಹ ಸಂಬಂಧಕ್ಕೂ ಸಮ್ಮತಿಸುವಂತೆ ಮಾಡಿತು. ಲೋಕವಿರುದ್ಧವಾದ ಈ ಸಂಬಂಧಕ್ಕೆ ತಕ್ಕ ಫಲವು ಕಾಣದೆ ಹೋಗಲಿಲ್ಲ. ಆ ಸಂಗತಿಯನ್ನೂ ತಿಳಿಸುವೆನು ಕೇಳು! ಅನಿರುದ್ಧನ ವಿವಾಹವು ನಡೆದು ಹೋದಮೇಲೆ, ಅದಕ್ಕಾಗಿ ಅಲ್ಲಿ ಬಂದಿದ್ದ ಕಳಿಂಗನೇ ಮೊದಲಾದ ಕೆಲವುಮಂದಿ ದುಷ್ಟರಾಜರು, ಬಲಗರ್ವಿತರಾಗಿ ರುಕ್ಮಿನಿಗೆ ಹೀಗೆಂದು ದುರ್ಬೋಧನೆಯನ್ನು ಮಾಡತೊಡಗಿದರು. "ಅಯ್ಯಾ! ಮಿತ್ರನೆ! ನೀನು ವಿಧಿಯಿಲ್ಲದೆ ನಿನ್ನ ಶತ್ರುಗಳೊಡನೆ ಬಾಂಧವ್ಯವನ್ನಂತೂ ಬೆಳೆಸಿದುದಾಯಿತು. ಆದರೇನು ? ಈಗಲೂ ಚಿಂತೆಯಿಲ್ಲ! ಉಪಾಯದಿಂದ ಈಗಲೂ ನೀನು ನಿನ್ನ ವೈರಿಯಾದ ಬಲರಾಮನಿಗೆ ತಕ್ಕ ಪ್ರತಿಕ್ರಿಯೆಯನ್ನು ಮಾಡಬಹುದು. ಅವನಿಗೆ ದ್ಯೂತ

ದಲ್ಲಿ ಪರಿಶ್ರಮವಿಲ್ಲ! ಆದರೂ ಅವನಿಗೆ ಜೂಜಾಡಬೇಕೆಂಬ ಆಸೆಯೇನೋ ಅಪಾರವಾಗಿರುವುದು. ಆದುದರಿಂದ ನೀನು ಅಕ್ಷದ್ಯೂತದಲ್ಲಿ ಅವನನ್ನು ಸೋಲಿಸಿ ಅವನ ಸರ್ವಸ್ವವನ್ನೂ ಅಪಹರಿಸಿಬಿಡು" ಎಂದರು. ಅದರಂತೆಯೇ ರುಕ್ಮಿಯು ಬಲರಾಮನನ್ನು ಉಪಾಯದಿಂದ ಜೂಜಾಡುವುದಕ್ಕೆ ಪ್ರೋತ್ಸಾಹಿಸಿದನು. ಒಂದೊಂದಾಟದಲ್ಲಿಯೂ ಬಲರಾಮನಿಗೆ 'ಪರಾಜಯವುಂಟಾಯಿತು. ಆಗ ಬಲರಾಮನು, ಹಟದಿಂದಲೂ, ಕೋಪದಿಂದಲೂ ಮೊದಲು ನೂರು, ಆಮೇಲೆ ಸಾವಿರ, ಆಮೇಲೆ ಹತ್ತುಸಾವಿರವರಹಗಳಂತೆ ಮೇಲೆಮೇಲೆ ಹಣವನ್ನೊಡ್ಡಿ, ಮೊದಮೊದಲು ತಾನು ಗೆದ್ದರೂ, ಕೊನೆಗೆ ಅವೆಲ್ಲವನ್ನೂ ಸೋತು ಬಿಟ್ಟನು. ಆಗ ಸಮೀಪದಲ್ಲಿದ್ದ ಕಳಿಂಗನು ಬಲರಾಮನನ್ನು ನೋಡಿ ಹದಿನಾರುಹಲ್ಲುಗಳೂ ಕಾಣುವಂತೆ ಅಟ್ಟಹಾಸದಿಂದ ನಗುತ್ತ ಅವನನ್ನು ಹಾಸ್ಯಮಾಡಿದನು. ಬಲರಾಮನಿಗೆ ಸಹಿಸಲಾರದ ಕೋಪವುಂಟಾಯಿತು. ಹಾಗಿದ್ದರೂ ಬಲರಾಮನು ಆಟದಮೇಲಿನ ಗಮನದಿಂದ ಸುಮ್ಮನಿದ್ದನು. ರುಕ್ಮಿಯು ಮತ್ತೊಮ್ಮೆ ಲಕ್ಷವರಹಗಳನ್ನೊಡ್ಡಲು, ಬಲರಾಮನಿಗೆ ಜಯವುಂಟಾಗಿ, ಆ ಹಣವು ಬಲರಾಮನಿಗೇ ಸೇರಬೇಕಾಯಿತು. ರುಕ್ಮಿಯು ಆ ಹಣವನ್ನು ಕೊಡಲಾರದೆ ಕಪಟತಂತ್ರವನ್ನಾರಂಭಿಸಿ, ಆ ಆಟದಲ್ಲಿ ತನಗೇ ಜಯವಾಯಿತೆಂದು ಸಾಧಿಸಿ ಹಠಹಿಡಿದನು. ಬಲರಾಮನಿಗಾದರೋ, ಪರ್ವಕಾಲದ ಸಮುದ್ರದಂತೆ ಮಹತ್ತಾದ ಕೋಪಾವೇಶವು ಉಕ್ಕಿಬರುತ್ತಿತ್ತು. ಅವನ ಕಣ್ಣುಗಳು ಕೆಂಪಾದುವು. ಅದನ್ನೂ ತಡೆದುಕೊಂಡು ಬಲರಾಮನು ಮತ್ತೊಮ್ಮೆ ಅದೇ ಹಣವನ್ನೊಡ್ಡಿದನು. ಆಗಲೂ ನ್ಯಾಯರೀತಿಯಿಂದ ಬಲರಾಮನಿಗೇ ಜಯವುಂಟಾಗಿ, ಆ ಹಣವೂ ಅವನಿಗೇ ಸೇರಬೇಕಾಯಿತು. ಆದರೆ ಆಗಲೂ ರುಕ್ಮಿಯು ತನಗೇ ಜಯವುಂಟಾಯಿತೆಂದು ಹಟಹಿಡಿಯುತ್ತ, ತನ್ನ ಸಮೀಪದಲ್ಲಿದ್ದ ಕಳಿಂಗಾದಿಗಳನ್ನೇ ಪಂಚಾಯಿತರನ್ನಾಗಿಟ್ಟು ಅವರಿಂದಲೂ ಅದೇಮಾತನ್ನು ಹೇಳಿಸಿದನು. ಅವರೆಲ್ಲರೂ ದುರ್ಯೋಧನನಲ್ಲಿ ತಮಗಿರುವ ಪಕ್ಷಪಾತದಿಂದ ಸುಳ್ಳುಸಾಕ್ಷ್ಯವನ್ನು ಹೇಳುತ್ತಿದ್ದಾಗ, ಆಕಾಶದಲ್ಲಿ "ಧರ್ಮರೀತಿಯಿಂದ ಜಯಿಸಿದವನು ಬಲರಾಮನೇ ಹೊರತು ರುಕ್ಮಿಯಲ್ಲ! ವಂಚಕನಾದ ಈ ರುಕ್ಮಿಯು ಹೇಳುವ

ಮಾತು ಸುಳ್ಳು". ಎಂಬ ಅಶರೀರವಾಣಿಯು ಕೇಳಿಸಿತು. ಆ ಮಾತನ್ನೂ ಲಕ್ಷ್ಯಮಾಡದೆ ದುಷ್ಟನಾದ ರುಕ್ಮಿಯು, ಬಲರಾಮನನ್ನು ಹೀಗಳೆಯುತ್ತಾ ಮುಂದೆ ತನಗೆ ಅದರಿಂದುಂಟಾಗಬಹುದಾದ ವಿನಾಶಕಾಲವನ್ನೂ ಯೋಚಿಸದೆ. ತನ್ನ ಮಿತ್ರರಾದ ದುಷ್ಟರಾಜರ ಪ್ರೋತ್ಸಾಹದಿಂದ ಹೀಗೆಂದು ಹೇಳುವನು. 'ಎಲಾ! ನೀವು ಕಾಡಿನಲ್ಲಿ ವಾಸಮಾಡತಕ್ಕ ಗೊಲ್ಲರು! ನಿಮಗೆ ಇಂತಹ ಚಮತ್ಕಾರದ ಆಟಗಳಲ್ಲಿ ಪರಿಚಯವೆಲ್ಲಿಯದು? ನೀವು ಜಯಿಸಿದೆವೆಂದರೆ ಯಾರುತಾನೇ ನಂಬುವರು! ಹೀಗೆ ಪಗಡೆಗಳಿಂದಾಗಲಿ, ಬಾಣಗಳಿಂದಾಗಲಿ ಆಟವಾಡತಕ್ಕ ಶಕ್ತಿಯು ನಮ್ಮಂತಹ ಕ್ಷತ್ರಿಯರಿಗೇಹೊರತು ನಿಮ್ಮಂತಹ ಗೊಲ್ಲರಿಗಲ್ಲ" ಎಂದು ಅಟ್ಟಹಾಸದಿಂದ ನಕ್ಕು ಹಾಸ್ಯಮಾಡಿದನು. ಆಗ ಬಲರಾಮನ ಕೋಪವನ್ನು ಕೇಳಬೇಕೆ? ಮೊದಲೇ ಕಳಿಂಗನು ತನ್ನನ್ನು ಹಾಸ್ಯಮಾಡಿ ನಕ್ಕುದೊಂದು! ಧರ್ಮದಿಂದ ತಾನು ಜಯಿಸಿದ ಆಟದಲ್ಲಿ ರುಕ್ಮಿಯು ಅಪಲಾಪಮಾಡಿದುದೊಂದು! ಇವೆಲ್ಲವೂ ಅವನಿಗೆ ಕೋಪದಿಂದ ಮೈಮರೆಯುವಂತೆ ಮಾಡಿತು. ಆಕ್ಷಣವೇ ತನ್ನ ಸಮೀಪದಲ್ಲಿದ್ದ ಪರಿಘವನ್ನು ಕೈಗೆತ್ತಿಕೊಂಡು, ಅದರಿಂದ ಆ ರಾಜಸಭೆಯಲ್ಲಿಯೇ ರುಕ್ಮಿಯನ್ನು ಕೊಂದುಬಿಟ್ಟನು. ಮತ್ತು ತನ್ನನ್ನು ನೋಡಿ ಹಲ್ಲುಕಿರಿದು ಹಾಸ್ಯಮಾಡಿದ ಕಳಿಂಗನನ್ನು ಬಲಾತ್ಕಾರದಿಂದ ಹಿಡಿದು, ಕಾಲಿಂದ ಮೆಟ್ಟಿ, ಅವನ ಹಲ್ಲುಗಳೆಲ್ಲವನ್ನೂ ಉದಿರಿಸಿಬಿಟ್ಟನು; ತನ್ನಮೇಲೆ ಯುದ್ಧಕ್ಕಾಗಿ ಬಂದ ಇತರರಾಜರನ್ನೂ ಅದೇ ಪರಿಘಾಯುಧದಿಂದ ಬಡಿದು ಕೆಡಹುತ್ತಬಂದನು. ಆ ರಾಜರೆಲ್ಲರೂ ಕೈಕಾಲು ಮುರಿದು, ಭಯದಿಂದ ನಾನ್ನಾದಿಕ್ಕುಗಳಿಗೆ ಪಲಾಯನಮಾಡಿದರು. ಆಗ ರುಕ್ಮಿಣಿಯು,ತನ್ನಣ್ಣನ ಮರಣವನ್ನು ಕಣ್ಣಾರೆ ನೋಡುತ್ತಿದ್ದರೂ, ರಾಮಕೃಷ್ಣರ ಮನಸ್ಸಿಗೆ ಅಸಮಾಧಾನವುಂಟಾಗುವುದೋ ಎಂಬ ಭಯದಿಂದ ಬಾಯೆತ್ತದೆ ಸುಮ್ಮನಿದ್ದುಬಿಟ್ಟಳು. ಆಮೇಲೆ ಬಲರಾಮನೇ ಮೊದಲಾದ ದಾಶಾರ್ಹರೆಲ್ಲರೂ, ಹೊಸಮದುಮಗಳೊಡನೆ ಅನಿರುದ್ಧನನ್ನು ರಥದಲ್ಲಿ ಕುಳ್ಳಿರಿಸಿಕೊಂಡು, ಶ್ರೀ ಕೃಷ್ಣಸಹಾಯದಿಂದ ಸರ್ವಾಭೀಷ್ಟಸಿದ್ಧಿಯನ್ನು

ಹೊಂದಿ, ಬಹಳಸಂಭ್ರಮದೊಡನೆ ದ್ವಾರಕೆಗೆ ಬಂದು ಸೇರಿದರು ಇದು ಅರುವತ್ತೊಂದನೆಯ ಅಧ್ಯಾಯವು.

---

ಉಷಾಪರಿಣಯವೃತ್ತಾಂತವು.

ಆಗ ಪರೀಕ್ಷಿದ್ರಾಜನು ಶುಕನನ್ನು ಕುರಿತು "ಓ ಮುನೀಂದ್ರಾ! ಅನಿರುದ್ಧನು ಬಾಣಾಸುರನ ಮಗಳಾದ ಉಷೆಯೆಂಬವಳನ್ನು ವರಿಸಿದುದಾಗಿಯೂ, ಆ ವಿವಾಹಸಂದರ್ಭದಲ್ಲಿ ಕೃಷ್ಣನಿಗೂ, ರುದ್ರನಿಗೂ ಘೋರಯುದ್ಧವು ನಡೆದುದಾಗಿಯೂ ಕೇಳಿಬಲ್ಲೆನು ಆ ವೃತ್ತಾಂತವನ್ನು ವಿವರಿಸಿ ತಿಳಿಸಬೇಕು" ಎಂದು ಕೇಳಲು,ಶುಕಮುನಿಯು ಆಕಥೆಯನ್ನು ಪ್ರಕ್ರಮಿಸಿದನು. "ರಾಜಾ ಕೇಳು! ವಾಮನರೂಪಿಯಾದ ಭಗವಂತನಿಗೆ ಭೂದಾನವನ್ನು ಮಾಡಿ ಪ್ರಸಿದ್ಧನಾದ ಬಲಿಚಕ್ರವರ್ತಿಯ ಮಹಾಮಹಿಮೆಯನ್ನು ನೀನು ಕೇಳಿಬಲ್ಲೆಯಷ್ಟೆ! ಅವನಿಗೆ ನೂರುಮಂದಿ ಮಕ್ಕಳಿದ್ದರು. ಅವರಲ್ಲಿ ಬಾಣಾಸುರನೇ ಜ್ಯೇಷ್ಠನು. ಈ ಬಾಣನು ರುದ್ರನಿಗೆ ಪರಮಭಕ್ತನು. ಇವನು ರಾಕ್ಷಸಕುಲದವನಾದರೂ, ಪೂಜ್ಯತೆಯಲ್ಲಿಯೂ, ಔದಾರ್ಯದಲ್ಲಿಯೂ, ಬುದ್ಧಿಬಲದಲ್ಲಿಯೂ, ಸತ್ಯಸಂಧತೆಯಲ್ಲಿಯೂ, ವ್ರತನಿಷ್ಠೆಯಲ್ಲಿಯೂ ಪ್ರಸಿದ್ಧಿಗೊಂಡವನು ಇವನು ಶೋಣಿತವೆಂಬ ಪಟ್ಟಣದಲ್ಲಿದ್ದು ರಾಜ್ಯವನ್ನಾಳುತಿದ್ದನು. ರುದ್ರಾನುಗ್ರಹದಿಂದ ದೇವತೆಗಳೆಲ್ಲರೂ ಅವನಿಗೆ ಕಿಂಕರರಾಗಿ ಸೇವೆಮಾಡುತಿದ್ದರು. ಇವನಿಗೆ ಸಾವಿರತೋಳುಗಳುಂಟು, ಒಮ್ಮೆ ರುದ್ರನ ತಾಂಡವಕಾಲದಲ್ಲಿ, ಈ ಬಾಣಾಸುರನು ತನ್ನ ಸಹಸ್ರಬಾಹುಗಳಿಂದಲೂ ವಾದ್ಯಗಳನ್ನು ನುಡಿಸುತ್ತ ಅವನನ್ನು ಸಂತೋಷಪಡಿಸಿದನು. ಸರ್ವಜೀವಾಧಿಪತಿಯಾಗಿಯೂ, ಭಕ್ತವತ್ಸಲನಾಗಿಯೂ ಇರುವ ರುದ್ರನು, ಆ ಬಾಣಾಸುರನ ಭಕ್ತಿಗೆ ಮೆಚ್ಚಿ, ಬೇಕಾದ ವರಗಳನ್ನು ಕೇಳಿಕೊಳ್ಳುವಂತೆ ಪ್ರೇರಿಸಲು, ಬಾಣಾಸುರನು, ಆ ರುದ್ರನನ್ನೇ ತನ್ನ ಪಟ್ಟಣಕ್ಕೆ ಕಾವಲಾಗಿದ್ದು ರಕ್ಷಿಸುತ್ತಿರಬೇಕೆಂದು ಕೇಳಿಕೊಂಡನು. ರುದ್ರನು ಅದರಂತೆಯೇ ಒಪ್ಪಿಕೊಂಡು, ಅವನ ಪುರವನ್ನು ರಕ್ಷಿಸುತ್ತಿರಲು, ಬಾಣಾಸುರನು ಆ ರುದ್ರನ ಬಲದಿಂದ ಯಾರಿಗೂ ದುರ್ಜಯನಾಗಿದ್ದನು. ಇದರಿಂದ ಆ ಅಸುರನಿಗೆ

ತನಗೆ ಸಮಾನರಾದ ವೀರರೇ ಇಲ್ಲವೆಂಬ ಹೆಮ್ಮೆಯು ಹೆಚ್ಚಿ ಹೋಯಿತು. ಆ ಗರ್ವದಿಂದ ಈತನು, ಒಮ್ಮೆ ಸಮೀಪದಲ್ಲಿದ್ದ ರುದ್ರನ ಪಾದಗಳಿಗೆ ತನ್ನ ತಲೆಯನ್ನು ಸೋಕಿಸಿ ನಮಸ್ಕರಿಸುತ್ತ ಹೀಗೆಂದು ಪ್ರಾರ್ಥಿಸಿದನು. “ಓ ಮಹಾದೇವಾ! ಲೋಕಗುರುವಾಗಿ ಸರ್ವೇಶ್ವರನೆನಿಸಿಕೊಂಡ ನಿನಗೆ ವಂದನವು ಕಲ್ಪವೃಕ್ಷದಂತೆ ಆಶ್ರಿತರ ಕೋರಿಕೆಯನ್ನೀಡೇರಿಸತಕ್ಕ ನಿನ್ನಲ್ಲಿ ನನ್ನದೊಂದು ಪ್ರಾರ್ಥನೆಯುಂಟು! ಏನೆಂದರೆ!ಈಗ ನೀನು ನನಗೆ ಅನುಗ್ರಹಿಸಿಕೊಟ್ಟಿರುವ ಈ ನನ್ನ ಸಹಸ್ರಭುಜಗಳೂ,ನನ್ನ ಮೈಗೆ ಕೇವಲಭಾರಭೂತಗಳಾಗಿರುವುವೇಹೊರತು ಇವುಗಳಿಂದೇನೂ ಕಾರ್ಯವಿಲ್ಲ! ಮೂರುಲೋಕಗಳಲ್ಲಿಯೂ ನನ್ನನ್ನು ಪ್ರತಿಭಟಿಸಿ ನಿಲ್ಲುವಷ್ಟು ಧೈರ್ಯಶಾಲಿಗಳಾರೂ ಇಲ್ಲ! ಅಷ್ಟೇಕೆ! ನೀನೊಬ್ಬನುಹೊರತು, ನಿನಗೆ ಸಮಾನಬಲವುಳ್ಳ ಬೇರೊಬ್ಬರಾದರೂ ನನ್ನನ್ನು ಇದಿರಿಸಲಾರರು. ಈ ನನ್ನ ತೋಳುಗಳ ನವೆಯನ್ನಾರಿಸಬೇಕೆಂದರೆ, ನನಗೆ ಅವಕಾಶವೇ ಇಲ್ಲದೆ ಹೋಗಿದೆ. ಇದಕ್ಕಾಗಿ ನಾನೊಮ್ಮೆ ಈ ನನ್ನ ತೋಳುಗಳಿಂದ ಅನೇಕಪರ್ವತಗಳನ್ನು ಗುದ್ದಿ ಪುಡಿಮಾಡಿದೆನು. ದಿಗ್ಗಜಗಳೊಡನೆ ಹೋರಾಡುವುದಕ್ಕಾಗಿ ಹೊರಟಾಗ, ಅವುಗಳೂ ನನ್ನ ಮುಂದೆ ನಿಲ್ಲಲಾರದೆ ಪಲಾಯನಮಾಡಿದುವು ಈ ನನ್ನ ಮೈನವೆಯನ್ನಾರಿಸುವುದಕ್ಕೆ ಉಪಾಯವೇ ಇಲ್ಲದಂತಿದೆ! ಇದಕ್ಕೇನು ಮಾಡಲಿ”ಎಂದನು ಈ ಗರ್ವದ ಮಾತನ್ನು ಕೇಳಿ ರುದ್ರನಿಗೂ ಕೋಪವುಂಟಾಯಿತು. ಆಗ ರುದ್ರನು ಬಾಣಾಸುರನನ್ನುಕುರಿತು” ಓ ಮೂಢಾ! ನನಗೆ ಸಮಾನರಾದವರೂ ನಿನ್ನ ಮುಂದೆ ನಿಲ್ಲಲಾರರೆಂದು ಹೇಳಿದೆಯಲ್ಲವೆ? ಹಾಗೆಯೇ ಆಗಲಿ! ನಿನ್ನ ರಥಕೇತುವು ಅಕಸ್ಮಾತ್ತಾಗಿ ಯಾವಾಗ ಮುರಿದುಬೀಳುವುದೋ, ಆಗ ನನಗೆ ಸಮಾನನಾದವನೊಬ್ಬನು ನಿನ್ನೊಡನೆ ಯುದ್ಧಕ್ಕೆ ನಿಂತು ನಿನ್ನ ಕೊಬ್ಬನ್ನು ಮುರಿಯುವನು. ಹೋಗು” ಎಂದನು. ಬುದ್ಧಿಹೀನನಾದ ಬಾಣಾಸುರನು, ಅಂತಹ ಯುದ್ಧಪ್ರಸಕ್ತಿಯೇ ತನಗೆ ಪರಮಲಾಭವೆಂದು ತಿಳಿದು, ಸಂತೋಷದಿಂದ ತನ್ನ ಅರಮನೆಗೆ ಹಿಂತಿರುಗಿ, ರುದ್ರನು ತನಗೆ ಸೂಚಿಸಿದ್ದ ಧ್ವಜಭಂಗವು ಯಾವಾಗ ನಡೆಯುವುದೋ ಎಂದು ಆ ಕಾಲವನ್ನೇ ಆತುರದಿಂದ ಇದಿರುನೋಡುತಿದ್ದನು ಈಸಂಗತಿಯು

ಹಾಗಿರಲಿ! ಈ ಬಾಣಾಸುರನಿಗೆ ತ್ರಿಲೋಕಸುಂದರಿಯಾದ ಉಷೆಯೆಂಬ ಮಗಳೊಬ್ಬಳಿದ್ದಳು. ಒಮ್ಮೆ ಈ ಉಷೆಯು ಮಲಗಿದ್ದಾಗ,ಅವಳಿಗೆ ಪ್ರದ್ಯು ಮ್ನಪುತ್ರನಾದ ಅನಿರುದ್ಧನ ರೂಪವು ಕನಸಿನಲ್ಲಿ ಕಾಣಿಸಿತು. ಅವಳು ಹಿಂ ದೆ ಯಾವಾಗಲೂ ಅನಿರುದ್ಧನನ್ನು ಪ್ರತ್ಯಕ್ಷದಲ್ಲಿ ಕಂಡವಳೂ ಅಲ್ಲ! ಅವನ ವಿಷಯವನ್ನು ಕಿವಿಯಿಂದ ಕೇಳಿದವಳೂ ಅಲ್ಲ!ಹಾಗಿದ್ದರೂ ಅವಳಿಗೆ ಆ ಕನ ಸಿನಲ್ಲಿ ಕಂಡ ಮೂರ್ತಿಯಲ್ಲಿ ಮೋಹವು ಹುಟ್ಟಿತು. ನಿದ್ರೆತಿಳಿದು ಕಣ್ಣು ತೆರೆದಾಗ,ಆ ಮೂರ್ತಿಯು ಅದೃಶ್ಯವಾದುದನ್ನು ನೋಡಿ ಅವಳು“ಪ್ರಿಯಾ! ಎಲ್ಲಿರುವೆ! ಎಲ್ಲಿರುವೆ” ಎಂದು ಕನವರಿಸುತ್ತ, ಸುತ್ತಲೂ ತಿರುಗಿತಿರುಗಿ ನೋಡಿದಳು. ಆಗ ತನ್ನ ಸಖಿಯರೆಲ್ಲರೂ ಸುತ್ತಲೂ ಕುಳಿತಿದ್ದುದನ್ನು ಕಂಡು, ಹಾಗೆಯೇ ನಾಚಿಕೆಯಿಂದ ತಲೆಯನ್ನು ತಗ್ಗಿಸಿ, ಮನ್ಮಥತಾಪ ದಿಂದ ತನ್ನಲ್ಲಿ ತಾನೇ ಕೊರಗುತಿದ್ದಳು. ಆಕೆಯ ಸಖಿಯರಲ್ಲಿ ಚಿತ್ರಲೇಖೆ ಯೆಂಬವಳೊಬ್ಬಳಿದ್ದಳು. ಇವಳು ಬಾಣಾಸುರನ ಮಂತ್ರಿಯಾದ ಕುಂಭಾಂ ಡನೆಂಬವನ ಮಗಳು! ಈಕೆಯು ಉಷೆಗೆ ವಿಶೇಷಪ್ರೇಮಪಾತ್ರಳಾಗಿದ್ದಳು. ಈ ಚಿತ್ರಲೇಖೆಯು ಕುತೂಹಲದಿಂದ ಉಷೆಯನ್ನು ಕುರಿತು “ಓ ಸಖೀ! ಈಗಾಗಲೇ ನೀನು ಗಂಡನಿಗಾಗಿ ಹಂಬಲಸುವಂತಿದೆ! ನಿನಗೆ ಯಾವನಲ್ಲಿ ಅನು ರಾಗವು ಹುಟ್ಟಿರುವುದು ಹೇಳು! ನಿನ್ನ ಮನೋರಥಪಾತ್ರನಾವನು? ನಿನ್ನನ್ನು ಕೈಹಿಡಿಯತಕ್ಕ ಅನುರೂಪನಾದ ವರನಾವನೆಂದು ಇದುವರೆಗೆ ನನಗೆ ತಿಳಿದಿಲ್ಲ. ನಿಜಸ್ಥಿತಿಯನ್ನು ತಿಳಿಸು” ಎಂದಳು ಅದಕ್ಕಾ ಉಷೆಯು” ‘ಸಖೀ! ನಾನೇನೆಂದು ಹೇಳಲಿ! ನಿನ್ನೆ ರಾತ್ರಿ ಸ್ವಪ್ನದಲ್ಲಿ ಸುಂದರಾಂಗ ನಾದ ಪುರುಷನೊಬ್ಬನು ನನಗೆ ಗೋಚರಿಸಿದನು ಅವನಿಗೆ ಶ್ಯಾಮಲವರ್ಣ ವಾದ ಮೈ! ಕಮಲದಂತೆ ಕಣ್ಣುಗಳು! ಹೊಂಬಣ್ಣದ ಪಟ್ಟೆಮಡಿ! ಉಬ್ಬಿದ ಭುಜಗಳು! ನೋಡಿದಮಾತ್ರದಲ್ಲಿಯೇ ಸ್ತ್ರೀಯರ ಮನಸ್ಸನ್ನು ಮೋಹಗೊಳಿಸತಕ್ಕ ರೂಪಸಂಪತ್ತಿ! ಇಂತಹ ಅದ್ಭುತರೂಪದಿಂದ ಕಾಣಿ ಸಿಕೊಂಡ ಆ ಪುರುಷನನ್ನು ನೋಡಿ, ನನ್ನ ಮನಸ್ಸು ಅವನಲ್ಲಿ ಮೋಹಗೊಂ ಡಿರುವುದು. ಅವನಿಗಾಗಿಯೇ ನಾನು ಹಂಬಲಿಸುತ್ತಿರುವೆನು. ಸ್ವಪ್ನದಲ್ಲಿ ಆತನು ನನ್ನ ಕಣ್ಣಿಗೆ ಗೋಚರಿಸಿದುದುಮಾತ್ರವಲ್ಲ! ಆತನು ನನ್ನ ಸಮೀಪಕ್ಕೆ

ಬಂದು ನನ್ನನ್ನು ಮುತ್ತಿಕ್ಕಿ, ಒಂದಾವರ್ತಿ ನನಗೆ ತನ್ನ ಅಧರಾಮೃತವನ್ನೂ ಪಾನಮಾಡಿಸಿ, ನನ್ನನ್ನು ಹೀಗೆ ವ್ಯಸನಸಮುದ್ರದಲ್ಲಿ ಮುಳುಗಿಸಿಹೋಗಿರುವನು. ಅವಳು ಯಾವನೋ, ಎಲ್ಲಿರುವನೋ ತಿಳಿಯದೆ ನನ್ನಮನಸ್ಸು ಕಳವಳಿಸುತ್ತಿರುವುದು." ಎಂದಳು. ಅದಕ್ಕಾ ಚಿತ್ರಲೇಖೆಯು" ಸಖಿ! ಚಿಂತಿಸಬೇಡ! ನಿನ್ನ ವ್ಯಸನವನ್ನು ನಾನು ಹೇಗಾದರೂ ನೀಗಿಸುವೆನು. ನಿನ್ನ ಮನಸ್ಸನ್ನು ಮೋಸಗೊಳಿಸಿದ ಆ ಪುರುಷನು ಮೂರುಲೋಕಗಳಲ್ಲಿ ಎಲ್ಲಿದ್ದರೂ ನಿನ್ನಲ್ಲಿಗೆ ಕರೆತಂದು ಸೇರಿಸುವೆನು. ಆದರೆ, ಇಂತವನೇ ನಿನ್ನ ಮನಃಪ್ರಿಯನೆಂಬುದನ್ನುಮಾತ್ರ ನೀನು ನನಗೆ ಸೂಚಿಸಬೇಕು" ಎಂದಳು. ಆಕೆಯು ಚಿತ್ರಲೇಖನದಲ್ಲಿ ಬಹಳ ನೈಪುಣ್ಯವುಳ್ಳವಳಾದುದರಿಂದ, ಚಿತ್ರಪಟವನ್ನು ತೆಗೆದು, ಅದರಲ್ಲಿ, ದೇವ, ದಾನವ, ಸಿದ್ಧ ಗಂಧರ್ವ, ವಿದ್ಯಾಧರ, ಪನ್ನಗ, ಚಾರಣ ಯಕ್ಷಾದಿದೇವಜಾತಿಯಲ್ಲಿರುವ ಪ್ರಸಿದ್ಧಪುರುಷರ ಭಾವಚಿತ್ರಗಳನ್ನೂ, ಭೂಲೋಕದಲ್ಲಿ ಸೌಂದರ್ಯಾತಿಶಯದಿಂದ ಪ್ರಸಿದ್ಧರಾದ ರಾಜಕುಮಾರರ ಭಾವಚಿತ್ರಗಳನ್ನೂ ಬರೆದು ತೋರಿಸುತ್ತ ಬಂದಳು. ಮುಖ್ಯವಾಗಿ ಮನುಷ್ಯರಲ್ಲಿ ವೃಷ್ಣಿಕುಲದವರನ್ನೂ, ವಸುದೇವನನ್ನೂ, ಅವನ ಮಕ್ಕಳಾದ ರಾಮಕೃಷ್ಣರನೂ, ಪ್ರದ್ಯುಮ್ನನನ್ನೂ ಬರೆದುತೋರಿಸಿದಳು. ಪ್ರದ್ಯುಮ್ನನನ್ನು ನೋಡುವಾಗ ಆ ಉಷೆಗೆ, ತಾನು ಸ್ವಪ್ನದಲ್ಲಿ ಕಂಡ ಪುರುಷನ ರೂಪಸಾದೃಶ್ಯವು ಮನಸ್ಸಿಗೆ ತೋರಿ ಸ್ವಲ್ಪವಾಗಿ ಲಜ್ಜೆಯು ಅಂಕುರಿಸುತ್ತ ಬಂದಿತು. ಆಮೇಲೆ ಚಿತ್ರಲೇಖೆಯು ಅವನ ಮಗನಾದ ಅನಿರುದ್ಧನ ರೂಪವನ್ನೂ ಚಿತ್ರಿಸಿದಳು. ಆರೂಪವನ್ನು ನೋಡಿದಾಗ ಉಷೆಯ ಸಂತೋಷವನ್ನು ಕೇಳಬೇಕೆ! ಮೋಹದಿಂದಲೂ, ಲಜ್ಜೆಯಿಂದಲೂ, ಮೈಮರೆತು ಮಾತಾಡಲಾರದೆ ತಲೆಯನ್ನು ತಗ್ಗಿಸಿ ಸ್ವಲ್ಪಹೊತ್ತಿನವರೆಗೆ ಸುಮ್ಮನಿದ್ದಳು. ಆಮೇಲೆ ಧೈರ್ಯವನ್ನು ತಂದುಕೊಂಡು, ಮಂದಹಾಸಪೂರ್ವಕವಾಗಿ ಸಖಿಯನ್ನು ಕುರಿತು 'ಸಖಿ! ಇವನೇ! ಇವನನ್ನೇ ನಾನು ಕನಸಿನಲ್ಲಿ ನೋಡಿದುದು" ಎಂದಳು. ಚಿತ್ರಲೇಖೆಯು ತನ್ನ ಸಖಿಗೆ ಅನಿರುದ್ಧನಲ್ಲಿ ಅನುರಾಗವು ಹುಟ್ಟಿರುವುದನ್ನು ತಿಳಿದು, ಒಡನೆಯೇ ಆಕಾಶಮಾರ್ಗದಿಂದ ಹೊರಟು, ಕೃಷ್ಣರಕ್ಷಿತವಾದ ದ್ವಾರಕಾಪುರಿಗೆ ಬಂದು, ಅಲ್ಲಿ ತನ್ನಮಾಯ

ಯಿಂದ ಯಾರಿಗೂ ತಿಳಿಯದೆ ಅಂತಃಪುರವನ್ನು ಪ್ರವೇಶಿಸಿದಳು. ಅಲ್ಲಿ ಪ್ರದ್ಯುಮ್ನಕುಮಾರನಾದ ಅನಿರುದ್ಧನು ಮಂಚದಮೇಲೆ ನಿದ್ರಿಸುತಿದ್ದನು. ಒಡನೆಯೇ ಆಕೆಯು ತನ್ನ ಯೋಗಮಾಯೆಯಿಂದ ಅನಿರುದ್ಧನನ್ನು ಮಲಗಿದ್ದ ಮಂಚದೊಡನೆಶೋಣಿತಪುರಕ್ಕೆತಂದು ಉಷೆಯಶಯನಗೃಹದಲ್ಲಿ ಸೇರಿಸಿ. ತಾನು ನಡೆಸಿದ ವೃತ್ತಾಂತವೆಲ್ಲವನ್ನೂ ಅವಳಿಗೆ ತಿಳಿಸಿದಳು. ಉಷೆಯು ತನ್ನ ಮನಃಪ್ರಿಯನಾದ ಅನಿರುದ್ಧನನ್ನು ಕಂಡೊಡನೆ ಸಂತೋಷದಿಂದುಕ್ಕುತ್ತ, ಬೇರೆ ಯಾರಿಗೂ ಪ್ರವೇಶಿಸಲಸಾಧ್ಯವಾದ ಆ ತನ್ನ ಮನೆಯಲ್ಲಿ ಅನಿರುದ್ಧನೊಡನೆ ಯಥೇಚ್ಛವಾಗಿ ರಮಿಸುತಿದ್ದಳು. ತನ್ನ ಪ್ರಿಯನ ಮನಸ್ಸಿಗೊಪ್ಪುವಂತೆ ಅಮೂಲ್ಯವಾದ ವಸ್ತುಗಳನ್ನೂ, ಗಂಧ ಪುಷ್ಪಧೂಪ ದೀಪಾದಿಗಳನ್ನೂ,ಭಕ್ಷ್ಯ,ಭೋಜ್ಯ,ಪಾನೀಯಾದಿಗಳನ್ನೂತಂದೊದಗಿಸಿ ಪ್ರಿಯವಾಕ್ಯಗಳಿಂದಲೂ, ಶುಶ್ರೂಷೆಯಿಂದಲೂ ಅವನನ್ನು ಬಹಳವಾಗಿ, ಸಂತೋಷಪಡಿಸುತ್ತ ಬಂದಳು. ಅನಿರುದ್ಧನಿಗೆ ಅವಳಲ್ಲಿ ಮಿತಿಮೀರದ ಸ್ನೇಹವು ಹುಟ್ಟಿತು ಆ ಭೋಗಸಮೃದ್ಧಿಯಲ್ಲಿ ಅವನಿಗೆ ಹಿಂದೆ ಕಳೆದುಹೋದ ದಿನಗಳೂ ತಿಳಿಯದಂತಾಯಿತು! ಬಹುದಿನಗಳವರೆಗೆ ಆ ಅಂತಃಪುರದಲ್ಲಿಯೇ ಗೂಢವಾಗಿದ್ದುಬಿಟ್ಟನು. ಹೀಗೆ ಉಷೆಯು, ಅನಿರುದ್ಧನೊಡನೆ ಅಂತಃಪುರದಲ್ಲಿ ರಮಿಸುತ್ತಿರುವ ವಿಷಯವು ಕೆಲಕೆಲವು ಸೂಚನೆಗಳಿಂದ ಕ್ರಮಕ್ರಮವಾಗಿ ಹೊರಬಿದ್ದಿತು. ಆಗ ಉಷೆಯು ಅದುವರೆಗೆ ಬಹಳ ನಿಯಮದಿಂದ ನಡೆಸುತಿದ್ದ ಕನ್ಯಾವ್ರತವು ನಿಂತುಹೋಗಿರುವುದನ್ನೂ, ಅವಳು ಅನ್ನಪಾನಗಳಿಗೂ ಕೂಡ ಸಕಾಲಕ್ಕೆ ಬಾರದೆ ಇರುವುದನ್ನೂ ನೋಡಿ, ರಾಜಭಟರು ಬಾಣಾಸುರನಬಳಿಗೆ ಹೋಗಿ'‘ಪ್ರಭೂ! ನಿನ್ನ ಮಗಳಾದ ಉಷೆಯು ನಮ್ಮ ಕುಲಕ್ಕೇ ಅವಮಾನಕರವಾದ ಕೆಲವು ಕಾರ್ಯಗಳನ್ನು ನಡೆಸುವಹಾಗಿದೆ' ನಾವು ಅವಳನ್ನು ಹೊರಗೆ ಬಿಡದೆ ಮನೆಯ ಬಾಗಿಲಲ್ಲಿ ಎಷ್ಟೋ ಎಚ್ಚರದಿಂದ ಕಾವಲಿರುವಾಗಲೂ,ಅವಳು ಯಾವನೋ ಪುರುಷನೊಡನೆ ಆಟವಾಡುವಂತಿದೆ ಮತ್ತೊಬ್ಬಪುರುಷನು ಅವಳನ್ನು ಕಣ್ಣಿಂದ ನೋಡುವುದಕ್ಕೂ ಸಾಧ್ಯವಿಲ್ಲದಂತೆ ನಾವು ಬಹಳ ಎಚ್ಚರಿಕೆಯಿಂದಿರುವೆವು. ಇಂತಹ ಸ್ಥಿತಿಯಲ್ಲಿಯೂ ಹೀಗಾಗಲು ಕಾರಣವೇನೆಂದು ನಮಗೂ ಗೋಚರವಿಲ್ಲದಿದೆ”ಎಂದರು.ಬಾಣನು.ತನ್ನ ಮಗ

ಳ ವಿಷಯದಲ್ಲಿ ರಾಜದೂತರು ಹೇಳುತ್ತಿರುವ ಅಪವಾದವನ್ನು ಕೇಳಿದೊಡ ನೆ, ಚಿಂತಾಕುಲನಾಗಿ, ಅಲ್ಲಿಂದ ಹೊರಟು ಕನ್ಯಾಂತಃಪುರಕ್ಕೆಬಂದು, ಅಲ್ಲಿ ಅನಿರುದ್ಧನನ್ನು ಕಂಡನು. ಸಾಕ್ಷಾನ್ಮನ್ಮಥಕುಮಾರನಾದ ಆ ಅನಿರುದ್ಧ ನ ಅದ್ಭುತಸೌಂದರ್ಯವನ್ನು ಕೇಳಬೇಕೆ? ಶ್ಯಾಮಲವಾದ ದೇಹಕಾಂತಿ! ಲೋಕಸುಂದರವಾದ ದಿವ್ಯಮೂರ್ತಿ!ನಡುವಿನಲ್ಲಿ ಪೀತಾಂಬರದ ದಟ್ಟಿ!ಕಮ ಲದಂತೆ ಕಣ್ಣು! ನೀಡಿದ ತೋಳುಗಳು! ಕಿವಿಯಲ್ಲಿ ಕುಂಡಲಗಳು! ಕುಂಡ ಲಕಾಂತಿಯಿಂದಲೂ, ಮುಂಗುರುಳುಗಳಿಂದಲೂ, ಮುಗುಳ್ನಗೆಯಿಂದಲೂ, ಅಂದವೇರಿದ ಮುಖದ ಸೊಗಸು! ಹೀಗೆ ದಿವ್ಯಸುಂದರಮೂರ್ತಿಯಾದ ಅನಿ ರುದ್ಧನು, ಅಲ್ಲಿ ಉಷೆಯೊಡನೆ ವಿನೋದದಿಂದ ಪಗಡೆಯಾಡುತ್ತಿ ದ್ದನು. ಆ ಉಷೆಯ ಮೈಮೇಲಿನ ಕುಂಕುಮದ ರೇಖೆಯೆಲ್ಲವೂ ಅವನ ಮೈ ಮೇಲೆ ಕಾಣುತ್ತಿರುವುದು. ಅವಳ ಸ್ತನಕುಂಕುಮದಿಂದ ಲೇಪಿತವಾದ ಮಲ್ಲಿಗೆಯ ಹಾರವು ಇವನ ಕಂಠದಲ್ಲಿ ತೂಗಾಡುತ್ತಿರುವುದು. ಹೀಗೆ ಅನಿ ರುದ್ಧನು ಯಾರಿಗೂ ತಿಳಿಯದಂತೆ ಬಂದು, ತನ್ನ ಮಗಳೊಡನೆ ಸರಸವಾಡು ದನ್ನು ಕಂಡು, ಬಾಣಾಸುರನಿಗೆ ಅತ್ಯಾಶ್ಚರ್ಯವುಂಟಾಯಿತು. ಒಡನೆಯೇ ಬಾ ಣನು, ಆಯುಧಪಾಣಿಗಳಾದ ಭಟರನ್ನು ಕರೆದು ಅನಿರುದ್ಧನನ್ನು ಕೊಲ್ಲುವು ದಕ್ಕಾಗಿ ಪ್ರೇರಿಸಿದನು. ಅನಿರುದ್ಧನು ಸಮೀಪದಲ್ಲಿದ್ದ ಲೋಹಮಯ ವಾದ ಪರಿಘವೊಂದನ್ನು ಕೈಗೆತ್ತಿಕೊಂಡು, ದಂಡಧಾರಿಯಾದ ಯಮ ನಂತೆ ಅವರನ್ನು ಕೊಲ್ಲುವುದಕ್ಕೆ ಸಿದ್ಧನಾಗಿ ನಿಂತನು. ಕಾಡಿನಲ್ಲಿ ಕೊಬ್ಬಿಬೆ ಳೆದ ಒಂದಾನೊಂದು ಕಾಡುಹಂದಿಯು, ತನ್ನನ್ನು ಕಚ್ಚುವುದಕ್ಕಾಗಿ ಸುತ್ತಿ ಮುತ್ತಿಬರುತ್ತಿರುವ ನಾಯಿಗಳನ್ನು ಹೇಗೋಹಾಗೆ, ಅನಿರುದ್ಧನು ತನ್ನನ್ನು ಹಿಡಿಯುವುದಕ್ಕಾಗಿ ಬಂದ ಆ ಭಟರೆಲ್ಲರನ್ನೂ ನಿಮಿಷಮಾತ್ರದಲ್ಲಿ ಧ್ವಂಸ ಮಾಡಿಬಿಟ್ಟನು. ಅನೇಕರು ತಲೆತಪ್ಪಿಸಿಕೊಂಡು ಓಡಿಹೋದರು. ಕೆಲವರು ಅಲ್ಲಿಯೇ ಕೈಕಾಲುಮುರಿದು ಕೆಳಗೆ ಬಿದ್ದರು. ಹೀಗೆ ತನ್ನ ಸೈನ್ಯವೆಲ್ಲವೂ ಹತ ವಾಗುತ್ತಿರುವುದನ್ನು ನೋಡಿ ಬಾಣಾಸುರನು, ಕೋಪದಿಂದ ನಾಗಪಾಶವ ನ್ನು ಪ್ರಯೋಗಿಸಿ, ಅದರಿಂದ ಅನಿರುದ್ಧನನ್ನು ಬಂಧಿಸಿಬಿಟ್ಟನು. ಈ ವಿಚಾರ ವನ್ನು ಕೇಳಿ ಉಷೆಯು, ಮಹಾದುಃಖದಿಂದ ಕೊರಗುತ್ತ ಧಾರೆಧಾರೆ

ಯಾಗಿ ಕಣ್ಣೀರುಬಿಟ್ಟು, ರೋದಿಸತೊಡಗಿದಳು. ಇದು ಅರುವತ್ತೆರಡನೆಯ ಅಧ್ಯಾಯವು.

---

## ಬಾಣಾಸುರಯುದ್ಧವು

ಓ ಪರೀಕ್ಷಿದ್ರಾಜಾ! ಇಷ್ಟರಲ್ಲಿ ಇತ್ತಲಾಗಿ ದ್ವಾರಕೆಯಲ್ಲಿ ಆಷಾಢ ದಿಂದ ಆಶ್ವಯುಜದವರೆಗಿನ ಮಳೆಗಾಲದ ನಾಲ್ಕು ತಿಂಗಳೂ, ಅನಿರುದ್ಧನನ್ನು ಕಾಣದೆ ಅವನ ಬಂಧುಗಳೆಲ್ಲರೂ ಮಹಾವ್ಯಸನದಿಂದ ಕಳವಳಿಸುತಿದ್ದರು ಇಷ್ಟರಲ್ಲಿ ನಾರದನು ದ್ವಾರಕೆಗೆ ಬಂದು, ಶೋಣಿತಪುರಿಯಲ್ಲಿ ಅನಿರುದ್ಧನು ನಾಗಪಾಶದಿಂದ ಬಂಧಿಸಲ್ಪಟ್ಟಿರುವುದನ್ನೂ, ಅದರ ಕಾರಣವನ್ನೂ ತಿಳಿಸಿದಮೇಲೆ, ವೃಷ್ಣಿಗಳೆಲ್ಲರೂ ಶೋಣಿತಪುರವನ್ನು ಮುತ್ತುವುದಕ್ಕಾಗಿ ಸೇನಾಸನ್ನಾಹಗಳೊಡನೆ ಹೊರಟರು ಪ್ರದ್ಯುಮ್ನ, ಯುಯುಧಾನ, ಗದ, ಸಾಂಬ, ಸಾರಣ, ನಂದ, ಉಪನಂದ, ಭದ್ರ, ಮೊದಲಾದ ಯಾದವವೀರರೆಲ್ಲರೂ, ರಾಮಕೃಷ್ಣರನ್ನು ಮುಂದಿಟ್ಟುಕೊಂಡು,ಹನ್ನೆರಡು ಅಕ್ಷೌಹಿಣೀಸೈನ್ಯಗಳೊಡನೆ ಹೊರಟರು. ಬಾಣಾಸುರನ ಪಟ್ಟಣವನ್ನು ಸುತ್ತಲೂ ಮುತ್ತಿಗೆ ಹಾಕಿದರು. ಮತ್ತು ಅಲ್ಲಿ ಕ್ರಮವಾಗಿ ಪುರೋದ್ಯಾನ, ಪ್ರಾಕಾರ, ಗೋಪುರಾದಿಗಳನ್ನು ಬಡಿದು ಕೆಡಹುತ್ತಬಂದರು. ಇದನ್ನು ನೋಡಿ ಬಾಣಾಸುರನು, ಅತ್ಯಾಕ್ರೋಶಗೊಂಡವನಾಗಿ, ತಾನೂ ಅಷ್ಟೇ ಸೈನ್ಯಗಳನ್ನು ಸೇರಿಸಿಕೊಂಡು ಯುದ್ಧಕ್ಕಾಗಿ ಹೊರಟುಬಂದನು. ಪೂಜ್ಯನಾದ ರುದ್ರನೂಕೂಡ, ತಾನು ಬಾಣಾಸುರನಿಗೆ ಕೊಟ್ಟ ವರದಂತೆ,ಅವನ ಸಹಾಯಕ್ಕಾಗಿ, ತನ್ನ ಮಗನಾದ ಷಣ್ಮುಖನೊಡನೆಯೂ, ಪ್ರಮಥಗಣಗಳೊಡನೆಯೂ ಹೊರಟು, ಯಾದವಸೈನ್ಯವನ್ನಿದಿರಿಸಿದನು ರುದ್ರನು ಕೃಷ್ಣನಿಗಿದಿರಾಗಿ ನಿಂತನು. ಹಾಗೆಯೇ ಷಣ್ಮುಖನು ಪ್ರದ್ಯುಮ್ನನನ್ನೂ, ಕುಂಭಾಂಡ ಕೂಪಕರ್ಣರೆಂಬವರಿಬ್ಬರು ಬಲರಾಮನನ್ನೂ, ಬಾಣಾಸುರನ ಪುತ್ರನು ಸಾಂಬನನ್ನೂ, ಬಾಣನು ಸಾತ್ಯಕಿಯನ್ನೂ ಇದಿರಿಸಿ ನಿಂತರು. ಎರಡುಪಕ್ಷದವರಿಗೂ ಭಯಂಕರವಾದ ಯುದ್ಧವು ಉಪಕ್ರಮಿಸಿತು. ಬ್ರಹ್ಮಾದಿದೇವತೆಗಳೂ, ಮುನಿಗಳೂ, ಸಿದ್ಧ, ಚಾರಣ, ಗಂಧರ್ವಾಪ್ಸರ

ಸರೂ, ಯುದ್ಧದರ್ಶನಕುತೂಹಲದಿಂದ ವಿಮಾನಗಳನ್ನೇರಿ ಬಂದು, ಆಕಾಶ ದಲ್ಲಿ ತುಂಬಿ ನೆರೆದಿದ್ದರು. ಯುದ್ಧಾರಂಭದಲ್ಲಿಯೇ ಕೃಷ್ಣನು, ತನ್ನ ಶಾರ್ಙ್ಗ ಧನುಸ್ಸಿನಿಂದ ಪರಂಪರೆಯಾಗಿ ಬಾಣಗಳನ್ನು ಪ್ರಯೋಗಿಸಿ, ರುದ್ರಾನು ಚರರಾದ ಭೂತ, ಪ್ರೇತ, ಪಿಶಾಚ, ಯಕ್ಷ, ರಾಕ್ಷಸ, ಗುಹ್ಯಕ, ವಿನಾಯಕ ಢಾಕಿನೀ, ಯಾತುಧಾನ, ಕೂಶ್ಮಾಂಡ, ಬ್ರಹ್ಮರಾಕ್ಷಸರನ್ನೂ, ಮಾತೃ ಗಣಗಳನ್ನೂ, ಕ್ಷಣಮಾತ್ರದಲ್ಲಿ ಧ್ವಂಸಮಾಡಿ ಓಡಿಸಿಬಿಟ್ಟನು. ರುದ್ರನು ಕೋಪದಿಂದ ಬೇರೆಬೇರೆ ವಿಧವಾದ ಶಸ್ತ್ರಾಸ್ತ್ರಗಳನ್ನು ಹೂಡಿ, ಕೃಷ್ಣನ ಮೇಲೆ!ಪ್ರಯೋಗಿಸುತಿದ್ದನು. ಕೃಷ್ಣನು ಸ್ವಲ್ಪಮಾತ್ರವೂ ಧೈರ್ಯಗುಂ ದದೆ, ಆ ಶಸ್ತ್ರಾಸ್ತ್ರಗಳೆಲ್ಲವನ್ನೂ ಪ್ರತ್ಯಸ್ತ್ರಗಳಿಂದ ನಿಗ್ರಹಿಸುತ್ತ ಬಂದನು. ಬ್ರಹ್ಮಾಸ್ತ್ರವನ್ನು ಬ್ರಹ್ಮಾಸ್ತ್ರದಿಂದಲೂ, ವಾಯವ್ಯಾಸ್ತ್ರವನ್ನು ಪರ್ವ ತಾಸ್ತ್ರದಿಂದಲೂ, ಆಗ್ನೇಯಾಸ್ತ್ರವನ್ನು ಪರ್ಜನ್ಯಾಸ್ತ್ರದಿಂದಲೂ, ಪಾಶು ಪತಾಸ್ತ್ರವನ್ನು ನಾರಾಯಣಾಸ್ತ್ರದಿಂದಲೂ ನಿಗ್ರಹಿಸಿ, ಕೊನೆಗೆ ಜೃಂಭ ಣಾಸ್ತ್ರದಿಂದ ರುದ್ರನನ್ನೂ ಮೂರ್ಛಿತನನ್ನಾಗಿ ಮಾಡಿಬಿಟ್ಟನು. ಆಮೇಲೆ ಕತ್ತಿಗಳಿಂದಲೂ, ಗದೆಗಳಿಂದಲೂ, ಬಾಣಗಳಿಂದಲೂ, ಬಾಣಾ ಸುರನ ಸೈನ್ಯವನ್ನೂ ಪ್ರಹರಿಸಿ ಓಡಿಸುತಿದ್ದನು. ಹೀಗೆಯೇ ಅತ್ತಲಾಗಿ ಷಣ್ಮುಖನೂ, ಪ್ರದ್ಯುಮ್ನನ ಬಾಣಗಳಿಂದ ಭಿನ್ನಗಾತ್ರನಾಗಿ, ಅಂಗಾಂಗಗ ಳಲ್ಲಿಯೂ ರಕ್ತವು ಸುರಿಯುತ್ತಿರಲು, ರಣರಂಗದಲ್ಲಿ ನಿಲ್ಲಲಾರದೆ, ತನ್ನ ವಾಹನವಾದ ನವಿಲನ್ನೇರಿ ಪಲಾಯನಮಾಡಿಬಿಟ್ಟನು. ಕುಂಭಾಂಡ ಕೂಪಕರ್ಣರಿಬ್ಬರೂ ಬಲರಾಮನ ಮುಸಲಾಯುಧಪ್ರಹಾರದಿಂದ ಸತ್ತು ಬಿದ್ದರು. ಅವರ ಸೈನ್ಯವೆಲ್ಲವೂ ಅನಾಥವಾಗಿ ದಿಕ್ಕುಗೆಟ್ಟು ಪಲಾಯನ ಮಾಡಿದುವು. ಹೀಗೆ ತನ್ನ ಸೈನ್ಯಗಳೆಲ್ಲವೂ ಹತವಾಗುತ್ತಿರುವುದನ್ನು ನೋಡಿ ಬಾಣಾಸುರನು, ತಡೆಯಲಾರದ ಕೋಪದಿಂದ, ತನಗಿದಿರಾಗಿ ನಿಂತಿದ್ದ ಸಾತ್ಯಕಿಯನ್ನು ಬಿಟ್ಟು,ಕೃಷ್ಣನಕಡೆಗೆ ರಥವನ್ನು ನಡೆಸಿಕೊಂಡು ಬಂದನು, ಏಕಕಾಲದಲ್ಲಿ ಐನೂರುಬಿಲ್ಲುಗಳಿಗೆ ನಾಣೇರಿಸಿ, ಒಂದೊಂದು ಬಿಲ್ಲಿನಲ್ಲಿ ಎರಡೆರಡು ಬಾಣಗಳಂತೆ ಸಾವಿರಬಾಣಗಳನ್ನು ಹೂಡಿದನು. ಇಷ್ಟರಲ್ಲಿಯೇ ಕೃಷ್ಣನು, ಅವನ ಕೈಯಲ್ಲಿದ್ದ ಧನುರ್ಬಾಣಗಳೆಲ್ಲವನ್ನೂ ಒಂದೇ ಸಲಕ್ಕೆ

ಕತ್ತರಿಸಿ ಕೆಡಹಿದುದಲ್ಲದೆ, ಮೇಲೆಮೇಲೆ ಬಾಣವರ್ಷದಿಂದ, ಆ ಬಾಣಾಸುರನ ರಥ, ರಥಾಶ್ವ, ಸಾರಥಿಗಳೆಲ್ಲವನ್ನೂ ಧ್ವಂಸಮಾಡಿ, ಜಯಸೂಚಕವಾದ ಶಂಖಧ್ವನಿಯನ್ನೂ ಮಾಡಿದನು. ಇಷ್ಟರಲ್ಲಿ ಬಾಣಾಸುರನ ತಾಯಿಯಾದ ಕೋಟಕಿಯೆಂಬವಳು ತನ್ನ ಮಗನಿಗೆ ಕೃಷ್ಣನ ಕೈಯಿಂದುಂಟಾಗುವ ಮರಣವನ್ನು ತಪ್ಪಿಸಬೇಕೆಂಬ ಉದ್ದೇಶದಿಂದ, ತಲೆಯನ್ನು ಕೆದರಿಕೊಂಡು, ಮೈಮೇಲೆ ಬಟ್ಟೆಯಿಲ್ಲದೆ ಓಡಿಬಂದು, ಕೃಷ್ಣನ ಮುಂದೆ ನಿಂತಳು. ಈ ಆಭಾಸವನ್ನು ನೋಡಲಾರದೆ ಕೃಷ್ಣನು, ಹಿಮ್ಮೊಗವಾಗಿ ತಿರುಗಿ ನಿಂತಿದ್ದಾಗ, ಬಾಣಾಸುರನು ತಲೆತಪ್ಪಿಸಿಕೊಂಡು ಓಡಿಹೋಗಿ ತನ್ನ ಪಟ್ಟಣದಲ್ಲಿ ಸೇರಿಕೊಂಡನು. ಇಷ್ಟರಲ್ಲಿ ಇತ್ತಲಾಗಿ ರುದ್ರನು ತನ್ನ ಭೂತಗಣಗಳೆಲ್ಲವೂ ಕೃಷ್ಣನಿಂದ ಪರಾಜಿತವಾಗಿ ಓಡಿ ಹೋದುದನ್ನು ಸಹಿಸಲಾರದೆ, ಮಾಹೇಶ್ವರಜ್ವರವೆಂಬ ಮಹಾಭಯಂಕರವಾದ ಒಂದಾನೊಂದುಜ್ವರವನ್ನು ಕೃಷ್ಣನಮೇಲೆ ಪ್ರಯೋಗಿಸಿದನು. ಆ ಜ್ವರವು ಮೂರು ತಲೆಗಳಿಂದಲೂ, ಮೂರು ಪಾದಗಳಿಂದಲೂ, ಕೂಡಿದ ಭಯಂಕರವಾದ ಪುರುಷಾಕೃತಿಯನ್ನು ತಾಳಿ, ಹತ್ತು ದಿಕ್ಕುಗಳನ್ನೂ ಏಕಕಾಲದಲ್ಲಿ ದಹಿಸುವಂತೆ ಜ್ವಾಲೆಯನ್ನೆರಚುತ್ತ, ಕೃಷ್ಣನನ್ನಿದಿರಿಸಿ ಬಂದಿತು. ಆಗಲೇ ಕೃಷ್ಣನು, ಅದನ್ನಡಗಿಸುವುದಕ್ಕಾಗಿ ವೈಷ್ಣವಜ್ವರವನ್ನು ಕಳುಹಿಸಿದನು. ಮಾಹೇಶ್ವರ ವೈಷ್ಣವಜ್ವರಗಳೆರಡೂ ಬಹಳ ಹೊತ್ತಿನವರೆಗೆ ಒಂದಕ್ಕೊಂದು ಹೆಣಗಾಡುತಿದ್ದುವು. ಕೊನೆಗೆ ವೈಷ್ಣವಜ್ವರದ ವೇಗವನ್ನು ತಡೆಯಲಾರದೆ ಮಾಹೇಶ್ವರಜ್ವರವು, ಧೈನ್ಯದಿಂದ ಕೂಗಿಡುತ್ತ, ಆಗ ತನಗೆ ಅಭಯವನ್ನು ಕೊಡತಕ್ಕವರು ಬೇರೆ ಯಾರೂ ಇಲ್ಲದುದನ್ನು ನೋಡಿ, ಭಯದಿಂದ ಕೃಷ್ಣನಲ್ಲಿಯೇ ಶರಣಾರ್ಥಿಯಾಗಿ ಬಂದು, ಅಂಜಲಿಬಂಧಪೂರ್ವಕವಾಗಿ ಹೀಗೆಂದು ಸ್ತೋತ್ರಮಾಡತೊಡಗಿತು. “ಓ ದೇವಾ! ಅನಂತಶಕ್ತಿಯುಳ್ಳವನಾಗಿಯೂ, ಸರ್ವೇಶ್ವರನಾಗಿಯೂ, ಸಮಸ್ತಭೂತಗಳಿಗೂ ಅಂತರಾತ್ಮನಾಗಿಯೂ,ಕೇವಲಜ್ಞಾನಮಯನಾಗಿಯೂ,ಲೋಕದ ಸೃಷ್ಟಿ ಸ್ಥಿತಿಸಂಹಾರಗಳಿಗೆ ಕಾರಣನಾಗಿಯೂ, ವೇದೈಕಗೋಚರನಾದ ಬ್ರಹ್ಮಸ್ವರೂಪನಾಗಿಯೂ, ಹಸಿವು, ಬಾಯಾರಿಕೆ, ಶೋಕ, ಮೋಹ ಜರಾ

ಮರಣಗಳೆಂಬ ಷಡೂರ್ಮಿಗಳನ್ನೂ ಜಯಿಸಿದವನಾಗಿಯೂ ಇರುವ ನಿನ್ನನ್ನು ನಮಸ್ಕರಿಸುವೆನು. ಓ ಪ್ರಭೂ! ಕಾಲ, ದೈವ, ಕರ್ಮ, ಜೀವ, ಸ್ವಭಾವ, ಪೃಥಿವ್ಯಾದಿದ್ರವ್ಯಗಳು, ಅವುಗಳಿಗೆ ಉತ್ಪತ್ತಿಸ್ಥಾನವಾದ ಪ್ರಕೃತಿ, ಪಂಚ ಪ್ರಾಣಗಳು, ಬುದ್ಧಿ, ಅವಸ್ಥಾಭೇದಗಳು, ಇವುಗಳ ಸಂಘಾತರೂಪವಾದ ಶರೀರ, ಈ ಪ್ರಪಂಚದಲ್ಲಿ ಕಾರ್ಯಕಾರಣರೂಪವಾಗಿ ಮಾರ್ಪಡುವ ವಿಧಾನ ಗಳು, ಇವೆಲ್ಲವೂ ನಿನ್ನ ಸಂಕಲ್ಪರೂಪವಾದ ಮಾಯೆಗೆ ಅಧೀನವಾಗಿ ನಡೆಯತಕ್ಕವುಗಳು. ಈ ಸಮಸ್ತವಸ್ತುಗಳ ಸ್ವರೂಪದಿಂದಲೂ ಭಿನ್ನನಾದ ನಿನಗೆ ನಮಸ್ಕಾರವು. ದೇವಾ! ಈಗ ನೀನು ಒಬ್ಬ ಯಾದವಕುಮಾರನಂತೆ ತೋರಿದರೂ, ಇದು ನಿನ್ನ ಸ್ವೇಚ್ಛೆಯಿಂದ ನೀನಾಗಿ ಪರಿಗ್ರಹಿಸಿದ ರೂಪ ವೇಹೊರತು,ಕರ್ಮಾಧೀನವಾದುದಲ್ಲ. ಸಾಧುಗಳಾದ ದೇವತೆಗಳನ್ನು ರಕ್ಷಿಸು ವುದಕ್ಕಾಗಿಯೂ, ಧರ್ಮಮರ್ಯಾದೆಯನ್ನು ಕಾಪಾಡುವುದಕ್ಕಾಗಿಯೂ ಇದೇ ವಿಧವಾಗಿ ಹಿಂದೆನೀನುಮತ್ಸ್ಯಾದ್ಯವತಾರಗಳನ್ನೂ ಪರಿಗ್ರಹಿಸಿರುವೆ ಈಅವ ತಾರಗಳೆಲ್ಲವೂ, ಲೋಕಕಂಟಕರಾದ ದುರ್ಮಾರ್ಗರನ್ನು ನಿಗ್ರಹಿಸಿ, ಭೂಭಾ ರವನ್ನು ಪರಿಹರಿಸುವುದಕ್ಕಾಗಿಯೇಹೊರತು ಬೇರೆಯಲ್ಲ. ಕೃಷ್ಣಾ! ಈಗ ನಾನು ನಿನ್ನ ತೇಜೋರೂಪವಾದ ದುಸ್ಸಹವಾದ ಜ್ವರದಿಂದ ದಗ್ಧನಾ ನಾಗುತ್ತಿರುವೆನು. ಈ ನಿನ್ನ ತೇಜಸ್ಸು ಸ್ವಭಾವದಿಂದ ಶಾಂತವಾಗಿದ್ದರೂ, ಇದಿರಿಸಿದವರಲ್ಲಿ ಮಹೋಗ್ರತೆಯನ್ನು ತೋರಿಸುವುದು. ಆ ನಿನ್ನ ತೇಜಸ್ಸಿ ನಿಂದ ದಹಿಸಲ್ಪಡುತ್ತಿರುವ ನನ್ನನ್ನು ಕಾಪಾಡಬೇಕು ಪ್ರಾಣಿಗಳು ತಮಗೆ ಬೇರೊಬ್ಬರು ರಕ್ಷಕರಿರುವರೆಂಬ ಭ್ರಾಂತಿಯಿಂದ ನಿನ್ನಲ್ಲಿ ವಿಮುಖ ರಾಗಿರುವವರೆಗೂ,ಹೀಗೆ ನಾನಾವಿಧವಾದ ತಾಪಕ್ಕೆಗುರಿಯಾಗುವುದುಸಹ ಜವು. ಈಗ ನಾನಾದರೊ ಬೇರೆ ರಕ್ಷಿಸಬಲ್ಲವರೊಬ್ಬರನ್ನೂ ಕಾಣದೆ, ನಿನ್ನ ಪಾದಾರವಿಂದದಲ್ಲಿ ಮರೆಹೊಕ್ಕಿರುವೆನು ನನ್ನನ್ನು ರಕ್ಷಿಸಬೇಕು" ಎಂದಿತು. ಅದನ್ನು ಕೇಳಿ ಭಗವಂತನು ಕೃಪಾವಶನಾಗಿ, ಆ ಜ್ವರವನ್ನು ಕುರಿತು "ಓ ತ್ರಿಶಿರಾ! ನಿನ್ನ ಭಕ್ತಿಗೆ ನಾನು ಪ್ರಸನ್ನನಾದೆನು. ನನ್ನಿಂದ ಪ್ರೇರಿತವಾದ ನಾರಾಯಣಜ್ವರವು ನಿನ್ನನ್ನು ಬಾಧಿಸದಿರಲಿ! ನಿನ್ನ ಭಯವು ನೀಗಲಿ! ಇದಲ್ಲದೆ ಈಗ ನಮ್ಮಿಬ್ಬರಿಗೆ ನಡೆದ ಈ ಸಂವಾದವನ್ನು ಯಾವನ

ಸ್ಮರಿಸುವನೋ, ಅವನಿಗೆ ನಿನ್ನಿಂದ ಮರಣವಿಲ್ಲದಿರಲಿ” ಎಂದನು. ಆಮೇಲೆ ಮಾಹೇಶ್ವರಜ್ವರವು ಕೃಷ್ಣನಿಗೆ ನಮಸ್ಕರಿಸಿ ಹೊರಟುಹೋಯಿತು. ಇಷ್ಟರಲ್ಲಿ ಅತ್ತಲಾಗಿ ಬಾಣಾಸುರನು ಚೇತರಿಸಿಕೊಂಡು, ತಿರುಗಿ ಕೃಷ್ಣನೊಡನೆ ಯುದ್ಧಕ್ಕಾಗಿ ರಥವನ್ನೇರಿ ಹೊರಟನು. ತನ್ನ ಸಹಸ್ರ ಬಾಹುಗಳಲ್ಲಿಯೂ ನಾನಾಬಗೆಯ ಶಸ್ತ್ರಾಸ್ತ್ರಗಳನ್ನು ಹಿಡಿದು, ಕೃಷ್ಣನಿಗಿದಿರಾಗಿ ನಿಂತು ದೊಡ್ಡ ಪರಿಘವೊಂದನ್ನು ಕೃಷ್ಣನಮೇಲೆ ಪ್ರಯೋಗಿಸಿದನು. ಒಡನೆಯೇ ಕೃಷ್ಣನು ಆ ಪರಿಘವನ್ನೂ, ಅದನ್ನು ಪ್ರಯೋಗಿಸಿದ ಬಾಣಾಸುರನ ಭುಜವನ್ನೂ, ತನ್ನ ಬಾಣಗಳಿಂದ ತುಂಡು ಮಾಡಿಕೆಡಹಿದನು. ತಿರುಗಿತಿರುಗಿ ಬಾಣಾಸುರನು, ಬೇರೆಬೇರೆ ಭುಜಗಳಿಂದ ಬೇರೆಬೇರೆ ಬಾಣಗಳನ್ನು ಪ್ರಯೋಗಿಸುತಿದ್ದಹಾಗೆಲ್ಲಾ, ಕೃಷ್ಣನು ತೀಕ್ಷ್ಣಧಾರೆಯುಳ್ಳ ತನ್ನ ಚಕ್ರಾಯುಧದಿಂದ, ಮರದ ಕೊಂಬೆಗಳನ್ನು ಕಡಿಯುವಂತೆ ಆ ಬಾಣಾಸುರನ ತೋಳುಗಳನ್ನು ಕಡಿಯುತ್ತಬಂದನು. ಹೀಗೆ ಬಾಣಾಸುರನ ತೋಳುಗಳೆಲ್ಲವೂ ಚಕ್ರಾಯುಧದಿಂದ ಕತ್ತರಿಸಲ್ಪಡುತ್ತಿರುವುದನ್ನು ನೋಡಿ, ಭಕ್ತವತ್ಸಲನಾದ ರುದ್ರನು, ತನ್ನ ಆಶ್ರಿತನಾದ ಬಾಣಾಸುರನನ್ನು ರಕ್ಷಿಸಬೇಕೆಂಬ ಉದ್ದೇಶದಿಂದ, ಕೃಷ್ಣನಬಳಿಗೆ ಬಂದು ಹೀಗೆಂದು ಹೇಳುವನು “ಕೃಷ್ಣಾ! ಶಬ್ದಬ್ರಹ್ಮವೆನಿಸಿಕೊಂಡ ವೇದಗಳಿಂದ ಪ್ರತಿಪಾದ್ಯನಾಗಿ, ಸ್ವಯಂಪ್ರಕಾಶವುಳ್ಳ ಪರಬ್ರಹ್ಮವೇ ನೀನು! ಆಕಾಶದಂತೆ ನಿರ್ಲೇಪವಾದ ನಿನ್ನ ಸ್ವರೂಪವನ್ನು ಯೋಗಪರಿಶುದ್ಧವಾದ ಮನಸ್ಸುಳ್ಳವರುಮಾತ್ರವೇ ಕಾಣಬಲ್ಲರು. ನಿನಗೆ ಆಕಾಶವೇ ನಾಭಿ! ಅಗ್ನಿಯೇ ಮುಖವು! ಜಲವೇ ರೇತಸ್ಸು! ದ್ಯುಲೋಕವೇ ನಿನ್ನ ಶಿರಸ್ಸು! ದಿಕ್ಕುಗಳೇ ನಿನ್ನ ಕಿವಿಗಳು! ಭೂಮಿಯೇ ನಿನ್ನ ಪಾದವು! ಚಂದ್ರನೇ ನಿನ್ನ ಮನಸ್ಸು! ಸೂರ್ಯನೇ ನಿನ್ನ ದೃಷ್ಟಿ! ನಾನು ನಿನ್ನ ಅಂತಃಕರಣಭೇದವಾದ ಅಹಂಕಾರವೆನಿಸುವೆನು. ಸಮುದ್ರವೇ ನಿನ್ನ ಜಠರವು! ಇಂದ್ರಾದಿಗಳು ನಿನ್ನ ಭುಜಗಳು! ಸಸ್ಯವರ್ಗಗಳೆಲ್ಲವೂ ನಿನ್ನ ಮೈಕೂದಲುಗಳು! ಮೇಘಗಳೇ ನಿನ್ನ ಕೇಶಗಳು! ಬ್ರಹ್ಮನೇ ನಿನ್ನ ಬುದ್ಧಿ! ಪ್ರಜಾಧಿಪತಿಯೇ ನಿನ್ನ ಪುರುಷಲಿಂಗವು. ಧರ್ಮದೇವನೇ ನಿನ್ನ ಹೃದಯವು! ಹೀಗೆ ನಿನ್ನ ಪುರುಷಾ



೨೧೯ಲ. ಶ್ರೀಕೃಷ್ಣನು ಬಾಣಾಸುರನ ಬಾಹುಗಳನ್ನು ಛೇದಿಸಿದುದು

ಕೃತಿಯು ಲೋಕಮಯವಾಗಿರುವುದು. ಅಂತಹ ನೀನು ಯದುಕುಲ ದಲ್ಲಿ ಅವತರಿಸಿರುವುದು, ಧರ್ಮಮರ್ಯ್ಯಾದೆಯನ್ನು ರಕ್ಷಿಸಿ ಲೋಕವನ್ನು ಕ್ಷೇಮ ದಿಂದಿರಿಸುವುದಕ್ಕಾಗಿಯೇ ಹೊರತು ಬೇರೆಯಲ್ಲ. ಈ ಅವತಾರದಲ್ಲಿಯೂ ನಿನ್ನ ಸರ್ವಜ್ಞತ್ವಾದಿಗುಣಗಳಿಗೆ ಏನೂ ಕೊರತೆಯಿರುವುದಿಲ್ಲ. ಲೋಕ ಪಾಲಕರಾದ ನಾವೆಲ್ಲರೂ ನಿನಗಧೀನರಾಗಿ ಕಾರ್ಯಗಳನ್ನು ನಡೆಸತಕ್ಕವರೇ ಹೊರತು ಸ್ವತಂತ್ರರಲ್ಲ. ಈ ಜಗತ್ತಿಗೆ ಮೂಲಕಾರಣನಾದ ಆದಿಪುರು ಷನು ನೀನೊಬ್ಬನೇ! ಮತ್ತು ಈ ಪ್ರಪಂಚವೆಲ್ಲವೂ ನಿನ್ನೊಬ್ಬನ ಸ್ವರೂ ಪವೇ! ನಿನಗೆ ಕಾರಣವಸ್ತುವು ಬೇರೊಂದಿಲ್ಲ! ಈ ಪ್ರಪಂಚವನ್ನು ನಿರ್ಮಿ ಸಿದವನೂ, ಈ ಪ್ರಪಂಚರೂಪದಿಂದ ತೋರತಕ್ಕವನೂ ನೀನೇ! ಆದುದ ರಿಂದ ಈ ಜಗತ್ತಿನ ನಿಮಿತ್ತೋಪಾದಾನಕಾರಣಗಳೆರಡೂ ನೀನೇ! ನೀನು ಜ್ಞಾನಸ್ವರೂಪನಾದುದರಿಂದ, ಜಡಪ್ರಕೃತಿಗಿಂತಲೂ ಬೇರೆಯಾದವನು. ಜಾಗರ ಸ್ವಪ್ನ ಸುಷುಪ್ತಿಗಳೆಂಬ ಅವಸ್ಥಾತ್ರಯವನ್ನೂ ಮೀರಿದವನಾದು ದರಿಂದ ಜೀವಕ್ಕಿಂತಲೂ ವಿಲಕ್ಷಣನು. ಸರ್ವೇಶ್ವರನು ನೀನು ಆಕಾಶ ದಂತೆ ನಿರ್ವಿಕಾರನೆಂಬುದೂ, ಜಗತ್ತಿಗೆ ಉಪಾದಾನಕಾರಣನಾಗಿ ವಿಕಾ ರವನ್ನು ಹೊಂದುತ್ತಿರುವೆಯೆಂಬುದೂ ಪರಸ್ಪರವಿರುದ್ಧವಾಗಿದ್ದರೂ, ಪ್ರ ಕೃತಿಪುರುಷರಲ್ಲಿರುವ ಸಮಸ್ತಗುಣಗಳನ್ನೂ, ಪ್ರಸಿದ್ಧಿಗೊಳಿಸುವುದಕ್ಕಾಗಿ ನಿನ್ನ ಸಂಕಲ್ಪದಿಂದ ನೀನೇ ಹಾಗೆ ತೋರುವೆ. ಈ ನಿನ್ನ ಸರ್ವಶಕ್ತತ್ವವನ್ನು ತಿಳಿ ಸುವುದಕ್ಕೆ ವೇದಾಂತವಾಕ್ಯಗಳಲ್ಲದೆ ಬೇರೆಪ್ರಮಾಣಗಳಿಲ್ಲ. ಸೂರ್ಯನ ಶಕ್ತಿ ಯಿಂದಲೇ ಹೊರಕ್ಕೆ ಕಾಣುತ್ತಿರುವ ಮೇಘಾದಿಗಳು ಅವನಿಗೆ ಅಡ್ಡಲಾಗಿ ಬಂದಾಗಲೂ, ಅದರಿಂದ ಅವನು ಮರೆಸಲ್ಪಡದೆ, ಅದರ ಒಳಗೂ ಹೊರಗೂ, ತನ್ನ ಕಾಂತಿಯನ್ನು ಪ್ರಸರಿಸಿ, ಇತರರೂಪಗಳನ್ನು ಪ್ರಕಾಶಪಡಿಸುವಂತೆ, ನೀನೂಕೂಡ ಸತ್ವಾದಿಗುಣಗಳಿಂದ ಮರೆಸಲ್ಪಟ್ಟಂತೆ ತೋರಿದರೂ, ಅದ ರಿಂದ ನಿನ್ನ ಸ್ವರೂಪಸ್ವಭಾವಗಳು ಮರೆಸಲ್ಪಡದೆ, ನೀನು ಪ್ರಕೃತಿ ಮೊದಲಾ ದುವುಗಳನ್ನು ಪ್ರಕಾಶಪಡಿಸುವೆ! ಮತ್ತು ನೀನು ಸ್ವಯಂಪ್ರಕಾಶವುಳ್ಳವ ನು. ನಿನ್ನ ಮಾಯೆಯಿಂದ ಮೋಹಿತರಾದವರೇ, ಮನೆಮಂದಿಮಕ್ಕಳಲ್ಲಿ ತಗು ಲುಬಿದ್ದು, ದುಃಖಸಮುದ್ರದಲ್ಲಿ ಮುಳುಗಿ ತೇಲುತ್ತಿರುವರು. ನಿರತಿಶಯಕೃ

ಪಾಕರನಾದ ನೀನು, ಆ ಮಾಯೆಯನ್ನು ದಾಟುವುದಕ್ಕಾಗಿಯೇ ಮನುಷ್ಯ ರಿಗೆ ನಿನ್ನ ಆರಾಧನಕ್ಕೆ ಸಾಧನವಾದ ದೇಹವನ್ನು ಕೊಡುತ್ತಿರುವೆ ಅಂತಹ ದೇಹವನ್ನು ಹೊಂದಿರುವಾಗಲೂ, ಯಾವನು ಇಂದ್ರಿಯಪರವಶನಾಗಿ,ನಿನ್ನ ಚರಣಾರವಿಂದವನ್ನು ಸೇವಿಸುವುದಿಲ್ಲವೋ,ಅಂತವನ ಸ್ಥಿತಿಯು ಬಹಳ ಶೋ ಚನೀಯವಾದುದು. ಅಂತವನು, ತನ್ನನ್ನು ತಾನೇ ವಂಚಿಸಿಕೊಳ್ಳತಕ್ಕ ಮೂಢನೆನಿಸುವನು. ಯಾವ ಮನುಷ್ಯನು ತಾನು ಮರಣಶೀಲನೆಂಬುದ ನ್ನೂ, ತನ್ನ ಆತ್ಮಸ್ವರೂಪವನ್ನೂ,ತಿಳಿಯದೆ,ಸರ್ವಲೋಕಪ್ರಿಯನಾದ ನಿನ್ನ ನ್ನು ಬಿಟ್ಟು, ಇಂದ್ರಿಯಪರವಶನಾಗಿ,ಅನರ್ಥಹೇತುಗಳಾದ ಶಬ್ದಾದಿವಿಷಯ ಗಳಲ್ಲಿ ಆಸೆಯಿಡುವನೋ,ಅಂತವನ ಸ್ಥಿತಿಗಾಗಿ ಎಷ್ಟುಪರಿತಪಿಸಿದರೂ ಸಾಲ ದು ಅಂತವನು ಅಮೃತವನ್ನು ವಿಷವೆಂದು ಭ್ರಮಿಸಿ ನಿರಾಕರಿಸುವ ಮೂಢ ನಂತಲ್ಲದೆ ಬೇರೆಯಲ್ಲ. ಓ ದೇವಾ! ನಾನು, ಚತುರ್ಮುಖಬ್ರಹ್ಮನು, ಇಂ ದ್ರಾದಿದೇವತೆಗಳು, ಶುದ್ಧಮನಸ್ಕರಾದ ಮುನಿಗಳು, ಎಲ್ಲರೂ ಸರ್ವಾಂತರಾ ತ್ಮನಾಗಿಯೂ, ಸರ್ವಲೋಕಪ್ರಿಯನಾಗಿಯೂ, ಸರ್ವೇಶ್ವರನಾಗಿಯೂ ಇರುವ ನಿನಗೆ ಸರ್ವವಿಧದಿಂದಲೂ ಅಧೀನರಾಗಿರುವೆವು ನಮ್ಮೆಲ್ಲರಿಗೂ ನೀನೇ ಗತಿಯೆನಿಸಿರುವೆ ಹೀಗೆ ಈ ಪ್ರಪಂಚದ ಸೃಷ್ಟಿ ಸ್ಥಿತಿ, ಲಯಗಳಿಗೆ ಕಾರಣ ನಾಗಿಯೂ, ಸರ್ವಸಮನಾಗಿಯೂ, ಹಸಿವು, ಬಾಯಾರಿಕೆ ಮೊದಲಾದ ಊರ್ಮಿಬಾಧೆಗಳಿಲ್ಲದೆ ಶಾಂತನಾಗಿಯೂ,ಸರ್ವಸುಹೃತ್ತಾಗಿಯೂ,ಸ್ವಯಂ ಪ್ರಭುವಾಗಿಯೂ, ಎಣೆಯಿಲ್ಲದವನಾಗಿಯೂ, ನಮ್ಮಂತಹ ಸಮಸ್ತಜೀ ವಿಗಳಿಗೂ ಆಧಾರನಾಗಿಯೂ ಇರುವ ನಿನ್ನನ್ನು, ನಾವೆಲ್ಲರೂ, ಭೋಗ, ಮೋಕ್ಷಗಳೆರಡಕ್ಕಾಗಿಯೂ ಭಜಿಸುತ್ತಿರುವೆವು ಆ ಸಂಗತಿಯು ಹಾಗಿರಲಿ! ಈ ಬಾಣಾಸುರನು ಆದಿಯಿಂದಲೂ ನನ್ನ ಭಕ್ತನಾಗಿ, ನನ್ನನ್ನೇ ಅನುವರ್ತಿ ಸುತ್ತಿದ್ದವನು.ಈತನಿಗೆನಾನು ಅಪಾಯದಿಂದರಕ್ಷಿಸುವುದಾಗಿ ಅಭಯವನ್ನು ಕೊಟ್ಟಿರುವೆನು. ಈಗ ನಿನ್ನಿಂದ ಅವನಿಗೆ ಅಪಾಯವೇನಾದರೂ ಸಂಭವಿಸಿದ ಪಕ್ಷದಲ್ಲಿ ನನ್ನ ಮಾತು ವ್ಯರ್ಥವಾಗುವುದು ಆದುದರಿಂದ ನೀನು ಇವನಲ್ಲಿ ಅನುಗ್ರಹವನ್ನು ತೋರಿಸಿ, ನಾನು ಕೊಟ್ಟ ಅಭಯವನ್ನು ಸಾರ್ಥಕಗೊಳಿಸ ಬೇಕು. ಇದಲ್ಲದೆ ಹಿಂದೆ ನೀನು ನೃಸಿಹ್ಮಾವತಾರದಲ್ಲಿ ಪ್ರಹ್ಲಾದನನ್ನು

ಕುರಿತು, ಮುಂದೆ ಆತನ ಸಂತಾನಕ್ಕೆ ಸೇರಿದವರನ್ನು ಕೊಲ್ಲುವುದಿಲ್ಲ ವೆಂದು ಅನುಗ್ರಹಿಸಿರುವೆಯಲ್ಲವೆ? ಇವನೂ ಆ ಸಂತಾನಕ್ಕೇ ಸೇರಿದವ ನಾದುದರಿಂದ ಇವನನ್ನು ನೀನು ಕೊಲ್ಲದೆ ರಕ್ಷಿಸಬೇಕು. ಇದೇ ನನ್ನ ಪ್ರಾರ್ಥನೆ" ಎಂದನು. ಅದಕ್ಕಾ ಕೃಷ್ಣನು, "ಓ ಶಂಕರಾ! ನಿನ್ನ ಇಷ್ಟ ದಂತೆ ನಿನ್ನ ಕೋರಿಕೆಯನ್ನು ನಡೆಸುವೆನು ನಿನ್ನ ಪ್ರಿಯವೇ ನನ್ನ ಪ್ರಿಯವು! ನನಗೂ ಇವನನ್ನು ಕೊಲ್ಲಬೇಕೆಂಬ ಉದ್ದೇಶವಿಲ್ಲ-ಈತನು ನನಗೆ ಪರಮಭಕ್ತ ನಾದ ಬಲಿಚಕ್ರವರ್ತಿಯ ಮಗನಾದುದರಿಂದ, ನಾನು ಎಂದಿಗೂ ಇವನ ನ್ನು ಕೊಲ್ಲಲಾರೆನು. ಇದಲ್ಲದೆ, ಹಿಂದೆ ನಾನು ಪ್ರಹ್ಲಾದನಿಗೆ, ಆತನ ವಂಶ ದವರನ್ನು ಕೊಲ್ಲುವುದಿಲ್ಲವೆಂದು ಪ್ರತಿಜ್ಞೆಮಾಡಿಕೊಟ್ಟಿರುವೆನು ಆದರೆ ಇವನ ವೀರ್ಯದ ಕೊಬ್ಬನ್ನು ಮುರಿಯುವುದಕ್ಕಾಗಿ ಇವನ ಭುಜಗಳೆಲ್ಲವನ್ನೂ ಕಡಿದುಹಾಕಿದೆನು. ಭೂಭಾರವನ್ನು ತಗ್ಗಿಸುವುದಕ್ಕಾಗಿ ಇವನ ಸೈನ್ಯವೆಲ್ಲ ವನ್ನೂ ಧ್ವಂಸಮಾಡಿದೆನು ಇವನಿಗೆ ನಾಲ್ಕು ತೋಳುಗಳನ್ನು ಮಾತ್ರ ಮಿಗಿಸಿರುವೆನು. ಮುಂದೆ ಇವನು ಜರಾಮರಣಗಳಿಲ್ಲದೆ. ಬೇರೆ ಯಾರಿಂದಲೂ ಭಯವಿಲ್ಲದೆ, ನಿನ್ನ ಪಾರ್ಷದಗಣಗಳಲ್ಲಿ ಒಬ್ಬನಾಗಿರಲಿ" ಎಂದನು. ಹೀಗೆ ಕೃಷ್ಣನು ಅಭಯವನ್ನು ಕೊಟ್ಟಮೇಲೆ, ಬಾಣಾಸುರನು ಮುಂದೆ ಬಂದು ಕೃಷ್ಣನಿಗೆ ತಲೆಬಗ್ಗಿ ನಮಸ್ಕರಿಸಿ, ತನ್ನ ಮಗಳಾದ ಉಷೆಯೊಡನೆ ಅನಿ ರುದ್ಧನನ್ನು ರಥದಲ್ಲಿ ಕುಳ್ಳಿರಿಸಿ, ಕೃಷ್ಣನಬಳಿಗೆ ಕರೆತಂದು ಬಿಟ್ಟನು. ಆಮೇಲೆ ಕೃಷ್ಣನು ರುದ್ರನ ಅನುಜ್ಞೆಯನ್ನು ಪಡೆದು, ಉತ್ತಮವಾದ ವಸ್ತ್ರಭೂಷಣಗಳಿಂದಲಂಕೃತರಾದ ಆ ವಧೂವರರನ್ನು ಮುಂದಿಟ್ಟು ಕೊಂಡು, ಅಕ್ಷೋಹಿಣೀ ಸೈನ್ಯದಿಂದ ಪರಿವೃತನಾಗಿ, ತನ್ನ ಪುರಕ್ಕೆ ಹಿಂತಿರುಗಿ ದನು. ಇಷ್ಟರಲ್ಲಿಯೇ ದ್ವಾರಕಾವಾಸಿಗಳೆಲ್ಲರೂ ಆ ಶುಭವೃತ್ತಾಂತವನ್ನು ಕೇಳಿ ಪಟ್ಟಣವನ್ನಲಂಕರಿಸಿಟ್ಟರು ಎಲ್ಲಿನೋಡಿದರೂ ಧ್ವಜಗಳೂ, ತೋರಣ ಗಳೂ ಕಂಗೊಳಿಸುತಿದ್ದುವು. ರಾಜವೀಥಿಗಳೂ, ಚತುಷ್ಪಥಗಳೂ ಸುಗಂಧ ಜಲದಿಂದ ಸೇಚಿತವಾಗಿದ್ದುವು. ಶಂಖ, ದುಂದುಭಿ, ಮೊದಲಾದ ವಾದ್ಯ ಗಳು ಮೊಳಗುತಿದ್ದುವು ಇಷ್ಟಬಂಧುಗಳೂ, ಪುರವಾಸಿಗಳೂ, ಬ್ರಾಹ್ಮ ಣರೂ ಇದಿರುಗೊಂಡು ಬಂದು, ವಧೂವರರನ್ನು ಸತ್ಕರಿಸಿ ಕರೆದುಕೊಂಡು

ಹೋದರು ಹೀಗೆ ಸಕಲಸಂಭ್ರಮದೊಡನೆ ಕೃಷ್ಣನು ಪುರಪ್ರವೇಶವನ್ನು ಮಾಡಿದನು ಓ ಪರೀಕ್ಷಿದ್ರಾಜಾ! ಯಾವನು ಕೃಷ್ಣನಿಗೂ, ರುದ್ರನಿಗೂ ನಡೆದ ಈ ಯುದ್ಧವನ್ನೂ, ಕೃಷ್ಣವಿಜಯವನ್ನೂ, ಪ್ರಾತಃಕಾಲದಲ್ಲಿ ಸ್ಮರಿಸುವನೋ ಅವನಿಗೆ ಎಂದಿಗೂ ಪರಾಜಯವಿಲ್ಲವು ಇದು ಅರುವತ್ತುಮೂರನೆಯ ಅಧ್ಯಾಯವು.

---

ನೃಗೋಪಾಖ್ಯಾನವು.

ಓ ಪರೀಕ್ಷಿದ್ರಾಜಾ! ಒಮ್ಮೆ ಸಾಂಬ, ಪ್ರದ್ಯುಮ್ನ, ಚಾರುಭಾನು, ಗದ, ಮೊದಲಾದ ಯಾದವಕುಮಾರರೆಲ್ಲರೂ ವನವಿಹಾರಾರ್ಥವಾಗಿ ಕಾಡಿಗೆ ಹೋಗಿ,ಅಲ್ಲಿ ಬಹಳಹೊತ್ತಿನವರೆಗೆ ಆಟವಾಡುತ್ತಿದ್ದರು. ಬಿಸಿಲಿನಲ್ಲಿ ಸುತ್ತಿ ಬಹಳವಾಗಿ ಬಳಲಿದುದರಿಂದ, ಅವರಿಗೆ ಬಾಯಾರಿಕೆಯು ತೋರಿತು. ನೀರನ್ನು ಹುಡುಕುತ್ತಬರುವಾಗ ಮುಂದೆ ಒಂದಾನೊಂದು ಹಾಳು ಬಾವಿಯು ಕಾಣಿಸಿತು. ನೀರಿಲ್ಲದೆ ಒಣಗಿಹೋಗಿದ್ದ ಆ ಬಾವಿಯಲ್ಲಿ,ಅದ್ಭುತಾಕಾರವುಳ್ಳ ಒಂದಾನೊಂದು ಕೃಕಲಾಸವು (ಹೆಂಟೆಗೊದ್ದ ಅಥವಾ ಓತೀಕೇತವು) ಬಿದ್ದು, ಅತ್ತಿತ್ತ ಕದಲಲಾರದೆ ನರಳುತ್ತಿರುವುದನ್ನು ಕಂಡರು. ಪರ್ವತದಂತೆ ಬಿದ್ದಿರುವ ಆ ದೊಡ್ಡಪ್ರಾಣಿಯನ್ನುನೋಡಿ ಆಶ್ಚರ್ಯಪಡುತ್ತ, ಅದರ ಕಷ್ಟವನ್ನುನೋಡಿ ಕನಿಕರದಿಂದ,ಅದನ್ನು ಆ ಬಾವಿಯಿಂದ ಮೇಲಕ್ಕೆ ತಂದುಬಿಡಬೇಕೆಂದು ಯತ್ನಿಸಿದರು. ಅದ್ಭುತಾಕಾರವುಳ್ಳ ಆ ಜಂತುವನ್ನು ಸುಲಭವಾಗಿ ಕೈಯಿಂದೆತ್ತಿ ತರುವುದಕ್ಕೆ ಸಾಧ್ಯವಿಲ್ಲದೆ, ಚರ್ಮದ ಹಗ್ಗಗಳನ್ನೂ ನೂಲುಹಗ್ಗಗಳನ್ನೂ ಜೋಡಿಸಿತಂದು, ಅದರ ಮೈಗೆ ಸುತ್ತಿ ಎಲ್ಲರೂ ಪ್ರಯತ್ನಪೂರ್ವಕವಾಗಿ ಎಳೆಯಲಾರಂಭಿಸಿದರು. ಆಗಲೂ ಅವರಿಂದ ಸಾಧ್ಯವಾಗಲಿಲ್ಲ. ಆಮೇಲೆ ಆಶ್ಚರ್ಯದಿಂದ ಎಲ್ಲರೂ ಬಂದು ಕೃಷ್ಣನಿಗೆ ಆ ಸಂಗತಿಯನ್ನು ತಿಳಿಸಿದರು. ಲೋಕನಿರ್ವಾಹಕನಾದ ಕೃಷ್ಣನು,ತಾನೂ ಆಶ್ಚರ್ಯವನ್ನು ನಟಿಸುತ್ತ, ಆ ಬಾವಿಯಬಳಿಗೆ ಬಂದು ನೋಡಿ, ತನ್ನ ಎಡಗೈಯಿಂದಲೇ ಅದನ್ನು ಅನಾಯಾಸವಾಗಿ ಮೇಲಕ್ಕೆತ್ತಿ ಹೊರಕ್ಕೆ ತಂದುಬಿಟ್ಟನು ಭಗವಂತನ ಹಸ್ತಸ್ಪರ್ಶವಾದೊಡನೆ ಆ ಜಂತುವಿಗೆ ಮೊದಲಿದ್ದ

ಕೃಕಲಾಸ್ವರೂಪವು ಹೋಗಿ, ಒಂದಾನೊಂದು ದಿವ್ಯಪುರುಷಾಕೃತಿಯುಂ ಟಾಯಿತು. ಆ ಪುರುಷನು ಪುಟಹಾಕಿದ ಚಿನ್ನದಂತೆ ಹೊಳೆಯುವ ದೇಹ ಚ್ಛಾಯೆಯಿಂದಲೂ, ಮೈಮೇಲೆ ಉತ್ತಮವಸ್ತ್ರಾಭರಣಗಳಿಂದಲೂ, ಕಂಠದಲ್ಲಿ ದಿವ್ಯಪುಷ್ಪಮಾಲಿಕೆಯಿಂದಲೂ ಶೋಭಿಸುತ್ತಿದ್ದನು ಸರ್ವಜ್ಞ ನಾದ ಕೃಷ್ಣನು ಅವನ ಪೂರ್ವೋತ್ತರಗಳನ್ನು ಚೆನ್ನಾಗಿ ಬಲ್ಲವನಾ ಗಿದ್ದರೂ, ಅಲ್ಲಿದ್ದ! ತನ್ನ ಸಹಚರರಿಗೂ, ಇತರಲೋಕಕ್ಕೂ ಆತನ ಮಹಿಮೆ ಯನ್ನು ಪ್ರಕಾಶಗೊಳಿಸಬೇಕೆಂಬ ಉದ್ದೇಶದಿಂದ, ಹೀಗೆಂದು ಪ್ರಶ್ನೆ ಮಾಡುವನು. “ಓ ಮಹಾತ್ಮಾ! ನೀನು ಯಾರು? ಅತ್ಯುತ್ತಮವಾದ ನಿನ್ನ ರೂಪವನ್ನು ನೋಡಿದರೆ, ನೀನು ನಿಜವಾಗಿ ಯಾವನೋ ದೇವಶ್ರೇಷ್ಠ ನೆಂದೇ ನನಗೆ ತೋರುವುದು. ಓ! ಭದ್ರಾ! ಯಾವ ಕಾರಣದಿಂದ ನಿನಗೆ ಯೋಗ್ಯವಲ್ಲದ ಆ ನೀಚಜನ್ಮವುಂಟಾಗಿತ್ತು. ನಿನ್ನ ಪೂರ್ವವೃತ್ತಾಂತವನ್ನು ತಿಳಿಯಬೇಕೆಂದು ನಮ್ಮೆಲ್ಲರಿಗೂ ಬಹಳ ಕುತೂಹಲವಿರುವುದು. ಅದನ್ನು ನಮಗೆ ತಿಳಿಸಬಹುದಾಗಿದ್ದಪಕ್ಷದಲ್ಲಿ ತಿಳಿಸಬೇಕೆಂದು ಕೋರುವೆನು” ಎಂದನು. ಓ ಪರೀಕ್ಷಿದ್ರಾಜಾ! ಕೃಷ್ಣನು ಹೀಗೆಂದು ಪಶ್ನೆಮಾಡಿದೊಡನೆ, ಆ ದಿವ್ಯಪುರುಷನು ಸೂರ್ಯಪ್ರಭೆಯುಳ್ಳ ತನ್ನ ಕಿರೀಟವನ್ನು ಕೃಷ್ಣನ ಪಾದಗಳಿಗೆ ಸೋಕಿಸಿ ನಮಸ್ಕರಿಸುತ್ತ, “ಓ ಸ್ವಾಮಿ! ನಾನು ಇಕ್ಷ್ವಾಕು ರಾಜನ ಮಗನು ನನಗೆ ನೃಗನೆಂದು ಹೆಸರು. ದಾನಶೀಲರ ಹೆಸರನ್ನು ಕೇಳು ವಾಗ,ಅವುಗಳನಡುವೆ ನನ್ನ ಹೆಸರೂ ನಿನ್ನ ಕಿವಿಗೆ ಬಿದ್ದಿದ್ದರೂ ಇರಬಹುದು. ಅಥವಾ ಸರ್ವಭೂತಾತ್ಮ ಸಾಕ್ಷಿಯಾದ ನಿನಗೆ ತಿಳಿಯದುದೇನುಂಟು? ನಿನ್ನ ಜ್ಞಾನಕ್ಕೆ ಕಾಲವಶದಿಂದುಂಟಾಗುವ ಕಂದುಕಂದುಗಳೊಂದೂ ಇರುವು ದಿಲ್ಲ ಆದುದರಿಂದ ಭೂತಭವಿಷ್ಯದ್ವರ್ತಮಾನಗಳೆಲ್ಲವೂ ನಿನಗೆ ಕರತಲಾ ಮಲಕವಾಗಿರುವುವು ಹಾಗಿದ್ದರೂ ನಿನ್ನ ಆಜ್ಞೆಯನ್ನು ಮೀರಲಾರದೆ ನಾನು ನನ್ನ ಬಾಯಿಂದ ತಿಳಿಸುವೆನು. ಓ ದೇವಾ! ಹಿಂದೆ ನಾನು, ಈ ಭೂಮಿಯಲ್ಲಿ ಎಷ್ಟು ರೇಣುಗಳುಂಟೋ, ಆಕಾಶದಲ್ಲಿ ಎಷ್ಟು ನಕ್ಷತ್ರಗ ಳುಂಟೋ, ಆಕಾಶದಿಂದ ಎಷ್ಟು ಮಳೆಹನಿಗಳು ಬೀಳುವುವೋ, ಅಷ್ಟು ಗೋವುಗಳನ್ನು ದಾನಮಾಡಿರುವೆನು. ನಾನು ದಾನಮಾಡಿದ ಗೋವುಗ

ಳಾದರೂ ಸಾಧಾರಣವಾದುವಲ್ಲ! ಯೌವನವಯಸ್ಸುಳ್ಳವುಗಳಾಗಿ, ರೂಪ ದಲ್ಲಿಯೂ, ಸ್ವಭಾವದಲ್ಲಿಯೂ, ಶುಭಲಕ್ಷಣಗಳಲ್ಲಿಯೂ, ಮೇಲೆನಿಸಿ ಕೊಂಡು, ಸಮೃದ್ಧವಾದ ಹಾಲನ್ನು ಕರೆಯತಕ್ಕವುಗಳು. ಉತ್ತಮವಾದ ಕಪಿಲವರ್ಣದಿಂದ ಕೂಡಿದವುಗಳು! ಇಂತಹ ಗೋವುಗಳನ್ನೇ ಆರಿಸಿ, ಅವು ಗಳ ಕೊಂಬುಗಳನ್ನು ಸುವರ್ಣಕಲಶಗಳಿಂದಲೂ, ಕಾಲುಗಳನ್ನು ಬೆಳ್ಳಿಯ ಗೊರಸಲುಗಳಿಂದಲೂ, ವಸ್ತ್ರಾಭರಣಗಳಿಂದಲೂ ಅಲಂಕರಿಸಿ, ಕರುಗಳೊ ಡನೆ ದಾನಮಾಡಿರುವೆನು ನಾನು ನನ್ನ ರಾಜ್ಯಾಧಿಕಾರಬಲದಿಂದ ಒಬ್ಬರಲ್ಲಿದ್ದುದನ್ನು ಕಿತ್ತು ಮತ್ತೊಬ್ಬರಿಗೆ ದಾನಮಾಡಿದುದಲ್ಲ. ನ್ಯಾಯ ವಾದ ಬೆಲೆಯನ್ನು ಕೊಟ್ಟುತೆಗೆದು, ಅದನ್ನು ಬ್ರಾಹ್ಮಣರಿಗೆ ದಾನಮಾಡು ತಿದ್ದೆನು ನಾನು ಆ ಗೋದಾನಗಳಿಗೆ ಪಾತ್ರೀಕರಿಸಿದ ಬ್ರಾಹ್ಮಣರಾದರೂ ಸಾಮಾನ್ಯರಲ್ಲ! ಗುಣಶೀಲಸಂಪನ್ನರಾಗಿ,ವ್ರತನಿಷ್ಠರಾಗಿ, ತಪಸ್ಸಿನಲ್ಲಿಯೂ, ಶಾಸ್ತ್ರಜ್ಞಾನದಲ್ಲಿಯೂ, ವೇದಾಧ್ಯಯನದಲ್ಲಿಯೂ ನಿಪುಣರಾಗಿ, ಸಾಧುಗ ಳಾಗಿ, ಬಡವರಾಗಿಯೂ ಇದ್ದ ಬ್ರಾಹ್ಮಣರನ್ನೇ ಹುಡುಕಿ, ಅವರಿಗೆ ವಸ್ತ್ರಾ ದ್ಯಲಂಕಾರಗಳೊಡನೆ ದಾನಮಾಡುತಿದ್ದೆನು ನಾನು ಮಾಡಿದುದು ಗೋವು ಗಳುಮಾತ್ರವೇ ಅಲ್ಲ! ನನ್ನಲ್ಲಿ ಅರ್ಥಿಗಳಾಗಿ ಬಂದವರು,ಭೂಮಿಯನ್ನಾಗಲಿ, ಮನೆಯನ್ನಾಗಲಿ, ಆನೆಕುದುರೆಗಳನ್ನಾಗಲಿ, ಕನ್ಯೆಯರನ್ನಾಗಲಿ, ದಾಸಿಯ ರನ್ನಾಗಲಿ, ಯಾವುದನ್ನಪೇಕ್ಷಿಸಿದರೂ, ಅವರವರ ಇಷ್ಟಾನುಸಾರವಾಗಿ ಕೊಡುತ್ತಿದ್ದೆನು ಮತ್ತು ತಿಲದಾನ, ರೂಪ್ಯದಾನ, ಶಯ್ಯಾದಾನ, ವಸ್ತ್ರ ದಾನ, ರತ್ನದಾನ, ಮುಂತಾದ ಸಮಸ್ತದಾನಗಳನ್ನೂ ನಡೆಸಿರುವೆನು ಅವ ರವರಿಗೆ ಬೇಕಾದ ಗೃಹೋಪಕರಣಗಳನ್ನೂ ದಾನಮಾಡಿರುವೆನು ಹೀಗೆ ದಾನಮಾಡುವುದೊಂದೇ ಅಲ್ಲದೆ, ಅನೇಕಯಜ್ಞಗಳನ್ನೂ ನಡೆಸಿದೆನು. ಕೆರೆ, ಬಾವಿ, ಸತ್ರ, ಮುಂತಾದ ಧರ್ಮಗಳನ್ನೂ ನಡೆಸಿರುವೆನು ಹೀಗೆ ನಾನು ದಾನಧರ್ಮಗಳಲ್ಲಿ ನಿರತನಾಗಿರುವಾಗ, ಯಾವನೋ ಒಬ್ಬ ಬ್ರಾಹ್ಮಣೋ ತ್ತಮನಿಗೆ ನಾನು ಮೊದಲು ಕೊಟ್ಟಿದ್ದ ಗೋವು ತಪ್ಪಿಸಿಕೊಂಡು ಬಂದು, ತಿರುಗಿ ನನ್ನ ಮಂದೆಯಲ್ಲಿ ಸೇರಿಬಿಟ್ಟಿತು. ಆ ಸಂಗತಿಯು ನನಗೆ ತಿಳಿದಿರಲಿಲ್ಲ. ಇನ್ನೊಮ್ಮೆ ನಾನು ದಾನಮಾಡುವಕಾಲದಲ್ಲಿ,ಅದನ್ನೂ ನನ್ನ ಸ್ವಂತವೆಂದೇ

ತಿಳಿದು ಮತ್ತೊಬ್ಬಬ್ರಾಹ್ಮಣನಿಗೆ ದಾನಮಾಡಿಬಿಟ್ಟೆನು. ಆ ಬ್ರಾಹ್ಮಣನು ಅದನ್ನು ತನ್ನ ಮನೆಗೆ ಕರೆದುಕೊಂಡು ಹೋಗುತ್ತಿರುವಾಗ, ಮೊದಲು ಅದನ್ನು ನನ್ನಿಂದ ಪಡೆದು,ನ್ಯಾಯವಾಗಿ ಅದಕ್ಕೆ ಸ್ವಂತಗಾರನಾಗಿದ್ದ ಬ್ರಾಹ್ಮಣನು, ಅಕಸ್ಮಾತ್ತಾಗಿ ಬಂದು, ಆ ಗೋವು ತನ್ನದೆಂದು ನಡುದಾರಿಯಲ್ಲಿ ತಡೆದು ನಿಲ್ಲಿಸಿಬಿಟ್ಟನು. ಎರಡನೆಯಸಾರಿ ನನ್ನಿಂದ ದಾನವನ್ನು ಪಡೆದ ಬ್ರಾಹ್ಮಣನು, ಅದು ತನ್ನದೆಂದೂ, ಈಗಲೇ ನೃಗಚಕ್ರವರ್ತಿಯು ತನಗೆ ಕೊಟ್ಟಿರುವನೆಂದೂ ವಾದಿಸಿದನು ಇಬ್ಬರೂ "ನನ್ನದು ತನ್ನದು" ಎಂದು ವಿವಾದಮಾಡುತ್ತ ನನ್ನಲ್ಲಿಗೆ ಬಂದರು. ಇಬ್ಬರೂ ಮುಷ್ಕರದಿಂದ ತಮ್ಮ ಹಟವನ್ನೇ ಸಾಧಿಸುತ್ತ, ನನ್ನನ್ನು ನೋಡಿ "ಕೊಟ್ಟದಾನವನ್ನು ಹಿಂತಿರುಗಿ ಕಿತ್ತುಕೊಂಡ ಪತ್ತಾಪಹಾರಿ" ಯೆಂದು ನನ್ನನ್ನು ಮೂದಲಿಸ ತೊಡಗಿದರು. ಅವರ ತಿರಸ್ಕಾರವಾಕ್ಯವನ್ನು ಕೇಳಿ ನನಗೆ ದಿಗ್ಭ್ರಮೆಹಿಡಿದಂತಾಯಿತು. ಅವರಿಬ್ಬರಿಗೂ ನಾನೇ ಆ ಗೋವನ್ನು ದಾನಮಾಡಿದವನು. ಅವರಲ್ಲಿ ಯಾರಾದರೂ ಒಬ್ಬರಿಗೆ ಅದನ್ನು ಕೊಟ್ಟು, ಮತ್ತೊಬ್ಬರನ್ನು ಬೇರೆವಿಧವಾಗಿ ತೃಪ್ತಿಪಡಿಸಿ, ಈ ಧರ್ಮಸಂಕಟದಿಂದ ಬಿಡುಗಡೆಹೊಂದಬೇಕೆಂದು ತೋರಿತು ಇಬ್ಬರಿಗೂ ಎಷ್ಟೆಷ್ಟೋ ವಿಧದಿಂದ ಸಮಾಧಾನಹೇಳಿದೆನು. ಆ ವೊಂದು ಗೋವಿಗಾಗಿ ಅವರಲ್ಲಿ ಯಾವನಾದರೂ ಒಬ್ಬನಿಗೆ ಲಕ್ಷಗೋವುಗಳನ್ನು ಕೊಡುವುದಾಗಿ ಹೇಳಿದನು. ಇಬ್ಬರೂ ತಮ್ಮ ಮುಷ್ಕರವನ್ನು ಬಿಡದೆ, ಆ ಹಸುವೇ ತಮಗೆ ಬೇಕೆಂದು ನಿರ್ಬಂಧಿಸಿದರು. ಆಗ ನಾನು ಅವರಮುಂದೆ ಕೈಮುಗಿದು, "ಎಲೈ ಬ್ರಾಹ್ಮಣೋತ್ತಮರೆ! ತಿಳಿಯದೆ ಮಾಡಿದ ನನ್ನತಪ್ಪನ್ನು ಮನ್ನಿಸಿ, ನನ್ನನ್ನು ನರಕದಿಂದ ಉದ್ಧರಿಸಬೇಕು ನೀವು ಕೇಳಿದ ದ್ರವ್ಯವನ್ನು ಕೊಡುವುದಕ್ಕ ಸಿದ್ಧನಾಗಿರುವೆನು" ಎಂದು ಬೇಡಿದೆನು ಇಷ್ಟಾದರೂ ಅದರ ಮೊದಲಿನ ಸ್ವಂತಗಾರನು. "ನಿನ್ನ ಲಕ್ಷಗೋವುಗಳನ್ನೂ ನಾನೊಲ್ಲೆನು" ಎಂದು ಹೇಳಿ ಕೋಪದಿಂದ ಹೊರಟುಹೋದನು ಹಾಗೆಯೇ ಮತೊಬ್ಬನು, "ನೀನು ಹತ್ತುಲಕ್ಷಗೋವುಗಳನ್ನು ಕೊಟ್ಟರೂ ನಾನೊಲ್ಲೆ" ನೆಂದು ಹೇಳಿಹೋದನು. ನಾನು ದಾನಮಾಡಿದ ಧೇನುವು ನನ್ನಲ್ಲಿಯೇ ನಿಂತುಹೋಯಿತು. ಓ ದೇವಾ! ಕೊನೆಗೆ ನಿನ್ನಸಂ

ಕಲ್ಪರೂಪವಾದ ಕಾಲವಶದಿಂದ ನಾನು ಮೃತನಾದಮೇಲೆ, ನನಗೆ ಯಾವ ಗತಿಯುಂಟಾಯಿತೆಂಬುದನ್ನೂ ತಿಳಿಸುವೆನು ಕೇಳು 'ನನ್ನ ದೇಹಾವಸಾನದಲ್ಲಿ ಯಮದೂತರು ಬಂದು, ನನ್ನನ್ನು ಯಮಲೋಕಕ್ಕೆ ಕರೆದುಕೊಂಡು ಹೋದರು ಅಲ್ಲಿ ಯಮಧರ್ಮರಾಯನು ನನ್ನನ್ನು ನೋಡಿ “ಓ ರಾಜಾ! ನೀನು ಪಾಪಪುಣ್ಯಗಳೆರಡನ್ನೂ ನಡೆಸಿರುವೆ! ಆದುದರಿಂದ ಮೊದಲು ನೀನು ಪಾಪಫಲವನ್ನನುಭವಿಸುವೆಯಾ? ಅಥವಾ ಪುಣ್ಯಫಲವನ್ನನ್ನುಭವಿಸುವೆಯಾ? ನಿನ್ನ ಇಷ್ಟವನ್ನು ಹೇಳು! ನೀನು ಎಷ್ಟೋದಾನಗಳನ್ನು ಮಾಡಿರುವೆ ಅದಕ್ಕಾಗಿ ನೀನು ಅನುಭವಿಸಬೇಕಾದ ಪುಣ್ಯಫಲವು ಅಪಾರವಾಗಿರುವುದು. ಆದರೆ ದತ್ತಾಪಹಾರರೂಪವಾದ ನಿನ್ನ ಪಾಪಕ್ಕೂ ಫಲವನ್ನನುಭವಿಸದೇತೀರದು. ಅವುಗಳಲ್ಲಿ ನೀನು ಮೊದಲು ಯಾವುದನ್ನನುಭವಿಸುವೆ” ಎಂದು ಕೇಳಿದನು ಆಗ ನಾನು, ಮೊದಲು ಪಾಪಫಲವನ್ನೇ ಅನುಭವಿಸುವೆನೆಂದು ಒಪ್ಪಿಕೊಂಡೆನು. ಯಮನು” “ಹಾಗೆಯೇ ಆಗಲಿ! ಹೋಗು” ಎಂದು ಹೇಳಿದನು ಯಮನ ಬಾಯಿಂದ ಆಮಾತು ಹೊರಟೊಡನೆ, ನಾನು ಅಲ್ಲಿಂದ ಕೆಳಗೆ ಬಿದ್ದೆನು ನಾನು ಬೀಳುತ್ತಿರುವಾಗಲೇ ನನಗೆ ಈ ಕೃಕಲಾಸದ (ಹೆಂಟೆಗೊದ್ದದ) ಆಕಾರವು ಪ್ರಾಪ್ತವಾಗಿರುವುದನ್ನು ನೋಡಿದೆನು ಓ! ಪ್ರಭೋ! ನಾನುಹಿಂದೆ ಬ್ರಾಹ್ಮಣಪ್ರಿಯನಾಗಿಯೂ,ದಾನಶೀಲನಾಗಿಯೂ ನಿನ್ನ ಭಕ್ತನಾಗಿಯೂ ಇದ್ದುದರಿಂದ, ನಿನ್ನ ಸ್ಮೃತಿಯುಮಾತ್ರ ಆಗಲೂ ತಪ್ಪಿಹೋಗಿರಲಿಲ್ಲ. ನಿನ್ನ ಸಂದರ್ಶನವು ಯಾವಾಗ ಲಭಿಸುವುದೋ ಎಂದು ಅನವರತವೂ ಕವಕಿಸುತಿದ್ದೆನು. ನನ್ನ ಪುಣ್ಯಫಲದಿಂದ ಈಗ ನಿನ್ನ ದರ್ಶನವು ಲಭಿಸಿತು ಓ! ಸರ್ವೇಶ್ವರಾ! ನೀನು ಮಹಾಯೋಗಿಗಳ ಕಣ್ಣಿಗೂ ಗೋಚರಿಸತಕ್ಕವನಲ್ಲ ಉಪನಿಷತ್ತುಗಳ ಮೂಲಕವಾಗಿ ಕೇವಲಜ್ಞಾನದೃಷ್ಟಿಗೆಮಾತ್ರವೇ ಗೋಚರಿಸತಕ್ಕ ಪರಮಾತ್ಮನು! ಭಕ್ತರಲ್ಲದವರ ಇಂದ್ರಿಯಗಳಿಗೆ ಅಗೋಚರನು ಇಂತಹ ನೀನು ಮಾಂಸದೃಷ್ಟಿಯುಳ್ಳ ಈ ನನ್ನ ಕಣ್ಣಿಗೆ ಗೋಚರಿಸಿದೆ? ಯಾವನು ಸಂಸಾರಪಾಶದಿಂದ ಮುಕ್ತನಾಗಬೇಕೋ ಅವನಿಗೆ ಬುದ್ಧಿಯು ಎಷ್ಟೇ ವ್ಯಸನದಿಂದ ಮಂದವಾಗಿದ್ದರೂ, ಶಾಂತವಾದ ಆತನ ಹೃದಯದಲ್ಲಿ ನೀನು ಕಾಣಿಸಿಕೊಳ್ಳುವೆಯೆಂಬುದಕ್ಕೆ ಈಗ ನನ್ನ ಸ್ಥಿತಿಯೇ ನಿದರ್ಶನವು.

ಜಗನ್ನಾಥಾ! ಗೋವಿಂದಾ! ಪುರುಷೋತ್ತಮಾ!ನಾರಾಯಣಾ!ಹೃ ಷೀಕೇಶಾ! ಪುಣ್ಯಶ್ಲೋಕಾ! ಅಚ್ಯುತಾ! ಅವ್ಯಯಾ! ಕೃಷ್ಣಾ! ಪ್ರ ಭೂ! ಇನ್ನು ದೇವಲೋಕಕ್ಕೆ ಹೋಗುವುದಕ್ಕೆ ನನಗೆ ಅನುಜ್ಞೆಯನ್ನು ಕೊಡಬೇಕು! ನಾನು ಅಲ್ಲಿದ್ದರೂ, ನನ್ನ ಮನಸ್ಸು ಯಾವಾಗಲೂ ನಿನ್ನ ಪಾದಾರವಿಂದವನ್ನು ಧ್ಯಾನಿಸುವಂತೆ ಅನುಗ್ರಹಿಸಬೇಕು ಸರ್ವವಸ್ತುಶ ರೀರಕನಾದ ನಿನಗೆ ನಮಸ್ಕಾರವು! ಅನಂತಶಕ್ತಿಯುಳ್ಳ ಬ್ರಹ್ಮಸ್ವರೂಪ ನಾದ ನಿನಗೆ ನಮಸ್ಕಾರವು! ಕೃಷ್ಣಾ! ವಾಸುದೇವಾ! ಯೋಗೀ ಶ್ವರಾ! ನಿನಗೆ ನಮಸ್ಕಾರವು" ಎಂದು ಹೇಳಿ, ಆ ದಿವ್ಯಪುರುಷನು, ಕೃಷ್ಣ ನಿಗೆ ಪ್ರದಕ್ಷಿಣನಮಸ್ಕಾರಗಳನ್ನು ಮಾಡಿ, ಅವನ ಆಜ್ಞೆಯನ್ನು ಪಡೆದು, ಅಲ್ಲಿದ್ದ ಜನರೆಲ್ಲರೂ ನೋಡುತ್ತಿದ್ದಹಾಗೆಯೇ ತನಗಾಗಿ ಸಿದ್ಧವಾಗಿ ಕಾ ದಿದ್ದ ಒಂದು ದಿವ್ಯವಿಮಾನವನ್ನೇರಿ, ಅಂತರಿಕ್ಷಮಾರ್ಗವಾಗಿ ಹೊರಟು ಹೋದನು. ಆಮೇಲೆ ಇತ್ತಲಾಗಿ ಬ್ರಾಹ್ಮಣಪ್ರಿಯನಾಗಿಯೂ, ಧರ್ಮಸ್ವ ರೂಪನಾಗಿಯೂ ಇರುವ ಶ್ರೀ ಕೃಷ್ಣನು, ರಾಜರೆಲ್ಲರಿಗೂ ಸದ್ಬೋಧೆ ಯನ್ನು ಮಾಡವ ಉದ್ದೇಶದಿಂದ, ಅಲ್ಲಿದ್ದ ತನ್ನ ಸಹಚರರನ್ನು ನೋಡಿ, "ಆಹಾ! ಮಿತ್ರರೇ! ಈ ರಾಜನ ಅವಸ್ಥೆಯನ್ನು ನೋಡಿದಿರಾ! ಬ್ರಹ್ಮ ಸ್ವವೆಂಬುದು ಕೇವಲ ವಿಷಪ್ರಾಯವು! ಅದನ್ನು ಸ್ವಲ್ಪಮಾತ್ರ ಭುಜಿಸಿದ ರೂ, ಅದು ಅಗ್ನಿಯಂತೆ ಎಂತಹ ತೇಜಸ್ವಿಗಳಿಗಾದರೂ ಜೀರ್ಣಿಸಿಕೊ ಳ್ಳುವುದು ಬಹಳ ಕಷ್ಟವು ಹೀಗಿರುವಾಗ ತಾವೇ ಪ್ರಭುಗಳೆಂಬ ಹೆಮ್ಮೆ ಯಿಂದ ಬೀಗುತ್ತಿರುವ ರಾಜರಿಗೆ, ಅದರಿಂದುಂಟಾಗುವ ಅಪಾಯವನ್ನು ಹೇಳತಕ್ಕುದೇನು? ಹಾಲಾಹಲವನ್ನೂ ಕೂಡ ನಾನು ಅಷ್ಟು ಕ್ರೂರವಿ ಷವೆಂದೆಣಿಸಲಾರೆನು! ಏಕೆಂದರೆ, ಅದಕ್ಕೆ ಪ್ರತೀಕಾರವುಂಟು. ಬ್ರಹ್ಮಸ್ವ ವೆಂಬುದು ಮಹಾವಿಷವು. ಇದಕ್ಕೆ ಭೂಮಿಯಲ್ಲಿ ಯಾವವಿಧದಿಂದಲೂ ಪ್ರತೀಕಾರವಿಲ್ಲ ಇದಲ್ಲದೆ, ವಿಷವೆಂಬುದು ತಿಂದವರನ್ನುಮಾತ್ರ ಕೊಲ್ಲು ವುದು. ಬ್ರಹ್ಮಸ್ವವೆಂಬ ವಿಷವು ವಂಶವನ್ನೇ ನಿರ್ಮೂಲಮಾಡುವುದು. ಅಗ್ನಿಯನ್ನು ನೀರಿನಿಂದ ನಂದಿಸಬಹುದು. ಬ್ರಹ್ಮಸ್ವವೆಂಬ ಅಗ್ನಿಯನ್ನು ನಂದಿಸುವುದಕ್ಕೂ ಉಪಾಯವಿಲ್ಲ ಅದು ಕುಲವನ್ನೇ ದಹಿಸುವುದು ಬ್ರಾಹ್ಮ

ಣಸ್ವತ್ತನ್ನು ಅಜ್ಞಾನದಿಂದ ಭುಜಿಸಿದರೂ ಅದು ಕುಲವನ್ನು ಮೂರು ತಲೆಮರೆಗಳವರೆಗೆ ಕೆಡಿಸಿ ಬಿಡುವುದು ಬಲಾತ್ಕಾರದಿಂದ ಕಿತ್ತುತಿಂದರೆ, ಹಿಂದಿನ ಹತ್ತುತಲೆಮರೆಗಳನ್ನೂ, ಮುಂದಿನ ಹತ್ತುತಲೆಮರೆಗಳನ್ನೂ ನಾಶಮಾಡಿಬಿಡುವುದು. ಯಾವರಾಜರು ತಮ್ಮ ರಾಜ್ಯಾಧಿಕಾರದ ಮದ ದಿಂದ ಕಣ್ಣುಕಾಣದೆ, ಬ್ರಹ್ಮಸ್ವತ್ತಿಗೆ ದುರಾಶೆಪಡುವರೋ, ಅವರು ಮುಂದೆ ತಾವು ಹೊಂದತಕ್ಕ ನರಕವನ್ನೂ, ತಮಗಾಗುವ ಆತ್ಮನಾಶವ ನ್ನೂ ತಿಳಿಯಲಾರದ ಮೂಢರೇಹೊರತು ಬೇರೆಯಲ್ಲ. ರಾಜರಾಗಲಿ, ರಾ ಜನ ಕಡೆಯವರಾಗಲಿ, ಕುಟುಂಬಿಗಳಾದ ಬ್ರಾಹ್ಮಣರ ಸ್ವತ್ತನ್ನಪಹರಿಸಿ, ಅವರನ್ನು ಗೋಳಾಡಿಸಿದಪಕ್ಷದಲ್ಲಿ, ಆ ಬ್ರಾಹ್ಮಣರ ಕಣ್ಣಿನಿಂದ ಬೀಳುವ ಬಾಷ್ಪಬಿಂದುಗಳಿಂದ ನೆಲದ ಮೇಲಿರುವ ಎಷ್ಟು ರೇಣುಗಳು ನೆನೆಯುವು ವೋ,ಅಷ್ಟುಸಂವತ್ಸರಗಳವರೆಗೆ ಅವರುಕುಂಭೀಪಾಕವೆಂಬ ನರಕದಲ್ಲಿಬಿದ್ದು ಬೇಯುವರು. ತಾನಾಗಿ ಕೊಟ್ಟುದಾಗಲಿ, ಮತ್ತೊಬ್ಬರು ಕೊಟ್ಟುದಾಗಲಿ ಬ್ರಾಹ್ಮಣನಿಗೆ ಸೇರಿದ ಸ್ವತ್ತನ್ನಪಹರಿಸಿದವನು,ಅರುವತ್ತುಸಾವಿರವರ್ಷಗಳ ವರೆಗೆ ಅಮೇಧ್ಯದಲ್ಲಿ ಕ್ರಿಮಿಯಾಗಿ ಹುಟ್ಟಿ ನರಳುವನು, ಆದುದರಿಂದ ಓ ಮಿತ್ರರೆ! ಆ ಬ್ರಾಹ್ಮಣಸ್ವತ್ತುಮಾತ್ರ ನನಗೆ ಎಂದಿಗೂ ಬೇಡ ! ಅದನ್ನ ನುಭವಿಸಿದ ರಾಜರನೇಕರು, ಅಲ್ಪಾಯುಸ್ಸುಳ್ಳವರಾಗಿಯೂ, ಪರಾಜಿತರಾ ಗಿಯೂ,ರಾಜ್ಯಭ್ರಷ್ಟರಾಗಿಯೂ ಕೆಟ್ಟುಹೋಗಿರುವರು. ಆದರಿಂದ ಬ್ರಹ್ಮ ಸ್ವವೆಂದರೆ ನನ್ನ ಎದೆಯು ನಡುಗುವುದು.ನೀವೂ ಹೀಗೆಯೇ ಭಾವಿಸಬೇಕು! ನಿಮ್ಮಲ್ಲಿ ಅಪರಾಧಿಯಾದ ಬ್ರಾಹ್ಮಣನಿಗೂ ನೀವು ದ್ರೋಹವನ್ನೆಣಿಸಬಾರ ದು! ಬ್ರಾಹ್ಮಣನೊಬ್ಬನು ಅಜ್ಞತೆಯಿಂದ ನಿಮ್ಮನ್ನು ಹೊಡೆದರೂ, ಬೈದ ರೂ, ನೀವು ಅವನನ್ನು ನಮಸ್ಕರಿಸಬೇಕು ನಾನು ಬ್ರಾಹ್ಮಣರನ್ನು ಎಷ್ಟು ಮಟ್ಟಿಗೆ ಗೌರವಿಸಿ ನಮಸ್ಕರಿಸುವೆನೋ, ಹಾಗೆಯೇ ನೀವೂ ನಮಸ್ಕರಿಸು ತ್ತಿರಬೇಕು ಇದಕ್ಕೆ ವಿಪರೀತವಾಗಿ ನಡೆದವರು, ನನ್ನ ನಿಗ್ರಹಕ್ಕೆ ಪಾತ್ರ ರಾಗುವರು. ಬ್ರಹ್ಮಸ್ವವೆಂಬುದು, ತಿಂದವರನ್ನು ಮಹಾಭಯಂಕರವಾದ ನರಕದಲ್ಲಿ ತಳ್ಳಿಬಿಡುವುದು ನೃಗಚಕ್ರವರ್ತಿಯು ಈ ವಿಷಯದಲ್ಲಿ ಅಜ್ಞಾನ ದಿಂದ ಮಾಡಿದ ಕಾರ್ಯಕ್ಕೂ ಎಂತಹ ಫಲವನ್ನು ಅನುಭವಿಸಬೇಕಾಯಿತು

ನೋಡಿರಿ!" ಎಂದನು. ಕೃಷ್ಣನು ಹೀಗೆಂದು ದ್ವಾರಕಾವಾಸಿಗಳಾದ ಅಲ್ಲಿನ ಜನರಿಗೆ ಬೋಧಿಸಿ, ತನ್ನ ಮನೆಗೆ ಹಿಂತಿರುಗಿ ಬಂದನು ಇದು ಅರುವತ್ತು ನಾಲ್ಕನೆಯ ಅಧ್ಯಾಯವು.

---

{ ಬಲರಾಮನು ತಿರುಗಿ ನಂದಗೋಕುಲಕ್ಕೆ ಬಂದುದು ಯಮುನಾನದಿಯನ್ನು ಆಕರ್ಷಿಸಿದುದು. }

ಓ ಪರೀಕ್ಷಿದ್ರಾಜಾ ! ಒಮ್ಮೆ ಬಲರಾಮನು ತನ್ನ ಬಂಧುಮಿತ್ರರನ್ನು ನೋಡಿ ಬರಬೇಕೆಂಬ ಆತುರದಿಂದ, ರಥವನ್ನೇರಿ ನಂದಗೋಕುಲಕ್ಕೆ ಹೋದನು ಅಲ್ಲಿನ ಗೋಪಗೋಪಿಯರೆಲ್ಲರೂ ಇವನನ್ನು ಬಹುಕಾಲದಿಂದ ಕಾಣದೆ, ಇವನನ್ನು ನೋಡಬೇಕೆಂದು ಕುತೂಹಲವುಳ್ಳವರಾಗಿದ್ದುದರಿಂದ, ಬಲರಾಮನು ಊರಿಗೆ ಬಂದೊಡನೆ, ಎಲ್ಲರೂ ಬಂದು, ಪ್ರೀತಿಯಿಂದ ಅವನನ್ನಾಲಿಂಗಿಸಿ ಸತ್ಕರಿಸಿದರು. ಬಲರಾಮನು ತನ್ನ ತಾಯ್ತಂದೆಗಳಾದ ನಂದಯಶೋದೆಯರ ಬಳಿಗೆ ಬಂದು ನಮಸ್ಕರಿಸಿದಾಗ, ಅವರು ಶುಭಾಶೀರ್ವಾದಗಳನ್ನು ಮಾಡಿ "ವತ್ಸಾ ! ನೀನೂ, ನಿನ್ನ ತಮ್ಮನಾದ ಕೃಷ್ಣನೂ ಯಾದವಕುಮಾರರಾಗಿ ಜನಿಸಿದ್ದರೂ, ನಿಮ್ಮ ಅದ್ಭುತಕಾರ್ಯಗಳಿಂದ ನಿಮ್ಮನ್ನು ನಾವು ಜಗದೀಶ್ವರರೆಂದೇ ಎಣಿಸಬೇಕಾಗಿದೆ ನೀವಿಬ್ಬರೂ ನಮ್ಮನ್ನು ಬಹುಕಾಲದವರೆಗೆ ಸುಖದಿಂದ ರಕ್ಷಿಸುತ್ತಿರಬೇಕು." ಎಂದು ಆತನನ್ನು ಸಮೀಪಕ್ಕೆ ಕರೆದು ಪ್ರೀತಿಯಿಂದಾಲಿಂಗಿಸಿ, ತೊಡೆಯಮೇಲೆ ಕುಳ್ಳಿರಿಸಿಕೊಂಡು, ಆನಂದಬಾಷ್ಪವನ್ನು ಸುರಿಸಿದರು. ಆಮೇಲೆ ರಾಮನು, ಇತರ ಗೋಪವೃದ್ಧರನ್ನೂ ವಿಧ್ಯುಕ್ತವಾಗಿ ಅಭಿವಾದನಮಾಡಿದನು ತನಗಿಂತಲೂ ಚಿಕ್ಕ ವಯಸ್ಸಿನವರು ಬಂದು ನಮಸ್ಕರಿಸಿದಾಗ, ಅವರಿಗೆ ಆಶೀರ್ವಾದಗಳನ್ನು ಮಾಡುವುದು, ಸಮಾನಸ್ಕಂಧರಾದ ಕೆಲವರನ್ನು ಆಲಿಂಗನಾದಿಗಳಿಂದ ಮನ್ನಿಸುವುದು, ಕೆಲವರಿಗೆ ಕೈಹಿಡಿದು ಕುಶಲಪ್ರಶ್ನೆಮಾಡುವುದು, ಕೆಲವರೊಡನೆ ಮಕ್ಕಳಾಟವಾಡುವುದು, ಹೀಗೆ ಅವರವರಲ್ಲಿ ತನಗಿರುವ ಸಂಬಂಧಕ್ಕೂ, ಸ್ನೇಹಕ್ಕೂ, ಸಲಿಗೆಗೂ, ಅವರವರ ವಯಸ್ಸಿಗೂ ತಕ್ಕಂತೆ

ಪ್ರೀತಿಗೌರವಗಳನ್ನು ತೋರಿಸಿದನು. ಹೀಗೆ ಪರಸ್ಪರಕುಶಲಪ್ರಶ್ನಾದಿಗಳೆಲ್ಲವೂ ನಡೆದಮೇಲೆ, ಸುಖಾಸೀನನಾದ ಬಲರಾಮನನ್ನು ನೋಡಿ, ಕೆಲವು ಗೋಪಿಯರು ಅವನ ಸುತ್ತಲೂ ಕುಳಿತು, ಕೃಷ್ಣನನ್ನು ಮನಸ್ಸಿನಲ್ಲಿ ದೃಢಧ್ಯಾನದಿಂದ ಚಿಂತಿಸುತ್ತ, ಅವನಲ್ಲಿ ತಮಗಿರತಕ್ಕ ಅಸಾಧಾರಣಪ್ರೇಮದಿಂದ ಗದ್ಗದಸ್ವರವುಳ್ಳವರಾಗಿ ಹೀಗೆಂದು ಪ್ರಶ್ನಮಾಡುವರು. “ರಾಮಾ! ದ್ವಾರಕೆಯಲ್ಲಿ ನಮ್ಮ ಮಿತ್ರರಾದ ಯಾದವರೆಲ್ಲರೂ ಕ್ಷೇಮದಿಂದಿರುವರಷ್ಟೆ? ನೀನೂ, ನಿನ್ನ ತಮ್ಮನಾದ ಕೃಷ್ಣನೂ, ನಿಮ್ಮ ಪುತ್ರಕಳತ್ರಾದಿ ಬಂಧುಜನಗಳೂ, ಇನ್ನೂ ನಮ್ಮನ್ನು ಮರೆತಿಲ್ಲವಷ್ಟೆ? ಮುಖ್ಯವಾಗಿ ನಿಮ್ಮಿಂದ ಆ ದುರಾತ್ಮನಾದ ಕಂಸನು ಹತನಾಗಿ,ನಮಗೂ ಸಾಧುಗಳಿಗೂ, ಅವನಿಂದುಂಟಾಗುವ ಕಷ್ಟವು ನೀಗಿದುದು ನಮ್ಮ ಭಾಗ್ಯವು! ಮತ್ತು ನೀವು ಶತ್ರುಗಳಲ್ಲಿ ಕೆಲವರನ್ನು ಕೊಂದೂ, ಕೆಲವರನ್ನು ಜಯಿಸಿಯೂ, ಕೊನೆಗೆ ಬಲವಾದ ದುರ್ಗಸ್ಥಾನವನ್ನು ಸೇರಿರುವುದೂ ನಮ್ಮ ಭಾಗ್ಯವೇ!” ಎಂದರು ಕೆಲವು ಗೋಪಿಯರು ಮನೋಭಾವಸೂಚಕವಾದ ಮುಗುಳುನಗೆಯೊಡನೆ ರಾಮನನ್ನು ನೋಡಿ “ಓ ಪೂಜ್ಯಾ! ಪುರಸ್ತ್ರೀಯರಿಗೆ ವಲ್ಲಭನಾದ ಕೃಷ್ಣನು ಸುಖದಿಂದಿರುವನಷ್ಟೆ? ಅವನು ಈ ಹಳ್ಳಿಯಲ್ಲಿರತಕ್ಕ ತನ್ನ ಹಳೇಸ್ನೇಹಿತರನ್ನೂ, ತನ್ನ ತಂದೆ ತಾಯಿಗಳನ್ನೂ, ಆಗಾಗ ಜ್ಞಾಪಿಸಿಕೊಳ್ಳುತ್ತಿರುವನೇ! ಹಿಂದೆ ಇಲ್ಲಿ ನಾವು ಮಾಡಿದ ಸೇವೆಯನ್ನು ಆ ಮಹಾಭುಜನು ಸ್ಮರಿಸುತ್ತಿರುವನೆ! ಓ ಯದುಕುಲೋತ್ತಮಾ, ನಾವು ಯಾವನಿಗಾಗಿಯೇ ನಮ್ಮ ತಂದೆತಾಯಿಗಳನ್ನೂ, ಸಹೋದರರನ್ನೂ, ಕೈಹಿಡಿದ ಗಂಡಂದಿರನ್ನೂ, ಹೊಟ್ಟೆಯಲ್ಲಿ ಹುಟ್ಟಿದ ಮಕ್ಕಳನ್ನೂ, ಒಡಹುಟ್ಟಿದ ಅಕ್ಕತಂಗಿಯರನ್ನೂ ಬಿಟ್ಟು ಬಂದೆವೋ,ಅಂತಹ ನಮ್ಮನ್ನೂ ಅನಾದರಿಸಿ, ಕೃಷ್ಣನು ಇದ್ದಕ್ಕಿದ್ದಹಾಗೆ ನಮ್ಮ ಸ್ನೇಹಪಾಶವನ್ನು ಕಿತ್ತುಬಿಟ್ಟನು. “ಹಾಗಿದ್ದರೆ ನೀವು ಅವನನ್ನು ಬಲಾತ್ಕಾರದಿಂದ ತಡೆದು ನಿಲ್ಲಿಸಬಹುದಾಗಿತ್ತಲ್ಲವೇ” ಎಂದು ಕೇಳುವೆಯಾ? ರಾಮಾ! ಅವನು ಶೀಘ್ರದಲ್ಲಿಯೇ ಹಿಂತಿರುಗಿ ನಮ್ಮಲ್ಲಿಗೆ ಬರುವುದಾಗಿ ಹೇಳಿಹೋದನು. ಅವನ ಮಾತನ್ನು ನಿಜವೆಂದು ನಂಬಿ ಮೋಸಹೋದೆವು. ಆ ಕೃಷ್ಣನು

ಅಷ್ಟು ಚಕ್ಕಂದವಾಗಿ ಮಾತಾಡಿದಮೇಲೆ,ಏನೂ ತಿಳಿಯದ ಹಳ್ಳಿಯ ಹೆಂಗಸ ರಾದನಾವು ಹೇಗೆತಾನೇ ನಂಬದಿರಬಹುದು? ಮನಸ್ಸನ್ನು ಒಂದು ನೆಲೆಯಲ್ಲಿ ನಿಲ್ಲಿಸಲಾರದೆ, ಉಪಕಾರಸ್ಮರಣೆಯೂ ಇಲ್ಲದಿರುವ ಆ ಕೃಷ್ಣನ ಮಾತುಗ ಳನ್ನು ಲೋಕವ್ಯವಹಾರದಲ್ಲಿ ಚತುರರೆನಿಸಿಕೊಂಡ ಆ ಪುರಸ್ತ್ರೀಯರು ಹೇಗೆ ನೀಜವೆಂದು ನಂಬುವರೋ ಕಾಣೆವು!" ಎಂದು ಹೇಳುತ್ತಿರುವಾಗ, ಮತ್ತೆ ಕೆಲವು ಸ್ತ್ರೀಯರು, ಆ ಮಾತಿಗಡ್ಡವಾಗಿ "ಏನಮ್ಮ! ಅವನ ವಿಚಿತ್ರ ವಾದ ಮಾತುಗಳಿಗೂ, ಸುಂದರವಾದ ಅವನ ಮುಗುಳುನಗೆಗೂ, ಅಂದ ವಾದ ಅವನ ನೋಟಕ್ಕೂ ಎಂತವರು ತಾನೇ ಮರುಳಾಗದಿರುವರು? ಗೋಪಿಯರೇ! ಸಾಕುಬಿಡಿರಿ! ಇನ್ನು ನಮಗೆ ಅವನ ಮಾತುಗಳಿಂದ ಪ್ರಯೋಜನವೇನು? ಬೇರೇನಾದರೂ ಹೇಳಬೇಕಾದುದಿದ್ದರೆ ಹೇಳಿರಿ! ನಾವಿಲ್ಲದೆ ಅವನಿಗೆ ಹೊತ್ತುಹೋಗುವಂತೆ, ನಮಗೂ ಅವನಿಲ್ಲದಂತೆಯೇ ಹೊತ್ತು ಹೋಗಲಾರದೇನು?" ಎಂದರು. ಹೀಗೆ ಆ ಗೋಪಿಯರೆಲ್ಲರೂ ಕೃಷ್ಣನನ್ನು ಹಂಗಿಸುವನೆವದಿಂದ, ಅವನ ನಗೆನೋಟಗಳನ್ನೂ, ಅವನ ಮುದ್ದುಮಾತುಗಳನ್ನೂ, ಅವನ ನಡೆನುಡಿಗಳನ್ನೂ, ಅವನ ದೇಹಾಲಿಂಗನ ಸೌಖ್ಯವನ್ನೂ ಸ್ಮರಿಸಿಕೊಂಡು ದುಃಖಿಸುತಿದ್ದರು.ಆಗ ಬಲರಾಮನು ತನ್ನೊ ಡನೆ ಕೃಷ್ಣನು ಅವರಿಗಾಗಿ ಹೇಳಿದ್ದ ಸಂದೇಶವಾಕ್ಯಗಳನ್ನು ತಿಳಿಸಿ, ನಾನಾ ವಿಧಸಮಾಧಾನಗಳಿಂದ ಅವರ ದುಃಖೋಪಶಮನವನ್ನು ಮಾಡಿದನು. ಆಮೇಲೆ ಬಲರಾಮನು, ಅಲ್ಲಿ ಮೊದಲು ತನ್ನಲ್ಲಿ ಅನುರಕ್ತರಾಗಿದ್ದ ಕೆಲವು ಮಂದಿ ಗೋಪಿಯರೊಡನೆ ರಾತ್ರಿಕಾಲಗಳಲ್ಲಿ ಸರಸಗೋಷ್ಠಿಯನ್ನು ನಡೆ ಸುತ್ತ, ಚೈತ್ರ ವೈಶಾಖಮಾಸಗಳೆರಡನ್ನೂ ಆ ನಂದಗೋಕುಲದಲ್ಲಿಯೇ ಕಳೆದನು. ಆಗ ಬಲರಾಮನ ರಾತ್ರಿವಿಹಾರವೈಭವಗಳನ್ನು ಕೇಳಬೇಕೆ? ದಿಕ್ಕುಗಳೆಲ್ಲವೂ ಪೂರ್ಣಚಂದ್ರಕಲೆಗಳಿಂದ ಶೋಭಿಸುತ್ತಿರುವುವು! ನಾನಾ ಕಡೆಗಳಿಂದ ಕುಮುದಪುಷ್ಪಗಳ ಸುಗಂಧದೊಡನೆ ಮಂದಮಾರುತವು ಬೀಸುತ್ತಿರುವುದು ಇಂತಹ ಕಾಲದಲ್ಲಿ ರಾಮನು, ಸ್ತ್ರೀಗಣಗಳೊಡನೆ ಯಮು ನಾತೀರದಲ್ಲಿ ವಿಹರಿಸುತ್ತಿದ್ದನು. ಆಗ ವರುಣದೇವನ ಪ್ರೇರಣೆಯಿಂದ ಮರದ ಪೊಟ್ಟರೆಗಳಲ್ಲಿ ತಾನಾಗಿ ಸ್ರವಿಸುತ್ತಿರುವ ವಾರುಣಿಯೆಂಬ ಮ

ದ್ಯದ ವಾಸನೆಯು ಆ ವನವನ್ನೆಲ್ಲಾ ಘಮಘಮಿಸುವಂತೆ ಮಾಡುತಿತ್ತು. ಆ ಮದ್ಯಗಂಧವು, ಮೇಲೆಮೇಲೆ ಉತ್ಸಾಹವನ್ನು ಹುಟ್ಟಿಸುತ್ತಿರಲು, ಬಲರಾಮನು, ಸ್ತ್ರೀಯರೊಡನೆ ಯಥೇಷ್ಟವಾಗಿ ಮದ್ಯಪಾನವನ್ನು ಮಾಡುತ್ತ ವಿಹರಿಸುತಿದ್ದನು. ಗೋಪಿಯರು ಮಂಡಲಾಕಾರವಾಗಿ ಸುತ್ತಿನಿಂತು ಗಾನಮಾಡುತ್ತಿರಲು, ಹೆಣ್ಣಾನೆಗಳ ನಡುವೆ ಆಡುತ್ತಿರುವ ಐರಾವತದಂತೆ, ಅವರನಡುವೆ ನಿಂತು, ತಾನೂ ಗಾನಮಾಡುತಿದ್ದನು. ಆಗ ಆಕಾಶದಲ್ಲಿ ದೇವದುಂದುಭಿಗಳು ಮೊಳಗಿದುವು. ದೇವತೆಗಳು ಪುಷ್ಪವರ್ಷವನ್ನು ಕರೆದರು. ಗಂಧರ್ವರು ಗಾನಮಾಡಿದರು.ದೇವರ್ಷಿಗಳು ಸಂತೋಷದಿಂದ ಆ ಬಲರಾಮನ ಗುಣವೀರ್ಯಾದಿಗಳನ್ನು ಕೊಂಡಾಡಿ ಕೀರ್ತಿಸಿದರು. ಹೀಗೆ ಬಲರಾಮನು ಗೋಪಿಯರ ಕೊಂಡಾಟಗಳನ್ನು ಕೇಳುತ್ತ, ಮದ್ಯಮದದಿಂದ ಮತ್ತೇರಿದ ಕಣ್ಣುಗಳುಳ್ಳವನಾಗಿ, ಆ ಯಮುನಾತೀರದ ವನಗಳಲ್ಲಿ ಸಂತೋಷದಿಂದಸುತ್ತುತಿದ್ದಾಗ,ಪುಷ್ಪಹಾರಗಳಿಂದಲೂ,ವೈಜಯಂತೀಮಾಲಿಕೆಯಿಂದಲೂ, ಒಂದು ಕಿವಿಯಲ್ಲಿ ಕುಂಡಲದಿಂದಲೂ, ಬೆವರಿನ ಹನಿಗಳನ್ನು ತುಳುಕಿಸುತ್ತಿರುವ ನಗುಮುಖದಿಂದಲೂ ಅಪೂರ್ವಶೋಭೆಯನ್ನು ಬೀರುತ್ತಿದ್ದನು.

ಹೀಗೆ ಆವನದಲ್ಲಿ ಸುತ್ತುತ್ತಿರುವಾಗ, ಅವನಿಗೆ ಯಮುನಾನದಿಯಲ್ಲಿ ಜಲಕ್ರೀಡೆಯನ್ನಾಡಬೇಕೆಂಬ ಕುತೂಹಲವು ಹುಟ್ಟಿತು. ತಾನಾಗಿ ಆನದಿಯ ಸಮೀಪಕ್ಕೆ ಹೋಗಲು ಬೇಸರದಿಂದ, ಆ ನದಿಯನ್ನೇ ತಾನಿದ್ದಸ್ಥಳಕ್ಕೆ ಕರೆದನು ಆಗ ಯಮುನಾನದಿಯು,ಅವನ ಮಹಿಮೆಯನ್ನು ತಿಳಿಯದೆ,ಅವನು ಮದಮತ್ತನಾಗಿರುವುದನ್ನು ನೋಡಿ ಅಲಕ್ಷ್ಯದಿಂದಿದ್ದಿತು ಆಗ ಬಲರಾಮನು ಕೋಪಗೊಂಡು,ತನ್ನ ನೇಗಿಲಿನಿಂದ ಅದನ್ನು ತನ್ನಕಡೆಗೆ ಎಳೆದು ನಿಲ್ಲಿಸಿಕೊಂಡು" ಎಲೆ ಪಾಪಿನಿ! ನಾನು ಕರೆಯುತಿದ್ದರೂ ಲಕ್ಷ್ಯವಿಲ್ಲದಿದ್ದೆಯಲ್ಲವೆ? ಈಗ ಇದೇ ನೇಗಿಲಿನಿಂದ ನಿನ್ನನ್ನು ನೂರಾರುಭಾಗವಾಗಿ ಸೀಳಿಬಿಡುವೆನು ನೋಡು!" ಎಂದನು ಆಗ ಯಮುನೆಯು ಬಲರಾಮನ ಕೋಪಕ್ಕೆ ಹೆದರಿ,ಸ್ತ್ರೀರೂಪದಿಂದ ಬಂದು, ಅವನ ಕಾಲುಗಳಿಗೆ ಬಿದ್ದು ಹೀಗೆಂದುಪ್ರಾರ್ಥಿಸುವಳು. "ರಾಮಾ! ರಾಮಾ! ಓ ಮಹಾಬಾಹೂ! ನಿನ್ನ ಪರಾಕ್ರಮವನ್ನು ನಾನು

ತಿಳಿಯದೆಹೋದೆನು ಓ ಜಗತ್ಪತೇ! ನಿನ್ನ ಏಕಾಂಶಮಾತ್ರದಿಂದಲೇ ನೀನು ಈ ಜಗತ್ತನ್ನು ಧರಿಸಿರತಕ್ಕವನೆಂಬುದು ಈಗ ನನಗೆ ಸ್ಪಷ್ಟವಾಯಿತು. ಓ ಮಹಾತ್ಮಾ! ಸಾಕ್ಷಾದ್ಭಗವದಂಶಭೂತನಾದ ನಿನ್ನ ಪರಸ್ವಭಾವವನ್ನು ತಿಳಿಯದೆ ನಾನು ಮಾಡಿದ ಅಪರಾಧವನ್ನು ಮನ್ನಿಸಿ, ನನ್ನನ್ನು ಬಿಟ್ಟುಬಿಡಬೇಕು! ನಾನು ನಿನ್ನಲ್ಲಿ ಮರೆಹೊಕ್ಕಿರುವೆನು." ಎಂದು ಪ್ರಾರ್ಥಿಸಿದಳು. ಆಗ ಬಲರಾಮನು ಆಕೆಯಲ್ಲಿ ಪ್ರಸನ್ನನಾಗಿ, ಅವಳ ಕೊರಳಿಗೆ ಹಾಕಿದ್ದ ನೇಗಿಲನ್ನು ತೆಗೆದು, ಹೆಣ್ಣಾನೆಗಳೊಡನೆ ನೀರಿಗಿಳಿಯುವ ಮದದಾನೆಯಂತೆ ಜಲಕ್ರೀಡೆಗಾಗಿ ಸ್ತ್ರೀಯರೊಡನೆ ಆದರಲ್ಲಿಳಿದನು. ಅವನು ಯಥೇಷ್ಟವಾಗಿ ವಿಹರಿಸಿ ಮೇಲಕ್ಕೆದ್ದು ಬಂದಮೇಲೆ, ಯಮುನೆಯು ಅವನಿಗಾಗಿ ಉತ್ತಮವಾದ ಎರಡು ಬಿಳೀದುಕೂಲಗಳನ್ನೂ, ಅಮೂಲ್ಯಾಭರಣಗಳನ್ನೂ, ಒಂದು ದಿವ್ಯಪುಷ್ಪಮಾಲಿಕೆಯನ್ನೂ ಕಾಣಿಕೆಯಾಗಿ ತಂದೊಪ್ಪಿಸಿದಳು. ಬಲರಾಮನು ಅವೆಲ್ಲವನ್ನೂ ಪ್ರೀತಿಯಿಂದ ಸ್ವೀಕರಿಸಿ, ಅದೇ ವಸ್ತ್ರಾಭರಣಗಂಧಪುಷ್ಪಾದಿಗಳಿಂದ ದೇಹವನ್ನಲಂಕರಿಸಿಕೊಂಡು, ಅಲಂಕೃತವಾದ ಐರಾವತದಂತೆ ಶೋಭಿಸಿದನು ಓ ಪರೀಕ್ಷಿದ್ರಾಜಾ! ಬಲರಾಮನು ಯಮುನಾನದಿಯನ್ನು ನೇಗಿಲಿನಿಂದೆಳೆದು ತನ್ನಕಡೆಗೆ ಒತ್ತರಿಸಿಕೊಂಡ ದಾರಿಯಲ್ಲಿಯೇ, ಈಗಲೂ ಆನದಿಯು ವಕ್ರವಾಗಿ ಪ್ರವಹಿಸುತ್ತ, ಆತನ ಅಪ್ರಮೇಯಪ್ರಭಾವವನ್ನು ಈಗಲೂ ಜನರಿಗೆ ಸೂಚಿಸುತ್ತಿರುವುದು. ಹೀಗೆ ಗೋಪಸ್ತ್ರೀಯರಿಗೆ ಆ ಬಲರಾಮನೊಡನೆ ವಿಹರಿಸಿದ ಅನೇಕರಾತ್ರಿಗಳೂ ಒಂದುರಾತ್ರಿಯಂತೆ ಸಂತೋಷದಿಂದ ಕಳೆದುಹೋದುವು. ಇದು ಅರುವತ್ತೈದನೆಯ ಅಧ್ಯಾಯವು.

---

## ಕೃಷ್ಣನು ಪೌಂಡ್ರಕ ಕಾಶೀರಾಜಾದಿಗಳನ್ನು ವಧಿಸಿದ ವೃತ್ತಾಂತವು.

ಓ ಪರಿಕ್ಷಿದ್ರಾಜಾ! ಬಲರಾಮನು ಅತ್ತಲಾಗಿ ನಂದಗೋಕುಲಕ್ಕೆ ಹೋಗಿದ್ದಾಗ, ಇತ್ತಲಾಗಿ ಕೃಷ್ಣನು ನಡೆಸಿದ ಇನ್ನೊಂದು ಕಾರ್ಯವನ್ನು ಹೇಳುವೆನು ಕೇಳು! ಕರೂಶದೇಶಕ್ಕೆ ಅಧಿಪತಿಯಾದ ಪೌಂಡ್ರಕನೆಂಬ ಒಬ್ಬರಾಜ

ನಿದ್ದನು ಆವನಿಗೆ ಲೋಕದಲ್ಲಿ ತನಗೆ ಸಮಾನರಿಲ್ಲವೆಂಬ ಗರ್ವವಿತ್ತು. ಇದ ಲ್ಲದೆ ಅವನ ಸಂಗಡಿಗರಾದ ಕೆಲವುಮಂದಿ ಬಾಲಕರು, ಅವನನ್ನು ನೋಡಿ ಯಾವಾಗಲೂ ಮುಖಸ್ತುತಿಮಾತುತಾ, "ನೀನೇ ವಾಸುದೇವನು! ಲೋಕಾ ಧಿಪತಿಯಾದ ಭಗವಂತನೇ ನೀನಾಗಿ ಅವತರಿಸಿರುವೆ !" ಎಂದು ಹೇಳುತ್ತಿ ದ್ದರು ಇದನ್ನು ಕೇಳಿ ಅವನಿಗೆ ಅಹಂಭಾವವು ಮಿತಿಮೀರಿಹೋಯಿತು. ತಾನೇ ಸಾಕ್ಷಾದ್ವಿಷ್ಣುವೆಂದು ತಿಳಿದುಬಿಟ್ಟನು ಹೀಗೆ ಗರ್ವೋದ್ರಿಕ್ತನಾದ ಆ ಮೂಢನು, ಅಪ್ರಮೇಯ ಪ್ರಭಾವನಾದ ಕೃಷ್ಣನಿಗೆ ತನ್ನದೂತನೊಬ್ಬನ ಮೂಲಕವಾಗಿ, "ಕೃಷ್ಣಾ ! ಬಾಲಕರು ಮಕ್ಕಳಾಟಿಕೆಯಲ್ಲಿ ತಮ್ಮಲ್ಲಿ ಯೇ ಒಬ್ಬನನ್ನು ರಾಜನನ್ನಾಗಿಯೂ, ಮತ್ತೊಬ್ಬನನ್ನು ಮಂತ್ರಿಯನ್ನಾಗಿ ಯೂ ಏರ್ಪಡಿಸುವಂತೆ, ದ್ವಾರಕೆಯಲ್ಲಿ ನಿನಗೆ ಹಿತರಾದ ಕೆಲವುಹುಡು ಗರು, ಅಜ್ಞನಾದ ನಿನ್ನನ್ನು ರಾಜನೆಂದು ಕರೆಯುತ್ತಿರುವರೇಹೊರತು, ನೀ ನು ರಾಜಪದವಿಗೆ ಎಂದಿಗೂ ಅರ್ಹನಲ್ಲ" ಎಂಬೀ ಮಾತುಗಳನ್ನುಹೇಳಿ ಕಳುಹಿಸಿದನು ಅದರಂತೆ ಆತನು ದ್ವಾರಕೆಗೆ ಬಂದು ಸಭಾಮಧ್ಯದಲ್ಲಿದ್ದ ಕೃಷ್ಣನನ್ನು ನೋಡಿ, ತಾನು ತಂದಿದ್ದ ರಾಜಸಂದೇಶವನ್ನು ತಿಳಿಸುತಾ, "ಕೃಷ್ಣಾ ! ಲೋಕಾನುಗ್ರಹಾರ್ಥವಾಗಿ ಈ ಲೋಕದಲ್ಲಿ ಅವತರಿಸಿರತಕ್ಕ ವಾಸುದೇವನು ನಾನುಹೊರತು ಬೇರೊಬ್ಬರಿಲ್ಲ ಆದುದರಿಂದ ಸುಳ್ಳು ಸುಳ್ಳಾಗಿ ನೀನು ಆರೋಪಿಸಿಕೊಂಡಿರುವ ವಾಸುದೇವಶಬ್ದವನ್ನು ಈ ಗಲೇ ತೆಗೆದು ಬಿಡಬೇಕು. ಇದಲ್ಲದೆ ನೀನು ಮೂಢತ್ವದಿಂದ ನನಗೆ ಸಲ್ಲ ತಕ್ಕ ಕೆಲವು ಅಸಾಧಾರಣಚಿಹ್ನಗಳನ್ನೂ ಧರಿಸಿರುವೆ ಅವುಗಳನ್ನೂ ತೆ ಗೆದುಹಾಕಿ ಈಗಲೇ ನನ್ನಲ್ಲಿ ಶರಣಾಗತನಾಗಬೇಕು! ಇಲ್ಲವಾದರೆ ನನ್ನೊಡನೆ ಯುದ್ಧಕ್ಕೆ ಸಿದ್ಧನಾಗು" ಎಂದು ನಮ್ಮ ರಾಜನು ನಿನಗೆ ಹೇಳಿ ಕಳುಹಿಸಿರುವನು" ಎಂದನು. ಅಲ್ಪಬುದ್ಧಿಯುಳ್ಳ ಪೌಂಡ್ರಕನು ಹೆಮ್ಮೆ ಯಿಂದ ಹೇಳಿ ಕಳುಹಿಸಿದ ಈ ಮಾತುಗಳನ್ನು ಕೇಳಿ, ಆ ಸಭೆಯಲ್ಲಿದ್ದ ಉಗ್ರಸೇನಾದಿಗಳೆಲ್ಲರೂ ಅವನ ಹುಚ್ಚುಮಾತುಗಳಿಗಾಗಿ ಗೊಳ್ಳೆಂದು ನ ಕ್ಕು ಸುಮ್ಮನಾದರು ಆಗ ಕೃಷ್ಣನು ಅದೇ ದೂತನ ಮೂಲಕವಾಗಿ ಪೌಂಡ್ರಕನನ್ನು ಕುರಿತು, "ಓ ಮೂಢಾ! ನೀನು ಯಾವ ನಿನ್ನ ಕಪ

ಟವೇಷಗಳಿಗಾಗಿ ಹೀಗೆ ಆತ್ಮಸ್ತುತಿಯನ್ನು ಮಾಡಿಕೊಳ್ಳುವೆಯೋ, ಆ ಚಿಹ್ನಗಳನ್ನು ನಾನು ತೆಗೆಸಿಬಿಡುವೆನು ನೋಡು! ಮತ್ತು ನೀನು ನನ್ನಲ್ಲಿ ಶರಣಾಗತನಾಗಬೇಕೆಂದು ಯಾವ ಬಾಯಿಂದಾಡಿದೆಯೋ ಆ ಬಾಯನ್ನು ಮುಚ್ಚಿಸಿ, ನಿನ್ನನ್ನು ರಣರಂಗದಲ್ಲಿ ಮಲಗಿಸಿ, ಆ ನಿನ್ನ ದೇಹವನ್ನು ಹದ್ದುಕಾಗೆಗಳಿಗೂ, ನರಿನಾಯಿಗಳಿಗೂ ಆಹಾರವಾಗಿ ಮಾಡುವೆನು." ಎಂದು ಹೇಳಿ ಕಳುಹಿಸಿಬಿಟ್ಟನು. ಆ ದೂತನೂಕೂಡ ಕೃಷ್ಣನು ಹೇಳಿದ ಮಾತುಗಳನ್ನೇ ತನ್ನ ರಾಜನಿಗೆ ಯಥಾವತ್ತಾಗಿ ತಿಳಿಸಿದನು. ಇಷ್ಟರಲ್ಲಿಯೇ ಕೃಷ್ಣನು ಯುದ್ಧಸನ್ನದ್ಧನಾಗಿ ರಥವನ್ನೇರಿ, ಕರೂಶದೇಶಕ್ಕೆ ನೆರೆಯಲ್ಲಿದ್ದ ಕಾಶೀಪಟ್ಟಣದ ಒಳಗೆ ಬಂದನು. ಕೃಷ್ಣನು ಬಂದಿರುವ ಸಂಗತಿಯನ್ನು ಕೇಳಿ ಪೌಂಡ್ರಕನೂ ಕೂಡ, ಅಕ್ಷೌಹಿಣೀ ಸೈನ್ಯದೊಡನೆ ಯುದ್ಧೋದ್ಯುಕ್ತನಾಗಿ ತನ್ನ ಪಟ್ಟಣದಿಂದ ಹೊರಟುಬಂದನು. ಓ ರಾಜೇಂದ್ರಾ! ಆ ಪೌಂಡ್ರಕನಿಗೂ, ಕಾಶೀರಾಜನಿಗೂ ಅನ್ಯೋನ್ಯಸ್ನೇಹವಿದ್ದುದರಿಂದ, ಪೌಂಡ್ರಕನಿಗೆ ಬೆಂಬಲವಾಗಿ ಕಾಶೀರಾಜನು ಮೂರಕ್ಷೋಹಿಣೀಸೈನ್ಯಗಳನ್ನು ಸಿದ್ಧಪಡಿಸಿಕೊಂಡು ಯುದ್ಧಕ್ಕೆ ನಿಂತನು. ಆಗ ಆ ಪೌಂಡ್ರಕನ ಕಪಟವೇಷದ ಆಡಂಬರವನ್ನು ಕೇಳಬೇಕೆ? ಚತುರ್ಭುಜಗಳು! ಆ ನಾಲ್ಕುಭುಜಗಳಲ್ಲಿಯೂ ಶಂಖ ಚಕ್ರ ಗದಾ ಖಡ್ಗ ಶಾರ್ಙ್ಗಗಳೆಂಬ ಪಂಚಾಯುಧಗಳು! ಎದೆಯಲ್ಲಿ ಶ್ರೀವತ್ಸವೆಂಬ ಮಚ್ಚೆಯ ಗುರುತು! ವಕ್ಷಸ್ಥಳದಲ್ಲಿ ಕೌಸ್ತುಭಮಣಿ! ಕಂಠದಲ್ಲಿ ವನಮಾಲಿಕೆ! ಮೈಮೇಲೆ ಹೊಂಬಣ್ಣದ ಎರಡುಪಟ್ಟೆಮಡಿಗಳು! ರಥಧ್ವಜದಲ್ಲಿ ಗರುತ್ಮಂತನ ಆಕೃತಿ! ತಲೆಯಲ್ಲಿಯೂ ಕಿವಿಗಳಲ್ಲಿಯೂ, ಅಮೂಲ್ಯಗಳಾದ ಕಿರೀಟಮಕರಕುಂಡಲಗಳು! ನಾಟಕದಲ್ಲಿ ವೇಷಧಾರಿಯಾಗಿ ಬಂದ ನಟನಂತೆ ಹೀಗೆ ಕೃತ್ರಿಮವೇಷವನ್ನು ಧರಿಸಿ ಬರುತ್ತಿರುವ ಪೌಂಡ್ರಕನನ್ನು ನೋಡಿ ಕೃಷ್ಣನು, ತಡೆಯಲಾರದ ನಗೆಯಿಂದ ಕೇಕೆಹಾಕಿ ನಕ್ಕನು. ಕೃಷ್ಣನು ಅಟ್ಟಹಾಸದಿಂದ ನಗುತ್ತಿರುವುದನ್ನು ನೋಡಿ, ಶತ್ರುಗಳು ಮತ್ತಷ್ಟು ಕೋಪದಿಂದ, ಅವನಮೇಲೆ ಶೂಲ, ಗದೆ, ಪರಿಘ, ಶಕ್ತಿ, ಪ್ರಾಸ, ತೋಮರ, ಕತ್ತಿ, ಪಟ್ಟಿಸ, ಬಾಣ, ಮೊದಲಾದ ಅನೇಕಶಸ್ತ್ರಗಳನ್ನು ಪರಂಪರೆಯಾಗಿ ಪ್ರಯೋಗಿಸಿದರು. ಆದರೇನು?

ಕೃಷ್ಣನು ತನ್ನ ಚಕ್ರಾದ್ಯಾಯುಧಗಳಿಂದ ಆ ಪೌಂಡ್ರಕಕಾಶೀರಾಜರ ಚತುರಂಗಸೈನ್ಯವನ್ನೂ ನಾನಾವಿಧವಾಗಿ ಪ್ರಹರಿಸುತ್ತ, ಪ್ರಳಯಕಾಲದಲ್ಲಿ ಕಾಲಾಗ್ನಿಯು ಪ್ರಜೆಗಳನ್ನು ಹೇಗೋ ಹಾಗೆ ಅವೆಲ್ಲವನ್ನೂ ನಾಶಮಾಡುತ್ತ ಬಂದನು. ಅಲ್ಲಿ ಕೃಷ್ಣನ ಚಕ್ರಾದ್ಯಾಯುಧಗಳಿಂದ ತುಂಡುತುಂಡಾಗಿ ಕತ್ತರಿಸಿಬಿದ್ದ, ರಥಗಜತುರಗಪದಾತಿಗಳಿಂದಲೂ, ಒಂಟಿ ಕತ್ತೆ ಮೊದಲಾದ ಇತರ ಯುದ್ಧಸಾಧನಗಳಿಂದಲೂ ತುಂಬಿದ ಆ ರಣಭೂಮಿಯು, ರುದ್ರನ ವಿಹಾರಸ್ಥಾನವಾದ ಶ್ಮಶಾನದಂತೆ ಅತಿಘೋರವಾಗಿ, ವೀರರಿಗೆ ಉತ್ಸಾಹವನ್ನು ಹೆಚ್ಚಿಸುವಂತಿದ್ದಿತು. ಆಗ ಕೃಷ್ಣನು ಪೌಂಡ್ರಕನನ್ನು ಕುರಿತು “ಎಲ ಪೌಂಡ್ರಕಾ! ನೀನು ದೂತನಮೂಲಕವಾಗಿ ಯಾವ ನನ್ನ ಆಯುಧಗಳನ್ನು ಕೃತ್ರಿಮಚಿಹ್ನಗಳೆಂದು ಹೇಳಿದೆಯೋ, ಅದೇ ಅಸ್ತ್ರಗಳ ಪ್ರಭಾವವನ್ನು ತೋರಿಸುವೆನು ನೋಡು! ಎಲಮೂಢಾ! ನೀನು ಸುಳ್ಳುಸುಳ್ಳಾಗಿ ಆರೋಪಿಸಿಕೊಂಡಿರುವ ವಾಸುದೇವನೆಂಬ ಹೆಸರನ್ನೂ ನಿನಗೆ ಈಗಲೇ ತಪ್ಪಿಸುವೆನು! ಒಂದುವೇಳೆ ನಿನ್ನೊಡನೆ ಯುದ್ಧಮಾಡುವುದರಲ್ಲಿ ನನಗೆ ಪರಾಭವವುಂಟಾದರೆ, ನೀನು ಹೇಳಿದಂತೆ ನಿನ್ನಲ್ಲಿ ಶರಣಾಗತಿಯನ್ನೇ ಮಾಡುವೆನು” ಎಂದು ಹೇಳುತ್ತ, ಕೆಲವು ತೀಕ್ಷ್ಣಬಾಣಗಳಿಂದ ಅವನ ರಥವನ್ನು ಮುರಿದುಬಿಟ್ಟನು. ಒಡನೆಯೇ ತನ್ನ ಚಕ್ರಾಯುಧವನ್ನು ಪ್ರಯೋಗಿಸಿ, ದೇವೇಂದ್ರನು ವಜ್ರಾಯುಧದಿಂದ ಪರ್ವತಶಿಖರವನ್ನು ಭೇದಿಸಿದಂತೆ ಆ ಪೌಂಡ್ರಕನ ತಲೆಯನ್ನು ಕತ್ತರಿಸಿ ಕೆಡಹಿದನು ಬೇರೆ ಬಾಣಗಳಿಂದ ಕಾಶೀರಾಜನ ಶಿರಸ್ಸನ್ನೂ ಕತ್ತರಿಸಿದನು ಬಿರುಗಾಳಿಯಿಂದ ಮುರಿದುಬಿದ್ದ ಕಮಲದ ಮೊಗ್ಗಿನಂತೆ. ಕಾಶೀರಾಜನ ತಲೆಯು ಅಲ್ಲಿಂದ ಹಾರಿಬಂದು, ಆ ಕಾಶೀಪಟ್ಟಣದ ಅರಮನೆಯ ಬಾಗಿಲಲ್ಲಿ ಬಿದ್ದಿತು. ಹೀಗೆ ಕೃಷ್ಣನು ಪೌಂಡ್ರಕಕಾಶೀರಾಜರಿಬ್ಬರನ್ನೂ ಸಂಹರಿಸಿದಮೇಲೆ, ಆಕಾಶದಲ್ಲಿ ಸಿದ್ಧಚಾರಣಾದಿದೇವಗಣಗಳಿಂದ ಸ್ತುತಿಸಲ್ಪಡುತ್ತ, ಹಿಂತಿರುಗಿ ದ್ವಾರಕೆಗೆ ಬಂದು ಸೇರಿದನು ಅತ್ತಲಾಗಿ ಪೌಂಡ್ರಕನು, ಹುಟ್ಟಿದುದು ಮೊದಲು ಕೃಷ್ಣನಲ್ಲಿ ದ್ವೇಷಬುದ್ಧಿಯುಳ್ಳವನಾಗಿ, ಅನವರತವೂ ಅವನನ್ನೇ ಚಿಂತಿಸುತ್ತಿದ್ದುದರಿಂದ, ತನ್ನ ಪಾಪಶೇಷವೆಲ್ಲವನ್ನೂ ನೀಗಿ, ಕೊನೆಗೆ ಆ ಭಗವಂತನ

ಸಾರೂಪ್ಯವನ್ನೇ ಹೊಂದಿದನು. ಇತ್ತಲಾಗಿ ಕಾಶೀಪುರದ ಜನರೆಲ್ಲರೂ ಅರ ಮನೆಯ ಬಾಗಿಲಲ್ಲಿ ಕುಂಡಲಾಲಂಕೃತವಾಗಿ ಬಿದ್ದಿದ್ದ ತಲೆಯನ್ನು ಕಂಡು, ಆಶ್ಚರ್ಯದಿಂದ 'ಏನಿದು! ಇದು ಯಾರ ತಲೆಯಾಗಿರಬಹುದು?" ಎಂದು ಸಂದೇಹಿಸುತ್ತಿದ್ದರು. ಕೊನೆಗೆ ಅದು ತಮ್ಮ ಪ್ರಭುವಾದ ಕಾಶೀರಾಜನ ಶಿರಸ್ಸೆಂಬುದನ್ನು ತಿಳಿದು ದುಃಖದಿಂದ ರೋದಿಸತೊಡಗಿದರು. ಕಾಶೀ ರಾಜನ ಹೆಂಡಿರುಮಕ್ಕಳೂ. ಬಂಧುಗಳೂ, ಪುರವಾಸಿಗಳೂ "ಹಾ ನಾಥಾ ನಮಗಿನ್ನೇನು ಗತಿ!" ಎಂದು ದೈನ್ಯದಿಂದ ಮೊರೆಯಿಡುತಿದ್ದರು. ಆಮೇಲೆ ಆ ರಾಜನ ಮಗನಾದ ಸುದಕ್ಷಿಣನೆಂಬವನು, ತನ್ನ ತಂದೆಗೆ ಮಾಡಬೇಕಾದ ಅಪರಸಂಸ್ಕಾರಗಳೆಲ್ಲವನ್ನೂ ಕ್ರಮವಾಗಿ ನಡೆಸಿ,ತನ್ನ ತಂದೆಯನ್ನುಕೊಂದ ಕೃಷ್ಣನಮೇಲೆ ಹಗೆತೀರಿಸಿಕೊಂಡೇ ತನ್ನ ತಂದೆಯ ಋಣವನ್ನು ತೀರಿಸಬೇಕೆಂದು ನಿಶ್ಚಯಿಸಿ, ತನ್ನ ಕುಲಪುರೋಹಿತನನ್ನು ಮುಂದಿಟ್ಟು ಕೊಂಡು, ಅವನು ಹೇಳಿದ ವಿಧದಿಂದ ರುದ್ರನನ್ನುಕುರಿತು ತಪಸ್ಸು ಮಾಡುವುದಕ್ಕಾಗಿ ಹೊರಟನು. ದೃಢವಾದ ಧ್ಯಾನಯೋಗದಿಂದ ರುದ್ರ ನನ್ನಾರಾಧಿಸಿದಮೇಲೆ, ರುದ್ರನು ಅವನ ಭಕ್ತಿಗೆ ಮೆಚ್ಚಿ, ಅವನಿಗೆ ಪ್ರತ್ಯಕ್ಷ ನಾದನು. ಆಗ ಸುದಕ್ಷಿಣನು ತನ್ನ ಪಿತೃಘಾತಿಯಾದ ಕೃಷ್ಣನನ್ನು ಕೊಲ್ಲು ವುದಕ್ಕೆ ಉಪಾಯವನ್ನು ತೋರಿಸಿಕೊಡಬೇಕೆಂದು ಕೇಳಲು, ರುದ್ರನು ಅವನಲ್ಲಿ ಪ್ರಸನ್ನನಾಗಿ ಹೀಗೆಂದು ಹೇಳುವನು.

"ಓ ರಾಜಕುಮಾರಾ! ನೀನು ಈಗಲೇ ಉತ್ತಮರಾದ ಬ್ರಾಹ್ಮಣರ ನ್ನು ಋತ್ವಿಕ್ಕುಗಳನ್ನಾಗಿಟ್ಟು, ಅಭಿಚಾರವಿಧಿಯಿಂದ (ಶೂನ್ಯ ಅಥವಾ ಮಾ ಟದಿಂದ) ದಕ್ಷಿಣಾಗ್ನಿಯನ್ನು ಆರಾಧಿಸು! ಆಗ ಆ ಅಗ್ನಿಯು, ಪ್ರಮಥಗಣಗ ಳೊಡನೆ ಭೂತಾಕಾರವಾಗಿ ಹೊರಟು, ನಿನ್ನ ವೈರಿಯನ್ನು ಕೊಲ್ಲುವುದು. ಆದರೆ ನೀನು ಈ ಅಭಿಚಾರವನ್ನು ಬ್ರಾಹ್ಮಣಕುಲದಮೇಲೆ ಪ್ರಯೋಗಿಸಿ ದರೆಮಾತ್ರ, ಅದು ತಾನೇ ಹತವಾಗುವುದು" ಎಂದನು. ದುರ್ಬುದ್ಧಿಯುಳ್ಳ ಸುದಕ್ಷಿಣನು, ಅದರಂತೆಯೇ ಅಭಿಚಾರಹೋಮವನ್ನು ನಡೆಸಿದೊಡನೆ,ಅಗ್ನಿ ಕುಂಡದಲ್ಲಿದ್ದ ಬೆಂಕಿಯು, ಭಯಂಕರವಾದ ಭೂತಾಕಾರದಿಂದ ಮೇಲೆ ದ್ದಿತು. ಅದರ ಘೋರರೂಪವನ್ನು ಕೇಳಬೇಕೆ? ಉರಿಯುವ ಬೆಂಕಿ

ಯಂತೆ ಕೆಂಪಾದ ತಲೆಮೀಸೆಗಳು! ಕೆಂಡವನ್ನು ಕಾರುವಂತಿರುವ ಕಣ್ಣುಗಳು! ಭಯಂಕರವಾದ ಕೋರೆದಾಡೆಗಳು! ಹುಬ್ಬುಗಂಟುಗಳಿಂದಲೂ, ತೀಕ್ಷ್ಣವಾದ ಹಲ್ಲುಗಳಿಂದಲೂ ಘೋರವಾದ ಮೋರೆ! ಕಡೆಬಾಯಿಗಳನ್ನು ನೆಕ್ಕುತ್ತಿರುವ ನೀಡಿದ ನಾಲಗೆ! ಮೈಮೇಲೆ ಬಟ್ಟೆಯಿಲ್ಲದೆ ನಿರ್ವಾಣವಾದ ಆಕೃತಿ! ಇಂತಹ ಘೋರಾಕಾರವುಳ್ಳ ಭೂತವು, ಕೈಯಲ್ಲಿ ಜ್ವಲಿಸುತ್ತಿರುವ ತ್ರಿಶೂಲವನ್ನು ಝಳಿಪಿಸುತ್ತ, ಅನೇಕಪ್ರಮಥಗಣಗಳೊಡಗೂಡಿ, ತಾಲಪ್ರಮಾಣವುಳ್ಳ ಕಾಲುಗಳಿಂದ ಭೂಮಿಯು ನಡುಗುವಂತೆ ಹೆಜ್ಜೆಗಳನ್ನಿಡುತ್ತ, ಕೃಷ್ಣನನ್ನು ಸಂಹರಿಸುವುದಕ್ಕಾಗಿ ದ್ವಾರಕೆಯಕಡೆಗೆ ಹೊರಟಿತು ಅದರ ಜ್ವಾಲೆಯಿಂದ ದಿಕ್ಕುಗಳೆಲ್ಲವೂ ದಗ್ಧವಾಗುವಂತಿದ್ದುವು. ಈ ಅಭಿಚಾರಾಗ್ನಿಯನ್ನು ನೋಡಿ ದ್ವಾರಕಾವಾಸಿಗಳೆಲ್ಲರೂ, ಕಾಡುಗಿಚ್ಚನ್ನು ಕಂಡ ಮೃಗಗಳಂತೆ ಭಯದಿಂದ ನಡುಗುತ್ತ, ನಾನಾಕಡೆಗೆ ಚದರಿ ಓಡುತ್ತಿದ್ದರು. ಈ ಸಮಯದಲ್ಲಿ ಕೃಷ್ಣನು ರಾಜಸಭೆಯಲ್ಲಿ ವಿನೋದದಿಂದ ಪಗಡೆಯಾಡುತಿದ್ದನು. ಆಗ ಪುರನಿವಾಸಿಗಳಲ್ಲಿ ಕೆಲವರು, ಭಯದಿಂದೋಡಿ ಬಂದು “ಹಾ! ಕೃಷ್ಣಾ! ಲೋಕೇಶ್ವರಾ! ನಮ್ಮ ಪಟ್ಟಣವು ಭಯಂಕರವಾದ ಅಗ್ನಿಯಿಂದ ದಗ್ಧವಾಗುತ್ತಿರುವುದು ನಮ್ಮನ್ನು ರಕ್ಷಿಸು! ರಕ್ಷಿಸು!” ಎಂದು ಮೊರೆಯಿಟ್ಟರು. ಆಗ ಕೃಷ್ಣನು ಅವರ ಭಯವನ್ನು ನೋಡಿ ಮನಸ್ಸಿನಲ್ಲಿ ನಗುತ್ತ “ಎಲೈ ಭಯಪಡಬೇಡಿರಿ! ನಿಮಗೆ ಅಪಾಯವಿಲ್ಲದಂತೆ ನಾನು ರಕ್ಷಿಸುವೆನು” ಎಂದನು ಸರ್ವಸಾಕ್ಷಿಯಾದ ಕೃಷ್ಣನು ಅದು ರುದ್ರಸಂಬಂಧಿಯಾದ ಶೂನ್ಯದೇವತೆ (ಕೃತ್ಯೆ) ಯೆಂಬುದನ್ನು ತಿಳಿದು, ಅದನ್ನಡಗಿಸುವುದಕ್ಕಾಗಿ ಪಕ್ಕದಲ್ಲಿದ್ದ ತನ್ನ ಸುದರ್ಶನಚಕ್ರಕ್ಕೆ ಆಜ್ಞಾಪಿಸಿದನು. ಕೋಟಿಸೂರ್ಯಪ್ರಕಾಶಮಾನವಾಗಿ, ಪ್ರಳಯಾಗ್ನಿಯಂತೆ ಜ್ವಲಿಸುತ್ತಿದ್ದ ಆ ಚಕ್ರವು, ತನ್ನ ತೇಜಸ್ಸಿನಿಂದ ಭೂಮ್ಯಾಕಾಶಗಳನ್ನೂ, ದಿಕ್ಕುಗಳನ್ನೂ ನುಂಗುವಂತೆ ಹೊರಟು, ಆ ಅಭಿಚಾರಾಗ್ನಿಯನ್ನು ಕ್ಷಣಮಾತ್ರದಲ್ಲಿ ನಿಗ್ರಹಿಸಿಬಿಟ್ಟಿತು. ಚಕ್ರಾಯುಧದ ತೇಜಸ್ಸಿನಿಂದ ಪ್ರತಿಹತವಾದ ಆ ಅಗ್ನಿಯು, ಮುಖಮುರಿದಂತೆ ಹಿಂತಿರುಗಿ, ಕಾಶೀಪುರಕ್ಕೆ ಹೋಗಿ, ಅಲ್ಲಿ ಈ ಕೃತ್ಯವನ್ನು ನಡೆಸಿದ ಸುದಕ್ಷಿಣನನ್ನೂ, ಅಲ್ಲಿನ ಋತ್ವಿಕ್ಕುಗಳನ್ನೂ,

ತಾನೇ ದಹಿಸಿಬಿಟ್ಟಿತು.ಭಗವಂತನ ಚಕ್ರಾಯುಧವು,ಆಗಲೂ ಆ ಅಗ್ನಿಯನ್ನು ಬಿಡದೆ ಬೆನ್ನಟ್ಟುತ್ತ ಕಾಶಿಗೆ ಹೋಗಿ, ಅಲ್ಲಿನ ಅಟ್ಟಲೆಗಳು, ಗೋಪುರಗಳು,ಸಭಾಮಂಟಪಗಳು, ಮನೆಗಳು, ಆನೆಕುದುರೆಲಾಯಗಳು, ಮಂಡಿಗಳು, ಬೊಕ್ಕಸಗಳು, ರಥಶಾಲೆ, ಅನ್ನಸತ್ರ ಮುಂತಾದುವುಗಳೆಲ್ಲವನ್ನೂ ದಹಿಸಿಬಿಟ್ಟಿತು ಹೀಗೆ ಭಗವಂತನ ಸುದರ್ಶನಚಕ್ರವು ಕಾಶೀಪುರವನ್ನು ಸಂಪೂರ್ಣವಾಗಿ ದಹಿಸಿದಮೇಲೆ, ಹಿಂತಿರುಗಿ ಕೃಷ್ಣನಬಳಿಗೆ ಬಂದು, ಅಲ್ಲಿ ಮೊದಲಿನಂತೆ ಶಾಂತವಾಗಿ ನೆಲೆಸಿತು. ಓ! ಪರೀಕ್ಷಿದ್ರಾಜಾ! ಪುಣ್ಯಶ್ಲೋಕನಾದ ಕೃಷ್ಣನ ಈ ಚರಿತ್ರವನ್ನು ಯಾವನು ಭಕ್ತಿಯಿಂದ ಕೇಳುವನೋ, ಯಾವನು ಶ್ರದ್ಧೆಯಿಂದ ಮತ್ತೊಬ್ಬರಿಗೆ ಹೇಳುವನೋ, ಆವನು ಸಮಸ್ತ ಪಾಪಗಳಿಂದಲೂ ವಿಮುಕ್ತನಾಗುವನು ಇದು ಅರುವತ್ತಾರನೆಯ ಅಧ್ಯಾಯವು.

---

## ಬಲರಾಮನು ದ್ವಿವಿದನೆಂಬ ವಾನರನನ್ನು ಸಂಹರಿಸಿದುದು

ಪರೀಕ್ಷಿದ್ರಾಜನು ಶುಕಮುನಿಯನ್ನು ಕುರಿತು, "ಓ ಮಹರ್ಷೀ! ಅಪ್ರಮೇಯಪ್ರಭಾವವುಳ್ಳ ಬಲರಾಮನು, ಇನ್ನೂ ಯಾವಯಾವ ಅದ್ಭುತ ಕಾರ್ಯಗಳನ್ನು ನಡೆಸಿರುವನೋ ಅವೆಲ್ಲವನ್ನೂ ಸಂಪೂರ್ಣವಾಗಿ ನನಗೆ ತಿಳಿಸಬೇಕು" ಎಂದು ಕೇಳಲು, ಶುಕಮುನಿಯು, "ಓ! ರಾಜಾ! ಕೇಳು! ನರಕಾಸುರನಿಗೆ ಮಿತ್ರನಾದ ದ್ವಿವಿದನೆಂಬ ವಾನರನೊಬ್ಬನಿದ್ದನು. ಆತನು ಸುಗ್ರೀವನ ಮಂತ್ರಿಗಳಲ್ಲಿ ಒಬ್ಬನು. ಮೈಂದನಿಗೆ ತಮ್ಮನು. ಆತನು ಬಹಳ ವೀರ್ಯವುಳ್ಳವನು. ಈ ದ್ವಿವಿದನೆಂಬ ವಾನರನು, ತನ್ನ ಸ್ನೇಹಿತನಾದ ನರಕಾಸುರನಿಗೆ ಕೃಷ್ಣನಿಂದುಂಟಾದ ಮರಣವನ್ನು ಕೇಳಿದಮೇಲೆ, ಆ ರಾಕ್ಷಸನಲ್ಲಿ ತನಗಿದ್ದ ಸ್ನೇಹಕ್ಕೆ ಫಲರೂಪವಾಗಿ, ಅವನಂತೆಯೇ ಜನಗಳಿಗೆ ತೊಂದರೆಯನ್ನು ಕೊಡುತಿದ್ದನು. ಪುರಗಳನ್ನೂ, ಗ್ರಾಮಗಳನ್ನೂ, ಅಲ್ಲಲ್ಲಿ ಕಾಣುವ ಬೇಡರಹಳ್ಳಿಗಳನ್ನೂ ಪ್ರವೇಶಿಸಿ, ಮನೆಗಳಿಗೆ ಬೆಂಕಿಯಿಟ್ಟು ಅನೇಕಸ್ಥಲಗಳನ್ನು ನಾಶಮಾಡುತಿದ್ದನು. ಅಲ್ಲಲ್ಲಿ ಪರ್ವತಶಿಖರಗಳನ್ನು ಕಿತ್ತುತಂದು, ಜನಸಮೃದ್ಧವಾದ ದೇಶಗಳನ್ನೆಲ್ಲಾ ಅವುಗಳಿಂದ ಪುಡಿ

ಪುಡಿಯಾಗುವಂತೆ ನಾಶಮಾಡುತಿದ್ದನು ಅದರಲ್ಲಿಯೂ ವಿಶೇಷವಾಗಿ, ತನ್ನ ಮಿತ್ರನನ್ನು ಕೊಂದ ಕೃಷ್ಣನಮೇಲೆ ಹಗೆತೀರಿಸಿಕೊಳ್ಳಬೇಕೆಂದು, ಆ ಕೃಷ್ಣನಿದ್ದ ಆನರ್ತದೇಶಗಳಿಗೆ ಬಹಳವಾಗಿ ತೊಂದರೆಕೊಡುತಿದ್ದನು ಒಮ್ಮೊಮ್ಮೆ ಬೆಟ್ಟಗಳನ್ನೆ ಕಿತ್ತು ತಂದುಊರುಗಳಮೇಲೆ ಹಾಕುವನು.ಅವನುಸಾವಿರಾನೆಗಳ ಬಲವುಳ್ಳವನಾದುದರಿಂದ, ಸಮುದ್ರಕ್ಕೆಹೋಗಿ ಅಲ್ಲಿಂದಬೊಗಸೆಯಲ್ಲಿ ನೀರನ್ನು ತುಂಬಿತಂದು,ಆನೀರಿನಿಂದಲೇ ಎಷ್ಟೋಪಟ್ಟಣಗಳನ್ನು ಕೊಚ್ಚಿಸುವನು!ಆಗಾಗ ಮಹರ್ಷಿಗಳ ಆಶ್ರಮಕ್ಕೆ ಪ್ರವೇಶಿಸಿ,ಅಲ್ಲಿನ ಮರಗಿಡಗಳೆಲ್ಲವನ್ನೂ ಮುರಿದು, ಮಲಮೂತ್ರವಿಸರ್ಜನದಿಂದ ಅವರ ಹೋಮಾಗ್ನಿಗಳನ್ನು ಕೆಡಿಸುವನು! ಮತ್ತು ಕಣಜವು ಸಣ್ಣ ಕ್ರಿಮಿಗಳನ್ನು ಹೊತ್ತುಕೊಂಡು ಹೋಗಿ ತನ್ನಗೂಡಿನಲ್ಲಿಟ್ಟು ಕೊಲ್ಲುವಂತೆ, ಈತನು ಅಲ್ಲಲ್ಲಿ ಕಂಡ ಸ್ತ್ರೀಯರನ್ನೂ, ಪುರುಷರನ್ನೂ, ಮಕ್ಕಳನ್ನೂ ಪರ್ವತದ ತಪ್ಪಲಲ್ಲಿರುವ ಗುಹೆಗಳಿಗೆ ತಂದು ಸೇರಿಸಿ, ಆ ಗುಹೆಯ ಬಾಗಿಲಿಗೆ ಕಲ್ಲುಬಂಡೆಗಳನ್ನು ಮುಚ್ಚಿಡುವನು. ಹೀಗೆ ಅನೇಕದೇಶಗಳನ್ನು ಧ್ವಂಸಮಾಡುವುದರಲ್ಲಿಯೂ,ಕುಲಸ್ತ್ರೀಯರನ್ನು ಕೆಡಿಸುವುದರಲ್ಲಿಯೂ. ಕಾಲವನ್ನು ಕಳೆಯುತಿದ್ದ ಆದ್ವಿವಿದನು,ಅಲ್ಲಲ್ಲಿಸುತ್ತುತ್ತ ಒಮ್ಮೆ ರೈವತಕಪರ್ವತದಬಳಿಗೆ ಬಂದನು ಆ ಪರ್ವತಮಧ್ಯದಿಂದ ಕಿವಿಗಿಂಪಾದ ಒಂದಾನೊಂದು ಗಾನಧ್ವನಿಯುಇವನ ಕಿವಿಗೆ ಕೇಳಿಸಿತು.ಆಧ್ವನಿಯು ಹೊರಟುಬಂದ ದಾರಿಯನ್ನೇ ಅನುಸರಿಸಿ ಮುಂದೆಹೋದಾಗ, ಅಲ್ಲಿ ಬಲರಾಮನು ಕಂಠದಲ್ಲಿ ಕಮಲಮಾಲಿಕೆಯನ್ನು ಧರಿಸಿ, ಅನೇಕಸ್ತ್ರೀಯರೊಡನೆ ಪುಷ್ಕಲವಾಗಿ ಮದ್ಯವನ್ನು ಕುಡಿದು, ಆ ಮದ್ಯಮದದಿಂದ ತೊಳಲುವ ಕಣ್ಣಾಲೆಗಳುಳ್ಳವನಾಗಿ, ಆಸ್ತ್ರೀಯರೊಡನೆ ತಾನೂ ಗಾನಮಾಡುತ್ತ, ಮದಿಸಿದ ಆನೆಯಂತೆ ಕ್ರೀಡಿಸುತಿದ್ದನು. ಆಗ ದುಷ್ಟನಾದ ದ್ವಿವಿದನು, ಸಮೀಪದಲ್ಲಿದ್ದ ಮರದ ಕೊಂಬೆಗಳಮೇಲೇರಿ ಆ ಮರಗಳನ್ನಾಡಿಸುತ್ತ ನಾನಾವಿಧವಾದ ಅಂಗವಿಕಾರಗಳೊಡನೆ ಕಿಲಕಿಲಧ್ವನಿಯಿಂದ ಗದ್ದಲಮಾಡತೊಡಗಿದನು. ಸಹಜವಾಗಿ ಹಾಸ್ಯಪ್ರಿಯರಾಗಿಯೂ, ಚಪಲಬುದ್ಧಿಯುಳ್ಳವರಾಗಿಯೂ ಇದ್ದ ಬಲರಾಮನ ಪತ್ನಿಯರು, ಆ ಕಪಿಚೇಷ್ಟೆಗಳನ್ನು ನೋಡಿ ಕೈತಟ್ಟಿ ನಗುತಿದ್ದರು. ಇದನ್ನುನೋಡಿ ಆ ವಾನರನು ಮತ್ತಷ್ಟು ರೇಗಿ

ದವನಾಗಿ, ಅವರಮುಂದೆ ಹಲ್ಲುಕಿರಿಯುವುದು, ಹುಬ್ಬನ್ನು ಕುಣಿಸುವುದು, ಮುಂತಾದ ನಾನಾವಿಧಚೇಷ್ಟೆಗಳಿಂದ, ಅವರನ್ನು ತಾನೂ ಹಾಸ್ಯಮಾಡು ತಿದ್ದು, ಕೊನೆಗೆ ಬಲರಾಮನು ನೋಡುತ್ತಿರುವಹಾಗೆಯೇ, ಆ ಸ್ತ್ರೀಯರಿಗೆ ತನ್ನ ಪೃಷ್ಠವನ್ನು ತೋರಿಸಿ ಓಡಿಹೋದನು. ಈ ಆಭಾಸವನ್ನು ನೋಡಿ ಬಲರಾಮನು, ಕೋಪದಿಂದ ಆ ಕಪಿಯಮೇಲೆ ಕಲ್ಲುಗಳನ್ನು ಬೀರಿ ದನು ವಾನರನು ಆ ಕಲ್ಲುಗಳ ಪೆಟ್ಟನ್ನು ಉಪಾಯದಿಂದ ತಪ್ಪಿಸಿ ಕೊಂಡುದಲ್ಲದೆ, ಬಲರಾಮನು ತನ್ನ ಸಮೀಪದಲ್ಲಿಟ್ಟುಕೊಂಡಿದ್ದ ಮದ್ಯ ಪೂರ್ಣವಾದ ಕಲಶವನ್ನು ತಂತ್ರದಿಂದಪಹರಿಸಿಕೊಂಡು ಓಡಿ ಹೋಗಿ, ಬಲರಾಮನ ಮುಂದೆ ಹಲ್ಲುಕಿರಿದು ಹಾಸ್ಯಮಾಡುತ್ತ, ಅವನಿಗೆ ಮತ್ತಷ್ಟು ಕೋಪವನ್ನು ಹುಟ್ಟಿಸಿದನು. ಮತ್ತು ಆ ಬಲರಾಮನು ನೋಡುತಿದ್ದ ಹಾಗೆಯೇ ಆ ಮದ್ಯಪಾತ್ರೆಯನ್ನು ನೆಲಕ್ಕೆ ಕುಕ್ಕಿ ಒಡೆದುಹಾಕಿದನು. ಕೆಲವು ಸ್ತ್ರೀಯರ ಬಟ್ಟೆಗಳನ್ನೆಳೆದುಕೊಂಡು ಹೋದನು! ತಿರುಗಿತಿರುಗಿ ಬಲ ರಾಮನನ್ನು ಹಾಸ್ಯಮಾಡುತಿದ್ದನು. ಹೀಗೆ ದ್ವಿವಿದನು ಮದಾಂಧನಾಗಿ ತನ್ನಲ್ಲಿ ಮಾಡಿದ ಅಪರಾಧವನ್ನೂ, ಆಗಾಗ ಅವನು ದೇಶದ ಜನಗಳಿಗೆ ತೊಂದರೆಕೊಡುತ್ತಿದ್ದುದನ್ನೂ ನೋಡಿ ಬಲರಾಮನು, ಅವನನ್ನು ಸಂಹರಿ ಸುವುದಕ್ಕಾಗಿ ತನ್ನ ನೇಗಿಲನ್ನೂ, ಮುಸಲಾಯುಧವನ್ನೂ ಕೈಗೆತ್ತಿಕೊಂಡ ನು. ಅತ್ತಲಾಗಿ ಮಹಾವೀರ್ಯಶಾಲಿಯಾದ ದ್ವಿವಿದನೂಕೂಡ, ಒಂದು ದೊಡ್ಡ ಮರವನ್ನು ಕಿತ್ತುಕೊಂಡು, ಅದರಿಂದ ಬಲರಾಮನ ತಲೆಯಮೇಲೆ ಅಪ್ಪಳಿಸಿ ದನು ತನ್ನ ಮೇಲೆ ಬೀಳುತ್ತಿರುವ ಆ ವೃಕ್ಷಪ್ರಹಾರಕ್ಕೂ ಬಲರಾಮನು ನಿರ್ಭ ಯವಾಗಿ! ತಲೆಯೊಡ್ಡುತ್ತ ಪರ್ವತದಂತೆ ನಿಶ್ಚಲನಾಗಿದ್ದು, ಆಮೇಲೆ ಸುನಂ ದವೆಂಬ ತನ್ನ ಮುಸಲಾಯುಧವನ್ನು ಆ ಕಪಿಯಮೇಲೆ ಪ್ರಯೋಗಿಸಿದನು. ಈ ಮುಸಲಪ್ರಹಾರದಿಂದ ಆ ಕಪಿಯ ದೇಹದಲ್ಲಿ ರಕ್ತಮಾಂಸಗಳೆಲ್ಲವೂ ಕಿತ್ತುಕೊಂಡಿತು ಅದರಿಂದ ಆ ಕಪಿಯು ಗೈರಿಕಾದಿಧಾತುಗಳಿಂದ ಶೋಭಿ ಸುವ ಪರ್ವತದಂತೆ ಕಾಣುತ್ತಿದ್ದನು. ಆಗಲೂ ಆ ವಾನರನು ಯುದ್ಧಕ್ಕೆ ಹಿಂಜರಿಯದೆ, ಮೈಯಲ್ಲಿ ರಕ್ತವು ಸೋರುತ್ತಿರುವಾಗಲೇ ಮತ್ತೊಂದು ಮರ ವನ್ನು ಕಿತ್ತುತಂದು, ಅದರ ಎಲೆಗಳೆಲ್ಲವನ್ನೂ ಉದುರಿಸಿ, ಅದನ್ನು ಬಲರಾ

ಮನಮೇಲೆ ಪ್ರಯೋಗಿಸಿದನು. ಆ ಮರವು ಮೇಲೆ ಬೀಳುವಷ್ಟರಲ್ಲಿಯೇ, ಬಲರಾಮನು ಅದನ್ನು ತುಂಡುತಂಡಾಗಿ ಕತ್ತರಿಸಿಬಿಟ್ಟನು. ಆಮೇಲೆ ಆಕಪಿಯು, ಮತ್ತೊಂದು ಮರವನ್ನು ಕಿತ್ತೆಸೆಯಲು,ಅದನ್ನೂ ಬಲರಾಮನು ಕತ್ತರಿಸಿ ಕೆಡಹಿದನು. ಹೀಗೆಯೇ ದ್ವಿವಿದನು, ಆ ಅರಣ್ಯದಲ್ಲಿದ್ದ ವೃಕ್ಷಗಳೆಲ್ಲವನ್ನೂ ಕಿತ್ತುಕಿತ್ತು ಬಲರಾಮನಮೇಲೆ ಪ್ರಯೋಗಿಸುತ್ತ, ಆ ಕಾಡಿನಲ್ಲಿ ಒಂದು ಮರವಾದರೂ ಕಾಣದಂತೆ ಮಾಡಿದನು. ಆ ಒಂದೊಂದು ವೃಕ್ಷವನ್ನೂ ಬಲರಾಮನು ತನ್ನ ಬಾಣಗಳಿಂದ ವಿಫಲವಾಗಿ ಮಾಡುತ್ತ ಬಂದನು ಕೊನೆಗೆ ದ್ವಿವಿದನು, ಅಲ್ಲಿ ವೃಕ್ಷಗಳೊಂದೂ ತನಗೆ ಸಿಕ್ಕದುದನ್ನು ನೋಡಿ, ಬಲರಾಮನಮೇಲೆ ಶಿಲಾವರ್ಷವನ್ನು ಕರೆಯುವುದಕ್ಕಾರಂಭಿಸಿದನು ಅವುಗಳನ್ನೂ ಬಲರಾಮನು ತನ್ನ ಮುಸಲಾಯುಧದಿಂದ ಭೇದಿಸುತ್ತ ಬಂದನು ಆ ಕಾಡಿನಲ್ಲಿದ್ದ ಕಲ್ಲುಗಳೂ ತೀರಿಹೋದಮೇಲೆ, ದ್ವಿವಿದನು ತಾಲಪ್ರಮಾಣವುಳ್ಳ ತನ್ನ ತೋಳುಗಳನ್ನೇ ಮುಷ್ಟಿಹಿಡಿದು. ಆ ಮುಷ್ಟಿಗಳಿಂದ ಬಲರಾಮನ ಎದೆಯಮೇಲೆ ಅಪ್ಪಳಿಸಿದನು. ಅದನ್ನು ನೋಡಿ ಬಲರಾಮನೂಡ, ತನ್ನ ಕೈಯಲ್ಲಿದ್ದ ಹಲಮುಸಲಾಯುಧಗಳೆರಡನ್ನೂ ಹಿಂದೆ ಬಿಸುಟು, ತಾನೂ ವಜ್ರಮುಷ್ಟಿಯನ್ನು ಹಿಡಿದು, ಆ ದ್ವಿವಿದನ ಹೆಕ್ಕತ್ತಿನ ಮೇಲೆ ಹೊಡೆದನು. ಒಡನೆಯೇ ದ್ವಿವಿದನು, ಆ ಮುಷ್ಟಿಪ್ರಹಾರವನ್ನು ತಡೆಯಲಾರದೆ, ರಕ್ತವನ್ನು ಕಾರುತ್ತ ಕೆಳಗೆ ಬಿದ್ದನು ಆ ವಾನರನು ಕೆಳಗೆ ಬೀಳುವಾಗ, ರೈವತಕಪರ್ವತವೆಲ್ಲವೂ ಬಿರುಗಾಳಿಗೆ ಸಿಕ್ಕಿದ ಹಡಗಿನಂತೆ ಕಂಪಿಸುತಿತ್ತು. ದುಷ್ಟನಾದ ದ್ವಿವಿದನು ಹತನಾಗಿ ಬಿದ್ದುದನ್ನು ನೋಡಿ, ಆಕಾಶದಲ್ಲಿ ದೇವತೆಗಳೂ, ಸಿದ್ಧರೂ, ದೇವರ್ಷಿಗಳೂ ಜಯಶಬ್ದದಿಂದಲೂ, ನಮಶ್ಶಬ್ದದಿಂದಲೂ ಬಲರಾಮನನ್ನು ಕೊಂಡಾಡುತ್ತ, ಅವನಮೇಲೆ ಪುಷ್ಪವೃಷ್ಟಿಯನ್ನು ಕರೆದರು, ಓ! ಪರೀಕ್ಷಿದ್ರಾಜಾ! ಹೀಗೆ ಬಲರಾಮನು ಲೋಕಕಂಟಕನಾದ ದ್ವಿವಿದನೆಂಬ ವಾನರನನ್ನು ಸಂಹರಿಸಿ, ಪುರವಾಸಿಗಳಿಂದ ಸ್ತುತಿಸಲ್ಪಡುತ್ತ, ದ್ವಾರಕೆಯನ್ನು ಪ್ರವೇಶಿಸಿದನು ಇದು ಅರುವತ್ತೇಳನೆಯ ಅಧ್ಯಾಯವು.

---

## ಬಲರಾಮನು ಹಸ್ತಿನಾವತೀಪಟ್ಟಣವನ್ನು ತನ್ನ ನೇಗಿಲಿನಿಂದ ಎಳೆದುದು.

ಓ! ಪರೀಕ್ಷಿದ್ರಾಜಾ! ದುರ್ಯೋಧನನಿಗೆ ಲಕ್ಷ್ಮಣೆಯೆಂಬೊಬ್ಬ ಕನ್ಯೆಯಿದ್ದಳು ಅವಳ ಸ್ವಯಂವರಕಾಲದಲ್ಲಿ ಜಾಂಬವತೀಪುತ್ರನಾದ ಸಾಂಬನೆಂಬ ಯಾದವಕುಮಾರನು, ದುರ್ಯೋಧನನ ಅನುಮತಿಯಿಲ್ಲದೆ ಅವಳನ್ನು ಅಪಹರಿಸಿಕೊಂಡು ಹೋದನು. ಇದರಿಂದ ಕೌರವರೆಲ್ಲರೂ, ಕೋಪಗೊಂಡವರಾಗಿ, ತಮ್ಮೊಳಗೆ ತಾವು ಹೀಗೆಂದು ಮಂತ್ರಾಲೋಚನೆಯನ್ನು ನಡೆಸಿದರು "ಆಹಾ! ದುರ್ವಿನೀತನಾದ ಆ ಸಾಂಬನು, ನಮ್ಮನ್ನೂ ಲಕ್ಷ್ಯಮಾಡದೆ, ನಮ್ಮ ಮಗಳನ್ನು ಅಪಹರಿಸಿಕೊಂಡು ಹೋಗಿರುವನು. ಆ ಕನ್ಯಕೆಯು ಅವನಲ್ಲಿ ಪ್ರೀತಿಯನ್ನು ತೋರಿಸದಿದ್ದರೂ, ಅವಳನ್ನು ಬಲಾತ್ಕರಿಸಿ ಕರೆದುಕೊಂಡು ಹೋಗಿರುವನು. ಇರಲಿ! ಅವನಿಗೆ ತಕ್ಕ ಶಿಕ್ಷೆಯನ್ನು ಮಾಡದೆ ತೀರದು! ನಾವೆಲ್ಲರೂ ಸೇರಿ ಆ ಸಾಂಬನನ್ನು ಹಿಡಿದುಕಟ್ಟಿ ತರುವೆವು! ಆಗ ಅವನ ಕಡೆಯವರಾದ ವೃಷ್ಣಿಗಳು ನಮ್ಮನ್ನೇನು ಮಾಡಬಲ್ಲರು! ಅವರೆಲ್ಲರೂ, ನಾವು ನಮ್ಮ ಪರಾಕ್ರಮದಿಂದ ಸಂಪಾದಿಸಿಕೊಟ್ಟ ರಾಜ್ಯವನ್ನೇ ಅನುಭವಿಸತಕ್ಕವರು. ಈಗ ನಾವು ಅವರ ಕಡೆಯವನಾದ ಈ ಸಾಂಬನೆಂಬ ಬಾಲಕನನ್ನು ಹಿಡಿದು ಬಂಧಿಸಿದಮೇಲೆ, ಅವರೇನಾದರೂ ನಮ್ಮೊಡನೆ ಯುದ್ಧಕ್ಕೆ ಬಂದರೆ, ಇದೇ ನೆವದಿಂದ ನಾವು ಅವರ ಹೆಮ್ಮೆಯನ್ನಡಗಿಸಬಹುದು. ಪ್ರಾಣಾಯಾಮಾದಿಗಳಿಂದ ಇಂದ್ರಿಯಗಳನ್ನು ಹೇಗೋಹಾಗೆ, ಅವರನ್ನು ನಮ್ಮ ಶೌರ್ಯದಿಂದ ಉಸಿರೆತ್ತದಹಾಗೆ ಮಾಡಬಹುದು" ಎಂದರು. ಹೀಗೆ ತಮ್ಮೊಳಗೆ ತಾವು ನಿಶ್ಚಯಿಸಿಕೊಂಡು, ಈ ವಿಷಯದಲ್ಲಿ ಧೃತರಾಷ್ಟ್ರನೇ ಮೊದಲಾದ ಕುರುವೃದ್ಧರ ಅನುಮತಿಯನ್ನೂ ಪಡೆದು, ಆ ಸಾಂಬನನ್ನು ಹಿಡಿದು ಕಟ್ಟುವುದಕ್ಕಾಗಿ ಕರ್ಣ,ಶಲ್ಯ, ಭೂರಿಶ್ರವಸ್ಸು, ಯಜ್ಞಕೇತು, ದುರ್ಯೋಧನನೇ ಮೊದಲಾದವರೆಲ್ಲರೂ ಹೊರಟರು ಹೀಗೆ ಮಹಾರಥರಾದ ಕರ್ಣಾದಿಗಳೆಲ್ಲರೂ ಬೆನ್ನಟ್ಟಿ ಬರುವಾಗಲೂ, ಸಾಂಬನು ಧೈರ್ಯಗುಂದದೆ, ತನ್ನ ಧನುಸ್ಸನ್ನು ಕೈಗೆತ್ತಿಕೊಂಡು, ಆನೆಗಳನ್ನಿದಿರಿಸುವ ಸಿಂಹದಂತೆ, ತಾನೊ

ಬ್ಬನೇ ಅವರನ್ನಿದಿರಿಸಿ ನಿಂತನು. ಕರ್ಣಾದಿಗಳೆಲ್ಲರೂ ಧನುರ್ಧಾರಿಗಳಾಗಿ ಅವನನ್ನು ಬೆನ್ನಟ್ಟುತ್ತ, "ಎಲ ದುಷ್ಟಾ! ನಿಲ್ಲು! ನಿಲ್ಲು" ಎಂದು ಕೂಗಿ, ಕೋಪದಿಂದ ಬಾಣಗಳನ್ನು ವರ್ಷಿಸುತಿದ್ದರು ಆಗ ಸಾಂಬನು, ದಂಡಾಹತವಾದ ಸರ್ಪದಂತೆ ಅವರ ಬಾಣಪ್ರಹಾರದಿಂದ ಕೋಪಗೊಂಡು, ತನ್ನ ಧನುಸ್ಸನ್ನು ಟಂಕಾರಮಾಡಿ, ಕರ್ಣನೇ ಮೊದಲಾದ ಆ ಆರುಮಂದಿ ರಥಿಕರನ್ನೂ ಏಕಕಾಲದಲ್ಲಿ ಅನೇಕಬಾಣಗಳಿಂದ ಪ್ರಹರಿಸಿದನು. ನಾಲ್ಕುನಾಲ್ಕು ಬಾಣಗಳಿಂದ ಅವರ ರಥದಲ್ಲಿದ್ದ ನಾಲ್ಕು ನಾಲ್ಕು ಕುದುರೆಗಳನ್ನೂ ಕೊಂದು ಕೆಡಹಿದನು ಒಂದೊಂದು ಬಾಣದಿಂದ ಸಾರಥಿಗಳನ್ನು ಕೊಂದನು ಸಣ್ಣಬಾಲಕನಾಗಿದ್ದರೂ, ಅವನು ತೋರಿಸಿದ ಅದ್ಭುತಪರಾಕ್ರಮವನ್ನುನೋಡಿ, ಅವರೆಲ್ಲರೂ ಮನಸ್ಸಿನಲ್ಲಿ ಅವನನ್ನು ಕೊಂಡಾಡುತ್ತ, ಕೊನೆಗೆ ಆ ಆರುಮಂದಿಯೂ ಒಟ್ಟಾಗಿಯೇ ಅವನನ್ನು ನಿಗ್ರಹಿಸಬೇಕೆಂದು ನಿಶ್ಚಯಿಸಿಕೊಂಡರು ಅವರಲ್ಲಿ ನಾಲ್ಕು ಮಂದಿರಾಜರು, ಅವನ ನಾಲ್ಕುರಥಾಶ್ವಗಳನ್ನು ಕೊಂದು ಕೆಡಹಿದರು. ಒಬ್ಬನು ಅವನ ಸಾರಥಿಯನ್ನು ಕೊಂದನು. ಇದೇಸಮಯದಲ್ಲಿ ಮತ್ತೊಬ್ಬನು ಅವನ ಧನುಸ್ಸನ್ನು ಕತ್ತರಿಸಿಬಿಟ್ಟನು ಹೀಗೆ ಅವರೆಲ್ಲರೂ ಒಂದಾಗಿ ಸೇರಿ, ಬಹಳಪ್ರಯಾಸದಿಂದ ಅವನನ್ನು ವಿರಥನನ್ನಾಗಿ ಮಾಡಿ, ಅವನು ಅಸಹಾಯನಾಗಿದ್ದಕಾಲದಲ್ಲಿ, ಅವನನ್ನು ಹಿಡಿದು ಕಟ್ಟಿ, ತಮ್ಮ ಕುಮಾರಿಯೊಡನೆ ಆತನನ್ನೂ ತಮ್ಮ ಪಟ್ಟಣಕ್ಕೆ ಕರೆದುಕೊಂಡುಹೋದರು ಹೀಗೆ ಕರ್ಣಾದಿಗಳು ಜಯಶೀಲರಾಗಿ ಸಣ್ಣಬಾಲಕನಾದ ಸಾಂಬನನ್ನು ಹಿಡಿದುಕೊಂಡು ಹೋದ ಸಂಗತಿಯು, ನಾರದನಮುಖದಿಂದ ಉಗ್ರಸೇನನಿಗೆ ತಿಳಿದುಬಂದಿತು ಯಾದವರೆಲ್ಲರಿಗೂ ಕೌರವರಮೇಲೆ ಅತ್ಯಾಕ್ರೋಶವು ಹುಟ್ಟಿತು. ಉಗ್ರಸೇನನ ಪ್ರೇರಣೆಯಿಂದ ಯದುವೀರರೆಲ್ಲರೂ ಹಸ್ತಿನಾವತಿಗೆ ದಂಡೆತ್ತಿ ಹೊರಡುವುದಾಗಿ ನಿಶ್ಚಯಿಸಿದ್ದರು. ಬಲರಾಮನಿಗೂ ಈ ಸಂಗತಿಯು ತಿಳಿಯಬಂದಿತು. ಆದರೆ ಅವನಿಗೆಮಾತ್ರ ಕೌರವರಿಗೂ, ಯಾದವರಿಗೂ ಕಲಹವನ್ನು ಹೆಚ್ಚಿಸುವುದರಲ್ಲಿ ಅಭಿಪ್ರಾಯವಿರಲಿಲ್ಲ. ಇದಕ್ಕಾಗಿ ಬಲರಾಮನು ಯುದ್ಧೋದ್ಯುಕ್ತರಾಗಿದ್ದ ಆ ಯಾದವರೆಲ್ಲರಿಗೂ

ಸಮಾಧಾನವನ್ನು ಹೇಳಿ, ಈ ಕಲಹವನ್ನಡಗಿಸಬೇಕೆಂಬ ಉದ್ದೇಶ ದಿಂದ, ಕೆಲವು ಬ್ರಾಹ್ಮಣರನ್ನೂ, ಕುಲವೃದ್ಧರನ್ನೂ, ತನ್ನೊಡನೆ ಕರೆದು ಕೊಂಡು ಅನೇಕಗ್ರಹಗಳೊಡಗೂಡಿದ ಚಂದ್ರನಂತೆ ರಥಾರೂಢನಾಗಿ ಹಸ್ತಿನಾಪುರಕ್ಕೆ ಹೊರಟನು. ತಾನು ಆ ಹಸ್ತಿನಾಪುರದ ಹೊರಗಿನ ತೋಟವಲ್ಲಿಯೇ ಇದ್ದುಕೊಂಡು, ಆ ಕೌರವರ ಉದ್ದೇಶವೇನೆಂಬುದನ್ನು ತಿಳಿದು ಬರುವುದಕ್ಕಾಗಿ ಮೊದಲು ಉದ್ಧವನನ್ನು ಕಳುಹಿಸಿದನು. ಉದ್ಧ ವನು ಪಟ್ಟಣದೊಳಗೆ ಪ್ರವೇಶಿಸಿ, ಭೀಷ್ಮ, ದ್ರೋಣ, ಬಾಹ್ಲೀಕ, ದುರ್ಯೋಧನನೇ ಮೊದಲಾದ ಕೌರವಪ್ರಧಾನರನ್ನು ಕಂಡು, ಯಥಾವಿಧಿ ಯಾಗಿ ನಮಸ್ಕರಿಸಿ, ಬಲರಾಮನು ಬಂದಿರುವ ವೃತ್ತಾಂತವನ್ನು ತಿಳಿಸಿ ದನು. ಆಗ ದುರ್ಯೋಧನಾದಿಗಳೆಲ್ಲರೂ, ತಮಗೆ ಪರಮಪ್ರಿಯನಾದ ಬಲ ರಾಮನು ಬಂದ ಸಂಗತಿಯನ್ನು ಕೇಳಿದೊಡನೆ, ಬಹಳಸಂತೋಷಗೊಂಡವ ರಾಗಿ, ಈ ಸಂತೋಷವೃತ್ತಾಂತವನ್ನು ತಂದ ಉದ್ಧವನನ್ನು ವಿಶೇಷವಾಗಿ ಗೌರವಿಸಿ, ಬಲರಾಮನನ್ನು ಇದಿರುಗೊಂಡು ಕರೆತರುವುದಕ್ಕಾಗಿ, ತಾವೇ ಕೈಕಾಣಿಕೆಗಳನ್ನು ತೆಗೆದುಕೊಂಡು ಹೊರಟರು ಹೊರಗಿನ!ತೋಟದಲ್ಲಿದ್ದ ಬಲರಾಮನನ್ನು ಕಂಡು, ಅವನಿಗೆ ಯಥೋಚಿತವಾಗಿ ಅರ್ಘ್ಯಪಾದ್ಯಾದಿಗ ಳನ್ನು ಕೊಟ್ಟುಸತ್ಕರಿಸಿದರು ಉತ್ತಮವಾದ ಅನೇಕಗೋವುಗಳನ್ನು ಅವ ನಿಗೆ ಕೈಕಾಣಿಕೆಯಾಗಿ ಒಪ್ಪಿಸಿದರು. ಬಲರಾಮನು ಭಗವದಂಶಭೂತನೆಂಬ ನಿಜಸ್ಥಿತಿಯನ್ನು ತಿಳಿದವರು, ಅವನಿಗೆ ಭಕ್ತಿಯಿಂದ ತಲೆಬಗ್ಗಿ ನಮಸ್ಕರಿಸಿ ದರು ಒಬ್ಬರಿಗೊಬ್ಬರಿಗೆ ಕುಶಲಪ್ರಶ್ನಾದಿಗಳೆಲ್ಲವೂ ನಡೆದುವು ಆಮೇಲೆ ಬಲರಾಮನು ಆ ದುರ್ಯೋಧನಾದಿಗಳನ್ನು ಕುರಿತು,ತಮ್ಮ ಯಾದವರಾಜರ ಗೌರವಕ್ಕೂ ಲೋಪವಿಲ್ಲದಂತೆ ಹೀಗೆಂದು ಹೇಳುವನು. “ಎಲೈ ಕುರುವೀರರೇ! ನಮ್ಮ ಪ್ರಭುವಾದ ಉಗ್ರಸೇನನು, ನಿಮಗೆ ಕಳುಹಿಸಿರುವ ರಾಜಶಾಸನವನ್ನು ತಿಳಿಸುವೆನು ಆ ವಿಷಯದಲ್ಲಿ ನೀವು ಜಾಗರೂಕ ರಾಗಿದ್ದು, ಅವನು ಹೇಳಿದಂತೆ ನಡೆಸುವುದು ಮೇಲು! ಈ ವಿಚಾರದಲ್ಲಿಮಾತ್ರ ನೀವು ವಿಳಂಬಮಾಡಬಾರದು. ಏನೆಂದರೆ! ಈಗಲಾದರೋ ನೀವು ಬಹು ಜನಗಳು ಒಂದಾಗಿ ಸೇರಿ, ಅಧರ್ಮದಿಂದ ನಮ್ಮ ಕುಮಾರನಾದ ಮತ್ತು

ಧಾರ್ಮಿಕನಾದ ಸಾಂಬನನ್ನು ಯುದ್ಧದಲ್ಲಿ ಜಯಿಸಿ ಕಟ್ಟಿ ತಂದಿರುವಿರಿ! ಹಾಗಿದ್ದರೂ ಬಂಧುಗಳಾದ ನಮಗೆ ದ್ವೇಷವನ್ನು ಹೆಚ್ಚಿಸಿಕೊಳ್ಳಬಾರದೆಂದು ನಾವು ತಾಳ್ಮೆಯನ್ನು ವಹಿಸಿರುವೆವು ಈಗಲೇ ನೀವು ಆ ಕುಮಾರನನ್ನು ಬಿಟ್ಟುಕೊಡಬೇಕು ಹಾಗಿಲ್ಲದಪಕ್ಷದಲ್ಲಿ ನೀವು ನಮ್ಮ ಕೋಪಕ್ಕೆ ಪಾತ್ರರಾಗುವಿರಿ" ಎಂದನು ಹೀಗೆ ಬಲರಾಮನು ತನ್ನ ವೀರ್ಯಕ್ಕೂ, ಶೌರ್ಯಕ್ಕೂ, ಶಕ್ತಿಗೂ ಅನುಗುಣವಾಗಿ ಹೇಳಿದ ಹೆಮ್ಮೆಯ ಮಾತನ್ನು ಕೇಳಿ ಕೌರವರಿಗೆ ಮನಸ್ಸಿನಲ್ಲಿ ಆಕ್ರೋಶವು ಹುಟ್ಟಿತು. ಆ ಕೋಪದಿಂದ ಅವರು ತಮ್ಮೊಳಗೆ ತಾವು, "ಆಹಾ! ಇದಲ್ಲವೇ! ಆಶ್ಚರ್ಯ! ಕಾಲಗತಿಯೆಂಬುದು ಮನುಷ್ಯನನ್ನು ಮೋಹಗೊಳಿಸಿ ತನ್ನ ಸ್ಥಿತಿಯೇ ತನಗೆ ತಿಳಿಯದಂತೆ ಮಾಡುವುದು. ಹಾಗಿಲ್ಲದಿದ್ದರೆ ಅಲ್ಪನಾದ ಉಗ್ರಸೇನನು, ನಮಗೆ ಈ ಮಾತನ್ನು ಹೇಳಿ ಕಳುಹಿಸುತಿದ್ದನೆ! ಕಾಲಿನಲ್ಲಿ ಮೆಟ್ಟತಕ್ಕ ಪಾದುಕೆಯು, ಕಿರೀಟಧಾರಣ ಯೋಗ್ಯವಾದ ತಲೆಯನ್ನೇರುವುದಕ್ಕೆ ಯತ್ನಿಸುವಂತೆ, ನಮ್ಮ ಅಧಿಕಾರಕ್ಕೊಳಪಟ್ಟ ಯಾದವರು, ಈಗ ನಮ್ಮನ್ನು ಕುರಿತು ಹೀಗೆ ಆಜ್ಞೆಮಾಡುತ್ತಿರುವರಲ್ಲಾ! ಆ ಯಾದವರಿಗೆ ನಾವು ಅಷ್ಟು ಸಲಿಗೆಯನ್ನು ಕೊಟ್ಟುದೇ ತಪ್ಪು! ಕುಂತೀದೇವಿಯ ಸಂಬಂಧದಿಂದ ನಮಗೆ ಅವರಲ್ಲಿ ಬಂಧುತ್ವವು ಬೆಳೆದುದಕ್ಕಾಗಿ. ಅವರೊಡನೆ ನಾವು ಸಹಭೋಜನಾದಿಗಳನ್ನು ನಡೆಸಬೇಕಾಯಿತು, ಇಷ್ಟುಮಾತ್ರಕ್ಕೇ ಅವರು ನಮಗೆ ಸಮಾನರೆಂದು ಹೇಳಿಕೊಳ್ಳುವಂತಾಯಿತೆ! ನಾವುಕೊಟ್ಟ ರಾಜ್ಯವನ್ನನುಭವಿಸುವುದರಿಂದಲ್ಲವೇ ಅವರು ರಾಜರೆಂದೆನಿಸಿಕೊಂಡಿರುವರು, ಇಲ್ಲದಿದ್ದರೆ ಅವರಿಗೆ ರಾಜ್ಯವೆಲ್ಲಿಯದು? ನಿಮ್ಮಿಂದ ರಾಜ್ಯವನ್ನು ಪಡೆದ ಯಾದವರು. ಈಗನಮಗೆ ಸಮಾನಸ್ಕಂಧರಂತೆ ಸಂದೇಶವನ್ನು ಹೇಳಿ ಕಳುಹಿಸುತ್ತಿರುವರಲ್ಲಾ! ಮುಖ್ಯವಾಗಿ ನಾವು ಅವರನ್ನು ಅಷ್ಟುದೂರಕ್ಕೆ ಹೆಚ್ಚಿಸಬಾರದಾಗಿತ್ತು. ಈಗಲೂ ನಾವು ಉದಾಸೀನರಾಗಿ ಸುಮ್ಮನಿರುವುದರಿಂದಲೇ, ಅವರು ಛತ್ರ. ಚಾಮರ, ವ್ಯಜನ, ಶಂಖ, ಕಿರೀಟ, ಶಯ್ಯಾಸನಗಳೇ ಮೊದಲಾದ ರಾಜಭೋಗಗಳೆಲ್ಲವನ್ನೂ ಅನುಭವಿಸುತ್ತಿರುವರು. ಮೊದಲು ಅದನ್ನು ನಾವು ತಪ್ಪಿಸಿಬಿಡಬೇಕು! ಹಾವಿಗೆ ಹಾಲೆರೆಪಂತೆ. ನಾವು ಅವರಿಗೆ ಮಾಡಿದ ಉಪ

ಕಾರವು ಈಗ ನಮಗೇ ಪ್ರತಿಕೂಲವಾಗಿ ಪರಿಣಮಿಸಿತು ನಮ್ಮ ಅನುಗ್ರಹದಿಂದ ಇಷ್ಟುದೂರಕ್ಕೆ ಬಂದವರು, ನಾಚಿಕೆಯಿಲ್ಲದೆ ಈಗ ನಮಗೇ ಆಜ್ಞೆಮಾಡುತ್ತಿರುವರಲ್ಲ! ಇದೇನಾಶ್ಚರ್ಯವು! ಕೌರವರಾಜರಾದ ನಾವೂ, ಭೀಷ್ಮದ್ರೋಣಾದಿಮಹಾರಥರೂ, ಮನಃಪೂರ್ವಕವಾಗಿ ಸಮ್ಮತಿಸಿ ಕೊಡದೇ ಇದ್ದ ಐಶ್ವರ್ಯವನ್ನು ದೇವೇಂದ್ರನಾದರೂ ನಿಶ್ಚಿಂತನಾಗಿ ಅನುಭವಿಸಲಾರನು ಸಿಂಹದ ಬಾಯಲ್ಲಿರುವ ಆಹಾರಪದಾರ್ಥವನ್ನು ಒಂದಾನೊಂದು ಸಣ್ಣ ಮೇಕೆಯು ಬಲಾತ್ಕಾರದಿಂದ ಕಿತ್ತುಕೊಂಡು ಹೋಗುವಂತೆ,ನಮ್ಮ ಸಮ್ಮತಿಯಿಲ್ಲದೆ ಅನುಭವಿಸತಕ್ಕ ಐಶ್ವರ್ಯವು ಎಂದಿಗೂ ಅವರಿಗೆ ದಕ್ಕಲಾರದು! ಇರಲಿ! ಆ ಯಾದವರ ರಾಜ್ಯವನ್ನೇ ಕಿತ್ತುಕೊಳ್ಳುವೆವು" ಎಂದರು ಹೀಗೆ ಕೌರವರೆಲ್ಲರೂ,ತಮ್ಮ ಕುಲಮದದಿಂದಲೂ, ಐಶ್ವರ್ಯಮದದಿಂದಲೂ, ತಮಗೆ ಅನೇಕರಾಜರ ಬಂಧುತ್ವದ ಬಲವುಂಟೆಂಬ ಹೆಮ್ಮೆಯಿಂದಲೂ, ಬಲರಾಮನೊಡನೆ ಆಡಬಾರದ ಈ ಮಾತುಗಳನ್ನಾಡಿ, ತಮ್ಮ ಪಟ್ಟಣಕ್ಕೆ ಹಿಂತಿರುಗಿದರು ಆಗ ಬಲರಾಮನು ಕೌರವರ ದುಸ್ಸ್ವಭಾವವನ್ನೂ,ಗರ್ವದಮಾತುಗಳನ್ನೂ ಕೇಳಿ ತಡೆಯಲಾರದ ಕೋಪದಿಂದ ಜ್ವಲಿಸುತ್ತ, ಅವರ ಹೆಮ್ಮೆಯ ಮಾತುಗಳಿಗಾಗಿ ತನ್ನಲ್ಲಿ ತಾನೇ ನಕ್ಕು ಹೀಗೆಂದು ಹೇಳುವನು "ಮದೋನ್ಮತ್ತರಾದ ಆ ಕೌರವರು ಒಳ್ಳೇಮಾತಿನಿಂದ ಸಮಾಧಾನಕ್ಕೆ ಬರುವ ಹಾಗೆ ತೋರಲಿಲ್ಲ! ದುಷ್ಟಗೋವುಗಳು ದಂಡಪ್ರಹಾರದಿಂದಲೇ ವಶವಾಗುವಂತೆ, ಅವರನ್ನಡಗಿಸುವುದಕ್ಕೆ ದಂಡೋಪಾಯವೇ ಮೇಲಾದುದು! ಆಹಾ! ಆಕೌರವರಮೇಲೆ ಮಿತಿಮೀರಿ ಕೋಪಗೊಂಡಿದ್ದ ಯಾದವರಿಗೂ, ನನ್ನ ತಮ್ಮನಾದ ಕೃಷ್ಣನಿಗೂ, ನಾನು ಎಷ್ಟೋವಿಧದಿಂದ ಸಮಾಧಾನವನ್ನು ಹೇಳಿ, ಈ ಉಭಯಕುಲಕ್ಕೂ ಶಾಂತಿಯನ್ನುಂಟುಮಾಡಬೇಕೆಂದು ಇಲ್ಲಿಗೆ ಬಂದೆನು. ಮಂದಬುದ್ಧಿಯುಳ್ಳ ಈ ಕೌರವರಾದರೋ,ಕಲಹದಲ್ಲಿಯೇ ದೃಷ್ಟಿಯಿಟ್ಟು, ನನ್ನನ್ನೂ ಲಕ್ಷ್ಯಮಾಡದೆ,ಗರ್ವೋದ್ರಿಕ್ತರಾಗಿ, ಆಡಬಾರದ ಮಾತುಗಳನ್ನಾಡಿರುವರು. ಆಹಾ!ಆ ಕೌರವರಿಗೆ ಎಷ್ಟು ಕೊಬ್ಬಿರಬಹುದು? ಭೋಜರು, ವೃಷ್ಣಿಗಳು, ಅಂಧಕರು ಮೊದಲಾದ ಯಾದವಕುಲಕ್ಕೆಲ್ಲವೂ ಪ್ರಭುವಾಗಿ, ಇಂದ್ರಾದಿಲೋಕಪಾಲರನ್ನೂ ತನ್ನ ಆಜ್ಞಾಧೀನರನ್ನಾಗಿ

ಮಾಡಿಕೊಳ್ಳತಕ್ಕ ಉಗ್ರಸೇನನು ರಾಜನಲ್ಲವಂತೆ! ಅದೂ ಹೋಗಲಿ! ಯಾವನು ದೇವೇಂದ್ರನ ಸುಧರ್ಮಾಸಭೆಯನ್ನೇ ಆಕ್ರಮಿಸಿದನೋ, ಯಾವನು ದೇವಲೋಕದಲ್ಲಿದ್ದ ಪಾರಿಜಾತವೃಕ್ಷವನ್ನು ತನ್ನ ಪರಾಕ್ರಮದಿಂದ ಸಾಧಿಸಿ ತಂದು ಈಗಲೂ ಅನುಭವಿಸುತ್ತಿರುವನೋ, ಅಂತಹ ನಮ್ಮ ಕೃಷ್ಣನಿಗೂ ರಾಜಸಿಂಹಾಸನವನ್ನೇರುವ ಯೋಗ್ಯತೆಯಿಲ್ಲವಂತೆ! ಆಹಾ! ಸರ್ವಲೋಕೇಶ್ವರಿಯಾದ ಸಾಕ್ಷಾನ್ಮಹಾಲಕ್ಷ್ಮಿಯೂಕೂಡ, ಯಾವನ ಪಾದಸೇವೆಯನ್ನು ಮಾಡುತ್ತಿರುವಳೋ, ಅಂತಹ ಕೃಷ್ಣನಿಗೆ,ಸಾಮಾನ್ಯವಾದ ಈ ರಾಜಚಿಹ್ನಗಳನ್ನು ಧರಿಸುವುದಕ್ಕೆ ಅರ್ಹತೆಯಿಲ್ಲವಂತೆ? ಅನೇಕಪುಣ್ಯತೀರ್ಥಗಳನ್ನೂ ತಮ್ಮ ಸಂಬಂಧದಿಂದ ಪಾವನಮಾಡತಕ್ಕ ಯೋಗಿಗಳೂ, ಯಾವನ ಪಾದರೇಣುವನ್ನು ಪಾವನವನ್ನಾಗಿ ಎಣಿಸಿರುವರೋ, ಇಂದ್ರಾದಿಲೋಕಪಾಲಕರೂ ಯಾವನ ಪಾದಪರಾಗವನ್ನು ಶಿರಸಾಧಾರಣಮಾಡುತ್ತಿರುವರೋ, ಯಾವನ ಅಂಶಾಂಶಭೂತರೆನಿಸಿಕೊಂಡ ಬ್ರಹ್ಮರುದ್ರರೂ, ನಾನೂ, ಮಹಾಲಕ್ಷ್ಮಿಯೂ, ಯಾವನ ಪಾದಧೂಳಿಯನ್ನು ಅನವರತವೂ ತಲೆಯಲ್ಲಿ ಧರಿಸುತ್ತಿರುವೆವೋ,ಅಂತಹ ಮಹಾತ್ಮನಾದ ಕೃಷ್ಣನಿಗೂ ರಾಜಸಿಂಹಾಸನವನ್ನೇರುವ ಯೋಗ್ಯತೆಯಿಲ್ಲವೆ? ಆಕೌರವರು ಅನುಗ್ರಹಿಸಿಕೊಟ್ಟ ರಾಜ್ಯವನ್ನೇ ವೃಷ್ಣಿಗಳಾದನಾವು ಅನುಭವಿಸುತ್ತಿರುವೆವಂತೆ!ಆ ಕೌರವರುತಲೆಗಳಂತೆ! ನಾವುಪಾದುಕೆಗಳಂತೆ!ಆಹಾ! ಮದ್ಯಪಾಯಿಗಳು ಬಾಯಿಗೆ ಬಂದಂತೆ ಬಗುಳುವಹಾಗೆ, ಐಶ್ವರ್ಯಮತ್ತರಾದ ಆಕೌರವರು,ನನ್ನೊಡನೆಯೇ ಈ ಅಸಂಬದ್ಧಪ್ರಲಾಪಗಳನ್ನುಮಾಡಿ ಹೋಗಿರುವರಲ್ಲಾ. ದುಷ್ಟರನ್ನಡಗಿಸತಕ್ಕ ಶಕ್ತಿಯುಳ್ಳಯಾವನು ತಾನೇ ಇಂತಹ ಕ್ರೂರವಾಕ್ಯಗಳನ್ನು ಕೇಳಿ ಸುಮ್ಮನಿರುವನು!ಇದೋ! ಈಗಲೇ ನಾನು ಈ ಭೂಮಿಯಲ್ಲಿ ಕೌರವರ ಹುಟ್ಟೇ ಇಲ್ಲದಂತೆ ಮಾಡಿಬಿಡುವೆನು" ಎಂದು ಹೇಳುತ್ತ, ಬಲರಾಮನು ತ್ರಿಲೋಕವನ್ನೂ ದಹಿಸುವಂತೆ ಕೋಪಾವಿಷ್ಟನಾಗಿ, ತನ್ನ ನೇಗಿಲನ್ನು ಕೈಗೆತ್ತಿಕೊಂಡು ನಿಂತನು ಒಡನೆಯೇ ಆ ನೇಗಿಲಿನ ಕೊನೆಯನ್ನು ಹಸ್ತಿನಾವತಿಯ ದಕ್ಷಿಣಪ್ರಾಕಾರದಿಂದಾಚೆಗೆ ನೀಡಿ, ಮೊತ್ತಕ್ಕೆ ಆ ಪಟ್ಟಣವನ್ನೇ ಗಂಗೆಯಲ್ಲಿ ಕೊಚ್ಚಿಸಿಬಿಡಬೇಕೆಂದು ನಿಶ್ಚಯಿಸಿ, ಅದನ್ನು ಬಲಾತ್ಕಾರದಿಂದ ಎಳೆದನು.

ಬಲರಾಮನು ಎಳೆವ ವೇಗಕ್ಕೆ, ಆ ಹಸ್ತಿನಾಪುರವೇ ಮೊತ್ತಕ್ಕೆ ಕಿತ್ತುಬಂದು, ಪ್ರವಾಹದಲ್ಲಿ ಕೊಚ್ಚಿಹೋಗುವ ತೆಪ್ಪದಂತೆ, ಗಿರುಗಿರನೆ ಸುತ್ತುತ್ತ ಗಂಗಾಪ್ರವಾಹದಲ್ಲಿ ಮುಳುಗಿಹೋಗುವ ಸಂಭವವು ತೋರಿತು. ಆ ಕೌ ರವರೆಲ್ಲರಿಗೂ ಮನಸ್ಸಿನಲ್ಲಿ ಭಯವು ಹುಟ್ಟಿತು ಅವರೆಲ್ಲರೂ ತಮ್ಮ ಪ್ರಾ ಣವುಳಿದರೆ ಸಾಕೆಂದೆಣಿಸಿ, ಬಲರಾಮನಲ್ಲಿಯೇ ಶರಣಾಗತರಾಗುವುದಕ್ಕಾಗಿ ನಿಶ್ಚಯಿಸಿಕೊಂಡರು. ದುರ್ಯೋಧನಾದಿಗಳೆಲ್ಲರೂ ತಾವು ನಿರ್ಬಂಧಿಸಿಟ್ಟಿದ್ದ ಸಾಂಬನನ್ನೂ, ಅವನ ಪತ್ನಿಯಾದ ಲಕ್ಷ್ಮಣೆಯನ್ನೂ ಮುಂದಿಟ್ಟುಕೊಂಡು ಬಂದು, ಬಲರಾಮನಮುಂದೆ ಕೈಮುಗಿದು ನಿಂತು. ಹೀಗೆಂದು ಪ್ರಾರ್ಥಿಸು ವರು "ರಾಮಾ! ರಾಮಾ! ಮೂಢರಾದ ನಾವು ನಿನ್ನ ಮಹಿಮೆಯನ್ನು ತಿಳಿಯದೆ ದುರ್ಬುದ್ಧಿಯಿಂದ ನಿನ್ನಲ್ಲಿ ಅಪರಾಧಿಗಳಾದೆವು. ಸಮಸ್ತಲೋಕ ಕ್ಕೂ ನೀನೇ ಆಧಾರಭೂತನೆಂದು ಈಗ ನಮಗೆ ತಿಳಿಯಿತು ನಮ್ಮ ಅಪರಾಧ ವನ್ನು ಕ್ಷಮಿಸಬೇಕು. ಓ! ಪ್ರಭೂ! ನೀನು ಸಾಮಾನ್ಯಯಾದವನಲ್ಲ! ಸರ್ವೇ ಶ್ವರನಾದ ಭಗವಂತನೇ ನೀನು! ಪ್ರಪಂಚದ ಸೃಷ್ಟಿ, ಸ್ಥಿತಿ, ಸಂಹಾರಗಳೆಲ್ಲ ಕ್ಕೂ ನೀನೊಬ್ಬನೇ ಕಾರಣನು.ನಿನಗೆ ನೀನೇ ಆಧಾರನೇಹೊರತು,ನಿನಗೆ ಮ ತ್ತೊಂದು ಆಶ್ರಯವಸ್ತುವಿಲ್ಲ. ಈಜಗತ್ತೆಲ್ಲವೂ ನಿನ್ನ ಕ್ರೀಡಾಸಾಮಗ್ರಿಗಳೆಂ ದು ಮಹಾತ್ಮರು ಹೇಳುವರು. ಓ! ರಾಮಾ! ಸಹಸ್ರಫಣೆಗಳುಳ್ಳ ಆದಿ ಶೇಷಾವತಾರದಿಂದ ಈ ಭೂಮಂಡಲವೆಲ್ಲವನ್ನೂ ತಲೆಯಲ್ಲಿ ಹೊತ್ತಿರತಕ್ಕ ವನೂ ನೀನೊಬ್ಬನೇ! ಪ್ರಳಯಕಾಲದಲ್ಲಿ ಅನಿರುದ್ಧರೂಪದಿಂದ ಸಮಸ್ತ ಜಗತ್ತನ್ನೂ ಒಳಗಡಗಿಸಿಕೊಂಡು, ಬೇರೆಯಾವ ವಸ್ತುವನ್ನೂ ಕಾಣಿಸದೆ ಏಕಾಕಿಯಾಗಿ ಮಲಗತಕ್ಕವನೂ ನೀನೇ! ಓ! ಭಗವಂತಾ! ನೀನು ಅಂಗೀ ಕರಿಸತಕ್ಕ ಅವತಾರಗಳೆಲ್ಲವೂ ಲೋಕಕ್ಷೇಮಕ್ಕಾಗಿಯೇಹೊರತು ಬೇರೆಯ ಲ್ಲ. ಶುದ್ಧಸತ್ವಮೂರ್ತಿಯಾದ ನಿನಗೆ ಒಮ್ಮೆ ಕೋಪವುಂಟಾದರೂ, ಅ ದು ನಮ್ಮಂತವರನ್ನು ಶಿಕ್ಷಿಸಿ ಸನ್ಮಾರ್ಗಕ್ಕೆ ತರುವುದಕ್ಕಾಗಿಯೇಹೊರತು, ದ್ವೇಷದಿಂದಲಾಗಲಿ, ಮಾತ್ಸರ್ಯದಿಂದಾಗಲಿ ಹುಟ್ಟತಕ್ಕುದಲ್ಲ ಆದುದರಿಂ ದ ಶರಣಾಗತರಾದ ನಮ್ಮನ್ನು ರಕ್ಷಿಸಬೇಕು ಓ! ಸರ್ವಾತ್ಮಾ! ಸರ್ವಶಕ್ತಿ ಧರಾ! ಅವ್ಯಯಾ! ನಿನಗೆ ನಮಸ್ಕಾರವು. ಓ! ವಿಶ್ವಕರ್ತಾ! ನಿನಗೆ ವಂದಿಸು

ವೆವು. ನಮ್ಮನ್ನು ರಕ್ಷಿಸು” ಎಂದು ಪ್ರಾರ್ಥಿಸಿದರು. ಹೀಗೆ ಕೌರವರೆಲ್ಲರೂ ಪ್ರಾಣಭಯದಿಂದ ನಡುಗುತ್ತ ತನ್ನಲ್ಲಿ ಮರೆಹೊಕ್ಕು ಪ್ರಾರ್ಥಿಸು ತ್ತಿರುವುದನ್ನು ಕೇಳಿ ಬಲರಾಮನು. ಅವರಲ್ಲಿ ಪ್ರಸನ್ನನಾಗಿ “ಎಲೈ ಭಯ ಪಡಬೇಡಿರಿ” ಎಂದು ಅಭಯಪ್ರದಾನವನ್ನು ಮಾಡಿದನು, ಆಗ ದುರ್ಯೋ ಧನನು ಸಂತೋಷದಿಂದ ಅರುವತ್ತುವರುಷದ ವಯಸ್ಸುಳ್ಳ ಹನ್ನೆರಡುಸಾ ವಿರಗಜಗಳನ್ನೂ, ಲಕ್ಷ ಕುದುರೆಗಳನ್ನೂ, ಸೂರ್ಯತೇಜಸ್ಸುಳ್ಳ ಆರುಸಾವಿ ರ ಸುವರ್ಣರಥಗಳನ್ನೂ, ಸುವರ್ಣಪದಕದಿಂದಲಂಕೃತರಾದ ಸಾವಿರಮಂ ದಿ ದಾಸಿಯರನ್ನೂ, ತನ್ನ ಮಗಳಿಗೆ ಬಳುವಳಿಯಾಗಿಕೊಟ್ಟು. ಸಾಂಬನನ್ನೂ ತನ್ನ ಮಗಳಾದ ಲಕ್ಷ್ಮಣೆಯನ್ನೂ ಬಲರಾಮನವಶಕ್ಕೆ ಒಪ್ಪಿಸಿಕೊಟ್ಟನು. ಆಗ ಬಲರಾಮನು ಅವೆಲ್ಲವನ್ನೂ ಸಂತೋಷದಿಂದ ಸ್ವೀಕರಿಸಿ, ಆ ಕೌರವರ ನ್ನು ಸ್ನೇಹಭಾವದಿಂದ ಮನ್ನಿಸಿ, ಮಗನಾದ ಸಾಂಬನನ್ನೂ, ಸೊಸೆಯನ್ನೂ ತನ್ನೊಡನೆ ಕರೆದುಕೊಂಡು ದ್ವಾರಕೆಗೆ ಬಂದನು ಆಮೇಲೆ ಇತ್ತಲಾಗಿರಾಜ ಸಭೆಯಲ್ಲಿ ನೆರೆದಿದ್ದ ಸಮಸ್ತಜನಗಳಿಗೂ ತಾನು ನಡೆಸಿಬಂದ ಕಾರ್ಯಗಳೆಲ್ಲ ವನ್ನೂ ಆಮೂಲಾಗ್ರವಾಗಿ ತಿಳಿಸಿದನು ಬಲರಾಮನ ಅದ್ಭುತಮಹಿಮೆ ಯನ್ನು ಕೇಳಿ ಯಾದವರೆಲ್ಲರೂ ಅವನನ್ನು ಕೊಂಡಾಡುತಿದ್ದರು. ಓ! ಪರೀ ಕ್ಷಿದ್ರಾಜಾ! ನಿಮಗೆ ರಾಜಧಾನಿಯೆನಿಸಿಕೊಂಡ ಹಸ್ತಿನಾಪುರವು ಈಗಲೂ ಆ ಬಲರಾಮನ ಮಹಿಮೆಯನ್ನು ಜನಗಳಿಗೆ ಸೂಚಿಸುವಂತೆ, ದಕ್ಷಿಣ ದಿಕ್ಕಿನಲ್ಲಿ ಗಂಗಾನದಿಯ ಕಡೆಗೆ ಚಾಚಿಕೊಂಡಿರುವುದನ್ನು ನೋಡಬಹುದು” ಎಂದನು. ಇದು ಅರುವತ್ತೆಂಟನೆಯ ಅಧ್ಯಾಯವು.

---

## ನಾರದಮಹರ್ಷಿಯು ಶ್ರೀಕೃಷ್ಣನಬಳಿಗೆ ಬಂದುದು

ಓ ಪರೀಕ್ಷಿದ್ರಾಜಾ! ಕೇಳು! ನರಕಾಸುರನು ಕೃಷ್ಣನಿಂದ ಹತ ನಾದುದನ್ನೂ, ಅವನ ಮನೆಯಲ್ಲಿದ್ದ ಹದಿನಾರುಸಾವಿರಮಂದಿ ರಾಜಕನ್ಯೆ ಯರನ್ನೂ ಕೃಷ್ಣನೊಬ್ಬನೇ ವಿವಾಹಮಾಡಿಕೊಂಡು- ಅವರೊಡನೆ ಗೃಹಸ್ಥ ಧರ್ಮವನ್ನು ನಡೆಸುತ್ತಿರುವುದನ್ನೂ ಕೇಳಿ ನಾರದನಿಗೆ, ಆ ಕೃಷ್ಣನ ಕುಟುಂ ಬಲೀಲೆಯನ್ನು ನೋಡಬೇಕೆಂಬ ಕುತೂಹಲವು ಹುಟ್ಟಿತು. “ಆಹಾ! ಇದಲ್ಲ

ವೇ ಆಶ್ಚರ್ಯವು! ಆ ಕೃಷ್ಣನು, ತನ್ನ ಒಂದೇ ಶರೀರದಿಂದ ಹದಿನಾರುಸಾವಿರ ಮಂದಿ ಸ್ತ್ರೀಯರ ಮನೆಗಳಲ್ಲಿಯೂ ಬೇರೆಬೇರೆಯಾಗಿ ಏಕಕಾಲದಲ್ಲಿ ಕಲೆತಿದ್ದು,ಅವರೆಲ್ಲರನ್ನೂ ಸಂತೋಷಪಡಿಸುವುದು ಹೇಗೆಂಬುದನ್ನು ಕಣ್ಣಾರನೋಡಿಬರಬೇಕು." ಎಂಬ ಆಸೆಯಿಂದ ದ್ವಾರಕಾಪುರವನ್ನು ಪ್ರವೇಶಿಸಿದನು ಆಗ ಆ ಪಟ್ಟಣದ ಸೊಬಗನ್ನು ಕೇಳಬೇಕೆ ? ಎಲ್ಲಿ ನೋಡಿದರೂ ಪುಷ್ಪಸಮೃದ್ಧವಾದ ಉಪವನಗಳು! ಅವುಗಳಲ್ಲಿ ಕರ್ಣಾಮೃತಪ್ರಾಯವಾಗಿ ಕೂಗುತ್ತಿರುವ ಪಕ್ಷಿಗಳ, ಮತ್ತು ಭ್ರಮರಗಳ ಕೋಲಾಹಲಧ್ವನಿ ! ಅಲ್ಲಲ್ಲಿ ಕಮಲ, ಕಹ್ಲಾರ, ಕುಮುದ, ಉತ್ಪಲ, ಮೊದಲಾದ ನೀರು ಹೂಗಳಿಂದ ಕಂಗೊಳಿಸುವ ಸರೋವರಗಳು ! ಆ ಸರೋವರಗಳಲ್ಲಿ ಕಿವಿಗಿಂಪಾಗಿ ಕೂಗುತ್ತಿರುವ ಹಂಸಸಾರಸಾದಿ ಜಲಪಕ್ಷಿಗಳು! ಪಟ್ಟಣದ ನಾನಾಭಾಗಗಳಲ್ಲಿಯೂ ಸ್ಫಟಿಕದ ಕಲ್ಲುಗಳಿಂದಲೂ, ಬೆಳ್ಳಿಯಿಂದಲೂ ನಿರ್ಮಿತಗಳಾದ ಒಂಬತ್ತುಕಕ್ಷ್ಯೆ (ಅಂತಸ್ತು) ಗಳುಳ್ಳ ಉಪ್ಪರಿಗೆಯ ಮನೆಗಳು! ಅವುಗಳಲ್ಲಿ ಪಚ್ಚೆ, ಕೆಂಪು, ಮುಂತಾದ ರತ್ನಗಳಿಂದಲೂ, ಸುವರ್ಣದಿಂದಲೂ ರಚಿತಗಳಾದ ಗೃಹೋಪಕರಣಗಳು ! ಮತ್ತು ಅಲ್ಲಿ ಬೇರೆಬೇರೆಯಾಗಿ ವಿಭಾಗಿಸಿ ತೋರಿಸಲ್ಪಟ್ಟ ರಾಜಭಾಟಿಗಳು, ಸಣ್ಣದಾರಿಗಳು, ಚತುಷ್ಪಥಗಳು, ಅಂಗಡಿಬೀದಿಗಳು, ಕಾರ್ಯಶಾಲೆಗಳು, ಸಭಾಮಂಟಪಗಳು, ದೇವಾಲಯಗಳು ಮುಂತಾದ ನಾನಾತರದ ಸನ್ನಿವೇಶಗಳೂ ಮನೋಹರವಾಗಿರುವುವು. ಬೀದಿಗಳೂ, ಅಂಗಳಗಳೂ, ರಾಜಮಾರ್ಗಗಳೂ ಪಡಸಾಲೆಗಳೂ, ಸುಗಂಧಜಲಸೇಚನದಿಂದ ತಂಪಾಗಿ ಘುಮುಘುಮಿಸುತ್ತಿರುವುವು. ಎಲ್ಲಿ ನೋಡಿದರೂ ಧ್ವಜಪತಾಕೆಗಳು ಬಿಸಿಲಿನತಾಪವೇ ತಿಳಿಯದಂತೆ ತೂಗಾಡುತ್ತಿರುವುವು. ನಾರದನು, ಅಂತಹ ದ್ವಾರಕಾಪುರಿಯ ಸನ್ನಿವೇಶವನ್ನು ನೋಡುತ್ತ ಬರುವಾಗ ಅದರನಡುವೆಸಕಲಸಂಪತ್ಸಮೃದ್ಧವಾಗಿ, ಸಮಸ್ತಲೋಕಪಾಲಕರಿಗೂ ಆಸೆಹುಟ್ಟಿಸತಕ್ಕುದಾಗಿಯೂ ಇರುವ ಒಂದಾನೊಂದು ಅಂತಃಪುರವನ್ನು ಕಂಡನು.ಅದು ಸಾಕ್ಷಾತ್ಕೃಷ್ಣನಿಗೆ ವಾಸಗೃಹವಾದುದರಿಂದ, ದೇವಶಿಲ್ಪಿಯಾದ ವಿಶ್ವಕರ್ಮನು, ತನ್ನ ಶಿಲ್ಪನೈಪುಣ್ಯವೆಲ್ಲವನ್ನೂ ಅದರಲ್ಲಿ ತೋರಿಸಿರುವನು.ಹದಿನಾರುಸಾವಿರಸಂಖ್ಯೆಯು

ಳ್ಳುಉಪ್ಪರಿಗೆಗಳುಕಂಗೊಳಿಸುತ್ತಿರುವುವು. ಅದು ಕೃಷ್ಣಪತ್ನಿಯರ ಅಂತಃಪುರ ವೆಂಬುದನ್ನು ತಿಳಿದು,ನಾರದನು, ಅವುಗಳಲ್ಲಿ ತನ್ನ ಮನಸ್ಸಿಗೊಪ್ಪಿದ ಒಂದಾ ನೊಂದು ಸಣ್ಣಮನೆಯನ್ನುಪ್ರವೇಶಿಸಿದನು. ಅಲ್ಲಿನ ಸೊಬಗನ್ನು ಕೇಳಬೇಕೆ? ಸುತ್ತಲೂ ಹವಳದ ಕಂಬಗಳು! ಅದರಮೇಲೆ ವೈಡೂರ್ಯದ ಹಲಗೆಗಳು!ಇಂದ್ರನೀಲದ ಕಿಟಿಕಗಳು! ಆ ಕಿಟಿಕಿಗಳಲ್ಲಿ ಮರಕತದ ಸಲಾ ಕಿಗಳು! ಮುತ್ತಿನ ಕುಚ್ಚುಗಳಿಂದ ಚಿತ್ರಿತವಾಗಿ ವಿಶ್ವಕರ್ಮನ ಪೂ ರ್ಣಚಮತ್ಕಾರದಿಂದ ನಿರ್ಮಿತಗಳಾಗ ಮೇಲುಕಟ್ಟುಗಳು! ಎಲ್ಲಿನೋಡಿ ದರೂ ರತ್ನಖಚಿತಗಳಾದ ಮಂಚಗಳು! ಅವರಮೇಲೆ ಸ್ವಚ್ಛವಾದ ಮೇಲುಹೊದ್ದಿಕೆಗಳು! ಮನೆಯ ನಾನಾದಿಕ್ಕುಗಳಲ್ಲಿಯೂ, ಸ್ವರ್ಣಾ ಭರಣಗಳಿಂದಲೂ, ಶುದ್ಧದುಕೂಲಗಳಿಂದಲೂ, ಅಲಂಕೃತರಾಗಿ ಕೆಲಸ ಮಾಡುತ್ತಿರುವ ದಾದಿಯರು! ಅಲ್ಲಲ್ಲಿ ನಿಲುವಂಗಿಗಳಿಂದಲೂ, ತಲೆಪಾಗುಗ ಳಿಂದಲೂ, ಪಟ್ಟೆಮಡಿಗಳಿಂದಲೂ, ರತ್ನಕುಂಡಲಗಳಿಂದಲೂ ಅಲಂಕೃತ ರಾಗಿ ತಿರುಗುತ್ತಿರುವ ಸೇವಕಜನರು ಕತ್ತಲೆಯ ಸ್ವರೂಪವನ್ನೇ ಕಾಣಿಸ ದಂತೆ ಅನವರತವೂ ಬೆಳಗುತ್ತಿರುವ ರತ್ನದೀಪಗಳು! ಮತ್ತು ಆ ಮನೆಯ ಮುಂದಿನ ವಸಾರೆಗಳಲ್ಲಿ, ಗವಾಕ್ಷದಿಂದ ಹೊರಟು ಬರತಕ್ಕ ಅಗರುಧೂಪ ವನ್ನು ನೋಡಿ ನವಿಲುಗಳು ವರ್ಷೋನ್ಮುಖವಾದ ಮೇಘವೆಂದು ಭ್ರಮಿ ಸಿ, ಸಂತೋಷದಿಂದ ಕೂಗಿ ಕುಣಿದಾಡುತ್ತಿರುವುವು ಇಂತಹ ಮನೆಯೊಳಗೆ ಪ್ರವೇಶಿಸಿದೊಡನೆಯೇ ನಾರದನು, ಅಲ್ಲಿ ಮಂಚದಮೇಲೆ ಕುಳಿತಿದ್ದ ಕೃಷ್ಣ ನನ್ನುಕಂಡನು. ಅವನಸಮೀಪದಲ್ಲಿ ರುಕ್ಮಿಣೀದೇವಿಯು,ಗುಣದಲ್ಲಿಯೂ,ರೂ ಪದಲ್ಲಿಯೂ, ವಯಸ್ಸಿನಲ್ಲಿಯೂ ತನಗೆ ಸಮಾನರಾದ ಸಾವಿರಾರುಮಂದಿ ಗೌಡಿಯರೊಡನೆ ಸುವರ್ಣದಂಡವುಳ್ಳ ಚಾಮರವನ್ನು ಹಿಡಿದು ಆ ಕೃಷ್ಣ ನಿಗೆ ಬೀಸುತ್ತಿದ್ದಳು ಹೀಗಿರುವಾಗ ಕೃಷ್ಣನು, ತನ್ನಲ್ಲಿಗೆ ನಾರದ ಮಹರ್ಷಿಯು ಬಂದುದನ್ನು ಕಂಡೊಡನೆ, ಥಟ್ಟನೆ ತಾನು ಕುಳಿತಿದ್ದ ಆಸನ ದಿಂದ ಮೇಲೆದ್ದು, ಮುಂದೆ ಬಂದು, ಆ ಮಹರ್ಷಿಯ ಪಾದಗಳಿಗೆ ತನ್ನ ಕಿರೀಟವು ಸೋಕುವಂತೆ ನಮಸ್ಕರಿಸಿದನು. ಆತನನ್ನು ಕರೆತಂದು, ತನ್ನ ಆಸನದಲ್ಲಿ ಕುಳ್ಳಿರಿಸಿ ಅತನಪಾದಗಳನ್ನು ತನ್ನ ಕೈಯಿಂದ ತೊಳೆದನು ತಾನೇ

ಸರ್ವೋತ್ತಮನೆನಿಸಿಕೊಂಡಿದ್ದರೂ, ಆ ಮಹರ್ಷಿಯ ಪಾದತೀರ್ಥವನ್ನು ತನ್ನ ತಲೆಗೆ ಪ್ರೋಕ್ಷಿಸಿಕೊಂಡನು. ಓ! ಪರೀಕ್ಷಿದ್ರಾಜಾ! ಯಾವನ ಪಾದಸಂಬಂಧದಿಂದಲೇ ಗಂಗಾದಿತೀರ್ಥಗಳೂ ಲೋಕಪಾವನವೆನಿಸಿ ಕೊಂಡಿರುವುವೋ, ಅಂತಹ ಶ್ರೀಕೃಷ್ಣನು, ನಾರದನ ಪಾದತೀರ್ಥವನ್ನು ತಲೆಯಲ್ಲಿ ಧರಿಸಿದುದು ಅವನ ಪವಿತ್ರತೆಗಾಗಿಯೇ ಎಂದು ತಿಳಿಯಬೇಡ! ತನಗೆ ಬ್ರಾಹ್ಮಣರಲ್ಲಿರುವ ವಿಶೇಷವಾದ ಪ್ರೀತಿವಿಶ್ವಾಸಗಳನ್ನು ಲೋಕ ಕ್ಕೆ ತೋರಿಸುವುದಕ್ಕಾಗಿಯೂ, ತನಗೆ ಬ್ರಹ್ಮಣ್ಯದೇವನೆಂದು ಲೋಕ ಪ್ರಸಿದ್ಧವಾದ ಹೆಸರನ್ನು ಸಾರ್ಥಕಗೊಳಿಸಬೇಕೆಂಬ ಉದ್ದೇಶದಿಂದಲೂ, ಹೀಗೆ ಮಾಡಿದನೆಂದು ತಿಳಿ! ಆ ಭಗವಂತನು ನರನಾರಾಯಣಾವತಾರದಲ್ಲಿ ತಾನೇ ಪುರಾತನಮಹರ್ಷಿಯೆನಿಸಿಕೊಂಡಿದ್ದರೂ, ದೇವರ್ಷಿಯಾದ ನಾರ ದನನ್ನು ವಿಧ್ಯುಕ್ತವಾಗಿ ಪೂಜಿಸಿ, ಅಮೃತಸಮಾನವಾದ ಮಿತಭಾಷಣ ದಿಂದ ಅವನನ್ನು ಮಾತಾಡಿಸುತ್ತ "ಸ್ವಾಮಿ! ಪೂಜ್ಯರಾದ ತಮಗೆ ಈಗ ನನ್ನಿಂದ ಆಗಬೇಕಾದ ಕಾರ್ಯವೇನುಂಟು! ಅವಶ್ಯವಾಗಿ ತಿಳಿಸಬೇಕು!" ಎಂದನು. ಅದಕ್ಕಾನಾರದನು. "ಓ ಪ್ರಭೂ! ಸಮಸ್ತಲೋಕಕ್ಕೂ ನೀನೇ ಪಾಲಕನಾದುದರಿಂದ, ನಿನಗೆ ಸಮಸ್ತಜನರಲ್ಲಿಯೂ ಈ ವಿಧವಾದ ಪ್ರೇಮವೂ, ದುಷ್ಟನಿಗ್ರಹವೂ, ಸಹಜವೇಹೊರತು ಇದರಲ್ಲಿ ಆಶ್ಚರ್ಯ ವೇನೂ ಕಾಣುವುದಿಲ್ಲ! ನೀನು ಸ್ವೇಚ್ಛೆಯಿಂದ ಪರಿಗ್ರಹಿಸತಕ್ಕ ಇಂತಹ ಅವತಾರಗಳೆಲ್ಲಕ್ಕೂ, ಈ ಪ್ರಪಂಚವನ್ನು ಧರಿಸುವುದು, ಅದನ್ನು ರಕ್ಷಿಸು ವುದು, ಆಶ್ರಿತರಿಗೆ ಮೋಕ್ಷವನ್ನು ಕೊಡುವುದು, ಇವೇ ಮುಖ್ಯಪ್ರಯೋ ಜನಗಳೆಂಬುದನ್ನು ನಾನು ಬಲ್ಲೆನು. ಆದುದರಿಂದ ದುಷ್ಟನಿಗ್ರಹಶಿಷ್ಟ ಪರಿಗ್ರಹಗಳೆರಡೂ ನಿನಗೆ ಯುಕ್ತವೇ! ನಿನ್ನಿಂದ ನನಗೆ ಆಗಬೇಕಾದುದೇ ನೆಂದು ಕೇಳಿದೆಯಲ್ಲವೆ? ಪ್ರಪನ್ನರಿಗೆ ಮೋಕ್ಷಪ್ರದವಾಗಿಯೂ, ಬ್ರಹ್ಮಾದಿ ಯೋಗೀಶ್ವರರಿಗೂ ಪ್ರತ್ಯಕ್ಷವಲ್ಲದೆ ಕೇವಲ ಧ್ಯಾನಮಾತ್ರವಿಷಯವಾ ಗಿಯೂ, ಅಗಾಧವಾದ ಜ್ಞಾನಕ್ಕೆ ಆಶ್ರಯವಾಗಿಯೂ, ಸಂಸಾರವೆಂಬ ಕೂಪದಲ್ಲಿ ಬಿದ್ದವರನ್ನು ಕರೆಯೇರಿಸತಕ್ಕುದಾಗಿಯೂ ಇರುವ, ಈ ನಿನ್ನ ದಿವ್ಯಪಾದಾರವಿಂದಗಳನ್ನು ಈಗ ನಾನು ಪ್ರತ್ಯಕ್ಷವಾಗಿ ಕಂಡೆನಲ್ಲವೆ?

ಇದಕ್ಕಿಂತಲೂ ನನಗೆ ಇನ್ನೇನಾಗಬೇಕು ? ಇನ್ನು ಕೃತಾರ್ಥನಾದೆನು. ನಾನು ಎಂದೆಂದಿಗೂ ಈ ನಿನ್ನ ಪಾದಯುಗಳವನ್ನು ಮರೆಯದೆ ಧ್ಯಾನಿಸುತ್ತ, ಲೋಕಸಂಚಾರವನ್ನು ಮಾಡುವಂತೆ ಅನುಗ್ರಹಿಸಬೇಕು. ಇಷ್ಟೇ ನನ್ನ ಕೋರಿಕೆ!"ಎಂದನು. ನಾರದನು ಇಷ್ಟುಮಾತ್ರವನ್ನು ಹೇಳಿ ಅಲ್ಲಿಂದ ಹೊರಟು ಬಿಟ್ಟನು. ಯೋಗೇಶ್ವರನಾದ ಕೃಷ್ಣನ ಮಾಯೆಯ ಪ್ರಭಾವವನ್ನು ಇನ್ನೂ ಚೆನ್ನಾಗಿ ತಿಳಿಯಬೇಕೆಂಬ ಉದ್ದೇಶದಿಂದ,ಆ ಕೃಷ್ಣನ ಭಾರ್ಯೆಯರಲ್ಲಿ ಮತ್ತೊಬ್ಬಳಮನೆಗೆ ಪ್ರವೇಶಿಸಿದನು. ಅಲ್ಲಿ ಕೃಷ್ಣನು, ತನ್ನ ಪ್ರಿಯೆಯೊಡನೆಯೂ, ಉದ್ಧವನೊಡನೆಯೂ ಪಗಡೆಯನ್ನಾಡುತಿದ್ದನು ನಾರದನು ಬಂದೊಡನೆ ಕೃಷ್ಣನು, ಪರಮಭಕ್ತಿಯಿಂದ ಇದಿರೆದ್ದುಬಂದು, ಅವನಿಗೆ ಯಥೋಚಿತವಾದ ಆಸನಾದಿಗಳನ್ನು ಕೊಟ್ಟು ಸತ್ಕರಿಸಿ, ಆಗಲೇ ಹೊಸದಾಗಿ ಅವನನ್ನು ಕಂಡಂತೆ ನಟಿಸುತ್ತ “ಓಹೋ! ಯಾವಾಗ ಬಂದುದು! ಪೂರ್ಣಕಾಮರಾದ ನಿಮಗೆ ಅಕಿಂಚನರಾದ ನಮ್ಮಿಂದಾಗಬೇಕಾದುದೇನೂ ಇಲ್ಲ! ಹಾಗಿದ್ದರೂ ನೀವು ನಮ್ಮಲ್ಲಿಗೆ ಬಂದ ಉದ್ದೇಶವನ್ನು ತಿಳಿಸಬೇಕು. ನಮ್ಮ ಜನ್ಮವನ್ನು ಸಾರ್ಥಕಗೊಳಿಸಬೇಕು” ಎಂದನು. ಈ ಮಾತನ್ನು ಕೇಳಿ ನಾರದನು, ತನ್ನಲ್ಲಿ ತಾನು ಆಶ್ಚರ್ಯಪಡುತ್ತ, ಯಾವ ಮಾತನ್ನೂ ಆಡದೆ ಅಲ್ಲಿಂದೆದ್ದು, ಸಮೀಪದಲ್ಲಿದ್ದ ಮತ್ತೊಂದು ಮನೆಗೆ ಪ್ರವೇಶಿಸಿದನು. ಅಲ್ಲಿ ಕೃಷ್ಣನು ತನ್ನ ಬಾಲಕರನ್ನೂ, ಎಳೆಮಕ್ಕಳನ್ನೂ ಮುದ್ದಿಸಿ ಲಾಲಿಸುತಿದ್ದನು. ಅಲ್ಲಿಯೂ ಕೃಷ್ಣನು ನಾರದನನ್ನು ಹೊಸದಾಗಿ ಕಂಡಂತೆ ಥಟ್ಟನೆ ಇದಿರೆದ್ದು ಸತ್ಕರಿಸಿ, ಕುಶಲ ಪ್ರಶ್ನಾದಿಗಳನ್ನು ಕೇಳಿದಮೇಲೆ, ನಾರದನು ಅಲ್ಲಿಂದ ಹೊರಟು, ಮತ್ತೊಬ್ಬಳ ಮನೆಗೆ ಹೋದನು ಅಲ್ಲಿ ಕೃಷ್ಣನು ಅಭ್ಯಂಗನಕ್ಕಾಗಿ ಯತ್ನಿಸುತ್ತಿದ್ದನು ಅದನ್ನು ಬಿಟ್ಟು, ಮತ್ತೊಂದು ಮನೆಗೆ ಹೋದಾಗ, ಅಲ್ಲಿ ಕೃಷ್ಣನು ಗೃಹಸ್ಥಾಗ್ನಿಯಲ್ಲಿ ಹೋಮಕಾರ್ಯವನ್ನು ನಡೆಸುತಿದ್ದನು. ಅದನ್ನು ಬಿಟ್ಟು ಮತ್ತೊಂದು ಮನೆಗೆ ಪ್ರವೇಶಿಸಿದಾಗ, ಅಲ್ಲಿ ಕೃಷ್ಣನು, ಪಂಚಮಹಾಯಜ್ಞಗಳನ್ನು ನಡೆಸುತಿದ್ದನು. ಹೀಗೆಯೇ ನಾರದನು ಒಂದೊಂದುಮನೆಯನ್ನು ಪ್ರವೇಶಿಸುವಾಗಲೂ, ಕೃಷ್ಣನು, ಒಂದುಮನೆಯಲ್ಲಿ ಬ್ರಾಹ್ಮಣಸಂತರ್ಪಣೆಯನ್ನು ನಡೆಸಿ ಆ ಶೇ

ಷಾನ್ನವನ್ನು ಭಕ್ತಿಯಿಂದ ಭುಜಿಸುತ್ತಿರುವನು. ಮತ್ತೊಂದು ಮನೆಯಲ್ಲಿ ಆಗಲೇ ಸಂಧ್ಯಾವಂದನೆಗಾಗಿ ಕುಳಿತಿರುವನು. ಮತ್ತೊಂದು ಮನೆಯಲ್ಲಿ ವೇದಮಂತ್ರವನ್ನು ಜಪಿಸುತ್ತಿರುವನು. ಇನ್ನೊಂದು ಮನೆಯಲ್ಲಿ ಮೂಗನ್ನು ಹಿಡಿದು ಮೌನವ್ರತದಿಂದ ಆತ್ಮಧ್ಯಾನದಲ್ಲಿ ಕುಳಿತಿರುವನು. ಮತ್ತೊಂದು ಮನೆಯಲ್ಲಿ ಕತ್ತಿಗುರಾಣಿಗಳನ್ನು ಹಿಡಿದು ಕತ್ತಿಯ ವರಸೆಗಳನ್ನು ಅಭ್ಯಸಿಸು ತ್ತಿರುವನು. ಮತ್ತೊಂದು ಮನೆಯಲ್ಲಿ, ಆನೆ, ಕುದುರೆ, ರಥ, ಮೊದಲಾದ ವಾಹನಗಳನ್ನೇರಿ, ಅವುಗಳನ್ನು ಚಮತ್ಕಾರವಾಗಿ ನಡೆಸುತ್ತಿರುವನು. ಮತ್ತೊಂದು ಮನೆಯಲ್ಲಿ ಮಂಚದಮೇಲೆ ಸುಖವಾಗಿ ಮಲಗಿ ಸ್ತುತಿ ಪಾಠಕರಿಂದ ಸ್ತುತಿಸಲ್ಪಡುವನು. ಮತ್ತೊಂದು ಮನೆಯಲ್ಲಿ ಉದ್ಧವಾದಿ ಮಂತ್ರಿಗಳೊಡನೆ ಕಲೆತು ಮಂತ್ರಾಲೋಚನೆಯನ್ನು ನಡೆಸುತ್ತಿರುವನು ಇನ್ನೊಂದು ಮನೆಯಲ್ಲಿ ವಾರಸ್ತ್ರೀಯರೊಡನೆ ಜಲಕ್ರೀಡೆಯನ್ನಾಡುತ್ತಿರು ವನು. ಇನ್ನೊಂದುಮನೆಯಲ್ಲಿ ಬ್ರಾಹ್ಮಣರಿಗೆ ಗೋದಾನಗಳನ್ನು ನಡೆಸು ತ್ತಿರುವನು. ಇನ್ನೊಂದುಮನೆಯಲ್ಲಿ ಬ್ರಾಹ್ಮಣರಮೂಲಕವಾಗಿ ಇತಿ ಹಾಸಪುರಾಣಗಳನ್ನೂ, ಮಂಗಳಚರಿತ್ರಗಳನ್ನೂ ಭಕ್ತಿಯಿಂದ ಕೇಳುತ್ತಿರು ವನು. ಮತ್ತೊಂದುಮನೆಯಲ್ಲಿ ತನ್ನ ಪ್ರಿಯೆಯೊಡನೆ ಹಾಸ್ಯದ ಮಾತುಗಳ ನ್ನಾಡಿ ನಗುತ್ತಿರುವನು.ಒಂದುಮನೆಯಲ್ಲಿ ಧರ್ಮಗಳನ್ನು ನಡೆಸುತ್ತಿರುವನು. ಇನ್ನೊಂದು ಮನೆಯಲ್ಲಿ ಅರ್ಥಕಾಮಗಳನ್ನು ಸೇವಿಸುತ್ತಿರುವನು. ಇನ್ನೊಂ ದುಮನೆಯಲ್ಲಿ ಜೀವಪ್ರಕೃತಿಗಳಿಗಿಂತಲೂ ಬೇರೆಯಾದ ಪರಮಪುರುಷನ ದಿವ್ಯಾತ್ಮಸ್ವರೂಪವನ್ನು ಧ್ಯಾನಿಸುತ್ತಿರುವನು. ಇನ್ನೊಂದು ಮನೆಯಲ್ಲಿ ಗುರುಶುಶ್ರೂಷೆಯನ್ನು ಮಾಡುತ್ತ, ಅವರಿಗೆ ಬೇಕಾದ ಕೋರಿಕೆಗಳನ್ನೂ ಭೋಗಸಾಮಗ್ರಿಗಳನ್ನೂ ಒದಗಿಸುತ್ತಿರುವನು. ಮತ್ತೊಂದು ಮನೆಯಲ್ಲಿ ತನಗೆ ಸಮಾನಸ್ಕಂಧರಾದ ಕೆಲವು ಪುರುಷರೊಡನೆಜಗಳವಾಡುತ್ತಿರುವನು. ಮತ್ತೊಂದುಕಡೆಯಲ್ಲಿ ಜಗಳವಾಡತಕ್ಕವರಿಗೆ ಸಮಾಧಾನಹೇಳಿ ಸಂಧಿ ಯನ್ನು ಮಾಡುತ್ತಿರುವನು. ಮತ್ತೊಂದುಮನೆಯಲ್ಲಿ ಬಲರಾಮನೊಡನೆ ಕಲೆತು,ಸಾಧುಗಳಿಗೆ ಕ್ಷೇಮಕರವಾದಆಲೋಚನೆಯನ್ನು ನಡೆಸುತ್ತಿರುವನು. ಇನ್ನೊಂದುಮನೆಯಲ್ಲಿ, ತನ್ನ ಗಂಡುಮಕ್ಕಳಿಗೆ ಅನುರೂಪರಾದ ವಧುಗಳೊ

ಡನೆಯೂ, ಹೆಣ್ಣುಮಕ್ಕಳಿಗೆ ತಕ್ಕ ವರರೊಡನೆಯೂ ಸಕಾಲದಲ್ಲಿ ಶಾಸ್ತ್ರೋಕ್ತವಾದ ವಿವಾಹವನ್ನು ನಡೆಸಿ,ಆ ಹೆಣ್ಣುಮಕ್ಕಳನ್ನೂ,ಅಳಿಯಂದಿರನ್ನೂ ಉಚಿತಸತ್ಕಾರಗಳೊಡನೆಅವರವರಮನೆಗೆಕಳುಹಿಸಿಕೊಡುವುದರಲ್ಲಿಯೂ ತನ್ನ ಗಂಡುಮಕ್ಕಳನ್ನೂ,ಸೊಸೆಯರನ್ನೂ ಸಂಭ್ರಮದಿಂದ ತನ್ನ ಮನೆಗೆ ಕರೆತರುವುದರಲ್ಲಿಯೂ,ಉತ್ಸಾಹವಿಶಿಷ್ಟನಾಗಿರುವನು.ಓ ಪರೀಕ್ಷಿದ್ರಾಜಾ!ಯೋಗೇಶ್ವರನಾದ ಕೃಷ್ಣನು, ಈ ವಿಧವಾಗಿ ತನ್ನ ಮಕ್ಕಳುಮರಿಗಳೊಡನೆ ಕಲೆತು, ಅವರ ವಿವಾಹಾದಿಕಾರ್ಯಗಳಿಗಾಗಿ ಆತುರಪಡುತ್ತಿರುವುದನ್ನು ನೋಡಿ, ಎಂತವರಿಗೆ ತಾನೇ ಆಶ್ಚರ್ಯವುಂಟಾಗದು ? ಹೀಗೆಯೇ ಕೃಷ್ಣನು ಒಂದು ಮನೆಯಲ್ಲಿ ಯಜ್ಞಯಾಗಾದಿಗಳಿಂದ ತನಗೆ ಅಂಶಭೂತರಾಗಿ ಹುಟ್ಟಿದ ದೇವತೆಗಳನ್ನು ತಾನೇ ಆರಾಧಿಸುವುದು,ಇನ್ನೊಂದು ಕಡೆಯಲ್ಲಿ ಸತ್ರ,ದೇವಾಲಯ,ಕರೆ,ಬಾವಿ,ಮುಂತಾದ ಪೂರ್ತಧರ್ಮಗಳನ್ನು ನಡೆಸುವುದು.ಮತ್ತೊಂದು ಕಡೆಯಲ್ಲಿ ಕುದುರೆಯಮೇಲೆ ಕುಳಿತು ಯಾದವರೊಡನೆ ಬೇಟೆಗೆ ಹೊರಟು,ಕಾಡಿನಲ್ಲಿ ಪವಿತ್ರಗಳಾದ ಮೃಗಗಳನ್ನು ಕೊಂದುತರುವುದು, ಇನ್ನೊಂದುಕಡೆಯಲ್ಲಿ ಮಂತ್ರಿಮೊದಲಾದ ತನ್ನ ಪ್ರಕೃತಿಗಳಿಗೂ, ಅಂತಃಪುರಸೇವಕರಿಗೂ ತನ್ನ ನಿಜಸ್ಥಿತಿಯನ್ನು ತಿಳಿಯಿಸದಂತೆ ವೇಷವನ್ನು ಮರೆಸಿಕೊಂಡು, ಅವರವರ ಮನೋಭಿಪ್ರಾಯವನ್ನು ತಿಳಿದುಕೊಳ್ಳುವುದು, ಹೀಗೆ ಬೇರೆಬೇರೆ ಮನೆಗಳಲ್ಲಿ ಬೇರೆಬೇರೆ ವಿಧವಾದ ಕಾರ್ಯಗಳಿಂದ ವಿನೋದಿಸುತ್ತ, ಆ ಹದಿನಾರುಸಾವಿರಮಂದಿ ಸ್ತ್ರೀಯರನ್ನೂ, ಸದಾಕಾಲದಲ್ಲಿಯೂ ಸಂತೋಷಪಡಿಸುತಿದ್ದನು ಇದನ್ನು ನೋಡಿ ಮನುಷ್ಯಾವತಾರದಲ್ಲಿಯೂ ಆತನು ತೋರಿಸತಕ್ಕ ಆಶ್ಚರ್ಯಶಕ್ತಿಗಾಗಿ ನಾರದನು ವಿಸ್ಮಿತನಾಗಿ ಆ ಕೃಷ್ಣನೊಡನೆ ಹೀಗೆಂದು ಹೇಳುವನು ‘‘ಓ ಯೋಗೀಶ್ವರಾ! ನಿನ್ನ ಆಶ್ಚರ್ಯಶಕ್ತಿಯು ಯೋಗಿಗಳಿಗೂ ಅಗೋಚರವಾಗಿದ್ದರೂ, ನಿನ್ನ ಪಾದಸೇವಾಬಲದಿಂದ ಈಗ ನನಗೆ ಕಣ್ಣಾರೆ ನೋಡುವಂತಾಯಿತು. ಓ ದೇವಾ! ನಿನ್ನ ಮಾಯಾಪ್ರವಾಹದಲ್ಲಿ ಮುಳುಗಿತೇಲುತ್ತಿರುವ ಲೋಕಗಳಲ್ಲಿ,ಜಗತ್ಪಾವನಗಳಾದ ನಿನ್ನ ಲೀಲೆಗಳನ್ನು ಹಾಡುತ್ತ ಸಂಚರಿಸುತ್ತಿರುವಂತೆ,ನನ್ನನ್ನು ಅನುಗ್ರಹಿಸಿ ಕಳುಹಿಸಬೇಕು” ಎಂದನು. ‘‘ಅದಕ್ಕಾ ಕೃಷ್ಣನು,” ಓ ಬ್ರಾಹ್ಮ

ಣೋತ್ತನೂ!ಆಯಾಕಾಲಾನುಗುಣವಾಗಿ ನಾನು ಧರ್ಮಗಳನ್ನುಪದೇಶಿಸುವೆನು. ನಾನೇ ಅದನ್ನು ನಡೆಸಿತೋರಿಸುವೆನು. ಅದನ್ನನುಮೋದಿಸತಕ್ಕವನೂ ನಾನೇಆಗುವೆನು. ಅದರಂತೆಯೇ ಈಗ ಜನಗಳಿಗೆ ಕೆಲಕೆಲವು ಧರ್ಮಗಳನ್ನು ನಾನೇಪ್ರತ್ಯಕ್ಷವಾಗಿ ನಡೆಸಿತೋರಿಸಬೇಕೆಂಬ ಉದ್ದೇಶದಿಂದ,ಈ ಮನುಷ್ಯಾವತಾರವನ್ನೆತ್ತಿ, ಈವಿಧವಾದ ಪ್ರಾಕೃತಚೇಷ್ಟೆಗಳನ್ನುನಡೆಸುತ್ತಿರುವೆನು. ಈನನ್ನನಟನಗಳನ್ನು ನೋಡಿ ನೀನು ಸಂದೇಹಪಟ್ಟು ವಿಸ್ಮಿತನಾಗಬೇಕಾದುದಿಲ್ಲ" ಎಂದನು  ಕೃಷ್ಣನ ಬಾಯಿಂದ ಈಮಾತುಗಳು ಹೊರಟಮೇಲೆ, ನಾರದನು ಜ್ಞಾನದೃಷ್ಟಿಯಿಂದ ನೋಡುವಾಗ, ಆಕೃಷ್ಣನು ಅಲ್ಲಿ ಗೃಹಸ್ಥರು ನಡೆಸತಕ್ಕ ಧರ್ಮಗಳನ್ನು ನಡೆಸುತ್ತಿರುವಹಾಗೆಯೇ ಸಮಸ್ತಜೀವಶರೀರಗಳಲ್ಲಿಯೂ ಅಂತರಾತ್ಮನಾಗಿ ಏಕರೂಪದಿಂದಿರುವುದನ್ನೂ ಕಂಡುಕೊಂಡನು. ಆಗ ನಾರದನಿಗೆ ಭಗವಂತನ ಅದ್ಭುತಶಕ್ತಿಯನ್ನು ನೋಡಿ ಮನಸ್ಸಿನಲ್ಲಿ.ಅತ್ಯಾಶ್ಚರ್ಯ ವುಂಟಾಯಿತು. ಹೀಗೆ ಲೋಕಶಿಕ್ಷಾರ್ಥವಾಗಿ ಧರ್ಮಾರ್ಥಕಾಮಗಳಲ್ಲಿ ಆಕ್ಕರೆಯಿಟ್ಟು, ಕುಟುಂಬಧರ್ಮವನ್ನು ನಡೆಸುತ್ತಿದ್ದ ಕೃಷ್ಣನು, ನಾರದನನ್ನು ಯಥೋಚಿತವಾಗಿ ಸತ್ಕರಿಸಿದಮೇಲೆ ನಾರದನು ಆಕೃಷ್ಣನನ್ನೇ ಮನಸ್ಸಿನಲ್ಲಿ ಧ್ಯಾನಿಸುತ್ತಾ, ಸಂತೋಷದಿಂದ ಹಿಂತಿರುಗಿದನು ಓ ಪರೀಕ್ಷಿದ್ರಾಜಾ! ಭಗವಂತನು ಲೋಕಕ್ಷೇಮಕ್ಕಾಗಿ ಹೀಗೆ ಮನುಷ್ಯಾವತಾರವನ್ನೆತ್ತಿ, ಆಗಾಗ ತನ್ನ ದಿವ್ಯಶಕ್ತಿಯನ್ನು ಪ್ರಕಾಶಗೊಳಿಸುತ್ತ, ಹದಿನಾರುಸಾವಿರಮಂದಿ ಸ್ತ್ರೀಯರ ಲಜ್ಜಾಗರ್ಭಿತವಾದ ಅನುರಾಗಕ್ಕೂ, ಅವರ ನಗೆನೋಟಗಳಿಗೂ ಪಾತ್ರನಾಗಿ, ಸಂತೋಷದಿಂದ ಅವರೊಡನೆ ರಮಿಸುತಿದ್ದನು. ಪ್ರಪಂಚದ ಸೃಷ್ಟಿಸ್ಥಿತಿಲಯಕಾರಣನಾದ ಆ ಭಗವಂತನು, ಹೀಗೆ ಕೃಷ್ಣಾದ್ಯವತಾರಗಳಲ್ಲಿ ನಡೆಸಿದ ಅಸಾಧಾರಣಕಾರ್ಯಗಳನ್ನು ಯಾವನು ಭಕ್ತಿಯಿಂದ ಗಾನಮಾಡುವನೋ, ಅಥವಾ ಕಿವಿಯಿಂದ ಕೇಳುವನೋ, ಯಾವನು ಅವುಗಳನ್ನು ಅನುಮೋದಿಸುವನೋ, ಅವರೆಲ್ಲರಿಗೂ ಮೋಕ್ಷಕಾರಣನಾದ ಆ ಭಗವಂತನಲ್ಲಿ ಎಣೆಯಿಲ್ಲದ ಭಕ್ತಿಯುಂಟಾಗುವುದು. ಇದು ಅರುವತ್ತೊಂಬತ್ತನೆಯ ಅಧ್ಯಾಯವು

---

{ ಜರಾಸಂಧನ ನಿರ್ಬಂಧದಲ್ಲಿದ್ದ ರಾಜರು ಕೃಷ್ಣನಿಗೆ ಸಂದೇಶವನ್ನು ಕಳುಹಿಸಿದುದು. ನಾರದಾಗಮನವು }

ಓ ಪರೀಕ್ಷಿದ್ರಾಜಾ ! ಹೀಗೆ ಕೃಷ್ಣನು ಹದಿನಾರುಸಾವಿರಮಂದಿ ರಾಜಕುಮಾರಿಯರೊಡನೆ ಕುಟುಂಬಧರ್ಮವನ್ನು ನಡೆಸುತ್ತಿದ್ದಾಗ, ಅವನ ದಿದ ಚರ್ಯೆಯನ್ನು ತಿಳಿಸುವೆನು ಕೇಳು ! ರಾತ್ರಿಯಲ್ಲಿ ಕೃಷ್ಣನು ಆ ಸ್ತ್ರೀಯರೊಡನೆ ಸುಖಶಯ್ಯೆಯಲ್ಲಿದ್ದು, ಬೆಳಗಿನ ಜಾವದಲ್ಲಿ, ಮೊದಲನೇ ಕೋಳಿಯು ಕೂಗಿದೊಡನೆ ಎಚ್ಚರಗೊಳ್ಳುವನು ಆಗ ಕೃಷ್ಣನ ಕಂಠವನ್ನು ದೃಢವಾಗಿ ಆಲಿಂಗಿಸಿಕೊಂಡು ಪರಮಾನಂದದಿಂದ ಮಲಗಿದ್ದ ಆ ಸ್ತ್ರೀಯರೆಲ್ಲರೂ, ಆತನ ಅಗಲಿಕೆಯನ್ನು ಸಹಿಸಲಾರದೆ ತಮ್ಮೊಳಗೆ ತಾವು “ ಅಯ್ಯೋ ! ಈ ಹಾಳುಕೋಳಿಗಳು ಈಗಾಗಲೇ ಕೂಗುತ್ತಿರುವುವಲ್ಲಾ !” ಎಂದು ಅವುಗಳನ್ನು ಶಪಿಸುವರು ಸ್ವಲ್ಪಹೊತ್ತಿನೊಳಗಾಗಿಯೇ ಗೃಹೋದ್ಯಾನದಿಂದ ಮಂದಾರಪುಷ್ಪಗಳ ಸುಗಂಧದೊಡನೆ ಬೆಳಗಿನ ಗಾಳಿಯು ತಂಪಾಗಿ ಬೀಸುತ್ತ, ಅದರೊಡನೆ ಭ್ರಮರಝುಂಕಾರಗಳು ಕೇಳಿಬರುವುವು ಕೃಷ್ಣನನ್ನು ಸುಪ್ರಭಾತಸ್ತುತಿಗಳಿಂದ ಎಚ್ಚರಗೊಳಿಸುವುದಕ್ಕಾಗಿ ಬಂದ ಸ್ತುತಿಪಾಠಕರಂತೆ, ವನಪಕ್ಷಿಗಳು ಕಿವಿಗಿಂಪಾಗಿ ಕೂಗುವುವು. ಪ್ರಭಾತಸಮಯವು ಹೀಗೆ ಸರ್ವಜನಮನೋರಂಜಕವಾಗಿದ್ದರೂ, ಶ್ರೀಕೃಷ್ಣನ ಭುಜಗಳಿಂದ ಆಲಿಂಗಿತರಾಗಿ ಮಲಗಿದ್ದ ರುಕ್ಮಿಣಿ ಮೊದಲಾದ ಸ್ತ್ರೀಯರಿಗೆ, ಆ ಸುಖವು ತಪ್ಪಿಹೋಗುವುದೆಂಬ ಭಯದಿಂದ, ಆಕಾಲವೂ ಮನಸ್ಸಿಗೆ ಬಹಳ ಅಸಮರ್ಪಕಗಾಗಿಯೇ ತೋರುವುದು. ಹೀಗೆ ಬೆಳಗಾಗುವುದಕ್ಕೆ ಮೊದಲು,ಬ್ರಾಹ್ಮಮುಹೂರ್ತದಲ್ಲಿಯೇ ಕೃಷ್ಣನುಹಾಸಿಗೆಯಿಂದೆದ್ದು, ಆಚಮನಾದಿಗಳಿಂದ ಶುದ್ಧನಾಗಿ,ಪ್ರಕೃತಿಗಿಂತಲೂ ವಿಲಕ್ಷಣವಾಗಿಯೂ,ತನಗೆಮೇಲಾದ ಅಥವಾ ಸಮಾನವಾದ ಬೇರೆ ವಸ್ತುವಿಲ್ಲದುದಾಗಿಯೂ, ಸ್ವಯಂಪ್ರಕಾಶವಾಗಿಯೂ, ಸಮಸ್ತಜಗತ್ತನ್ನೂ ತನಗೆ ಶರೀರವಾಗಿ ಹೊಂದಿರುವುದರಿಂದ ಎಲ್ಲವೂ ತಾನೇ ಆಗಿಯೂ, ಜಾಡ್ಯಾದಿಕಲ್ಪನೆಗಳಿಲ್ಲದುದರಿಂದ ಅವ್ಯಯವಾಗಿಯೂ, ಪಾಪಪುಣ್ಯಗಳ ಸಂಬಂಧವಿಲ್ಲದುದರಿಂದ ನಿಷ್ಕಲ್ಮಷವಾಗಿಯೂ, ನಿರ್ವಿಕಾರವಾಗಿಯೂ, ಈ ಪ್ರಪಂಚದ ಉತ್ಪತ್ತಿ

ಸ್ಥಿತಿಲಯಗಳಿಗೆ ಕಾರಣವೆನಿಸಿಕೊಂಡ ನಿಜಧರ್ಮಗಳಿಂದ ಕೂಡಿ, ಸತ್ಯಜ್ಞಾನಾನಂದಸ್ವರೂಪವಾಗಿಯೂ ಇರುವ ಪರಬ್ರಹ್ಮಾತ್ಮಕವಾದ ತನ್ನ ಸ್ವರೂಪವನ್ನೇ ತಾನು ಧ್ಯಾನಮಾಡುತ್ತ ಕುಳ್ಳಿರುವನು. ಆಮೇಲೆ ಶುದ್ಧಜಲದಲ್ಲಿ ಸ್ನಾನಮಾಡಿ, ಶಾಸ್ತ್ರೋಕ್ತವಾದ ಕರ್ಮಗಳನ್ನು ನಡೆಸಿ, ಧೌತವಸ್ತ್ರಗಳನ್ನು ಧರಿಸಿ, ಸಂಧ್ಯಾವಂದನಾದಿಗಳನ್ನು ನಡೆಸುವನು. ಅಗ್ನಿಹೋತ್ರಕಾರ್ಯಗಳನ್ನು ಮಾಡಿದಮೇಲೆ ಮೌನದಿಂದ ಗಾಯತ್ರಿಯನ್ನೂ ಜಪಿಸುವನು ಆಗಲೇ ಉದಿಸಿಬರುವ ಸೂರ್ಯನಿಗಿದಿರಾಗಿ ನಿಂತು ಉಪಸ್ಥಾನವನ್ನು ಮಾಡುವನು ತನಗೆ ಅಂಶಭೂತರಾದ ದೇವತೆಗಳನ್ನೂ, ಋಷಿಗಳನ್ನೂ, ಪಿತೃದೇವತೆಗಳನ್ನೂ ಗುರುಹಿರಿಯರನ್ನೂ, ಬ್ರಾಹ್ಮಣರನ್ನೂ ವಿಧ್ಯುಕ್ತವಾಗಿ ತರ್ಪಣಾದಿಗಳಿಂದ ಪೂಜಿಸುವನು. ಆಮೇಲೆ ಉತ್ತಮ ಬ್ರಾಹ್ಮಣರನ್ನು ಕರೆಸಿ, ಅವರನ್ನು ವಸ್ತ್ರಾದಿಗಳಿಂದಲಂಕರಿಸಿ, ಅವರಿಗೆ ಸುವರ್ಣಶೃಂಗಗಳಿಂದಲೂ, ಬೆಳ್ಳಿಯ ಗೊರಸಲುಗಳಿಂದಲೂ, ಉತ್ತಮವಸ್ತ್ರಗಳಿಂದಲೂ, ಅಲಂಕೃತಗಳಾದ, ಆಗಲೇ ಕರುಹಾಕಿದ, ಅನೇಕಗೋವುಗಳನ್ನು ದಾನಮಾಡುವನು ಮತ್ತು ಅನೇಕಬ್ರಾಹ್ಮಣರಿಗೆ ಧೌತವಸ್ತ್ರಗಳು, ಕೃಷ್ಣಾಜಿನಗಳು ಎಳ್ಳು, ಮೊದಲಾದ ಸಾಮಗ್ರಿಗಳೊಡನೆ ಒಂದೊಂದುದಿನವೂ ಒಂದೊಂದು ಪದ್ಮಸಂಖ್ಯೆಯುಳ್ಳ ಸುವರ್ಣವನ್ನು ದಾನಮಾಡುವನು. ಹಾಗೆಯೇ ಗೋಬ್ರಾಹ್ಮಣರನ್ನೂ, ಗುರುಗಳನ್ನೂ, ವೃದ್ಧರನ್ನೂ, ಸಮಸ್ತಭೂತಗಳನ್ನೂ ನಮಸ್ಕರಿಸಿಬರುವನು. ಕಪಿಲೆ ಮೊದಲಾದ ಮಂಗಳವಸ್ತುಗಳನ್ನು ಕೈಯಿಂದ ಸ್ಪರ್ಶಿಸುವನು ಸಮಸ್ತಲೋಕಕ್ಕೂ ತಾನೇಭೂಷಣವಾಗಿದ್ದರೂ ಗಂಧ, ಪುಷ್ಪ, ವಸ್ತ್ರಾಭರಣಗಳಿಂದ ತನ್ನ ದೇಹವನ್ನಲಂಕರಿಸಿಕೊಳ್ಳುವನು. ತನ್ನ ಅಂತಃಪುರದಲ್ಲಿಯೂ, ಪಟ್ಟಣದಲ್ಲಿಯೂ, ದೇಶದಲ್ಲಿಯೂ ಇರತಕ್ಕ ಸಮಸ್ತವರ್ಗದವರಿಗೂ, ಮಂತ್ರಿ ಮೊದಲಾದ ಪ್ರಕೃತಿಗಳಿಗೂ, ಅವರವರಿಗೆ ಬೇಕಾದ ಇಷ್ಟವಸ್ತುವನ್ನು ಕೊಡಿಸಿ ತೃಪ್ತಿಪಡಿಸುವನು ಮತ್ತು ಬ್ರಾಹ್ಮಣರನ್ನು ಸಾಲಾಗಿ ತನ್ನಮುಂದೆ ಕುಳ್ಳಿರಿಸಿ, ಅವರನ್ನು ಗಂಧಪುಷ್ಪ ತಾಂಬೂಲಾದಿಗಳಿಂದ ಪೂಜಿಸುವನು ಆಮೇಲೆ ಪ್ರಾತಃಕಾಲದಲ್ಲಿ ಮಂಗಳಾರ್ಥವಾಗಿ ನೋಡಬೇಕಾದ ತುಪ್ಪ, ಕನ್ನೆ, ಗೋವುಗಳು, ಬ್ರಾಹ್ಮ

ಣರು, ದೇವತೆಗಳು, ಮುಂತಾದುವುಗಳೆಲ್ಲವನ್ನೂ ದರ್ಶನಮಾಡಿ ಬಂದು, ಇಷ್ಟಮಿತ್ರರೊಡನೆಯೂ, ಮಂತ್ರಿ ಮೊದಲಾದವರೊಡನೆಯೂ, ಪತ್ನಿಯರೊಡನೆಯೂ, ವಿನೋದದಿಂದ ಮಾತನಾಡುತ್ತಿರುವನು. ಇಷ್ಟ ರಲ್ಲಿ ಸಾರಥಿಯು, ಸುಗ್ರೀವ ಮೊದಲಾದ ನಾಲ್ಕು ಕುದುರೆಗಳಿಂದ ಹೂಡಿದ ಅದ್ಭುತವಾದ ರಥವನ್ನುತಂದು ಬಾಗಿಲಲ್ಲಿ ನಿಲ್ಲಿಸಿ, ಕೃಷ್ಣನ ಮುಂದೆ ಬದ್ಧಾಂಜಲಿ ಯಾಗಿನಿಂತು ಆವಿಚಾರವನ್ನು ತಿಳಿಸುವನು. ಒಡನೆಯೇ ಕೃಷ್ಣನು ಆ ಸಾರಥಿಯ ಕೈಯನ್ನು ಹಿಡಿದು, ಉದಯಪರ್ವತವನ್ನೇರುವ ಸೂರ್ಯನಂತೆ ಆರಥವನ್ನೇರಿ ಕುಳಿತು, ತನ್ನ ಮಂತ್ರಿಗಳಾದ ಉದ್ಧವಸಾತ್ಯಕಿ ಗಳನ್ನೂ ಅದರಲ್ಲಿ ಕುಳ್ಳಿರಿಸಿಕೊಳ್ಳುವನು ಹೀಗೆ ಕೃಷ್ಣನು ರಥಾರೂಢನಾ ಗಿ ಹೊರಡುತ್ತಿರುವುದನ್ನು ನೋಡಿ, ಅಂತಃಪುರಸ್ತ್ರೀಯರೆಲ್ಲರೂ ಅವನ ವಿರ ಹವನ್ನು ಸೈರಿಸಲಾರದೆ, ಲಜ್ಜೆಯಿಂದಲೂ, ಅನುರಾಗದಿಂದಲೂ ಕೂಡಿದ ದೃಷ್ಟಿಯಿಂದ ಅವನನ್ನೇ ಎವೆಮುಚ್ಚದೆ ನೋಡುತ್ತಿರುವರು ಆಗ ಕೃಷ್ಣನು ಮಂದಹಾಸದಿಂದ ಅವರ ಮನಸ್ಸನ್ನು ಮತ್ತಷ್ಟು ಹೆಚ್ಚಾಗಿ ಆಕರ್ಷಿಸುತ್ತ ಪ್ರಯತ್ನದಿಂದ ರಥವನ್ನು ಮುಂದೆಬಿಟ್ಟುಕೊಂಡು ಹೊರಡುವನು ಅಲ್ಲಿಂದ ಬಂದು, ಅನೇಕ ಯಾದವರೊಡನೆ ಸುಧರ್ಮೆಯೆಂಬ ಸಭೆಯನ್ನು ಪ್ರವೇಶಿಸು ವನು ಓ ಪರೀಕ್ಷಿದ್ರಾಜಾ! ಆಸಭೆಯಲ್ಲಿ ಕುಳಿತವರೊಬ್ಬರಿಗೂ, ಹಸಿವು, ಬಾಯಾರಿಕೆ, ಶೋಕ, ಮೋಹ, ಜರಾ,ಮರಣಗಳೆಂಬ ಷಡೂರ್ಮಿಗಳ ಸಂಬಂ ಧವೇ ಇಲ್ಲವೆಂದು ತಿಳಿ! ಕೃಷ್ಣನು ಆಸಭೆಯನ್ನು ಪ್ರವೇಶಿಸಿ ತನ್ನ ತೇಜಸ್ಸಿ ನಿಂದಲೇ ದಿಕ್ಕುಗಳೆಲ್ಲವನ್ನೂ ಬೆಳಗುತ್ತ, ನಕ್ಷತ್ರಗಳನಡುವೆ ಪ್ರಕಾಶಿಸುವ ಚಂದ್ರನಂತೆ ಅನೇಕ ಯಾದವವೀರರ ನಡುವೆ,ಅಗ್ರಾಸನವನ್ನೇರಿ ಕುಳ್ಳಿರುವ ನು. ಆಗ ಸಭಾಮಧ್ಯದಲ್ಲಿದ್ದ ಕೃಷ್ಣನನ್ನು ವಿದೂಷಕರು, ತಮ್ಮ ಹಾಸ್ಯ ನೈಪುಣ್ಯದಿಂದಲೂ, ನಟನರ್ತಕಿಯರು ತಮ್ಮ ನಾಟ್ಯಗಳಿಂದಲೂ, ಸಂತೋ ಷಗೊಳಿಸುವರು. ಗಾಯಕರು, ವೀಣೆ, ವೇಣು, ಮೃದಂಗ, ತಾಳ, ಶಂಖ ಮೊದಲಾದ ವಾದ್ಯಗಳೊಡನೆ ಗಾನಮಾಡುವರು. ಸೂತ, ಮಾಗಧ, ವಂದಿಗಳೆಂಬ ಸ್ತುತಿಪಾಠಕರು ಸ್ತುತಿಸುವರು. ಬ್ರಹ್ಮವಾದಿಗಳಾದ ಬ್ರಾಹ್ಮಣರು, ಆ ಕೃಷ್ಣನಮುಂದೆ, ಪುಣ್ಯಕೀರ್ತಿಯುಳ್ಳ ಪುರಾತನರಾಜರ

ಗಾಥೆಗಳನ್ನು ಕೀರ್ತಿಸಿಕೊಂಡಾಡುವರು. ಹೀಗೆ ಕೃಷ್ಣನು ತನ್ನ ನಿತ್ಯಕರ್ಮ ಗಳನ್ನು ಮುಗಿಸಿಕೊಂಡು ಒಮ್ಮೆ ಸಭಾಸೀನನಾಗಿ ಕುಳಿತಿದ್ದಾಗ, ದ್ವಾರ ಪಾಲಕರು ಮುಂದೆ ಬಂದು,ಯಾವನೋ ಹೊಸಮನುಷ್ಯನೊಬ್ಬನು ದರ್ಶ ನಾರ್ಥವಾಗಿ ಬಾಗಿಲಲ್ಲಿ ನಿರೀಕ್ಷಿಸುತ್ತಿರುವುದಾಗಿ ಕೃಷ್ಣನಿಗೆ ತಿಳಿಸಿದರು. ಅವನನ್ನು ಒಳಕ್ಕೆಕರೆತರುವಂತೆ ಕೃಷ್ಣನು ಅನುಮತಿಯನ್ನು ಕೊಟ್ಟಮೇಲೆ, ದ್ವಾರಪಾಲಕರು ಅವನನ್ನು ಸಭಾಸ್ಥಾನಕ್ಕೆ ಕರೆತಂದರು. ಆಗ ಆಪುರುಷ ನು ಕೃಷ್ಣನಿಗೆ ಕೈಮುಗಿದು, ಜರಾಸಂಧರು ದಿಗ್ವಿಜಯಕ್ಕೆ ಹೊರಟಾಗ ತನಗೆ ಶರಣಾಗತರಾಗಗಿದ್ದ ಇಪ್ಪತ್ತುಸಾವಿರಮಂದಿ ರಾಜರನ್ನು ಸೆರೆಯಲ್ಲಿ ಬಂಧಿಸಿಟ್ಟಿರುವ ಸಂಗತಿಯನ್ನೂ, ಆ ರಾಜರು ಅನುಭವಿಸುತ್ತಿರುವ ಕಷ್ಟವ ವನ್ನೂ ವಿವರಿಸಿ, ಅವರು ತನ್ನ ಮೂಲಕವಾಗಿ ಕೃಷ್ಣನಿಗೆ ಕಳುಹಿಸಿರುವ ಸಂದೇಶವನ್ನು ಹೀಗೆಂದು ತಿಳಿಸುವನು. “ಕೃಷ್ಣಾ ! ಕೃಷ್ಣಾ ! ಅಪ್ರಮೇ ಯಪ್ರಭಾವಾ ! ನೀನು ಮರೆಹೊಕ್ಕವರನ್ನು ಕೈಬಿಡದೆ ಅವರ ಭಯವನ್ನು ನೀಗಿಸತಕ್ಕವನು. ಸಂಸಾರಭಯವೆಂಬುದು ನಮ್ಮನ್ನು ಅನವರತವೂ ಬಾಧಿಸುತಿದ್ದರೂ, ಆ ಭಯವನ್ನು ತಪ್ಪಿಸಿಕೊಳ್ಳುವುದಕ್ಕೆ ದಾರಿತೋರದೆ, ಅದರಲ್ಲಿಯೇ ತೊಳಲುತ್ತಿದ್ದೆವು. ಈಗ ನಾವೆಲ್ಲರೂ ನಿನ್ನನ್ನೇ ದಿಕ್ಕಾಗಿ ನಂಬಿರುವೆವು ಲೋಕದಲ್ಲಿ ಯಾವಚೇತನರು, ವಿಷಯಾಸಕ್ತಿಯಿಂದ ಕಾಮ್ಯ ಕರ್ಮಗಳನ್ನು ನಡೆಸುತ್ತ, ನಿನ್ನಿಂದ ಪಾಂಚರಾತ್ರ, ಗೀತೆ, ಮುಂತಾದುವುಗಳ ಮೂಲಕವಾಗಿ ಉಪದೇಶಿಸಲ್ಪಟ್ಟ, ನಿನ್ನ ಆರಾಧನರೂಪವಾದ ಸತ್ಕರ್ಮಗಳಲ್ಲಿ ಯಾಗಲಿ, ನಿನ್ನಲ್ಲಿ ಶರಣಾಗತಿ ಮೊದಲಾದ ಸ್ವಧರ್ಮದಲ್ಲಿಯಾಗಲಿ ಎಚ್ಚರ ತಪ್ಪಿರುವರೋ, ಅವರನ್ನು ಜೀವಿತಾಶೆಯೆಂಬುದು ಬಿಟ್ಟುಹೋಗ ಲಾರದು ಹೀಗೆ ಅವರನ್ನು ಎಡೆಬಿಡದೆ ಅನುವರ್ತಿಸಿ ಬರತಕ್ಕ ಜೀವಿ ತಾಶೆಯನ್ನು, ಕಾಲಸ್ವರೂಪದಿಂದ ಅಕಸ್ಮಾತ್ತಾಗಿ ಬಂದು ಮುರಿಯತಕ್ಕ ನಿನಗೆ ನಮಸ್ಕಾರವು ! ಓ ಜಗದೀಶ್ವರಾ ! ದುಷ್ಟನಿಗ್ರಹ ಶಿಷ್ಟಪರಿಪಾಲ ನಾರ್ಥವಾಗಿಯೇ ನೀನು ನಿನ್ನ ಅಂಶಭೂತನಾದ ಬಲರಾಮನೊಡನೆ ಈ ಲೋಕದಲ್ಲಿ ಅವತರಿಸಿರುವೆ. ಹೀಗೆ ನೀನು ಲೋಕಕ್ಷೇಮಕ್ಕಾಗಿಯೇ ಅವತರಿಸಿ, ಸರ್ವಭೂತದಯಾಪರನಾಗಿದ್ದರೂ, ಕೆಲವರು ನಿನ್ನ ನಿಗ್ರಹಕ್ಕೆ

ಪಾತ್ರರಾಗಿ ದುಃಖಿಸುವುದೇಕೆಂದರೆ, ಅವರು ನಿನ್ನ ಆಜ್ಞೆಯನ್ನು ಮೀರಿ ನಡೆದುದರಿಂದಲೋ, ಅಥವಾ ತಮ್ಮ ಪಾಪಫಲದಿಂದಲೋ ಹಾಗೆ ದುಃಖ ಭಾಗಿಗಳಾಗಿರಬೇಕು ಇದುಹೊರತು ಬೇರೆ ಕಾರಣವೇನೂ ನಮಗೆತೋರುವು ದಿಲ್ಲ ದೇವಾ! ಈಗ ನಾವು ಜರಾಸಂಧನ ನಿರ್ಬಂಧದಲ್ಲಿ ಸಿಕ್ಕಿ ಆ ದುಃಖನಿವೃತ್ತಿಗಾಗಿಮಾತ್ರವೇ ನಿನ್ನಲ್ಲಿ ಮರಹೊಕ್ಕಿರುವೆವೆಂದು ತಿಳಿಯ ಬಾರದು. ನಾವೂ ಹುಟ್ಟಿದುದುಮೊದಲು ಅಂತಹ ಕಷ್ಟಗಳಲ್ಲಿಯೇ ಸಿಕ್ಕಿ ನರಳುತ್ತಿರುವೆವು ನಮ್ಮ ರಾಜ್ಯಸುಖವೆಂಬುದು ಕೇವಲ ಸ್ವಪ್ನಪ್ರಾ ಯವಾಗಿ ಅಸ್ಥಿರವೆನಿಸಿರುವುದು ಮತ್ತು ಇದು ಕರ್ಮಾಧೀನವಾಗಿ ಬಂ ದುದು. ಈ ರಾಜ್ಯಾಧಿಕಾರವಿರುವವರೆಗೂ ಶತ್ರುಗಳ ಭಯವು ತಪ್ಪಿದುದಲ್ಲ. ಈ ನಮ್ಮ ರಾಜಶರೀರವೆಂಬುದು ಶವಪ್ರಾಯವಾಗಿ ಆತ್ಮಕ್ಕೆ ಕೇವಲ ಭಾರಭೂತವಲ್ಲದೆ ಬೇರೆಯಲ್ಲ. ಆದುದರಿಂದ ಓ ಈಶಾ! ಈಗ ನಾವು ನಿಷ್ಕಾಮರಾದ ಯೋಗಿಗಳಿಗೂ ನಿನ್ನ ಅನುಗ್ರಹಬಲದಿಂದಲೇ ಲಭಿಸಬಹು ದಾದ, ನಿನ್ನ ಧ್ಯಾನರೂಪವಾದ ಸುಖವನ್ನು ನಿರಾಕರಿಸಿ, ನಿನ್ನ ಮಾಯೆ ಯಿಂದ ಮೋಹಿತರಾಗಿ, ಈ ಲೋಕದಲ್ಲಿ ಅನೇಕಕಷ್ಟಕ್ಕೆ ಸಿಕ್ಕಿ ತೊಳಲು ತ್ತಿರುವೆವು ಆದುದರಿಂದ ಆಶ್ರಿತರ ದುಃಖವನ್ನು ನೀಗಿಸತಕ್ಕ ಓ ಕೃಷ್ಣಾ! ಹೀಗೆ ಮೊದಲಿಂದಲೂ ದುಃಖಭಾಗಿಗಳಾಗಿದ್ದು, ಈಗ ಜರಾಸಂಧನ ಸೆರೆ ಯಲ್ಲಿ ಕಟ್ಟುಬಿದ್ದು ವಿಶೇಷದುಃಖಕ್ಕೊಳಗಾಗಿರುವ ನಮ್ಮನ್ನು ಈ ನಿರ್ಬಂಧ ದಿಂದಲೂ, ಕರ್ಮಬಂಧದಿಂದಲೂ ಬಿಡಿಸಿ ಉದ್ಧರಿಸಬೇಕು.

ಆ ಜರಾಸಂಧನು ತಾನೊಬ್ಬನೇ ಹತ್ತು ಸಾವಿರ ಆನೆಯಬಲ ವುಳ್ಳವನಾಗಿ, ಸಿಂಹವು ಕುರಿಗಳ ಹಿಂಡನ್ನು ಹಿಡಿಯುವಂತೆ ನಮ್ಮೆಲ್ಲರನ್ನೂ ಸಾಗಿಸಿತಂದು, ತನ್ನ ಅರಮನೆಯಲ್ಲಿ ನಿರ್ಬಂಧಿಸಿಟ್ಟಿರುವನು. ನೀನೂ ಆತನ ಪರಾಕ್ರಮವನ್ನು ಕಾಣದವನಲ್ಲ. ಇದಕ್ಕೆ ಹಿಂದೆ ಹದಿನೇಳಾವರ್ತಿ ಆವನು ನಿನ್ನಿಂದ ಯುದ್ಧದಲ್ಲಿ ಪರಾಜಿತನಾಗಿ ಹೋಗಿದ್ದರೂ, ಕೊನೆಗೆ ಹದಿನೆಂಟನೆಯ ಯುದ್ಧದಲ್ಲಿ ನಿನ್ನನ್ನು ಜಯಿಸಿಬಿಟ್ಟೆನೆಂಬ ಮದದಿಂದ, ನಿನ್ನಕಡೆಯವರಾದ ನಮ್ಮನ್ನು ಬಹಳವಾಗಿ ಗೋಳಾಡಿಸುತ್ತಿರುವನು. ಆದರೆ ಕೃಷ್ಣಾ! ನಿನ್ನನ್ನು ನಿಗ್ರಹಿಸತಕ್ಕ ಶಕ್ತಿಯು ಬೇರೊಬ್ಬರಿಗಿಲ್ಲವಾ

ದರೂ,ಮನುಷ್ಯಲೀಲೆಯನ್ನು ನಟಿಸುವುದಕ್ಕಾಗಿ,ನೀನು ಅವನಿಂದ ಪರಾಜಿತ ನಾದಂತೆ ಓಡಿ ಹೋದುದನ್ನು ನೋಡಿ, ಮೂಢನಾದ ಜರಾಸಂಧನು ತಾನೇ ಜಯಿಸಿದೆನೆಂಬ ಗರ್ವದಿಂದ ಬೀಗುತ್ತಿರುವನು ಅವನನ್ನು ನಿಗ್ರಹಿಸಿ, ನಮ್ಮ ನ್ನುದ್ಧರಿಸಬೇಕು" ಎಂದು ಆ ರಾಜದೂತನು ಕೃಷ್ಣನಿಗೆ ತಮ್ಮರಾಜರು ಹೇಳಿ ಕಳುಹಿಸಿದ ಸಂದೇಶವನ್ನು ತಿಳಿಸಿ, ತನ್ನ ಮಾತಿನಿಂದ ತಿರುಗಿ ಕೃಷ್ಣ ನನ್ನು ಕುರಿತು. "ಓ ಪ್ರಭೂ! ಜರಾಸಂಧನ ನಿರ್ಬಂಧದಲ್ಲಿರುವ ಆ ರಾಜ ರೆಲ್ಲರೂ ನಿನ್ನ ಪಾದಮೂಲವನ್ನೇ ತಮಗೆ ದಿಕ್ಕೆಂದು ನಂಬಿ, ನಿನ್ನ ದರ್ಶನ ಕ್ಕಾಗಿ ತವಕಿಸುತ್ತಿರುವರು.ನೀನು ಅವರ ಕಷ್ಟವನ್ನು ನೀಗಿಸಿ ಕ್ಷೇಮವನ್ನುಂ ಟುಮಾಡಬೇಕು" ಎಂದನು. ರಾಜದೂತನು ಈ ಮಾತನ್ನು ಹೇಳಿ ಮುಗಿಸು ವಷ್ಟರಲ್ಲಿ, ದಿವ್ಯತೇಜೋವಿಶಿಷ್ಟನಾದ ನಾರದಮಹರ್ಷಿಯು, ಪಿಂಗಳವ ರ್ಣವಾದ ತನ್ನ ಜಟಾಭಾರದಿಂದ ಸೂರ್ಯನೇ ಉದಿಸಿಬಂದಂತೆ, ಆ ಸಭೆಗೆ ಪ್ರವೇಶಿಸಿದನು. ಆ ಮಹರ್ಷಿಯು ಸಭಾಪ್ರವೇಶವನ್ನು ಮಾಡು ವಾಗ, ತನಗೆ ಪ್ರಿಯನಾದ ಕೃಷ್ಣನ ಜನ್ಮಗಳನ್ನೂ, ಕರ್ಮಗಳನ್ನೂ ಸ್ತುತಿ ಸುತ್ತ, ತನ್ನ ಗಾನಾಮೃತದಿಂದ ಕೃಷ್ಣನನ್ನೂ, ಆ ಸಭಾಜನರನ್ನೂ, ಇತರ ಸಮಸ್ತಜನಗಳನ್ನೂ ಆನಂದಗೊಳಿಸುತಿದ್ದನು ಸಮಸ್ತ ಲೋಕಪಾಲಕ ರಿಗೂ ಪ್ರಭುವಾದ ಕೃಷ್ಣನು, ನಾರದನನ್ನು ಕಂಡೊಡನೆ, ಅಲ್ಲಿದ್ದ ಸಮಸ್ತಪರಿವಾರಗಳೊಡನೆ ಇದಿರೆದ್ದು, ತಲೆಬಗ್ಗಿ ನಮಸ್ಕರಿಸಿ, ಯಥೋ ಚಿತವಾದ ಆಸನವನ್ನು ಕೊಟ್ಟು ಸತ್ಕರಿಸಿ, ಕುಳ್ಳಿರಿಸಿದಮೇಲೆ, ಮೃದುಮ ಧುರ!ವಾಕ್ಯದಿಂದ ಹೀಗೆಂದು ಪ್ರಶ್ನೆಮಾಡುವನು. "ಓ ಮುನೀಂದ್ರಾ! ತ್ರೈಲೋಕ್ಯವೂ ನಿರ್ಭಯವಾಗಿ ನಿಮ್ಮಿಂದಿರುವುದಷ್ಟೆ? ತಾವು ಲೋಕಸಂಚಾರವನ್ನು ಮಾಡುತ್ತಿರುವುದು ನಮಗೆ ಪರಮಲಾಭವು. ಏಕೆಂ ದರೆ, ನಿಮ್ಮಿಂದ ಆಗಾಗ ನಮಗೆ ಲೋಕವೃತ್ತಾಂತವೆಲ್ಲವೂ ತಿಳಿದು ಬರು ತ್ತಿರುವುದು. ಈಶ್ವರನಿರ್ಮಿತವಾದ ಎಲ್ಲಾ ಲೋಕಗಳಲ್ಲಿಯೂ, ನಿಮಗೆ ತಿಳಿಯದ ವೃತ್ತಾಂತವಿಲ್ಲ! ಆದುದರಿಂದ ಈಗ ಪಾಂಡವರು ಏನು ಮಾಡು ತ್ತಿರುವರೆಂಬುದನ್ನು ತಿಳಿಸಬೇಕು." ಎಂದನು. ಅದಕ್ಕಾನಾರದನು ಮುಗು ಳ್ನಗೆಯಿಂದ ಕೃಷ್ಣನನ್ನು ಕುರಿತು. "ಕೃಷ್ಣಾ! ಇದೀಗ ಚೆನ್ನಾಯಿತು?

ನೀನು ಪಾಂಡವರ ವೃತ್ತಾಂತವನ್ನು ನನ್ನಿಂದಲೇ ಕೇಳಿ ತಿಳಿಯಬೇಕಲ್ಲವೆ? ಸಕಲಭೂತಗಳಲ್ಲಿಯೂ ಅಂತರಾತ್ಮನಾಗಿ, ಸರ್ವಜ್ಞತ್ವಾದಿಗುಣಗಳಿಂದ ಕೂಡಿದ ನೀನು, ಪ್ರಪಂಚವ್ಯಾಪಾರವನ್ನು ಬೇರೊಬ್ಬರಿಂದ ಕೇಳಿ ತಿಳಿಯ ಬೇಕೆ? ಸೃಷ್ಟಿಕರ್ತನಾದ ಬ್ರಹ್ಮನನ್ನೂ ನಿಜಮಾಯೆಯಿಂದ ಮೋಹ ಗೊಳಿಸತಕ್ಕ ನೀನು, ಲೋಕವ್ಯಾಪಾರವನ್ನೇ ತಿಳಿಯದವನಂತೆ ನನ್ನನ್ನು ಪ್ರಶ್ನೆಮಾಡುವುದೂಕೂಡ, ನಮ್ಮಂತವರನ್ನು ಮೋಹಗೊಳಿಸತಕ್ಕ ಒಂದು ಮಾಯೆಯೆಂದೆಣಿಸಬೇಕಾಗಿದೆ. ಬೂದಿಮುಚ್ಚಿದ ಕೆಂಡದಂತೆ ನಿನ್ನ ಶಕ್ತಿಯ ನ್ನು ಹೊರಕ್ಕೆ ಕಾಣಿಸದೆ, ನಮ್ಮಂತವರನ್ನು ಮೋಹಗೊಳಿಸುವುದಕ್ಕಾಗಿ ಈ ಪ್ರಶ್ನೆಗಳನ್ನು ಕೇಳುವೆ. ಮಾಯಾನಾಟಕಸೂತ್ರಧಾರಿಯಾದ ನಿನ್ನ ವಿಷಯ ದಲ್ಲಿ ಇದೇನೂ ನನಗೆ ಆಶ್ಚರ್ಯಕರವಾಗಿ ತೋರುವುದಿಲ್ಲ! ನಿನ್ನಮಾಯೆಯು ಎಂತವರಿಗೂ ದುರತಿಕ್ರಮವಾದುದು ನೀನು ನಿನ್ನಮಾಯೆಯಿಂದಲೇ ಈ ಪ್ರಪಂಚದ ಸೃಷ್ಟಿಸ್ಥಿತಿ ಸಂಹಾರಗಳೆಲ್ಲವನ್ನೂ ನಡೆಸತಕ್ಕವನ್ನು. ನಿನ್ನ ಸಂಕಲ್ಪವನ್ನು ಲೋಕದಲ್ಲಿ ಬೇರೆ ಯಾವನೂ ಹೀಗೆಂದು ತಿಳಿಯಲಾರನು? ಹೀಗೆ ಯಾರಿಗೂ ಅಗೋಚರವಾದ ಮನಸ್ಸಂಕಲ್ಪವುಳ್ಳವನಾಗಿಯೂ, ಸರ್ವವಿಲಕ್ಷಣಸ್ವರೂಪನಾಗಿಯೂ ಇರುವ ನಿನ್ನನ್ನು, ಇದೋ! ಈ ನಮ ಸ್ಕಾರವೊಂದರಿಂದಹೊರತು ನಾನು ಬೇರೆ ಯಾವ ಉಪಾಯದಿಂದಲೂ ತೃಪ್ತಿಪಡಿಸಲಾರೆನು ಸಂಸಾರದಲ್ಲಿ ಬಿದ್ದು, ಕೇವಲದುಃಖಪ್ರಚುರವಾದ ಮನುಷ್ಯಶರೀರದಿಂದ ಬಿಡುಗಡೆಹೊಂದುವುದಕ್ಕೆ ತಕ್ಕ ಉಪಾಯವನ್ನು ಕಾಣದೆ ಕಳವಳಿಸುತ್ತಿರುವ ಜೀವಿಗಳಿಗೆ,ನಿನ್ನ ಕೀರ್ತಿಯೇ ಆ ಅಜ್ಞಾನಾಂಧ ಕಾರವನ್ನು ನೀಗಿಸತಕ್ಕ ದೀಪದಂತಿರುವುದು. ಹೀಗೆ ಲೀಲಾರ್ಥವಾಗಿ ಕೈಕೊಂಡ ಅವತಾರಗಳಿಂದ ಜ್ಞಾನಪ್ರಕಾಶವನ್ನುಂಟುಮಾಡತಕ್ಕ ನಿನ್ನ ನ್ನು ನಾನು ಶರಣುಹೊಂದಿರುವೆನು ನಮ್ಮಂತಹ ಚೇತನರೆಲ್ಲರಿಗೂ ನೀನೇ ಸಕಲವಿಧದಲ್ಲಿಯೂ ಜ್ಞಾನೋಪದೇಶಕನೆಂಬುದನ್ನು ನಾನು ಬಲ್ಲವ ನಾಗಿದ್ದರೂ, ಈಗ ನೀನು ಮನುಷ್ಯಲೀಲೆಯನ್ನನುಕರಿಸುತ್ತ, ಏನೂ ತಿಳಿ ಯದವನಂತೆ ನನ್ನನ್ನು ಪ್ರಶ್ನೆಮಾಡಿದಮೇಲೆ, ನಾನು, ನನಗೆ ತಿಳಿದವಿಚಾರ ವನ್ನು ನಿನ್ನಮುಂದೆ ವಿಜ್ಞಾಪಿಸದೆ ತೀರದು! ಹೇಳುವೆನು ಕೇಳು! ನಿನ್ನ

ಸೋದರತ್ತೆಯ ಮಗನಾಗಿಯೂ, ನಿನಗೆ ಭಕ್ತನಾಗಿಯೂ ಇರುವ ಧರ್ಮ ರಾಜನು, ಬ್ರಹ್ಮಲೋಕಪ್ರಾಪ್ತಿಗಾಗಿ ರಾಜಸೂಯವೆಂಬ ಯಾಗ ದಿಂದ ನಿನ್ನನ್ನೇ ಆರಾಧಿಸತೊಡಗಿರುವನು ನೀನು ಅದನ್ನನುಮೋದಿಸಬೇಕು. ಪ್ರಖ್ಯಾತರಾದ ಅನೇಕರಾಜಾಧಿರಾಜರು ಅದನ್ನು ನೋಡುವುದಕ್ಕಾಗಿ ಬಂದು ಸೇರುವರು. ನೀನೂ ಅಲ್ಲಿಗೆ ಬಂದು, ನಿನ್ನ ಸಾನ್ನಿಧ್ಯದಿಂದ ಆ ಯಾಗ ವನ್ನು ಸಫಲಗೊಳಿಸಬೇಕು ಕೇವಲಪತಿತರಾಗಿದ್ದವರೂಕೂಡ, ಕಾಮ ಕ್ರೋಧಾದಿಗಳಿಂದಲಾದರೂ, ನಿನ್ನನ್ನು ಸ್ಮರಿಸಿದರೆ, ಅಥವಾ ನಿನ್ನ ನಾಮ ವನ್ನುಚ್ಚರಿಸಿದರೆ, ಪಾಪವಿಮುಕ್ತರಾಗಿ ದೇಹಾವಸಾನದಲ್ಲಿ ನಿನ್ನನ್ನು ಸೇರು ವರು. ಹೀಗಿರುವಾಗ, ಬ್ರಹ್ಮಸ್ವರೂಪನಾದ ನಿನ್ನನ್ನು ಪ್ರತ್ಯಕ್ಷವಾಗಿ ನೋಡುವಂತಾದರೆ ಅವರ ಭಾಗ್ಯವನ್ನು ಹೇಳಬೇಕಾದುದೇನು? ಓ! ಭುವನ ಮಂಗಳಾ! ನಿನ್ನ ಕೀರ್ತಿಯು ಸ್ವರ್ಗ ಮರ್ತ್ಯ ಪಾತಾಳಗಳೆಂಬ ಮೂರು ಲೋಕಗಳಿಗೂ ಮೇಲುಕಟ್ಟಿನಂತೆ ಭೂಷಣವಾಗಿರುವುದು. ನಿನ್ನ ಪಾದ ಜಲವು ಆ ಮೂರುಲೋಕಗಳಲ್ಲಿಯೂ ಕ್ರಮವಾಗಿ ಮಂದಾಕಿನಿಯೆಂದೂ, ಗಂಗೆಯೆಂದೂ, ಭೋಗವತಿಯೆಂದೂ ಹೆಸರುಗೊಂಡು, ಆ ತ್ರೈಲೋಕ್ಯ ವನ್ನೂ ಪಾವನಮಾಡುತ್ತಿರುವುದು. ಆದುದರಿಂದ ನೀನು ಆ ಧರ್ಮರಾಜನ ಯಾಗಸಭೆಗೆ ಬಂದು ಅವನನ್ನು ಕೃತಾರ್ಥನನ್ನಾಗಿ ಮಾಡಬೇಕು” ಎಂದನು.

ಹೀಗೆ ನಾರದನು ಧರ್ಮರಾಜನ ರಾಜಸೂಯಾಗಕ್ಕಾಗಿ ಹೊರಡಬೇ ಕೆಂದು ಕೃಷ್ಣನನ್ನು ನಿರ್ಬಂಧಿಸುತ್ತಿರುವಷ್ಟರಲ್ಲಿ, ಅಲ್ಲಿದ್ದ ಕೆಲವು ಯಾದ ವವೀರರು, “ಈಗ ಜರಾಸಂಧನಮೇಲೆ ಯುದ್ಧಕ್ಕೆ ಹೊರಡಬೇಕಾ ದುದೇ ನಮಗೆ ಪ್ರಧಾನಕಾರ್ಯವೇಹೊರತು, ಧರ್ಮರಾಜನ ರಾಜಸೂಯ ಯಾಗಕ್ಕೆ ಹೋಗುವುದು ಕಾಲೋಚಿತವಲ್ಲ” ವೆಂದು ವೀರವಾದಗಳನ್ನು ಮಾಡುತ್ತ ಗುಸುಗುಟ್ಟುತಿದ್ದರು. ಅದನ್ನು ನೋಡಿ ಕೃಷ್ಣನು, ತನ್ನ ಮಂತ್ರಿ ವರ್ಯನಾದ ಉದ್ಧವನನ್ನು ಕುರಿತು ಮೃದುವಾಕ್ಯದಿಂದ “ಉದ್ಧವಾ! ಈ ವಿಚಾರದಲ್ಲಿ ನಿನ್ನ ಅಭಿಪ್ರಾಯವೇನು ಹೇಳು! ನೀನು ನಮಗೆ ನೇತ್ರಪ್ರಾ ಯನು. ಕಾಲೋಚಿತವಾದ ಮಂತ್ರಾಲೋಚನೆಯನ್ನು ಬಲ್ಲವನು. ಮತ್ತು ನಮಗೆ ಸರ್ವವಿಧದಲ್ಲಿಯೂಹಿತವನ್ನು ಯೋಚಿಸತಕ್ಕವನು. ಆದುದರಿಂದ ನಿನ್ನ

ಅಭಿಪ್ರಾಯದಂತೆ ನಡೆಯುವುದಕ್ಕೆ ನಾನು ಸಿದ್ಧನಾಗಿರುವೆನು. ಈಗ ನಾವು ಮೊದಲು ಜರಾಸಂಧನಮೇಲೆ ಯುದ್ಧಕ್ಕೆ ಹೊರಡುವುದು ಯುಕ್ತವೆ? ಅಥವಾ ನಾರದಾಜ್ಞೆಯಂತೆ ಯುಧಿಷ್ಠಿರನ ರಾಜಸೂಯಯಾಗಕ್ಕೆ ಹೋಗಬೇಕಾದುದು ಯುಕ್ತವೆ? ನಿನ್ನ ಉದ್ದೇಶವನ್ನು ತಿಳಿಸು" ಎಂದನು. ಕೃಷ್ಣನು ತಾನೇ ಸರ್ವಜ್ಞನಾಗಿದ್ದರೂ, ಏನೂ ತಿಳಿಯದವನಂತೆ ತನ್ನನ್ನು ಪ್ರಶ್ನೆ ಮಾಡಲು, ಉದ್ಧವನು ತನ್ನ ಪ್ರಭುವಾದ ಕೃಷ್ಣನ ಆಜ್ಞೆಯನ್ನು ಶಿರಸಾವಹಿಸಬೇಕಾದುದು ತನ್ನ ಕರ್ತವ್ಯವೆಂದು ತಿಳಿದು ಹೀಗೆಂದು ಹೇಳುವನು. ಇದು ಎಪ್ಪತ್ತನೆಯ ಅಧ್ಯಾಯವು.

---

### ಧರ್ಮರಾಜನ ರಾಜಸೂಯಕ್ಕಾಗಿ ಕೃಷ್ಣನ ಪ್ರಯಾಣವು.

ಉದ್ಧವನು ಇಂಗಿತಜ್ಞನಾದುದರಿಂದ, ಕೃಷ್ಣನ ಮನೋಭಿಪ್ರಾಯವನ್ನೂ, ಸಭಿಕರು ಜರಾಸಂಧ ವಧಾರ್ಥವಾಗಿಯೇ ಹೋಗಬೇಕೆಂದು ಹೇಳಿದುದನ್ನೂ, ಪರ್ಯಾಲೋಚಿಸಿ, ಕೃಷ್ಣನ ಅಭಿಪ್ರಾಯವನ್ನೇ ಸ್ವೀಕರಿಸುವಂತೆ ಹೀಗೆಂದು ಹೇಳುವನು. "ಓ ಪ್ರಭೂ! ಈಗ ನೀನು ನಿನ್ನ ಅತ್ತೆಯ ಮಗನಾದ ಧರ್ಮರಾಜನ ರಾಜಸೂಯಕ್ಕಾಗಿ ಹೋಗಿ, ಅವನಿಗೆ ತಕ್ಕಸಹಾಯವನ್ನು ಮಾಡಬೇಕಾದುದು ನಿನಗೆ ಅವಶ್ಯಕರ್ತವ್ಯವೆ? ಅದರಂತೆಯೇ ಇತ್ತಲಾಗಿ ನಿನ್ನಲ್ಲಿ ಶರಣಾರ್ಥಿಗಳಾದ ರಾಜರನ್ನು ರಕ್ಷಿಸುವುದಕ್ಕಾಗಿ ಜರಾಸಂಧನಮೇಲೆ ದಂಡೆತ್ತಬೇಕಾದುದೂ ಅವಶ್ಯವೆ! ಈ ಎರಡುಕಾರ್ಯಗಳಲ್ಲಿ ಯಾವುದನ್ನೂ ನಾವು ಉಪೇಕ್ಷಿಸುವುದಕ್ಕಿಲ್ಲ! ಆದರೆ ಈಗ ಯುಧಿಷ್ಠಿರನು, ಮೊದಲು ದಿಗ್ವಿಜಯವನ್ನು ಮಾಡಿದಮೇಲೆಯೇ ರಾಜಸೂಯವನ್ನು ನಡೆಸಬೇಕಾಗಿರುವುದು. ಆದುದರಿಂದ ಆ ದಿಗ್ವಿಜಯದಲ್ಲಿ ನೀನು ಅವನಿಗೆ ಸಹಾಯಮಾಡುವ ನೆವದಿಂದಲೇ ಜರಾಸಂಧನನ್ನು ನಿಗ್ರಹಿಸಿ, ಅವನಲ್ಲಿ ಸೆರೆಸಿಕ್ಕಿರುವ ರಾಜರನ್ನು ಬಿಡಿಸುವ ಸಂಭವವು ಘಟಿಸಿದರೂ ಘಟಿಸಬಹುದು. ಆದುದರಿಂದ ನಾವು ಮೊದಲು ಧರ್ಮರಾಜನ ಸಹಾಯಕ್ಕಾಗಿ ಇಂದ್ರಪ್ರಸ್ಥಕ್ಕೆ ಹೋಗುವುದೇ ಉಚಿತವೆಂದು ತೋರುವುದು. ಅಲ್ಲಿ ಹೋಗಿ ಧರ್ಮರಾಜನ ಅನುಮತಿಯನ್ನು ಪಡೆದು, ಅವನಿಗಾಗಿಯೇ ಜರಾಸಂಧನನ್ನು ನಿಗ್ರಹಿಸಬ

ಹುದಲ್ಲವೆ? ಹೀಗೆ ನಾವು ಈಗ ಇಂದ್ರಪ್ರಸ್ಥಕ್ಕೆ ಹೋಗುವುದರಿಂದ, ನಮ್ಮ ಎರಡುಕಾರ್ಯಗಳಿಗೂ ಅನುಕೂಲವಾಗುವುದು. ಕೃಷ್ಣಾ! ಈ ನೆವದಿಂದಲೇ ನೀನು ನಿನ್ನಲ್ಲಿ ಶರಣಾಗತರಾದ ರಾಜರನ್ನು ರಕ್ಷಿಸಿ, ಅಪಾರಕೀರ್ತಿಗೆ ಪಾತ್ರ ನಾಗಬಹುದು. ನಮ್ಮ ಯಾದವರೆಲ್ಲರೂ ಹಿಂದುಮುಂದುಯೋಚಿಸದೆ ಆ ತುರದಿಂದ ಜರಾಸಂಧನಮೇಲೆ ದಂಡೆತ್ತಿಹೊರಡಬೇಕೆಂದು ಹೇಳುತ್ತಿರುವ ರೇಹೊರತು, ಅವನ ಬಲವೆಂತದೆಂಬುದನ್ನು ಯೋಚಿಸಿದಹಾಗೆ ತೋರಲಿಲ್ಲ. ಅವನು ಹತ್ತುಸಾವಿರ ಆನೆಗಳ ಬಲವುಳ್ಳವನು. ಅವನನ್ನು ನಿಗ್ರಹಿಸುವುದು ಸುಲಭಸಾಧ್ಯವಲ್ಲ. ಮಹಾಬಲಾಢ್ಯನಾದ ಭೀಮಸೇನನೊಬ್ಬನು ಹೊರತು ಬೇರೊಬ್ಬರೂ ಅವನಿಗಿದಿರಾಗಿ ನಿಲ್ಲುವವರಿಲ್ಲ. ಅವನನ್ನು ದ್ವಂದ್ವಯುದ್ಧ ದಿಂದಲ್ಲದೆ ಬೇರೆವಿಧದಿಂದ ಜಯಿಸುವುದೂ ಸಾಧ್ಯವಿಲ್ಲ ನೂರಾರು ಅಕ್ಷೋ ಹಿಣೀಸೈನ್ಯಗಳನ್ನು ಸೇರಿಸಿಕೊಂಡು ಹೋದರೂ ಅವನನ್ನು ಜಯಿಸಲಾರೆವು. ಅಪರಿಮಿತವಾದ ಸೇನಾಬಲವುಳ್ಳ ಆತನು, ತಾನೊಬ್ಬನೇ ಭೀಮನೊಡನೆ ದ್ವಂದ್ವಯುದ್ಧಕ್ಕೆ ನಿಲ್ಲುವನೆ? ಎಂದರೆ, ಅದಕ್ಕೊಂದುಪಾಯವನ್ನೂ ಹೇಳುವೆನು ಕೇಳು. ಆ ಜರಾಸಂಧನು ಬ್ರಾಹ್ಮಣಭಕ್ತಿಯುಳ್ಳವನು. ಬ್ರಾಹ್ಮಣರು ತನ್ನಲ್ಲಿ ಅರ್ಥಿಗಳಾಗಿ ಬಂದು ಯಾಚಿಸಿದಪಕ್ಷದಲ್ಲಿ, ಆತನು ಎಂದಿಗೂ ತಿರಸ್ಕರಿಸಲಾರನು. ಭೀಮನು ಬ್ರಾಹ್ಮಣವೇಷದಿಂದ ಹೋಗಿ ಅವನಲ್ಲಿ ಯುದ್ಧಭಿಕ್ಷೆಯನ್ನು ಯಾಚಿಸಿದಪಕ್ಷದಲ್ಲಿ, ಅವನು ನಿಸ್ಸಂದೇಹವಾಗಿ ಸಮ್ಮತಿಸುವನು.ಆಗ ಭೀಮನ ಕೈಯಿಂದ ಜರಾಸಂಧನಿಗೆ ಮರಣವೇ ನಿಶ್ಚಯವು ನಿನ್ನ ಕಣ್ಣೆದಿರಾಗಿಯೇ ಭೀಮನು ಆತನನ್ನು ಕೊಲ್ಲುವನು. ಕೃಷ್ಣಾ! ನೀನಾದರೋ ಈ ಜಗತ್ತಿನ ಉತ್ಪತ್ತಿಲಯಗಳೆರಡಕ್ಕೂ ಕಾರಣನು. ಸರ್ವನಿಯಾಮಕನು. ನೀನು ಪ್ರಾಕೃತರೂಪವಿಲ್ಲದವನು. ನೀನೇ ಕಾಲಶರೀರಕನಾಗಿ ಈ ಪ್ರಪಂಚದ ಸೃಷ್ಟಿಸ್ಥಿತಿ ಲಯಗಳನ್ನು ನಡೆಸುವೆ ಬ್ರಹ್ಮರುದ್ರರಿಬ್ಬರೂ ಸೃಷ್ಟಿಸಂಹಾರಗಳಿಗೆ ಕಾರಣರೆಂಬುದು ನಿಮಿತ್ತಮಾತ್ರವೇ ಹೊರತು, ನಿನ್ನ ಅಂಶದಿಂದಲೇ ಅವರು ಆಯಾಕಾರ್ಯಗಳನ್ನು ನಡೆಸಬಲ್ಲರು ಹಿಂದೆ ನೀನು ಶಂಖಚೂಡನನ್ನು ಕೊಂದು,ಅವನ ಸೆರೆಯಲ್ಲಿ ಸಿಕ್ಕಿದ ಗೋಪಿಯರನ್ನು ಬಿಡಿಸಿದೆ! ಅದಕ್ಕೆ ಹಿಂದಿನ ಅವತಾರಗಳಲ್ಲಿಯೂ, ಒಮ್ಮೆ ಮೊಸಳೆಯ

ಬಾಯಿಗೆ ಸಿಕ್ಕಿಬಿದ್ದ ಗಜೇಂದ್ರನನ್ನು ರಕ್ಷಿಸಿದೆ ಮತ್ತೊಮ್ಮೆ ರಾವಣನ ಸೆರೆಯಲ್ಲಿ ಸಿಕ್ಕಿದ ಸೀತಾದೇವಿಯನ್ನು ಸೆರೆಯಿಂದ ಬಿಡಿಸಿದೆ. ಈಗಿನ ಅವತಾರ ದಲ್ಲಿಯೂ ನೀನು ಹುಟ್ಟಿದೊಡನೆಯೇ, ಕಂಸನ ಸೆರೆಯಲ್ಲಿ ಸಿಕ್ಕಿದ್ದ ನಿನ್ನ ತಾಯಿತಂದೆಗಳನ್ನು ಬಿಡಿಸಿದೆ ಹೀಗೆ ಆಶ್ರಿತಬಂಧವಿಮೋಚನರೂಪವಾ ದ ನಿನ್ನ ಕೀರ್ತಿಯು, ಈಗಲೂ ಅಲ್ಲಲ್ಲಿ ಕೊಂಡಾಡಲ್ಪಡುವಂತೆ. ಪ್ರಕೃತದ ಲ್ಲಿ ಜರಾಸಂಧನ ಸೆರೆಯಿಂದ ವಿಮುಕ್ತರಾಗುವ ರಾಜರ ಪತ್ನಿಯರೂಕೂಡ ಮನೆಮನೆಗಳಲ್ಲಿ ನಿನ್ನ ಕೀರ್ತಿಯನ್ನು ಅನವರತವೂ ಕೊಂಡಾಡುವರು ಆದು ದರಿಂದ ಓ ! ಕೃಷ್ಣಾ ! ಈಗ ನೀನು ರಾಜಸೂಯಯಾಗಕ್ಕೆ ಹೋಗುವುದ ರಿಂದ, ಅಲ್ಲಿ ಭೀಮನ ಕೈಯಿಂದ ಜರಾಸಂಧನನ್ನು ಕೊಲ್ಲಿಸಬಹುದು ಆದು ಜರಾಸಂಧನ ವಧದಲ್ಲಿಮಾತ್ರವೇ ಮುಗಿಯುವಹಾಗಿಲ್ಲ. ಇದರಿಂದ ಇನ್ನೂ ಅನೇಕ ಪ್ರಯೋಜನಗಳುಂಟು ಇದೇನೆವದಿಂದ ನಿನ್ನ ವೈರಿಯಾದ ಶಿಶುಪಾ ಲಾದಿಗಳೂ ನಿನ್ನನ್ನಿದಿರಿಸಿ ನಿನ್ನಿಂದ ಹತರಾಗಬಹುದು. ಧರ್ಮರಾಜನ ಯಾ ಗದಲ್ಲಿ ನಿನಗಿರತಕ್ಕ ಅಕ್ಕರೆಯನ್ನೂ ತೋರಿಸಿದಂತಾಗುವುದು. ಆದುದರಿಂದ ನೀನು ಮೊದಲು ಇಂದ್ರಪ್ರಸ್ಥಕ್ಕೆ ಹೊರಡುವುದೇ ಉಚಿತವು" ಎಂದನು. ಹೀಗೆ ಉಭಯಪಕ್ಷಕ್ಕೂ ಅನುಕೂಲಿಸುವಂತೆ ಹೇಳಿದ ಉದ್ಧವನ ವಾಕ್ಯವ ನ್ನು ಕೇಳಿ, ಕೃಷ್ಣನೂ, ಬಲರಾಮನೂ, ನಾರದನೂ, ಯದುವೃದ್ಧರೂ ಅದನ್ನು ಮನಃಪೂರ್ವಕವಾಗಿ ಅನುಮೋದಿಸಿದರು. ಒಡನೆಯೇ ಕೃಷ್ಣನು ಗುರುಗಳಿಗೂ, ವೃದ್ಧರಿಗೂ ನಮಸ್ಕರಿಸಿ, ಅವರ ಅನುಮತಿಯನ್ನು ಪಡೆದು, ತನ್ನ ಭೃತ್ಯರಾದ ದಾರುಕ ಜೈತ್ರರಿಗೆ ಪ್ರಯಾಣಸನ್ನದ್ಧರಾಗುವಂತೆ ಆಜ್ಞಾ ಪಿಸಿದನು. ಮತ್ತು ತನ್ನ ಅಂತಃಪುರಸ್ತ್ರೀಯರನ್ನೂ, ಮಕ್ಕಳನ್ನೂ, ತಮ್ಮ ತಮ್ಮ ಪರಿವಾರಗಳೊಡನೆ ಇಂದ್ರಪ್ರಸ್ಥಕ್ಕೆ ಹೊರಡುವಂತೆ ಆಜ್ಞಾಪಿಸಿ ದನು. ಯದುರಾಜನಾದ ಉಗ್ರಸೇನನ,ಮತ್ತು ಬಲರಾಮನ ಅನುಜ್ಞೆಯನ್ನು ಪಡೆದು, ಗರುಡಧ್ವಜದಿಂದಲಂಕೃತವಾದ ತನ್ನ ರಥವನ್ನೇರಿದನು. ರಥ, ಗಜ ತುರಗ, ಪದಾತಿಗಳೊಡನೆ ಚತುರಂಗಸೈನ್ಯವೂ ಅವನಹಿಂದೆ ಹೊರಟಿತು. ಶಂಖ, ಭೇರಿ.ಮೃದಂಗ, ಗೋಮುಖ ಮೊದಲಾದ ವಾದ್ಯಗಳೆಲ್ಲವೂ ಮೊಳ ಗುತಿದ್ದುವು ರುಕ್ಮಿಣಿ ಮೊದಲಾದ ಅಂತಃಪುರಸ್ತ್ರೀಯರೆಲ್ಲರೂ ತಮ್ಮತಮ್ಮ

ಮಕ್ಕಳೊಡನೆ, ಗಂಧಪುಷ್ಪವಸ್ತ್ರಾಭರಣಾದಿಗಳಿಂದ ಅಲಂಕೃತರಾಗಿ, ಚಿನ್ನದ ಪಲ್ಲಕ್ಕಿಗಳಮೇಲೆಯೂ, ರಥಗಳಮೇಲೆಯೂ, ಕುದುರೆಗಳಮೇಲೆಯೂ ಏರಿ, ಕೃಷ್ಣನನ್ನು ಹಿಂಬಾಲಿಸಿದರು. ವೀರಭಟರು ಖಡ್ಗಪಾಣಿಗಳಾಗಿ ಆ ಸ್ತ್ರೀಯರಿಗೆ ಬೆಂಗಾವಲಾಗಿ ಬರುತಿದ್ದರು. ಇವರಹಿಂದೆ ವಾರಸ್ತ್ರೀಯರೂ ಗೌಡಿಯರೂ, ತಮತಮಗೆ ಯೋಗ್ಯವಾದ ಅಲಂಕಾರಗಳನ್ನು ಧರಿಸಿ ಹೊರಟರು. ಇವರೆಲ್ಲರೂ ಎತ್ತು, ಕುದುರೆ, ಎಮ್ಮೆ, ಒಂಟೆ, ಬಂಡಿ, ಆನೆ, ಮನುಷ್ಯರು ಮೊದಲಾದ ವಾಹನಗಳಲ್ಲಿ, ಹಾಸಿಗೆ, ಹೊದ್ದಿಕೆ, ಕಂಬಳಿ, ಹುಲ್ಲಿನ ತಡಿಕೆ, ಗುಡಾರ ಮೊದಲಾದ ಸಾಮಗ್ರಿಗಳನ್ನು ಸಾಗಿಸಿಕೊಂಡು ಬರುತ್ತಿದ್ದರು. ಕೃಷ್ಣನನ್ನು ಹಿಂಬಾಲಿಸಿ ಬರುತ್ತಿದ್ದ ಸೈನ್ಯವು, ಛತ್ರಚಾಮರ ಧ್ವಜಗಳಿಂದಲೂ, ನಾನಾಯುಧಗಳಿಂದಲೂ, ಆಭರಣಗಳಿಂದಲೂ ಕವಚಾದಿಗಳಿಂದಲೂ ಅಪೂರ್ವಶೋಭೆಯನ್ನು ಬೀರುತ್ತ, ಮಹಾಧ್ವನಿಯೊಡನೆ ಹೊರಟುಬರುವಾಗ, ತಿಮಿಂಗಿಲಾದಿಜಲಜಂತುಗಳಿಂದಲೂ, ದೊಡ್ಡ ಅಲೆಗಳಿಂದಲೂಕೂಡಿ, ಸೂರ್ಯಕಿರಣಸಂಬಂಧದಿಂದಹೊಳೆಯುತ್ತಿರುವ ಮಹಾಸಮುದ್ರದಂತೆತೋರುತ್ತಿತ್ತು. ಹೀಗೆ ಪ್ರಯಾಣಸನ್ನದ್ಧನಾಗಿ ಹೊರಟ ಕೃಷ್ಣನ ಮನೋನಿಶ್ಚಯವನ್ನು ತಿಳಿದುಕೊಂಡು ನಾರದನು, ಆತನ ದರ್ಶನದಿಂದುಂಟಾದ ಆನಂದದಿಂದುಕ್ಕುತ್ತ, ಆತನ ಅನುಜ್ಞೆಯನ್ನು ಪಡೆದು, ಅವನಿಂದಸತ್ಕೃತನಾಗಿ ಕೈಮುಗಿದು ಆಕಾಶಮಾರ್ಗದಿಂದಹೊರಟುಹೋದನು. ಆಮೇಲೆ ಕೃಷ್ಣನು ಇತ್ತಲಾಗಿ ತನ್ನ ಆಜ್ಞೆಯನ್ನು ನಿರೀಕ್ಷಿಸುತ್ತಿದ್ದ ರಾಜದೂತನನ್ನು ನೋಡಿ “ಓ! ದೂತಾ! ಇನ್ನು ನೀನು ಹೊರಡು! ನಿನಗೆ ಮಂಗಳವಾಗಲಿ! ನಿನ್ನ ರಾಜರಿಗೆ ನಾನು ಅಭಯವನ್ನು ಕೊಟ್ಟಿರುವುದಾಗಿ ತಿಳಿಸು! ಶೀಘ್ರದಲ್ಲಿಯೇ ನಾನು ಜರಾಸಂಧನನ್ನು ಸಂಹರಿಸುವುದಾಗಿಯೂ ಅವರಿಗೆ ಹೇಳು!” ಎಂದನು. ಅದರಂತೆಯೇ ದೂತನು ಅಲ್ಲಿಂದ ಹೊರಟುಬಂದು, ನಡೆದ ಸಂಗತಿಗಳನ್ನೆಲ್ಲಾ ರಾಜರಿಗೆ ತಿಳಿಸಿದನು. ಅವರೆಲ್ಲರೂ ಆ ಮಾತನ್ನು ಕೇಳಿ ಸಂತುಷ್ಟರಾಗಿ, ಕೃಷ್ಣನು ಯಾವಾಗ ತಮಗೆ ಸಂದರ್ಶನವನ್ನು ಕೊಟ್ಟು ತಮ್ಮನ್ನು ಸೆರೆಯಿಂದ ಬಿಡಿಸುವನೋ ಎಂದು ಕಾಲನಿರೀಕ್ಷಣೆಯಲ್ಲಿರುತ್ತಿದ್ದರು. ಇತ್ತಲಾಗಿ ಕೃಷ್ಣನು ಇಂದ್ರಪ್ರಸ್ಥವನ್ನು ಕುರಿತು ಪ್ರ

ಯಾಣವನ್ನು ಬೆಳೆಸಿ, ಕ್ರಮವಾಗಿ, ಆನರ್ತ, ಸೌವೀರ, ಕುರು, ವಿನಶನ, ಮೊದಲಾದ ದೇಶಗಳಮಾರ್ಗವಾಗಿ, ನಡುನಡುವೆ ಅನೇಕಪರ್ವತಗಳನ್ನೂ, ನದಿಗಳನ್ನೂ, ಸಣ್ಣ ಸಣ್ಣ ಗ್ರಾಮಗಳನ್ನೂ ಬೇಡರ ಹಳ್ಳಿಗಳನ್ನೂ, ದೃಷದ್ವತೀ, ಸರಸ್ವತೀ ನದಿಗಳನ್ನೂ ದಾಟಿ, ಪಾಂಚಾಲ ಮತ್ಸ್ಯದೇಶಗಳಮಾರ್ಗವಾಗಿ ಇಂದ್ರಪ್ರಸ್ಥಪುರದ ಎಲ್ಲೆಗೆ ಬಂದು ಸೇರಿದನು. ಇಷ್ಟರಲ್ಲಿಯೇ ಅತ್ತಲಾಗಿ ಧರ್ಮರಾಜನಿಗೆ ಈ ವೃತ್ತಾಂತವು ತಿಳಿದುಬಂದಿತು. ಮಹಾಯೋಗಿಗಳಿಗಲ್ಲದೆ ಇತರಸಾಮಾನ್ಯಮನುಷ್ಯರಿಗೆ ದುರ್ಲಭದರ್ಶನನಾದ ಆಕೃಷ್ಣನನ್ನು ನೋಡಬೇಕೆಂಬ ಆತುರದಿಂದ, ಅಜಾತಶತ್ರುವು, ತನ್ನ ಇಷ್ಟಮಿತ್ರ, ಪುರೋಹಿತಾದಿಗಳನ್ನೂ ಸಂಗಡ ಕರೆದುಕೊಂಡು, ಗೀತವಾದ್ಯಘೋಷದೊಡನೆಯೂ, ವೇದಘೋಷದೊಡನೆಯೂ ಕೃಷ್ಣನನ್ನು ಇದಿರುಗೊಂಡು ಕರೆತರುವುದಕ್ಕಾಗಿ, ಪ್ರಾಣವನ್ನಿದಿರುಗೊಳ್ಳುವುದಕ್ಕಾಗಿ ಹೋಗುವ ಪಂಚೇಂದ್ರಿಯಗಳಂತೆ ತನ್ನ ತಮ್ಮಂದಿರೊಡನೆ ಉಲ್ಲಾಸದಿಂದ ಹೊರಟನು ಬಹುಕಾಲದಿಂದ ಕಾಣದಿದ್ದ ಕೃಷ್ಣನನ್ನು ಕಂಡೊಡನೆ, ಸಂತೋಷಪರವಶನಾಗಿ,ಎರಡುತೋಳುಗಳನ್ನೂ ನೀಡಿ,ಬಾರಿಬಾರಿಗೂ ಅವನನ್ನು ಆಲಿಂಗಿಸಿಕೊಂಡನು. ಸಾಕ್ಷಾಲ್ಲಕ್ಷ್ಮೀದೇವಿಗೆ ನಿವಾಸಭೂತನಾದ ಆಕೃಷ್ಣನ ದೇಹಸ್ಪರ್ಶದಿಂದ ಆಗಲೇ ತನ್ನ ಜನ್ಮವು ಪವಿತ್ರವಾಯಿತೆಂದು ತಿಳಿದುಕೊಂಡನು. ಅವನ ಕಣ್ಣುಗಳಲ್ಲಿ ಆನಂದಬಾಷ್ಪವು ತುಳುಕುತಿತ್ತು. ಅವನ ದೇಹವೆಲ್ಲವೂ ಪುಳಕಿತವಾಯಿತು. ಅವನಿಗೆ ಆಗಿನ ಆನಂದಾತಿಶಯದಿಂದ ಈ ಲೋಕವ್ಯಾಪಾರವೇ ಮರೆತುಹೋಗುವಂತಾಯಿತು ಭೀಮಾರ್ಜುನ ನಕುಲಸಹದೇವರೂ ಕ್ರಮವಾಗಿ ಮುಂದೆ ಬಂದು, ಕೃಷ್ಣನನ್ನಾಂಲಿಗಿಸಿ, ಕಣ್ಣುಗಳಲ್ಲಿ ಆನಂದಬಾಷ್ಪವನ್ನು ಸುರಿಸುತಿದ್ದರು. ಆಗ ಕೃಷ್ಣನು, ಯುಧಿಷ್ಠಿರನಿಗೂ, ಭೀಮನಿಗೂ ಭಕ್ತಿಯಿಂದ ಪಾದವಂದನವನ್ನು ಮಾಡಿ,ಅರ್ಜುನನ್ನು ಪ್ರೀತಿಯಿಂದಾಲಿಂಗಿಸಿಕೊಂಡನು. ತನಗೆ ನಮಸ್ಕರಿಸಿದ ನಕುಲಸಹದೇವರನ್ನು ಮನ್ನಿಸಿ ಆಶೀರ್ವದಿಸಿದನು ಆಮೇಲೆ ಧರ್ಮರಾಜನೊಡನೆ ಬಂದಿದ್ದ ಬ್ರಾಹ್ಮಣರನ್ನೂ, ಕುಲವೃದ್ಧರನ್ನೂ, ಯಥಾಯೋಗ್ಯವಾಗಿ ನಮಸ್ಕರಿಸುತ್ತ ಬಂದನು ಕುರು, ಸೃಂಜಯ, ಕೇಕಯಾದಿರಾಜರನ್ನು ಯಥೋಚಿತವಾಗಿ ಗೌರ

ವಿಸಿ,ಅವರು ತನ್ನಲ್ಲಿ ತೋರಿಸಿದ ಗೌರವವನ್ನೂ ಪ್ರೀತಿಯಿಂದಕೈಕೊಂಡನು. ಆಗ ಧರ್ಮರಾಜನೊಡನೆ ಬಂದಿದ್ದ, ಸೂತ, ಮಗಧ, ವಂದಿಗಳೂ, ವಿದೂಷಕರೂ, ಗಾಯಕರೂ.ಬ್ರಾಹ್ಮಣರೂ ಮುಂದೆಬಂದು,ವೀಣಾವೇಣು,ಮೃದಂಗಾದಿವಾದ್ಯಗಳ ಕೋಲಾಹಲಗಳೊಡನೆ ಕೃಷ್ಣನನ್ನು ಸ್ತುತಿಸಿದರು ನರ್ತಕರು ನೃತ್ಯವನ್ನುಮಾಡುತಿದ್ದರು ಈ ಸಮಸ್ತವೈಭವಗಳೊಡನೆ ಪುಣ್ಯಶ್ಲೋಕಶಿಖಾಮಣಿಯಾದ ಕೃಷ್ಣನು, ಸರ್ವಾಲಂಕಾರಭೂಷಿತವಾದ ಇಂದ್ರಪ್ರಸ್ಥಪುರವನ್ನು ಪ್ರವೇಶಿಸಿದನು ಆಗ ಆಪಟ್ಟಣದ ಸೊಗಸನ್ನು ಕೇಳಬೇಕೆ? ಪುರವೀಥಿಗಳೆಲ್ಲವೂ ಎಡೆಬಿಡದೆ ಸುತ್ತುತ್ತಿರುವ ಆನೆಗಳ ಮದಜಲದಿಂದ ಸೇಚಿತವಾಗಿ ಘಮಘಮಿಸುತ್ತಿರುವುವು. ಚಿತ್ರವಿಚಿತ್ರಗಳಾದ ಧ್ವಜಗಳೂ, ಸುವರ್ಣತೋರಣಗಳೂ ತೂಗಾಡುತ್ತಿರುವುವು. ಅಲ್ಲಲ್ಲಿ ಮಂಗಳಾರ್ಥವಾದ ಪೂರ್ಣಕುಂಭಗಳು ಶೋಭಿಸುತ್ತಿರುವುವು. ಆ ಪಟ್ಟಣದ ಸ್ತ್ರೀಪುರುಷರೆಲ್ಲರೂ ಮಂಗಳಸ್ನಾನವನ್ನು ಮಾಡಿ, ವಸ್ತ್ರಾಭರಣಗಂಧಮಾಲ್ಯಾದಿಗಳಿಂದ ದೇಹವನ್ನಲಂಕರಿಸಿಕೊಂಡು, ಸಂಭ್ರಮದಿಂದೋಡಾಡುತ್ತಿರುವರು ಮನೆಮನೆಯ ಬಾಗಿಲುಗಳೂ ದೀಪಗಳಿಂದಲೂ, ಪುಷ್ಪೋಪಹಾರಗಳಿಂದಲೂ, ಅಗರುಧೂಪಗಳಿಂದಲೂ, ಧ್ವಜತೋರಣಗಳಿಂದಲೂ, ಬಂಗಾರದ ಶಿಖರವುಳ್ಳ ಬೆಳ್ಳಿಯ ಕಲಶಗಳಿಂದಲೂ ಅಲಂಕೃತಗಳಾಗಿರುವುವು. ಕೃಷ್ಣನು ಹೀಗೆ ಸರ್ವಾಲಂಕಾರಭೂಷಿತಗಳಾದ ಪುರವೀಥಿಗಳನ್ನು ನೋಡುತ್ತ ಬರುತಿದ್ದನು. ಪುರಸ್ತ್ರೀಯರೆಲ್ಲರೂ ಈ ಸಂಗತಿಯನ್ನು ಕೇಳಿದೊಡನೆ, ಆಕೃಷ್ಣನನ್ನು ನೋಡುವ ಆತುರದಲ್ಲಿ, ಬಿಚ್ಚಿದ ತಲೆಯನ್ನೂ, ಸಡಿಲಿದ ದುಕೂಲವನ್ನೂ ತಿಳಿಯದೆ, ತಾವು ಮಾಡುತಿದ್ದ ಗೃಹಕಾರ್ಯಗಳನ್ನೂ ಅಷ್ಟಕ್ಕೇ ಬಿಟ್ಟು, ಸಮೀಪದಲ್ಲಿ ಮಲಗಿದ್ದ ತಮ್ಮಪತಿಗಳನ್ನೂ ಲಕ್ಷ್ಯಮಾಡದೆ, ಹೊರಟುಬಂದು, ಉಪ್ಪರಿಗೆಗಳ ಮೇಲೇರಿ ನೋಡುತಿದ್ದರು ರಥಗಜಾದಿ ಚತುರಂಗಸೈನ್ಯದಿಂದ ಕಿಕ್ಕಿರಿಸಿ ತುಂಬಿದ ರಾಜಮಾರ್ಗದಲ್ಲಿ, ಕೃಷ್ಣನೂ, ಅವನ ಭಾರ್ಯೆಯರೂ ಅತಿವೈಭವದಿಂದ ಬರುತ್ತಿರುವುದನ್ನು ಕಂಡು,ಒಬ್ಬೊಬ್ಬರೂ ಅವನಮೇಲೆ ಪುಷ್ಪವರ್ಷವನ್ನು ಕರೆಯುತಿದ್ದರು. ಒಬ್ಬೊಬ್ಬರೂ ಆ ಕೃಷ್ಣನ ಸೌಂದರ್ಯಕ್ಕೆ ಮರುಳಾಗಿ, ತಮ್ಮ ತಮ್ಮ ಮನಸ್ಸಿ

ನಲ್ಲಿಯೇ ಆತನ ಅಂಗಸ್ಪರ್ಶಸೌಖ್ಯವನ್ನನುಭವಿಸುತ್ತ, ಮಂದಹಾಸವಿಶಿಷ್ಟವಾದ ತಮ್ಮ ದೃಷ್ಟಿಯಿಂದ ಅವನಿಗೆ ಸುಖಾಗಮನವನ್ನು ಕೇಳುವಂತೆ ಆನಂದಪರವಶರಾಗಿ ನೋಡುತಿದ್ದರು ಮತ್ತು ಅವರು. ಚಂದ್ರನನ್ನು ಬಳಸಿರುವ ನಕ್ಷತ್ರಗಳಂತೆ, ಆ ಕೃಷ್ಣನ ಸುತ್ತಲೂ ನೆರೆದು ಬರುತ್ತಿದ್ದ ಆತನ ಪತ್ನಿಯರನ್ನು ನೋಡಿ „ಆಹಾ! ಇವರ ಭಾಗ್ಯವಲ್ಲವೇ ಭಾಗ್ಯವು! ಪುರುಷಶ್ರೇಷ್ಠನಾದ ಈ ಕೃಷ್ಣನು, ಮಂದಹಾಸದಿಂದಲೂ, ವಿಲಾಸವಿಶಿಷ್ಟವಾದ ನೋಟದಿಂದಲೂ ಆಗಾಗ ಇವರ ಕಣ್ಣಿಗೆ ಮಹೋತ್ಸವವನ್ನುಂಟುಮಾಡುತ್ತಿರುವನಲ್ಲವೆ? ಇವರು ಪೂರ್ವಜನ್ಮದಲ್ಲಿ ಯಾವ ಪುಣ್ಯವನ್ನು ಮಾಡಿದ್ದರೋ" ಎಂದು ತಮ್ಮೊಳಗೆ ತಾವು ಅವರನ್ನು ಕೊಂಡಾಡುತ್ತಿದ್ದರು. ಆ ಪಟ್ಟಣದಲ್ಲಿರುವ ಶಿಲ್ಪಿಗಳು, ವರ್ತಕರು, ಮುಂತಾದವರೆಲ್ಲರೂ, ತಮತಮಗೆ ಲಭಿಸಿದ ಉತ್ತಮವಸ್ತುಗಳನ್ನು ಕಾಣಿಕೆಯಾಗಿ ತಂದು ಕೃಷ್ಣನ ಪಾದಗಳಲ್ಲಿಟ್ಟು, ತಮ್ಮ ಜನ್ಮವು ಸಾರ್ಥಕವಾಯಿತೆಂದು ಭಾವಿಸಿ ಸಂತೋಷಿಸುತ್ತಿದ್ದರು ಕೃಷ್ಣನು ಅರಮನೆಯ ಬಾಗಿಲಿಗೆ ಬಂದೊಡನೆ, ರಾಜಾಂತಃಪುರದ ಜನವೆಲ್ಲವೂ ಸಡಗರದಿಂದ ಇದಿರುಗೊಂಡು ಬಂದಿತು. ಅವರೆಲ್ಲರೊಡನೆ ಕೃಷ್ಣನು ಅರಮನೆಯನ್ನು ಪ್ರವೇಶಿಸಿದನು ತನಗೆ ಸೋದರಳಿಯನೆನಿಸಿಕೊಂಡ ಲೋಕೇಶ್ವರನಾದ ಕೃಷ್ಣನನ್ನು ಕಂಡು ಕುಂತೀದೇವಿಯು ಸಂತೋಷದಿಂದ ಇದಿರೆದ್ದುಬಂದು ಅವನನ್ನು ಪ್ರೀತಿಯಿಂದಾಲಿಂಗಿಸಿಕೊಂಡಳು. ದ್ರೌಪದಿ, ಸುಭದ್ರೆ, ಮೊದಲಾದ ಅವಳ ಸೊಸೆಯರೂ, ಕೃಷ್ಣನನ್ನು ಯಥೋಚಿತವಾಗಿ ಪೂಜಿಸಿದರು. ಕೃಷ್ಣನು ತನ್ನ ಮನೆಗೆ ಬಂದನೆಂಬ ಸಂತೋಷದಿಂದ ಧರ್ಮರಾಜನಿಗೆ ಮೈಮರೆಯುವಂತಾಯಿತು. ಆತನನ್ನು ಮನೆಗೆ ಕರೆತಂದು ಯಾವವಿಧದಲ್ಲಿ ಸತ್ಕರಿಸಬೇಕೆಂದು ತೋರದೆ ಸುಮ್ಮನೆ ನಿಂತುಬಿಟ್ಟನು ಆಲ್ಲಿ ಕೃಷ್ಣನು ತನ್ನ ಅತ್ತೆಯಾದ ಕುಂತೀದೇವಿಗೂ, ಇತರ ವೃದ್ಧಸ್ತ್ರೀಯರಿಗೂ ನಮಸ್ಕರಿಸಿ, ದ್ರೌಪದೀ ಸುಭದ್ರೆಯರನ್ನು ಪ್ರೀತಿಯಿಂದ ಮನ್ನಿಸಿದನು ಆಗ ದ್ರೌಪದಿಯು, ಅತ್ತೆಯಾದ ಕುಂತಿಯ ಆಜ್ಞೆಯಿಂದ ಕೃಷ್ಣನ ಪತ್ನಿಯರಾದ, ರುಕ್ಮಿಣಿ, ಸತ್ಯಭಾಮೆ, ಭದ್ರೆ, ಜಾಂಬವತಿ, ಕಾಳಿಂದಿ, ಮಿತ್ರವಿಂದೆ, ಲಕ್ಷ್ಮಣೆ, ನಾಗ್ನ

ಚಿತ್ತಿಯೆಂಬ ಅಷ್ಟಮಹಿಷಿಯರನ್ನೂ, ಇತರಸ್ತ್ರೀಯರನ್ನೂ ಗಂಧಪುಷ್ಪ ವಸ್ತ್ರಾಲಂಕಾರಗಳಿಂದ ಯಥೋಚಿತವಾಗಿ ಸತ್ಕರಿಸಿದಳು ಹಾಗೆಯೇ ಧರ್ಮರಾಜನೂಕೂಡ ಕೃಷ್ಣನಿಗೂ, ಆತನ ಪತ್ನಿಯರಿಗೂ ಸೈನಿಕರಿಗೂ, ಅನುಚರರಿಗೂ, ಹೊಸಹೊಸ ಭೋಗಸಾಮಗ್ರಿಗಳಿಂದ ತುಂಬಿದ ಬೇರೆಬೇರೆ ಬಿಡದಿಗಳನ್ನು ಮಾಡಿಕೊಟ್ಟನು ಓ ಪರೀಕ್ಷಿದ್ರಾಜಾ! ಕೃಷ್ಣನು ಅಲ್ಲಿದ್ದಾಗ ಅರ್ಜುನನೊಡನೆ ಕಲೆತು ಖಾಂಡವದಹನದಿಂದ ಅಗ್ನಿಗೆ ತೃಪ್ತಿಯನ್ನುಂಟುಮಾಡಿ, ಅಲ್ಲಿ ಮಯನನ್ನು ಅಪಾಯದಿಂದ ತಪ್ಪಿಸಿ, ಅವನಮೂಲಕವಾಗಿ ಧರ್ಮರಾಜನಿಗೆ ಒಂದು ದಿವ್ಯಭವನವನ್ನು ಮಾಡಿಸಿಕೊಟ್ಟನು. ಹೀಗೆಯೇ ಕೃಷ್ಣನು ಅರ್ಜುನನೊಡನೆ ರಥಾರೂಢನಾಗಿ, ಅಲ್ಲಲ್ಲಿ ವಿನೋದದಿಂದ ವಿಹರಿಸುತ್ತ, ಧರ್ಮರಾಜನ ಸಂತೋಷಾರ್ಥವಾಗಿ ಕೆಲವು ತಿಂಗಳುಗಳವರೆಗೆ ಆ ಅರಮನೆಯಲ್ಲಿಯೇ ಇರುತ್ತಿದ್ದನು. ಇದು ಎಪ್ಪತ್ತೊಂದನೆಯ ಅಧ್ಯಾಯವು.

---

ದಿಗ್ವಿಜಯ ಜರಾಸಂಧವಧಾದಿವೃತ್ತಾಂತಗಳು

ಓ ಪರೀಕ್ಷಿದ್ರಾಜಾ! ಕೇಳು! ಒಮ್ಮೆ ಧರ್ಮರಾಜನು ತನ್ನ ತಮ್ಮಂದಿರೊಡನೆ ಸಭಾಸ್ಥಾನದಲ್ಲಿ ಕುಳಿತಿದ್ದಾಗ, ಅಲ್ಲಿ ಅನೇಕಮಹರ್ಷಿಗಳೂ, ಬ್ರಾಹ್ಮಣ ಕ್ಷತ್ರಿಯ ವೈಶ್ಯರೆಂಬ ಮೂರುವರ್ಣದವರೂ, ಆಚಾರ್ಯರೂ, ಕುಲವೃದ್ಧರೂ, ಜ್ಞಾತಿಗಳೂ ನಂಟರಿಷ್ಟರೂ ನೆರೆದಿದ್ದರು ಅವರೆಲ್ಲರೂ ಕೇಳುತ್ತಿರುವಹಾಗೆ ಧರ್ಮರಾಜನು, ಕೃಷ್ಣನಮುಂದೆ ಕೈಮುಗಿದು ವಿಜ್ಞಾಪಿಸಿದನು. "ಓ ಗೋವಿಂದಾ! ಈಗ ನಾನು ರಾಜಸೂಯವೆಂಬ ಮಹಾಯಾಗದಿಂದ ನಿನ್ನ ಅಂಶಭೂತರಾದ ದೇವತೆಗಳನ್ನು ಆರಾಧಿಸಬೇಕೆಂದಿರುವೆನು ಈ ಉದ್ದೇಶವು ನಿನ್ನಸಹಾಯವಿಲ್ಲದೆ ಕೈಗೂಡಲಾರದು. ಇದನ್ನು ಪೂರ್ತಿಗೊಳಿಸತಕ್ಕ ಭಾರವು ನಿನ್ನದು ಕೃಷ್ಣಾ! ಸಮಸ್ತಪಾಪಗಳನ್ನೂ, ಅಮಂಗಳಗಳನ್ನೂ ನೀಗಿಸತಕ್ಕ ನಿನ್ನ ಪಾದಾರವಿಂದಗಳನ್ನು, ಮನೋವಾಕ್ಕಾಯಗಳೆಂಬ ತ್ರಿಕರಣಗಳಿಂದಲೂ ಯಾರು ಉಪಾಸನೆಮಾಡುವರೋ, ಅಂತವರುಮಾತ್ರವೇ ಸಂಸಾರನಿವೃತ್ತಿರೂಪವಾದ ಮೋಕ್ಷವನ್ನೂ,

ಇತರಪುರುಷಾರ್ಥಗಳನ್ನೂ ಸುಲಭವಾಗಿ ಪಡೆಯಬಲ್ಲರೇಹೊರತು, ನಿನ್ನಲ್ಲಿ ವಿಮುಖರಾದವರಿಗೆ ಯಾವ ಕೋರಿಕೆಯೂ ಕೈಗೂಡದು ಆದುದರಿಂದ ಓ ದೇವದೇವಾ! ನಿನ್ನ ಪಾದಸೇವಾಪ್ರಭಾವವೆಂತಹೆಂಬುದು ಲೋಕದ ಸಮಸ್ತಜನಗಳಿಗೂ ತಿಳಿಯುವಂತೆ, ನಿನ್ನ ಭಕ್ತನಾದ ನನ್ನಲ್ಲಿ ಅನುಗ್ರಹವನ್ನು ತೋರಿಸಬೇಕು. ನಿನ್ನನ್ನೇ ನಂಬಿರತಕ್ಕ ನಮಗೂ, ನಿನ್ನಲ್ಲಿ ಉದಾಸೀನರಾದ ಕೌರವರಿಗೂ ಉಂಟಾಗುವ ಶುಭಾಶುಭತಾರತಮ್ಯಗಳನ್ನು ನೋಡಿ,ಲೋಕವೆಲ್ಲವೂ ನಿನ್ನ ಪಾದಸೇವಾಪ್ರಭಾವವೆಂತಹೆಂಬುದನ್ನು ಚೆನ್ನಾಗಿ ತಿಳಿಯಲಿ! ಓ ಪ್ರಭೋ! ಸಮಸ್ತಕಲ್ಯಾಣಗುಣಪರಿಪೂರ್ಣನಾದ ಪರಬ್ರಹ್ಮವೇ ನೀನಾಗಿರುವೆ! ಮತ್ತು ನೀನು ಸರ್ವಾಂತರಾತ್ಮನಾದುದರಿಂದ, ಪ್ರಪಂಚವೆಲ್ಲವೂ ನಿನಗೆ ಶರೀರವೆನಿಸಿರುವುದು. ಮನುಷ್ಯನಿಗೆ ತನ್ನ ಶರೀರಾವಯವಗಳಲ್ಲಿ ಸ್ವಂತವೆಂದೂ, ಬೇರೆಯೆಂದೂ ಭೇದಬುದ್ಧಿಯು ಹೇಗೆ ಹುಟ್ಟಲಾರದೋ, ಅದರಂತೆಯೇ ಸರ್ವಶರೀರಕನಾದ ನಿನಗೆ,ಈ ಪ್ರಪಂಚವೆಲ್ಲವೂ ಸ್ವಂತವೇ ಆಗಿರುವುದರಿಂದ, ನಿನಗೆ ಭೇದಬುದ್ಧಿಯೆಂಬುದೇ ಇರುವುದಿಲ್ಲ. ಆ ವೈಷಮ್ಯಮೂಲಗಳೆನಿಸಿಕೊಂಡ ರಾಗದ್ವೇಷಾದಿಗಳೊಂದೂ ಇಲ್ಲದೆ, ಕೇವಲ ಆತ್ಮಾನಂದದಲ್ಲಿರತಕ್ಕ ನಿನಗೆ, ಎಲ್ಲರಲ್ಲಿಯೂ ಸಮದೃಷ್ಟಿಯಿರುವುದೇನಾಶ್ಚರ್ಯವು? ಆದರೆ ಕಲ್ಪವೃಕ್ಷವಾದರೂ, ತನ್ನಲ್ಲಿ ಬಂದು ಆಶ್ರಯಿಸಿದವರಿಗೆ ಮಾತ್ರವೇ ಅವರವರ ಇಷ್ಟಾರ್ಥವನ್ನು ಕೈಗೂಡಿಸುವಂತೆ, ನಿನ್ನನ್ನು ಸೇವಿಸತಕ್ಕವರು ಮಾತ್ರವೇ ನಿನ್ನ ಅನುಗ್ರಹಕ್ಕೆ ಪಾತ್ರರಾಗುವರು. ಮತ್ತು ಅವರವರು ನಿನ್ನನ್ನು ಸೇವಿಸತಕ್ಕ ರೀತಿಯನ್ನನುಸರಿಸಿಯೇ ಫಲವನ್ನೂ ಪಡೆಯುವರು. ಇಷ್ಟುಮಾತ್ರಕ್ಕೆ ನಿನ್ನಲ್ಲಿ ವೈಷಮ್ಯಬುದ್ಧಿಯನ್ನಾರೋಪಿಸುವುದು ಅಜ್ಞತೆಯಲ್ಲವೆ?" ಎಂದನು ಆಗ ಕೃಷ್ಣನು "ಓ ಧರ್ಮರಾಜಾ! ನಿನ್ನ ಉದ್ದೇಶವು ಬಹಳಸಮೀಚೀನವಾದುದು.ಇದರಿಂದ ನಿನ್ನ ಕೀರ್ತಿಯು ಸರ್ವಲೋಕವ್ಯಾಪಿಯಾಗಿ, ನಿನಗೆ ಸರ್ವವಿಧದಲ್ಲಿಯೂ ಕ್ಷೇಮವುಂಟು. ಈಗ ನೀನು ಉದ್ದೇಶಿಸಿರುವ ಯಾಗವು ಋಷಿಗಳಿಗೂ, ಪಿತೃದೇವತೆಗಳಿಗೂ, ಇತರಸಮಸ್ತಭೂತಗಳಿಗೂ ಪ್ರಿಯವಾದುದು. ನನಗೂ ಇದು ಬಹಳತೃಪ್ತಿಕರವಾಗಿರುವುದು ಆದುದರಿಂದ ಈಗಲೇ ನೀನು ದಿಗ್ವಿಜಯಕ್ಕಾಗಿ ಸೈನ್ಯವನ್ನು

ಕಳುಹಿಸಿ, ಶತ್ರುರಾಜರನ್ನು ಜಯಿಸು! ಸಮಸ್ತಭೂಮಿಯನ್ನೂ ಸ್ವಾಧೀನ ಪಡಿಸಿ ಅಲ್ಲಿಂದ ಈ ಯಜ್ಞಕ್ಕೆ ಬೇಕಾದ ಸಾಮಗ್ರಿಗಳೆಲ್ಲವನ್ನೂ ಸಿದ್ಧಪಡಿಸಿಕೊಂಡು ಯಜ್ಞವನ್ನಾರಂಭಿಸು! ದಿಗ್ವಿಜಯವಿಷಯದಲ್ಲಿ ನೀನು ಸ್ವಲ್ಪವೂ ಸಂದೇಹಿಸಬೇಕಾದುದಿಲ್ಲ ಈ ನಿನ್ನ ನಾಲ್ವರು ತಮ್ಮಂದಿರೂ ಮಹಾವೀರಾಗ್ರೇಸರರು! ಲೋಕಪಾಲಾಂಶದಿಂದಲೇ ಹುಟ್ಟಿದವರು. ರಾಜಾ! ನಿನಗೆ ಶತ್ರುರಾಜರು ವಶವಾಗುವುದು ಹಾಗಿರಲಿ! ಎಂತಹ ಜಿತೇಂದ್ರಿಯರಾದ ಯೋಗಿಗಳಿಗೂ ವಶನಾಗದ ನಾನೇ ನಿನ್ನ ಭಕ್ತಿಗೆ ವಶನಾಗಿರುವೆನು! ಇನ್ನು ನಿನಗೆ ಅಸಾಧ್ಯವಾದುದೊಂದೂ ಇಲ್ಲವೆಂದು ತಿಳಿ! ನನ್ನಲ್ಲಿಯೇ ದೃಢಮನಸ್ಸಿಟ್ಟು ನನ್ನನ್ನು ನಂಬಿದವರಿಗೆ ಎಲ್ಲಿಯೂ ಪರಾಭವವಿಲ್ಲ. ಅಂತವರನ್ನು ಸಾಕ್ಷಾದ್ದೇವೇಂದ್ರನಾದರೂ ತನ್ನ ತೇಜಸ್ಸಿನಿಂದಲಾಗಲಿ, ಯಶಸ್ಸಿನಿಂದಲಾಗಲಿ, ಸಂಪತ್ತಿನಿಂದಲಾಗಲಿ, ಸೇನೆ ಮೊದಲಾದ ಸಹಾಯಸಮೃದ್ಧಿಗಳಿಂದಾಗಲಿ ಮೀರಲಾರನು ಇನ್ನು ಸಾಮಾನ್ಯರಾಜರ ಮಾತೇನು?" ಎಂದನು.ಈ ಮಾತನ್ನು ಕೇಳಿದೊಡನೆ ಧರ್ಮರಾಜನು ಸಂತೋಷದಿಂದರಳಿದಮುಖವುಳ್ಳವನಾಗಿ, ದೇವಾಂಶಸಂಭೂತರಾದ ತನ್ನ ತಮ್ಮಂದಿರನ್ನು ಕರೆದು, ದಿಗ್ವಿಜಯಕ್ಕಾಗಿ ಹೊರಡುವಂತೆ ನಿಯಮಿಸಿದನು. ಸಹದೇವನನ್ನು ಸೃಂಜಯರೊಡನೆ ದಕ್ಷಿಣದಿಕ್ಕಿಗೆ ಕಳುಹಿಸಿದನು. ನಕುಲನನ್ನು ಪಶ್ಚಿಮದಿಕ್ಕಿಗೂ, ಅರ್ಜುನನನ್ನು ಉತ್ತರದಿಕ್ಕಿಗೂ, ಭೀಮನನ್ನು ಮತ್ಸ್ಯ, ಕೇಕಯ, ಮದ್ರರಾಜರೊಡನೆ ಪೂರ್ವದಿಕ್ಕಿಗೂ ಕಳುಹಿಸಿದನು. ಇವರೆಲ್ಲರೂ ಆಯಾದಿಕ್ಕಿಗೆ ಹೋಗಿ, ತಮ್ಮ ಬಲಪರಾಕ್ರಮಗಳಿಂದ ಅನೇಕ ರಾಜರನ್ನು ಜಯಿಸಿ, ಯಾಗದೀಕ್ಷಿತನಾದ ಧರ್ಮರಾಜನಿಗೆ ಅಪಾರಧನವನ್ನು ತಂದೊಪ್ಪಿಸಿದರು ಆದರೇನು? ಜರಾಸಂಧನೊಬ್ಬನುಮಾತ್ರ ಕೈವಶನಾಗದೆ, ಹೆಮ್ಮೆಯಿಂದಿರುವುದನ್ನು ನೋಡಿ, ಅವನನ್ನು ಜಯಿಸುವ ಉಪಾಯವೇನೆಂದು ಧರ್ಮರಾಜನು ತನ್ನಲ್ಲಿ ತಾನು ಚಿಂತಿಸುತ್ತಿದ್ದನು. ಸರ್ವಜ್ಞನಾದ ಕೃಷ್ಣನು ಇದನ್ನು ತಿಳಿದು ಧರ್ಮರಾಜನನ್ನು ಕುರಿತು. "ಓ ರಾಜೇಂದ್ರಾ! ನೀನು ಚಿಂತಿಸಬೇಡ! ಆ ಜರಾಸಂಧನನ್ನು ನಿಗ್ರಹಿಸುವವಿಷಯದಲ್ಲಿ ಉದ್ಧವನು ನಮಗೊಂದುಪಾಯವನ್ನು ತಿಳಿಸಿರುವನು. ಆ ಉಪಾಯ

ದಿಂದ ಶೀಘ್ರದಲ್ಲಿಯೇ ನಾವು ಅವನನ್ನು ನಿಗ್ರಹಿಸಿ ಬರುವೆವು" ಎಂದನು. ಒಡನೆಯೇ ಕೃಷ್ಣನೂ, ಭೀಮಾರ್ಜುನರೂ ಬ್ರಾಹ್ಮಣವೇಷವನ್ನು ಧರಿಸಿ, ಜರಾಸಂಧನ ರಾಜಧಾನಿಯಾದ ಗಿರಿವ್ರಜಕ್ಕೆ ಬಂದರು ಅಲ್ಲಿ ಜರಾಸಂಧನು ಗೃಹಮೇಧಿಯಾಗಿ ಕರ್ಮಗಳನ್ನು ನಡೆಸಿ, ಬ್ರಾಹ್ಮಣರಿಗೆ ಆತಿಥ್ಯವನ್ನು ಮಾಡಿ ಸುತ್ತಿದ್ದ ಸಮಯಕ್ಕೆ ಸರಿಯಾಗಿ, ಈ ಮೂವರೂ ಬ್ರಾಹ್ಮಣಪ್ರಿಯನಾದ ಆ ಜರಾಸಂಧನನ್ನು ಕಂಡು ‹‹ಅಯ್ಯಾ! ನಿನಗೆ ಶುಭವಾಗಲಿ! ನಾವು ಬ್ರಾಹ್ಮಣರು! ಬಹುದೂರದಿಂದ ನಿನ್ನಲ್ಲಿಗೆ ಅತಿಥಿಗಳಾಗಿ ಬಂದಿರುವೆವು ನಾವು ಈಗ ಯಾವಕೋರಿಕೆಯಿಂದ ನಿನ್ನಲ್ಲಿಗೆ ಬಂದಿರುವೆವೋ ಅದನ್ನು ನಡೆಸಿಕೊಂಡುವಂತೆ ಮೊದಲು ನಮಗೆ ವಾಗ್ದಾನಮಾಡಬೇಕು! ಆದರೆ! ‹‹ಕೊಡಬಾರದ ವಸ್ತುವನ್ನು ಕೇಳಿದರೆ ಕೊಡುವುದಕ್ಕಾದೀತೆ" ಎಂದು ನೀನು ಶಂಕಿಸಬಾರದು! ಸಹನಗುಣವುಳ್ಳವರಿಗೆ ಸಹಿಸಬಾರದುದೊಂದಿಲ್ಲ! ದುಷ್ಟರಿಗೆ ಮಾಡಬಾರದುದಿಲ್ಲ! ಉದಾರಿಗಳಿಗೆ ಕೊಡಬಾರದುದಿಲ್ಲ ಸಮದೃಷ್ಟಿಯುಳ್ಳವರಿಗೆ ಹೆರವರೆಂಬುದಿಲ್ಲ! ಈ ನ್ಯಾಯವನ್ನು ನೀನೂ ಚೆನ್ನಾಗಿ ತಿಳಿದೇ ಇರುವೆ ಲೋಕದಲ್ಲಿ ಯಾವ ಮನುಷ್ಯನು, ಅನಿತ್ಯವಾದ ಈ ಶರೀರದಿಂದ ಶಾಶ್ವತವಾದ ಯಶಸ್ಸನ್ನು ಸಂಪಾದಿಸಿಡುವನೋ ಆವನೇ ಉತ್ತಮನು. ಆ ಶಕ್ತಿಯಿರುವಾಗಲೂ ಕೀರ್ತಿಯನ್ನು ಗಳಿಸದಿರುವನೇ ನಿಂದ್ಯನು ಅಂತವನ ಸ್ಥಿತಿಗಾಗಿ ಎಷ್ಟು ಪರಿತಪಿಸಿದರೂ ಸಾಲದು ಅಷ್ಟೇಕೆ? ಪೂರ್ವದಲ್ಲಿ ಹರಿಶ್ಚಂದ್ರನು ವಿಶ್ವಾಮಿತ್ರನಿಗಾಗಿ ತನ್ನ ಹೆಂಡಿರು ಮಕ್ಕಳನ್ನು ವಿಕ್ರಯಿಸಿ ತಾನೂ ಚಂಡಾಲನಾಗಲಿಲ್ಲವೆ? ರಂತಿದೇವನು ನಾಲ್ವತ್ತೆಂಟುದಿನಗಳವರೆಗೆ ತನ್ನ ಹೆಂಡಿರುಮಕ್ಕಳೊಡನೆ ಅನ್ನಾಹಾರವಿಲ್ಲದೆ ತನಗೆ ಲಭಿಸಿದುದನ್ನೆಲ್ಲಾ ಅರ್ಥಿಗಳಿಗೆ ಕೊಡುತ್ತಿರಲಿಲ್ಲವೆ? ಬಲಿಚಕ್ರವರ್ತಿಯು ವಾಮನನಿಗೆ ಭೂದಾನವನ್ನು ಮಾಡುವಾಗ, ತನ್ನ ತಲೆಯನ್ನೇ ಒಡ್ಡಲಿಲ್ಲವೆ? ಹೀಗೆಯೇ ಉಂಛವೃತ್ತಿಯಲ್ಲಿದ್ದ ಮುದ್ಗಲನು, ಆರುತಿಂಗಳವರೆಗೆ ತನ್ನ ಕುಟುಂಬದೊಡನೆ ಅನ್ನಾಹಾರವಿಲ್ಲದೆ ಕಷ್ಟಪಡುತ್ತಿದ್ದು, ತಾನುಮಾಡಿದ ಆತಿಥ್ಯದಿಂದ ಬ್ರಹ್ಮಲೋಕವನ್ನು ಸೇರಲಿಲ್ಲವೆ? ಶಿಬಿಚಕ್ರವರ್ತಿಯು ಒಂದು ಕಪೋತವನ್ನು ರಕ್ಷಿಸುವುದಕ್ಕಾಗಿ ಗಿಡುಗನಿಗೆ ತನ್ನ ದೇಹಮಾಂಸವನ್ನೇ ಒಪ್ಪಿಸ

ಲಿಲ್ಲವೆ? ಒಂದು ಕಪೋತಪಕ್ಷಿಯು, ಒಬ್ಬ ಬೇಡನ ಹಸಿವನ್ನು ತೀರಿಸುವುದ ಕ್ಕಾಗಿ, ತಾನೇ ತನ್ನ ಪತ್ನಿಯೊಡನೆ ಅಗ್ನಿಯಲ್ಲಿ ಬಿದ್ದು ತನ್ನ ದೇಹವನ್ನು ಪಕ್ವ ಮಾಡಿ ಕೊಡಲಿಲ್ಲವೆ? ಆಗ ಆ ಕಪೋತದ ದಯಾಗುಣವನ್ನು ನೋಡಿ ಆ ಬೇ ಡನೂ ತನ್ನದೇಹವನ್ನು ಅಗ್ನಿಗೆ ಆಹುತಿಮಾಡಿ ಪುಣ್ಯಲೋಕವನ್ನು ಸೇರ ಲಿಲ್ಲವೆ? ಓ ರಾಜೇಂದ್ರಾ! ಹೀಗೆಯೇ ಇನ್ನೂ ಎಷ್ಟೋಮಂದಿ ಮಹಾಪುರು ಷರು,ಕ್ಷಣಸ್ಥಾಯಿಯಾದ ಈ ಶರೀರತ್ಯಾಗದಿಂದ ಚಿರಸ್ಥಾಯಿಯಾದ ಕೀರ್ತಿ ಯನ್ನು ನೆಲೆಗೊಳಿಸಿ ಹೋಗಿರುವರು. ಆದುದರಿಂದ ಈಗ ನೀನೂ ನಮ್ಮ ಕೋರಿಕೆಯನ್ನೀಡೇರಿಸಿ ಶಾಶ್ವತವಾದ ಕೀರ್ತಿಯನ್ನು ಹೊಂದು" ಎಂದರು. ಓ ಪರೀಕ್ಷಿದ್ರಾಜಾ! ಆ ಮೂವರೂ ಈ ಮಾತುಗಳನ್ನು ಹೇಳುತ್ತಿರುವಾಗ, ಜರಾಸಂಧನಿಗೆ ಅವರ ಮುಖಲಕ್ಷಣಗಳಿಂದಲೂ,ಕಂಠಧ್ವನಿಗಳಿಂದಲೂ ಅವ ರನ್ನು ತಾನು ಹಿಂದೆ ನೋಡಿದ್ದಂತೆ ಸಂದೇಹವು ಹುಟ್ಟಿತು ಇದಲ್ಲದೆ ಅವರ ಮಣಿಕಟ್ಟುಗಳಲ್ಲಿ, ಬಿಲ್ಲಿನ ನಾಣೊತ್ತಿನಿಂದ ಬಿದ್ದುಕಟ್ಟಿದ ಗುರುತುಗಳನ್ನೂ ಕಂಡು, ಅವರು ಕ್ಷತ್ರಿಯರೆಂದೇ ನಿಶ್ಚಯಿಸಿ ಹೀಗೆಂದು ಯೋಚಿಸುವನು. "ಇವರಾದರೋ ಕ್ಷತ್ರಿಯರಂತೆ ತೋರುವುದು!ಆದರೆ ಬ್ರಾಹ್ಮಣವೇಷವನ್ನು ಧರಿಸಿರುವರು. ಹೇಗಾದರೂ ಇರಲಿ! ವೇಷಮಾತ್ರದಿಂದಲೇ ಇವರು ಪೂಜ್ಯ ರು!ಆದುದರಿಂದ ಇವರು ಕೇಳಿದುದನ್ನು ಕೊಟ್ಟುಬಿಡುವೆನು ಕೊನೆಗೆ ದುಸ್ತ್ಯ ಜವಾದ ನನ್ನ ಶರೀರವನ್ನೇ ಕೇಳಿದರೂ ನಾನು ಹಿಂತೆಗೆಯಲಾರೆನು.ಹಿಂದೆ ಬ ಲಿಚಕ್ರವರ್ತಿಯು ಬ್ರಾಹ್ಮಣವೇಷದಿಂದ ಬಂದ ವಿಷ್ಣುವಿಗೆ ಭೂದಾನವನ್ನು ಮಾಡಿದಾಗ, ಅದರಿಂದ ತಾನು ರಾಜ್ಯಭ್ರಷ್ಟನಾದರೂ,ಅವನ ಕೀರ್ತಿಯು ಈಗಲೂ ನಿಷ್ಕಲ್ಮಷವಾಗಿ ಸಮಸ್ತದಿಕ್ಕುಗಳಲ್ಲಿಯೂ ವ್ಯಾಪಿಸಿರುವುದಲ್ಲವೆ! ವಿಷ್ಣುವು ತನ್ನ ರಾಜ್ಯವನ್ನು ಕಿತ್ತು ಇಂದ್ರನಿಗೆ ಕೊಡಿಸುವುದಕ್ಕಾಗಿ ಕಪಟ ಬ್ರಾಹ್ಮಣವೇಷದಿಂದ ಬಂದನೆಂಬುದನ್ನು ತಾನು ತಿಳಿದಿದ್ದರೂ, ಶುಕ್ರಾಚಾ ರ್ಯನೇ ಮೊದಲಾದ ತನ್ನ ಹಿತೈಷಿಗಳು ಅನೇಕವಿಧದಿಂದ ತನ್ನನ್ನು ನಿವಾರಿಸಿದ ರೂ ಕೇಳದೆ,ಆ ದೈತ್ಯರಾಜನು ಅವನಿಗೆ ಭೂದಾನವನ್ನು ಮಾಡಿದುದರಿಂದಲ್ಲ ವೇ ಅಪಾರಕೀರ್ತಿಗೆ ಭಾಗಿಯಾದನು ಅದರಂತೆಈಗನಾನೂ ಇವರ ಕೋರಿಕೆ ಯನ್ನು ಕೈಗೂಡಿಸುವುದರಲ್ಲಿ ಹಿಂಜರಿಯಬಾರದು. ಉತ್ತಮವಾದ ಕ್ಷತ್ರಿ

ಯಕುಲದಲ್ಲಿ ಹುಟ್ಟಿದವನು ಎಂದಿದ್ದರೂ ನಾಶಹೊಂದತಕ್ಕ ಈ ಶರೀರ ದಿಂದ, ಅರ್ಥಿಗಳಾಗಿ ಬಂದ ಬ್ರಾಹ್ಮಣರನ್ನು ತೃಪ್ತಿಗೊಳಿಸಿ, ಅದರಿಂದ ಉತ್ತಮಕೀರ್ತಿಯನ್ನು ಸಂಪಾದಿಸದಿದ್ದಮೇಲೆ, ಅವನ ಜನ್ಮದಿಂದ ಪ್ರಯೋ ಜನವೇನು?"ಎಂದು ಯೋಚಿಸುತ್ತ, ಆ ಜರಾಸಂಧನು ಉದಾರಬುದ್ಧಿಯಿಂದ ಕೃಷ್ಣಾರ್ಜುನಭೀಮರನ್ನು ಕುರಿತು "ಓ ಬ್ರಾಹ್ಮಣರೆ! ನಿಮಗೆ ಬೇಕಾದು ದನ್ನು ಕೇಳಿರಿ! ನನ್ನ ತಲೆಯನ್ನಾದರೂ ಕತ್ತರಿಸಿಕೊಡುವುದಕ್ಕೆ ಸಿದ್ಧನಾ ಗಿರುವೆನು" ಎಂದನು ಆದಕ್ಕಾ ಕೃಷ್ಣನು "ಓ ರಾಜೇಂದ್ರಾ! ನಾವು ಮೂವರೂ ನಿನ್ನೊಡನೆ ದ್ವಂದ್ವಯುದ್ಧಕ್ಕಾಗಿ ಆಸೆಪಟ್ಟು ಬಂದಿರುವೆವು. ನಿನಗೆ ಸಮ್ಮತವಾದರೆ, ಈ ಯುದ್ಧಭಿಕ್ಷೆಯನ್ನು ಕೊಟ್ಟು ನಮ್ಮ ಕೋರಿಕೆಯ ನ್ನೀಡೇರಿಸು! ನಾವು ಕ್ಷತ್ರಿಯರಾದುದರಿಂದ,ಯುದ್ಧವನ್ನಪೇಕ್ಷಿಸಿ ಬಂದವರೇ ಹೊರತು, ಅನ್ನಭಿಕ್ಷೆಗಾಗಿ ಬಂದವರಲ್ಲ! ಇದೋ! ಇವನು ಕುಂತಿಯ ಮಗ ನಾದ ವೃಕೋದರನು. ಇವನು ಅವನ ತಮ್ಮನಾದ ಅರ್ಜುನನು. ನಾನು ನಿನ್ನ ಶತ್ರುವಾದ ಕೃಷ್ಣನು. ಇವರಿಬ್ಬರಿಗೂ ಮಾವನ ಮಗನು!"ಎಂದನು. ಈ ಮಾತನ್ನು ಕೇಳಿದೊಡನೆ ಜರಾಸಂಧನು ತನ್ನ ವೀರ್ಯಮದದಿಂದ ಕೇಕೆ ಹಾಕಿನಗುತ್ತ,ಕೋಪಯುಕ್ತನಾಗಿ,ಕೃಷ್ಣನನ್ನು ಕುರಿತು "ಓಮೂಢಾ! ಕೃ ಷ್ಣಾ! ನಿಮಗೆ ನನ್ನೊಡನೆ ಯುದ್ಧಮಾಡಬೇಕೆಂಬ ಆಸೆಯೆ?ಹಾಗೆಯೇ ಆಗ ಲಿ! ಯುದ್ಧವನ್ನೇ ಕೊಡುವೆನು ಆದರೆ ನೀನು ಇದಕ್ಕೆಮೊದಲು ನನ್ನೊ ಡನೆ ಯುದ್ಧಮಾಡಲಾರದೆ ಭಯಪಟ್ಟು, ಮಥುರಾಪುರಿಯನ್ನೇ ಬಿಟ್ಟು ಓಡಿ ಹೋಗಿ ಸಮುದ್ರಮಧ್ಯದಲ್ಲಿ ಸೇರಿಕೊಂಡವನಲ್ಲವೆ? ಆದುದರಿಂದ ಭೀರು ವಾದ ನಿನ್ನೊಡನೆ ತಿರುಗಿ ಯುದ್ಧಕ್ಕೆ ನಿಲ್ಲುವುದು ನನಗೆ ಅವಮಾನಕರವಾದು ದರಿಂದ, ನಿನ್ನೊಡನೆ ಯುದ್ಧಮಾಡಲಾರೆನು ಈ ಅರ್ಜುನನಾದರೋ ವಯಸ್ಸಿನಲ್ಲಿ ನನಗಿಂತಲೂ ಬಹಳಸಣ್ಣವನು ಪರಾಕ್ರಮದಲ್ಲಿಯೂ ನನಗೆ ಸಮಾನನಲ್ಲ! ಆದುದರಿಂದ ಇವನೊಡನೆಯೂ ನಾನು ಯುದ್ಧಮಾಡ ಲಾರೆನು ನಿಮ್ಮಲ್ಲಿ ಈ ಭೀಮನೊಬ್ಬನೇ! ನನಗೆ ಸಮಾನಬಲವುಳ್ಳವನು. ಅವನೊಡನೆ ಯುದ್ಧಮಾಡುವೆನು"ಎಂದು ಹೇಳಿ,ತನ್ನಲ್ಲಿದ್ದ ಒಂದಾನೊಂದು ದೊಡ್ಡಗದೆಯನ್ನು ತಂದು,ತಾನೇ ಭೀಮನ ಕೈಗೆ ಕೊಟ್ಟನು.ತಾನೂಒಂದು

ಗದೆಯನ್ನು ತೆಗೆದುಕೊಂಡನು ಪಟ್ಟಣದ ಹೊರಗಿನ ಒಂದಾನೊಂದು ಮೈದಾನಕ್ಕೆ ಅವರೆಲ್ಲರನ್ನೂ ಕರೆತಂದನು ಅಲ್ಲಿ ಭೀಮಜರಾಸಂಧರಿಬ್ಬರೂ, ಯುದ್ಧಾವೇಶದಿಂದ, ಒಬ್ಬರಮೇಲೊಬ್ಬರು ವಜ್ರಾಯುಧಕ್ಕೆ ಸಮಾನವಾದ ತಮ್ಮತಮ್ಮ ಗದೆಗಳಿಂದ ಹೊಡೆದಾಡುವುದಕ್ಕೆ ತೊಡಗಿದರು. ಅವರಿಬ್ಬರೂ ವಿಚಿತ್ರವಾದ ಮಂಡಲಗತಿಯಿಂದ ಎಡಬಲಪಾರ್ಶ್ವಗಳಿಗೆ ತಿರುಗುತ್ತಿರುವಾಗ, ರಂಗಸ್ಥಳದಲ್ಲಿ ನಟರು ವಿಚಿತ್ರಗತಿಯಿಂದ ನಡೆಸುವ ನೃತ್ಯದಂತೆ, ನೋಡುವವರಿಗೆ ಆಸೆಯನ್ನು ಹುಟ್ಟಿಸುತಿತ್ತು. ಅವರಿಬ್ಬರೂ ಒಬ್ಬರಿಗೊಬ್ಬರು ತಮ್ಮ ತಮ್ಮ ಗದೆಗಳನ್ನು ತಿರುಗಿಸುವಾಗ, ಆಗದೆಗಳ ಪರಸ್ಪರ ತಾಡನದಿಂದುಂಟಾದ ಧ್ವನಿಯು, ಸಿಡಿಲಿನಂತೆಯೂ, ಮದದಾನೆಗಳ ಹೋರಾಟದಲ್ಲಿ ಅವುಗಳ ಪರಸ್ಪರದಂತಪ್ರಹಾರದಿಂದುಂಟಾಗುವ ಧ್ವನಿಯಂತೆಯೂ, ಭಯಂಕರವಾದ ಚಟಚಟಾತ್ಕಾರವನ್ನು ಹುಟ್ಟಿಸುತಿತ್ತು. ಅವರಿಬ್ಬರೂ ತಮ್ಮ ಶಕ್ತಿಮೀರಿ ಪ್ರಯೋಗಿಸುತಿದ್ದ ಗದಾಪ್ರಹಾರದಿಂದ, ಒಬ್ಬೊಬ್ಬರ, ಹೆಗಲು, ನಡು, ಕೈ, ಕಾಲು, ತೊಡೆ, ಮೊಳಕಾಲು, ಮುಂತಾದ ಅವಯವಗಳೆಲ್ಲವೂ ಮದದಾನೆಗಳ ಹೋರಾಟದಲ್ಲಿ ನಡುವೆ ಸಿಕ್ಕಿಬಿದ್ದ ಎಕ್ಕದ ಕೊನೆಯಂತೆ ಛಿನ್ನಭಿನ್ನವಾಗಿ ಹರಿದುಹೋಗುತಿದ್ದುವು. ಅವರಿಬ್ಬರೂ ಹೀಗೆ ಗದಾಯುದ್ಧವನ್ನು ಮಾಡುತ್ತಿರುವಾಗ, ನಡುನಡುವೆ ಒಮ್ಮೆ ವಜ್ರಸಮಾನವಾದ ಮುಷ್ಟಿಗಳಿಂದ ಒಬ್ಬರನ್ನೊಬ್ಬರು ಅಪ್ಪಳಿಸುತಿದ್ದರು. ಈಮುಷ್ಟಿಪ್ರಹಾರದಿಂದಲೂ, ಅವರ ಹಸ್ತತಾಡನದಿಂದಲೂ ಉಂಟಾದ ಧ್ವನಿಯು, ಸಿಡಿಲಿನಂತೆ ಭಯಂಕರವಾಗಿ ಕೇಳಿಸುತಿತ್ತು. ಆ ಭೀಮಜರಾಸಂಧರಿಬ್ಬರೂ, ಯುದ್ಧಾಭ್ಯಾಸದಲ್ಲಿಯೂ, ದೇಹಬಲದಲ್ಲಿಯೂ, ಪರಾಕ್ರಮದಲ್ಲಿಯೂ ಸಮಾನರು! ಒಬ್ಬರಿಗೊಬ್ಬರು ಯಾವವಿಧದಲ್ಲಿಯೂ ಸೋಲುವ ಹಾಗಿಲ್ಲ! ಅವರ ಯುದ್ಧಚಾತುರ್ಯವೂ ಅಸಮಾನವಾಗಿದ್ದಿತು ಇದನ್ನು ನೋಡಿ ಸರ್ವಜ್ಞನಾದ ಕೃಷ್ಣನು, ಆ ಜರಾಸಂಧನು ಹುಟ್ಟುವಾಗ ಎರಡು ತುಂಡಾಗಿ ಹುಟ್ಟಿದುದನ್ನೂ, ಜರೆಯೆಂಬ ರಾಕ್ಷಸಿಯು ಆ ತುಂಡುಗಳನ್ನು, ಸೇರಿಸಿ, ಅದನ್ನು ತಿರುಗಿ ಬದುಕಿಸಿದುದನ್ನೂ ಯೋಚಿಸಿ, ಆತನನ್ನು ಕೊಲ್ಲುವುದಕ್ಕೆ ಉಪಾ

ಯವೇನೆಂದು ತನ್ನಲ್ಲಿ ನಿಶ್ಚಯಿಸಿಕೊಂಡನು. ಒಡನೆಯೇ ಭೀಮನಲ್ಲಿ ತನ್ನ ತೇಜೋಬಲವನ್ನು ಆರೋಪಿಸಿ, ಅವನಿಗೆ ವೀರ್ಯ್ಯೋದ್ರೇಕವನ್ನುಂಟು ಮಾಡಿದನು. ಆಭೀಮನು ನೋಡುತ್ತಿರುವಹಾಗೆಯೇ ಸಮೀಪದಲ್ಲಿದ್ದ ಒಂ ದಾನೊಂದು ಮರದ ಕೊಂಬೆಯನ್ನು ಸೀಳುವ ನೆವದಿಂದ,ಜರಾಸಂಧನ ದೇ ಹವನ್ನು ಸೀಳಿಹಾಕತಕ್ಕ ರೀತಿಯನ್ನು ಆ ಭೀಮನಿಗೆ ಸಂಜ್ಞೆಮಾಡಿ ತೋರಿಸಿ ದನು ಒಡನೆಯೇ ಭೀಮನು ಈ ಸಂಜ್ಞೆಯನ್ನು ತಿಳಿದುಕೊಂಡು ಮುಂದೆ ನುಗ್ಗಿ, ಆ ಜರಾಸಂಧನನ್ನು ಬಲಾತ್ಕಾರದಿಂದ ಹಿಡಿದು, ಅವನ ಒಂದು ಕಾಲನ್ನು ತನ್ನ ಕಾಲಿನಿಂದ ಮೆಟ್ಟಿಕೊಂಡು, ಮತ್ತೊಂದುಕಾಲನ್ನು ತನ್ನ ಎರಡುಕೈಗಳಿಂದಲೂ ಬಲವಾಗಿ ಹಿಡಿದು, ಆನೆಯು ಮರದ ಕೊಂಬೆಯನ್ನು ಸೀಳುವಂತೆಗುದದ್ವಾರದಿಂದ ಮೇಲಕ್ಕೆಅವನ ದೇಹವನ್ನುಸೀಳಿ,ಅವೆರಡನ್ನೂ ಪ್ರತ್ಯೇಕವಾಗಿ ದೂರದೂರಕ್ಕೆ ಬಿಸಾಡಿಬಿಟ್ಟನು ಜರಾಸಂಧನ ದೇಹವು ಎ ರಡುಸೀಳಾಗಿ ಬಿದ್ದಿತು.ಒಂದೊಂದು ತುಂಡಿನಲ್ಲಿಯೂ, ಒಂದುಕಾಲು, ಒಂ ದು ತೊಡೆ, ಒಂದುಬೀಜ, ಅರ್ಧನಡು, ಅರ್ಧಬೆನ್ನು, ಒಂದೇಮೊಲೆ, ಒಂದೇ ಹೆಗಲು,ಒಂದೇತೋಳು, ಒಂದೇಹುಬ್ಬು, ಒಂದೇಕಣ್ಣು, ಒಂದೇಕಿವಿ, ಹೀಗೆ ಅರ್ಧಾವಯವಗಳುಮಾತ್ರವೇ ಇರುವುದನ್ನುನೋಡಿ, ಜನರೆಲ್ಲರೂ ಭಯಾ ಶ್ಚರ್ಯಗಳಿಂದ ಸ್ತಬ್ಧರಾಗಿದ್ದರು. ಜರಾಸಂಧನ ವಧವನ್ನುನೋಡಿ ಅವನ ಕಡೆ ಯವರೆಲ್ಲರೂ ಹಾಹಾಕಾರದಿಂದ ಅರಚುತಿದ್ದರು. ಕೃಷ್ಣಾರ್ಜುನರಿಬ್ಬರೂ ಮುಂದೆ ಬಂದು ಭೀಮನನ್ನಾಲಿಂಗಿಸಿ ಮನ್ನಿಸಿದರು. ಪರಮಪುರುಷನಾದ ಕೃಷ್ಣನ ಅಂಗಸ್ಪರ್ಶಮಾತ್ರದಿಂದ ಭೀಮನಿಗೆ ಯುದ್ಧಶ್ರಮವೇ ತೋರದೆ, ಅವನ ಮುಖದಲ್ಲಿ ಉಲ್ಲಾಸವು ತುಳುಕುತಿತ್ತು ಆಮೇಲೆ ಕೃಷ್ಣ ನು, ಜರಾಸಂಧನ ಮಗನಾದ ಸಹದೇವನಿಗೆ ಮಗಧರಾಜ್ಯದ ಪಟ್ಟಾಭಿ ಷೇಕವನ್ನು ಮಾಡಿ, ಜರಾಸಂಧನು ಸೆರೆಯಲ್ಲಿಟ್ಟಿದ್ದ ರಾಜರೆಲ್ಲರನ್ನೂ ಬಿಡಿಸಿ,ಅವರವರ ರಾಜ್ಯಗಳಿಗೆ ಕಳುಹಿಸಿಕೊಟ್ಟನು ಇದು ಎಪ್ಪತ್ತೆರಡನೆಯ ಅಧ್ಯಾಯವು

---




೨೨೬೦. ಜರಾಸಂಧನ ವಧೆ.

——ಬಂಧವಿಮುಕ್ತರಾದ ರಾಜರು ಕೃಷ್ಣನನ್ನು ಸ್ತುತಿಸಿದುದು.——

ಓ ಪರೀಕ್ಷಿದ್ರಾಜಾ ! ಜರಾಸಂಧನಿಂದ ಯುದ್ಧದಲ್ಲಿ ಪರಾಜಿತರಾಗಿ, ಸೆರೆಸಿಕ್ಕಿದ್ದ ರಾಜರ ಸಂಖ್ಯೆಯು ಇಪ್ಪತ್ತುಸಾವಿರದ ಎಂಟುನೂರರವರೆಗಿದ್ದಿತು ಅವರೆಲ್ಲರನ್ನೂ ಜರಾಸಂಧನು ಒಂದಾನೊಂದುಪರ್ವತದ ತಪ್ಪಲಲ್ಲಿ ನಿರ್ಬಂಧಿಸಿಟ್ಟಿದ್ದನು. ಈಗ ಕೃಷ್ಣಾನುಗ್ರಹದಿಂದ ಅವರೆಲ್ಲರೂ ಬಂಧವಿಮುಕ್ತರಾಗಿ, ಕೃಷ್ಣನನ್ನು ನೋಡುವುದಕ್ಕಾಗಿ ಬಂದರು ಅವರ ದುಸ್ಥಿತಿಯನ್ನು ಕೇಳಬೇಕೆ? ಬಹುಕಾಲದಿಂದ ಸ್ನಾನವಿಲ್ಲದೆ ಕೊಳೆಯೇರಿದ ಮೈ ! ಮಾಸಿದ ವಸ್ತ್ರಗಳು!ತಕ್ಕ ಆಹಾರವಿಲ್ಲದೆ ಬಹುಕಾಲದ ಕಾರಾಗೃಹನಿರ್ಬಂಧದಿಂದ ಕೃಶವಾದ ಅವಯವಗಳು ! ಬಾಡಿದ ಮುಖಕಾಂತಿ ! ಇಂತಹಸ್ಥಿತಿಯಲ್ಲಿ ಅವರೆಲ್ಲರೂ ಬಂದು, ನೀಲಮೇಘಶ್ಯಾಮನಾಗಿ, ಪೀತಾಂಬರದಿಂದಲೂ, ಶ್ರೀವತ್ಸಚಿಹ್ನದಿಂದಲೂ, ಕಮಲದಳದಂತಿರುವ ಕಣ್ಣುಗಳಿಂದಲೂ, ಪ್ರಸನ್ನಮುಖದಿಂದಲೂ, ಶಂಖಚಕ್ರಗದಾಪದ್ಮಗಳೊಡಗೂಡಿದ ಚತುರ್ಭುಜಗಳಿಂದಲೂ,ಕಿರೀಟ,ಕುಂಡಲ, ಹಾರ, ಕಟಕ,ಕಟಿಸೂತ್ರಾಂಗದ ಕೌಸ್ತುಭ, ವನಮಾಲಾದ್ಯಲಂಕಾರಗಳಿಂದಲೂ ಶೋಭಿತನಾಗಿ, ಲೋಕಮೋಹನಾಕಾರವುಳ್ಳ ಶ್ರೀಕೃಷ್ಣನನ್ನು ಕಂಡರು. ಅವರೆಲ್ಲರೂ ಆ ಕೃಷ್ಣನ ದಿವ್ಯಸೌಂದರ್ಯವನ್ನು ಕಣ್ಣುಗಳಿಂದ ಕುಡಿಯುವಂತೆಯೂ, ನಾಲಗೆಯಿಂದ ನೆಕ್ಕುವಂತೆಯೂ, ಮೂಗಿನಿಂದ ಘ್ರಾಣಿಸುವಂತೆಯೂ, ತೋಳುಗಳಿಂದ ಆಲಿಂಗಿಸುವಂತೆಯೂ, ತೃಪ್ತಿಯಿಲ್ಲದೆ ನೋಡುತಿದ್ದು, ಎಲ್ಲರೂ ಆ ಕೃಷ್ಣನ ಪಾದಗಳನ್ನು ಹಿಡಿದು ತಲೆಬಗ್ಗಿ ನಮಸ್ಕರಿಸಿದರು ಆಗ ಅವರಿಗೆ ಆಕೃಷ್ಣದರ್ಶನದಿಂದುಂಟಾದ ಮಹಾನಂದವು, ಹಿಂದೆ ಅವರು ಬಹುಕಾಲದಿಂದ ಅನುಭವಿಸುತಿದ್ದ ಕಾರಾಗೃಹದ ಕಷ್ಟಗಳೆಲ್ಲವನ್ನೂ ಕ್ಷಣಮಾತ್ರದಲ್ಲಿ ಮರೆಯುವಂತೆ ಮಾಡಿತು. ಎಲ್ಲರೂ ಬದ್ಧಾಂಜಲಿಗಳಾಗಿ ನಿಂತು ಹೀಗೆಂದು ಸ್ತುತಿಸುವರು “ದೇವದೇವೇಶಾ ! ಆಶ್ರಿತದುಃಖನಿವಾರಕಾ ! ಅವ್ಯಯಾ ! ಕೃಷ್ಣಾ ! ನಿನಗೆ ನಮಸ್ಕಾರವು! ಶರಣಾಗತರಾದ ನಮ್ಮನ್ನುದ್ಧರಿಸು! ಈಗ ನೀನು ನಮ್ಮನ್ನು ಜರಾಸಂಧನ ಬಂಧದಿಂದ ಬಿಡಿಸಿದರೂ, ಅದಕ್ಕಿಂತಲೂ ಭಯಂಕರವಾದ ಸಂಸಾರಬಂಧದಿಂದ ನಮ್ಮನ್ನು ಬಿಡಿಸತಕ್ಕ ಭಾರ

ವೂ ನಿನ್ನದಾಗಿದೆ! ಓನಾಥಾ! ಮಧುಸೂದನಾ! ಆ ಜರಾಸಂಧನು ನಮ್ಮ
ನ್ನು ಸೆರೆಯಲ್ಲಿ ನಿರ್ಬಂಧಿಸಿಟ್ಟಿದ್ದುದಕ್ಕಾಗಿ ನಾವು ಸ್ವಲ್ಪವೂ ಅವನಮೇಲೆ
ಕೋಪಿಸಲಾರೆವು. ಏಕೆಂದರೆ, ನಾವು ರಾಜ್ಯಭ್ರಷ್ಟರಾಗಿ ಸೆರೆಯಲ್ಲಿ ಸಿಕ್ಕಿ
ಬಿದ್ದುದರಿಂದಲ್ಲವೇ, ಈಗ ನಿನ್ನ ಅನುಗ್ರಹಕ್ಕೆ ಪಾತ್ರರಾಗಿ ನಿನ್ನನ್ನು ಸಾಕ್ಷಾ
ತ್ತಾಗಿ ನೋಡುವ ಭಾಗ್ಯವು ಲಭಿಸಿತು ಆದುದರಿಂದ ಜರಾಸಂಧನ ನಿರ್ಬಂ
ಧವೂ ನಮಗೆ ಗುಣರೂಪವಾಗಿಯೇ ಪರಿಣಮಿಸಿತು ರಾಜ್ಯಾಧಿಕಾರದಲ್ಲಿರ
ತಕ್ಕ ರಾಜನು, ತನ್ನ ಐಶ್ವರ್ಯಮದದಿಂದ ಬೀಗಿಬೆರೆಯುತ್ತ, ತನ್ನ ಶ್ರೇಯಸ್ಸಿಗೆ
ದಾರಿಯನ್ನೇ ತಿಳಿಯಲಾರನು. ಅಂತವನು ನಿನ್ನ ಮಾಯೆಯಿಂದ ಮೋಹಿತ
ನಾಗಿ, ಅನಿತ್ಯವಾದ ಭೋಗಸಮೃದ್ಧಿಯನ್ನೇ ನಿತ್ಯವೆಂದು ಭ್ರಮಿಸುವನು.
ಅರಿಯದ ಬಾಲಕರು ಬಿಸಿಲ್ಗೊರೆಯನ್ನು ಕಂಡು ನೀರೆಂದು ಭ್ರಮಿಸು
ವಂತೆ, ಅವಿವೇಕಿಗಳು ನಿನ್ನ ಮಾಯಾವಿಕಾರಗಳಾದ ಭೋಗಸಾಮಗ್ರಿಗಳ
ನ್ನೇ ತಮಗೆ ಸುಖಹೇತುವೆಂದು ಭ್ರಮಿಸುವರು ಓ ಪ್ರಭೂ! ಹಿಂದೆ ನಾವು
ರಾಜ್ಯಾಧಿಕಾರದಲ್ಲಿರುವಾಗ, ಐಶ್ವರ್ಯಮದದಿಂದ ಮುಂಗಾಣದಿದ್ದೆವು.
ರಾಜ್ಯವನ್ನು ಹೆಚ್ಚಿಸಬೇಕೆಂಬ ದುರಾಸೆಯಿಂದ, ನಮ್ಮ ರಾಜಕುಲ
ದಲ್ಲಿಯೇ ಒಬ್ಬರಿಗೊಬ್ಬರು ಹೋರಾಡುತ್ತ, ನಮ್ಮ ಬೆನ್ನಹಿಂದೆ ಕಾದಿರುವ
ಮೃತ್ಯುವನ್ನೂ ತಿಳಿಯದೆ, ದಯಾಶೂನ್ಯರಾಗಿ ಪ್ರಜೆಗಳನ್ನು ಕೊಲ್ಲು
ತಿದ್ದೆವು. ಹಾಗೆ ಮದಾಂಧರಾಗಿದ್ದ ನಾವೇ ಈಗ, ನಿನ್ನ ಶರೀರಭೂ
ತವಾದ ಕಾಲದಿಂದ, ರಾಜ್ಯಭ್ರಷ್ಟರಾಗಿ, ಹೆಮ್ಮೆಯಡಗಿದ್ದೆವು! ನಿನ್ನ
ಅನುಗ್ರಹದಿಂದಲೇ ಈಗ ನಿನ್ನ ಪಾದಸಾನ್ನಿಧ್ಯವನ್ನು ಸೇರಿದೆವು. ಆದುದ
ರಿಂದ, ಇನ್ನುಮೇಲಾದರೂ ನಮಗೆ, ಅನೇಕರೋಗಗಳಿಗೆ ಗುರಿಯಾಗಿ,ಯಾ
ವಾಗಲೋ ನಾಶಹೊಂದತಕ್ಕ ಈದೇಹದಲ್ಲಿ ಮೃಗತೃಷ್ಣೆ(ಬಿಸಿಲ್ಗೊರೆ) ಗೆ
ಸಮಾನವಾದ ರಾಜ್ಯಸುಖದಾಸೆಯು ಹುಟ್ಟದಂತೆ ಅನುಗ್ರಹಿಸು. ಮತ್ತು,
ದೇಹಾವಸಾನದಲ್ಲಿ ಯಜ್ಞಯಾಗಾದಿಕರ್ಮಗಳಿಗೆ ಫಲವಾಗಿ ಲಭಿಸತಕ್ಕ ಸ್ವ
ರ್ಗಾದಿಸುಖಗಳೂಕೂಡ,ಕೇಳುವಾಗಮಾತ್ರ ಕಿವಿಗಿಂಪಾಗಿರುವುದೇ ಹೊರ
ತು,ಅದನ್ನನುಭವಿಸುತ್ತಿರುವಷ್ಟುಕಾಲವೂ,ಆಪುಣ್ಯಫಲವು ಎಂದಿಗೆತೀರಿಹೋ
ಗುವುದೋ ಎಂಬಭಯಕ್ಕೆ ಕಾರಣವಾಗಿ, ದುಃಖಮಿಶ್ರವಾಗಿಯೇ ಇರುವುದು.

ಆದುದರಿಂದ ಆ ಸ್ವರ್ಗಾದಿಸುಖಗಳನ್ನೂ ನಾವು ಕೋರುವವರಲ್ಲ ನಮಗೆ ಈ ಸಂಸಾರಸಂಬಂಧವು ಬಿಟ್ಟುಹೋಗುವವರೆಗೆ, ನಿನ್ನ ಪಾದಾರವಿಂದಗಳ ಸ್ಮರಣವು ತಪ್ಪದಿರುವುದಕ್ಕೆ ಉಪಾಯವೇನೋ ಅದನ್ನು ಅನುಗ್ರಹಿಸ ಬೇಕು. ಕೃಷ್ಣಾ! ವಾಸುದೇವಾ! ಹರೀ! ಪರಮಾತ್ಮಾ! ಆರ್ತಾರ್ತಿ ಹರಾ! ಗೋವಿಂದಾ! ನಿನಗೆ ಬಾರಿಬಾರಿಗೂ ನಮಸ್ಕಾರವು" ಎಂದರು.

ಹೀಗೆ ರಾಜರು ಸ್ತೋತ್ರಮಾಡುವುದನ್ನು ಕೇಳಿ, ಭಕ್ತವತ್ಸಲನಾದ ಕೃಷ್ಣನು ಕೃಪಾವಶನಾಗಿ, ಅವರನ್ನು ಕುರಿತು ಮಧುರವಾಕ್ಯದಿಂದ ಹೀಗೆಂದು ಹೇಳುವನು. "ಎಲೈರಾಜರೆ! ಅದೃಷ್ಟವಶದಿಂದ ನಿಮಗೆ ಈ ಸದ್ಬುದ್ಧಿಯು ಹುಟ್ಟಿರುವುದು. ಇದುಮೊದಲು ನಿಮಗೆ, ನಿಮ್ಮ ಉದ್ದೇಶದಂತೆ, ಅಖಿಲೇಶ್ವರನಾದ ನನ್ನಲ್ಲಿ ದೃಢವಾದ ಭಕ್ತಿಯು ಹುಟ್ಟಲಿ! ಮನುಷ್ಯರು ಐಶ್ವರ್ಯದಿಂದಲೂ, ಅಧಿಕಾರದಿಂದಲೂ ಮತ್ತರಾಗಿ ತಮ್ಮ ಶ್ರೇಯಸ್ಸನ್ನು ಕಾಣದಿರುವರೆಂದು ನೀವು ಹೇಳಿದುದೇನೋ ವಾಸ್ತವವೇ! ಈಗ ನಿಮ್ಮ ಪ್ರವರ್ತನವು ಸಾಧುಸಮ್ಮತವಾದುದು. ಹಿಂದೆ ಕಾರ್ತವೀರ್ಯ, ನಹುಷ, ವೇನ ರಾವಣ, ನರಕಾಸುರಾದಿರಾಜರೂ, ಇನ್ನೂ ಅನೇಕದೇವದಾನವರೂ ತಮ್ಮ ಐಶ್ವರ್ಯಮದದಿಂದಲೇ ತಮಗಿದ್ದ ಉತ್ತಮಪದವಿಯನ್ನು ಕಳೆದು ಕೊಂಡರು. ಇದನ್ನು ನೀವು ಚೆನ್ನಾಗಿ ನೆನಪಿನಲ್ಲಿಟ್ಟು, ಈ ದೇಹಾದಿಗಳು ಹುಟ್ಟಿದಹಾಗೆ ಎಂದಿದ್ದರೂ ನಾಶಹೊಂದತಕ್ಕವುಗಳೆಂಬುದನ್ನೂ ತಿಳಿದು, ನಿಮ್ಮ ಜೀವಿತಕಾಲದವರೆಗೆ ಯಜ್ಞಾದಿಗಳಿಂದ ನನ್ನನ್ನಾರಾಧಿಸುತ್ತ, ಧರ್ಮದಿಂದ ಪ್ರಜೆಗಳನ್ನು ಪಾಲಿಸುತ್ತಿರಬೇಕು. ಪುತ್ರಪೌತ್ರಾದಿಗಳಿಂದ ನಿಮ್ಮ ಸಂತಾನವನ್ನು ವೃದ್ಧಿಗೊಳಿಸಬೇಕು! ಜನನಮರಣಗಳಲ್ಲಿಯಾಗಲಿ, ಸುಖದುಃಖಾದಿದ್ವಂದ್ವಗಳಲ್ಲಿಯಾಗಲಿ ಮನಸ್ಸುಕಲಗದೆ, ಸಮಬುದ್ಧಿಯಿಂದ ಸಹಿಸಿಕೊಳ್ಳುತ್ತ, ನನ್ನಲ್ಲಿಯೇ ನಟ್ಟಮನಸ್ಸುಳ್ಳವರಾಗಿ, ನಿಮ್ಮ ಕಾಲಶೇಷವನ್ನು ಕಳೆಯಿರಿ! ದೇಹಾದಿಗಳಲ್ಲಿ ಅಹಂಕಾರಮಮಕಾರಗಳನ್ನು ತ್ಯಜಿಸಿ, ಉದಾಸೀನರಾಗಿದ್ದು, ಆತ್ಮಪರಮಾತ್ಮತತ್ವವನ್ನು ಯಥಾಸ್ಥಿತವಾಗಿ ತಿಳಿಯುತ್ತಿರಿ! ಈ ರೀತಿಯಿಂದ ನಿಮ್ಮ ಪ್ರಾರಬ್ಧಕರ್ಮಗಳನ್ನು ಕಳೆದ ಮೇಲೆ, ನೀವು ನನ್ನ ಸಾನ್ನಿಧ್ಯವನ್ನು ಸೇರಬಹುದು" ಎಂದನು. ಸರ್ವೇಶ್ವರನಾ

ದ ಭಗವಂತನು ಆ ರಾಜರಿಗೆ ಹೀಗೆಂದಾಜ್ಞಾಪಿಸಿ, ಅವರಿಗೆ ಅಭ್ಯಂಗನಸ್ನಾನಾದಿಗಳನ್ನು ಮಾಡಿಸುವುದಕ್ಕಾಗಿ ಕೆಲವುಪುರುಷರನ್ನೂ, ಸ್ತ್ರೀಯರನ್ನೂ ನಿಯಮಿಸಿದನು ಮಗಧರಾಜನಾದ ಸಹದೇವನಿಂದ ಅವರಿಗೆ ಉತ್ತಮವಸ್ತ್ರಾಭರಣಗಳನ್ನೂ, ಗಂಧಪುಷ್ಪಾದಿಗಳನ್ನೂ ತರಿಸಿಕೊಟ್ಟು ಅಲಂಕಾರಮಾಡಿಸಿದನು. ಆಮೇಲೆ ಅವರಿಗೆ ಮೃಷ್ಟಾನ್ನಭೋಜನಗಳನ್ನು ಮಾಡಿಸಿ, ರಾಜೋಚಿತಗಳಾದ ತಾಂಬೂಲಾದ್ಯುಪಚಾರಗಳಿಂದಲೂ ಸತ್ಕರಿಸಿದನು. ಹೀಗೆ ಕೃಷ್ಣಾನುಗ್ರಹದಿಂದ ಬಂಧಮುಕ್ತರಾಗಿ, ಕಿರೀಟಕುಂಡಲಾದ್ಯಾಭರಣಗಳಿಂದಲಂಕೃತರಾದ ಆ ರಾಜಕುಮಾರರೆಲ್ಲರೂ, ವರ್ಷಾಕಾಲವು ಕಳೆದಮೇಲೆ, ಆಕಾಶದಲ್ಲಿ ಸ್ವಚ್ಛವಾಗಿ ಪ್ರಕಾಶಿಸುವ ಗ್ರಹಸಮೂಹಗಳಂತೆ ತಮ್ಮ ಮೊದಲಿನ ರಾಜತೇಜಸ್ಸಿನಿಂದ ಬೆಳಗುತಿದ್ದರು ಆಮೇಲೆ ಕೃಷ್ಣನು ಅವರೆಲ್ಲರನ್ನೂ ರತ್ನಖಚಿತವಾದ ಸುವರ್ಣರಥಗಳಮೇಲೆ ಕುಳ್ಳಿರಿಸಿ, ಪ್ರಿಯವಾಕ್ಯಗಳಿಂದ ಆದರಿಸಿ, ಅವರವರ ದೇಶಕ್ಕೆ ಕಳುಹಿಸಿಕೊಟ್ಟನು. ಆ ರಾಜಕುಮಾರರೆಲ್ಲರೂ ತಮಗೆ ಮಹಾವಿಪತ್ತನ್ನು ತಪ್ಪಿಸಿದ ಆಕೃಷ್ಣನನ್ನು ಅನವರತವೂ ಮನಸ್ಸಿನಲ್ಲಿ ಧ್ಯಾನಿಸುತ್ತ, ಅವನ ಅದ್ಭುತಚರಿತ್ರೆಗಳನ್ನು ಕೊಂಡಾಡುತ್ತ, ತಮ್ಮತಮ್ಮ ದೇಶಗಳಿಗೆ ಹೋಗಿ ಸೇರಿದರು. ಅಲ್ಲಿ ತಮ್ಮ ಪ್ರಜೆಗಳೆಲ್ಲರಿಗೂ ಶ್ರೀಕೃಷ್ಣನು ತಮಗೆ ಮಾಡಿದ ಮಹೋಪಕಾರವನ್ನು ತಿಳಿಸಿ, ಆ ಭಗವಂತನು ತಮಗೆ ನಿಯಮಿಸಿದ್ದರೀತಿಯಲ್ಲಿಯೇ ಎಚ್ಚರಿಕೆಯಿಂದ ಪ್ರಜೆಗಳನ್ನು ಪಾಲಿಸುತ್ತಿದ್ದರು. ಇತ್ತಲಾಗಿ ಕೃಷ್ಣನೂಕೂಡ, ಜರಾಸಂಧನವಧವಾದಮೇಲೆ,ಅವನ ಮಗನಾದ ಸಹದೇವನಿಂದ ಪೂಜಿತನಾಗಿ, ಭೀಮಾರ್ಜುನರೊಡನೆ ಅಲ್ಲಿಂದ ಹಿಂತಿರುಗಿ ಇಂದ್ರಪ್ರಸ್ಥಪುರವನ್ನು ಪ್ರವೇಶಿಸಿದನು. ಆಪಟ್ಟಣದ ಬಾಗಿಲಿಗೆ ಬರುವಾಗಲೇ, ತನ್ನ ಇಷ್ಟಮಿತ್ರರಿಗೆ ಸಂತೋಷವನ್ನೂ, ಶತ್ರುಗಳಿಗೆ ಸಂಕಟವನ್ನೂ ಹುಟ್ಟಿಸುವಂತೆ, ವಿಜಯಸೂಚಕವಾದ ಪಾಂಚಜನ್ಯವೆಂಬ ಶಂಖವನ್ನು ಧ್ವನಿಮಾಡಿದನು. ಈ ಧ್ವನಿಯನ್ನು ಕೇಳಿ ಪುರವಾಸಿಗಳೆಲ್ಲರೂ ಜರಾಸಂಧನು ಹತನಾದನೆಂದು ತಿಳಿದು ಸಂತೋಷದಿಂದ ಉಬ್ಬುತಿದ್ದರು. ಧರ್ಮರಾಜನೂಕೂಡ ಅಂದಿಗೆ ತನ್ನ ಮನೋರಥವು ಕೈಗೂಡಿತೆಂದು ಹರ್ಷಿತನಾದನು. ಆಮೇಲೆ ಕೃಷ್ಣನು, ಭೀಮಾ

ರ್ಜುನರೊಡನೆ ಒಂದು, ಧರ್ಮರಾಜನಿಗೆ ನಮಸ್ಕರಿಸಿ, ತಾನು ನಡೆಸಿ ಬಂದಕಾರ್ಯಗಳೆಲ್ಲವನ್ನೂ ಅವನಿಗೆ ತಿಳಿಸಿದನು. ಆ ವೃತ್ತಾಂತಗಳನ್ನು ಕೇಳಿ ಧರ್ಮರಾಜನು, ಕಣ್ಣುಗಳಲ್ಲಿ ಆನಂದಬಾಷ್ಪವನ್ನು ತುಳುಕಿಸುತ್ತ, ಸಂತೋಷಪರವಶನಾಗಿ ಮಾತಾಡಲಾರದೆ ಸುಮ್ಮನಿದ್ದನು. ಇದು ಎಪ್ಪತ್ತುಮೂರನೆಯ ಅಧ್ಯಾಯವು.

---

## ಧರ್ಮರಾಜನ ರಾಜಸೂಯಯಾಗವು.

ಓ! ಪರೀಕ್ಷಿದ್ರಾಜಾ! ಧರ್ಮರಾಜನು ಜರಾಸಂಧನ ವಧವನ್ನೂ, ಶ್ರೀಕೃಷ್ಣನ ಪ್ರಭಾವವನ್ನೂ ಕೇಳಿ ಪರಮಾನಂದಭರಿತನಾಗಿ, ಅವನೊಡನೆ “ಕೃಷ್ಣಾ ! ಮೂರುಲೋಕಕ್ಕೂ ಪೂಜ್ಯರಾದ ಸನಕಾದಿಗಳೂ, ಇತರ ಸಮಸ್ತಜನವೂ, ಲೋಕಪಾಲಕರೂ, ನಿನ್ನ ಆಜ್ಞೆಯೇ ತಮಗೆ ಪರಮಭಾಗ್ಯವೆಂದು ತಿಳಿದು, ಅದನ್ನು ಎಷ್ಟೋ ಭಕ್ತಿಯಿಂದ ಶಿರಸಾಧಾರಣಮಾಡುತ್ತಿರುವರು. ಅಂತಹ ನೀನು, ಲೋಕದಲ್ಲಿ ತಾವೇ ಪ್ರಭುಗಳೆಂಬ ಅಹಂಕಾರದಿಂದ ಬೀಗಿದ ನಮ್ಮಂತಹ ಅಲ್ಪರಾಜರ ಮಾತನ್ನು ಎಷ್ಟೋ ಗೌರವದಿಂದ ತಲೆಯಲ್ಲಿ ಧರಿಸಿ ನಡೆಸುತ್ತಿರುವೆಯಲ್ಲವೆ? ಇದು ನಿನ್ನ ಮಾಯಾನಟನವಲ್ಲದೆ ಮತ್ತೇನು? ಈ ಕಾರ್ಯಗಳಿಂದ ನೀನು ಲೋಕದಲ್ಲಿ ಕೀರ್ತಿಯನ್ನು ಸಂಪಾದಿಸಬೇಕಾದುದೂ ಇಲ್ಲ! ಏಕೆಂದರೆ, ಈ ಸಮಸ್ತಜಗತ್ತಿಗೂ ನೀನೇ ಉಪಾದಾನಕಾರಣನು. ಈ ಜಗತ್ತೆಲ್ಲವೂ ನಿನ್ನ ಸ್ವರೂಪವಾಗಿಯೇ ಇರುವುದು ಇದಕ್ಕೆ ನಿಮಿತ್ತಕಾರಣನೂ ನೀನೇ! ಸರ್ವಾಂತರ್ಯಾಮಿಯಾದ ಪರಬ್ರಹ್ಮವೂ ನೀನೇ ! ಸೂರ್ಯನ ಉದಯಾಸ್ತಮಯಗಳಿಂದ ಅವನ ತೇಜಸ್ಸಿಗೆ ವೃದ್ಧಿಯನ್ನಾಗಲಿ, ಹಾನಿಯನ್ನಾಗಲಿ ಹೇಗೆ ಆರೋಪಿಸುವುದಕ್ಕಿಲ್ಲವೋ, ಹಾಗೆಯೇ ಈ ನಿನ್ನ ಕಾರ್ಯಗಳಿಂದ ನಿನ್ನ ತೇಜಃಪ್ರಭಾವವು ಹೆಚ್ಚುಕಡಿಮೆಯಾಗುವ ಹಾಗಿಲ್ಲ! ಅಥವಾ ನಿನ್ನ ವಿಷಯವು ಹಾಗಿರಲಿ! ನಿನ್ನನ್ನು ನಂಬಿದ ಭಕ್ತರೂಕೂಡ, ದೇಹಾಭಿಮಾನವುಳ್ಳ ಪಶುಪ್ರಾಯರಾದ ಮೂಢಜನರಂತೆ ತಾನೆಂದೂ, ತನ್ನದೆಂದೂ, ನೀನೆಂದೂ, ನಿನ್ನದೆಂದೂ, ಭೇದಬುದ್ಧಿಯನ್ನಿಡಲಾರರು. ಹೀಗಿರುವಾಗ ಆ ಆತ್ಮಾಭಿಮಾನದಿಂದಲೇ ಉಂಟಾಗತಕ್ಕ ಹಾನಿ

ವೃದ್ಧಿಗಳು ನಿನ್ನಲ್ಲಿಲ್ಲವೆಂಬುದನ್ನು ಹೇಳತಕ್ಕುದೇನು? ಹೀಗೆ ಸರ್ವಭೂತ ಸಮನಾದ ನೀನು ಈಗ ನನ್ನಿಂದ ನಡೆಸಲ್ಪಡುವ ಯಜ್ಞವು ಪೂರ್ತಿಯಾಗು ವಂತೆ ಅನುಗ್ರಹಿಸಬೇಕು" ಎಂದು ಹೇಳಿ ಕೃಷ್ಣನ ಅನುಜ್ಞೆಯನ್ನು ಪ ಡೆದು, ಯೋಗ್ಯವಾದ ಕಾಲದಲ್ಲಿ, ಬ್ರಹ್ಮವಾದಿಗಳಾದ ಬ್ರಾಹ್ಮಣೋ ತ್ತಮರನ್ನು ತನ್ನ ಯಾಗದಲ್ಲಿ ಋತ್ವಿಕ್ಕುಗಳಾಗಿರುವಂತೆ ಪ್ರಾರ್ಥಿಸಿ ಕೊಂಡನು. ಇದಕ್ಕಾಗಿ ಕೃಷ್ಣದ್ವೈಪಾಯನ, ಭರದ್ವಾಜ, ಸುಮಂ ತು, ಗೌತಮ, ಅಸಿತ, ವಸಿಷ್ಠ, ಚ್ಯವನ, ಕಣ್ವ, ಮೈತ್ರೇಯ, ಕವಷ, ತ್ರಿತ, ವಿಶ್ವಾಮಿತ್ರ, ವಾಮದೇವ, ಸುಮತಿ, ಜೈಮಿನಿ, ಕ್ರತು, ಪೈಲ, ಪರಾಶರ, ಅಗಸ್ತ್ಯ, ವೈಶಂಪಾಯನ, ಅಥರ್ವ, ಕಶ್ಯಪ, ಧೌಮ್ಯ, ಪರಶು ರಾಮ, ಆಸುರಿ, ವೀತಿಹೋತ್ರ, ಮಧುಚ್ಛಂದ, ವೀರಸೇನ, ಅಕೃತವ್ರಣ, ಮುಂತಾದ ಮಹರ್ಷಿಶ್ರೇಷ್ಠರೆಲ್ಲರನ್ನೂ ಕರೆಸಿದನು. ಭೀಷ್ಮದ್ರೋಣಕೃಪಾ ದಿಗಳನ್ನೂ ಪ್ರಾರ್ಥಿಸಿ ಕರೆತಂದನು ದುರ್ಯೋಧನನೇ ಮೊದಲಾದ ನೂರು ಮಂದಿ ಪುತ್ರರೊಡನೆ, ಧೃತರಾಷ್ಟ್ರನನ್ನೂ, ಮಹಾಧೀಮಂತನಾದ ವಿದು ರನನ್ನೂ ಆಹ್ವಾನಮಾಡಿದನು. ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರರೆಂಬ ನಾಲ್ಕುವರ್ಣದವರೂ, ಅನೇಕದೇಶಾಧಿಪತಿಗಳೂ, ಅವರ ಕಡೆಯ ಅಧಿ ಕಾರಿಗಳೂ, ಈ ಯಜ್ಞವನ್ನು ನೋಡಬೇಕೆಂಬ ಕುತೂಹಲದಿಂದ ಬಂದು ಸೇರಿದರು. ಆಮೇಲೆ ಕೆಲವುಬ್ರಾಹ್ಮಣೋತ್ತಮರು, ಚಿನ್ನದ ನೇಗಿಲಿನಿಂದ ಯಾಗಭೂಮಿಯನ್ನುಉತ್ತು ಶುದ್ಧಿಮಾಡಿ,ಧರ್ಮರಾಜನನ್ನು ಶಾಸ್ತ್ರೋಕ್ತ ವಾಗಿ ದೀಕ್ಷೆಯಲ್ಲಿರಿಸಿದರು. ಹಿಂದೆ ವರುಣಯಾಗದಲ್ಲಿ ಹೇಗೋಹಾಗೆ ಸುವರ್ಣಮಯವಾದ ಉಪಕರಣಗಳನ್ನಿಟ್ಟು ಯಜ್ಞವನ್ನಾರಂಭಿಸಿದರು. ಇಂದ್ರಾದಿಲೋಕಪಾಲಕರೂ, ಬ್ರಹ್ಮರುದ್ರರೂ, ಸಿದ್ಧ ಗಂಧರ್ವ ವಿದ್ಯಾಧರ ರಾಕ್ಷಸ ಮಹೋರಗರೂ, ಪನ್ನಗರೂ, ಕಿನ್ನರರೂ, ಚಾರ ಣರೂ, ಅನೇಕಮಹರ್ಷಿಗಳೂ, ರಾಜರೂ, ರಾಜಪತ್ನಿಯರೂ ಬಂದುಸೇರಿ ದರು.ಸಾಕ್ಷಾತ್ತಾಗಿ ಕೃಷ್ಣನ ಅನುಗ್ರಹದಿಂದ ನಡೆಯತಕ್ಕ ಈಧರ್ಮರಾಜನ ರಾಜಸೂಯಯಾಗದ ವೈಭವವನ್ನು ನೋಡಲು, ಎಲ್ಲರೂ ಕುತೂಹಲ ವಿಶಿಷ್ಟರಾಗಿದ್ದರು. ಹಿಂದೆ ದೇವತೆಗಳು ವರುಣನಿಂದ ಹೇಗೋಹಾಗೆ,

ದೇವವರ್ಜಸ್ಸುಳ್ಳ ಯಾಜಕರು, ಧರ್ಮರಾಜನಿಂದ ಶಾಸ್ತ್ರೋಕ್ತವಾಗಿ ಯಾಗವನ್ನು ನಡೆಸಿದರು.

### ಶಿಶುಪಾಲ ವಧವೃತ್ತಾಂತವು.

ಯಾಗವು ಪೂರ್ಣವಾಯಿತು. ಆ ಮೇಲೆ ಸೋಮಾಭಿಷವವೆಂಬ ದಿನದಲ್ಲಿ, ಧರ್ಮರಾಜನು, ಅಲ್ಲಿ ನೆರೆದಿದ್ದ ಸದಸಸ್ಪತಿಗಳನ್ನೂ, ಯಾಜಕರನ್ನೂ, ಇತರ ಮಹಾತ್ಮರನ್ನೂ ತಕ್ಕಸತ್ಕಾರಗಳಿಂದ ಪೂಜಿಸತೊಡಗಿದನು. ಆದರೆ ಅವರಲ್ಲಿ ಮೊದಲು ಯಾರಿಗೆ ಅಗ್ರಪೂಜೆಯನ್ನು ನಡೆಸಬೇಕೆಂದು ಅವನಿಗೆ ತೋರದೆ ಹೋಯಿತು. ಆ ಸಭೆಯಲ್ಲಿ ಅಂತಹ ಅಗ್ರಪೂಜೆಯನ್ನು ಹೊಂದುವುದಕ್ಕೆ ಯೋಗ್ಯರಾದವರನೇಕಮಂದಿಯಿದ್ದುದರಿಂದ, ಅವರಲ್ಲಿ ಯಾರನ್ನು ಪುರಸ್ಕರಿಸಬೇಕೆಂದು ತೋರದೆ ಧರ್ಮರಾಜನು ಯೋಚಿಸುತ್ತ ನಿಂತಿರುವಾಗ, ಪಂಚಪಾಂಡವರಲ್ಲಿ ಕಿರಿಯವನಾಗಿದ್ದರೂ ಮಹಾಬುದ್ಧಿಶಾಲಿಯೆನಿಸಿಕೊಂಡ ಸಹದೇವನು ಹೀಗೆಂದು ಹೇಳುವನು. “ಅಣ್ಣಾ! ಇಲ್ಲಿ ನಿನಗೆ ಸಂದೇಹವೇನಿದೆ? ಇದೋ! ಬ್ರಹ್ಮವಿದರಿಗೆ ಸ್ವಾಮಿಯಾದ ಈ ಕೃಷ್ಣನೇ ಇಲ್ಲಿನ ಅಗ್ರಪೂಜೆಗೆ ತಕ್ಕ ಪಾತ್ರವು. ಈ ಭಗವಂತನೇ ಸರ್ವದೇವತಾಸ್ವರೂಪನು. ಈ ಯಾಗಕ್ಕೆ ವಿಹಿತಗಳಾದ ದೇಶಕಾಲಧನಾದಿಗಳೆಲ್ಲವೂ ಇವನ ಸ್ವರೂಪವೇ! ಅಷ್ಟೇಕೆ? ಈ ಪ್ರಪಂಚವೇ ಈತನ ಶರೀರರೂಪವಾಗಿರುವುದು. ಸಮಸ್ತಕ್ರತುಗಳೂ ಏತನ್ಮಯವಾದುವು ಅಗ್ನಿದೇವನೂ, ಆಹುತಿಗಳೂ, ಮಂತ್ರಗಳೂ, * ಸಾಂಖ್ಯಯೋಗಗಳೂ ಇವೆಲ್ಲವೂ ತನ್ಮಯವಾದುದು. ಚರಾಚರಾತ್ಮಕವಾದ ಸಮಸ್ತಪ್ರಪಂಚಕ್ಕೂ ಈತನೇ ಅಂತರಾತ್ಮನು ಇವನೇಜಗತ್ಸೃಷ್ಟಿಗೆಮೊದಲು, ಚಿದಚಿದಾತ್ಮಕವಾದ ಪ್ರಪಂಚದೊಡನೆಕಲೆತು, ತಾನೊಬ್ಬನೇ ಒಬ್ಬನಾಗಿದ್ದವನು ಇವನಿಗೆ ಬೇರೆ ಕಾರಣವಸ್ತುವಿಲ್ಲವಾದುದರಿಂದ ಅದ್ವಿತೀಯನು. ಈ ಭಗವಂತನು ತನಗೆತಾನೇ ಆಧಾರನೇ ಹೊರತು, ಇವನಿಗೆ ಬೇರೆ ಆಶ್ರಯವಸ್ತುವಿಲ್ಲ! ತನ್ನನ್ನೇ ತಾನು ಉಪಕರಣ

* ಸಾಂಖ್ಯವೆಂದರೆ ಆತ್ಮಸ್ವರೂಪ ವಿಮರ್ಶನವು. ಯೋಗವೆಂದರೆ ಪರಮಾತ್ಮೋಪಾಸನವು. ಇವೆರಡಕ್ಕೂ ಭಗವಂತನೇ ನಿರ್ವಾಹಕನೆಂದು ಭಾವವು.

ವಾಗಿಟ್ಟುಕೊಂಡು, ಸಮಸ್ತಭೂತಗಳ ಸೃಷ್ಟಿ, ಸ್ಥಿತಿ, ಸಂಹಾರಗಳನ್ನು ನೆರವೇರಿಸುವನು. ಹೀಗೆ ತಾನೇ ಜಗದ್ರೂಪವಾಗಿ ಪರಿಣಮಿಸಿದ್ದರೂ, ಆ ಜಗತ್ತಿನ ಉತ್ಪತ್ತಿವಿನಾಶಾದಿವಿಕಾರಗಳಿಗೆ ಒಳಗಾಗದೆ, ಅಜನೆನಿಸಿಕೊಂಡಿರುವನು. ಹೀಗೆ ನಿರ್ವಿಕಾರನಾಗಿದ್ದರೂ, ಈತನು ಮನುಷ್ಯಾವತಾರವನ್ನೆತ್ತಿ ಕರ್ಮಗಳನ್ನು ನಡೆಸುವುದು, ಈ ಲೋಕಕ್ಕೆ ಧರ್ಮಾದಿಪುರುಷಾರ್ಥಸಿದ್ಧಿಗೆ ದಾರಿಯನ್ನು ತೋರಿಸುವುದಕ್ಕೇಹೊರತು. ಬೇರೆಯಲ್ಲ. ಆದುದರಿಂದ ಅಣ್ಣಾ! ಮಹಾತ್ಮನಾದ ಈ ಕೃಷ್ಣನಿಗೇ ಅಗ್ರಪೂಜೆಯನ್ನು ನಡೆಸು! ಇವನೊಬ್ಬನನ್ನು ಸತ್ಕರಿಸುವುದರಿಂದ ಸಮಸ್ತಭೂತಗಳನ್ನೂ ಪೂಜಿಸಿದಂತೆಯೇ ಆಗುವುದು. ಈತನು ಸರ್ವಾಂತರ್ಯಾಮಿಯಾದುದರಿಂದ ನಿನ್ನ ಆತ್ಮಕ್ಕೂ ಇದರಿಂದ ತೃಪ್ತಿಯುಂಟು. ಸಮಸ್ತಭೂತಗಳಿಗೂ ಅಂತರಾತ್ಮನಾಗಿ, ಸರ್ವಶರೀರಕನಾಗಿ, ರಾಗದ್ವೇಷಾದಿಗಳಿಲ್ಲದೆ ಶಾಂತನಾಗಿ, ಪೂರ್ಣಕಾಮನಾದುದರಿಂದ, ನಿತ್ಯಸಂತೋಷಿಯಾಗಿರುವ ಈ ಕೃಷ್ಣನಿಗೆ ನೀನು ಪೂಜೆಯನ್ನು ಮಾಡಿದಪಕ್ಷದಲ್ಲಿ, ಆ ನಿನ್ನ ಪೂಜೆಗೆ ಅಪಾರವಾದ ಫಲವುಂಟು. ಕರ್ಮಗಳಿಗೆ ಸಾರ್ಥಕ್ಯವನ್ನಪೇಕ್ಷಿಸುವವರೊಬ್ಬೊಬ್ಬರೂ ಇವನನ್ನೇ ಪೂಜಿಸಬೇಕು" ಎಂದನು. ಕೃಷ್ಣನ ಪ್ರಭಾವವನ್ನು ತಿಳಿದ ಸಹದೇವನು ಹೀಗೆಂದು ಹೇಳಿ ಸುಮ್ಮನಿರಲು, ಅಲ್ಲಿದ್ದ ಬ್ರಾಹ್ಮಣೋತ್ತಮರೆಲ್ಲರೂ "ಭಲೆ ಶಹಬಾಸ್" ಎಂದು ಆ ಸಹದೇವನ ಮಾತನ್ನು ಸಂತೋಷದಿಂದ ಅನುಮೋದಿಸಿದರು. ಇದೆಲ್ಲವನ್ನೂ ಕೇಳಿದಮೇಲೆ ಧರ್ಮರಾಜನು, ಸಂತೋಷದಿಂದ ಮುಂದೆ ಬಂದು, ಕೃಷ್ಣನಿಗೆ ಅಗ್ರಪೂಜೆಯನ್ನು ಮಾಡತೊಡಗಿದನು. ಮೊದಲು ಕೃಷ್ಣನ ಪಾದಗಳನ್ನು ತೊಳೆದು, ಆ ಪಾದತೀರ್ಥವನ್ನು ತನ್ನ ತಲೆಗೆ ಪ್ರೋಕ್ಷಿಸಿಕೊಂಡನು. ತನ್ನ ಪತ್ನಿಯಾದ ದ್ರೌಪದಿಗೂ, ತಮ್ಮಂದಿರಿಗೂ, ಮಂತ್ರಿವರ್ಗಗಳಿಗೂ ಅದನ್ನು ಶಿರಸಾಧಾರಣಮಾಡುವಂತೆ ಹೇಳಿದನು. ಆಮೇಲೆ ಕೃಷ್ಣನಿಗೆ ಅಮೂಲ್ಯವಾದ ಪೀತಾಂಬರಗಳನ್ನೂ, ಬೆಲೆಯುಳ್ಳ ಆಭರಣಗಳನ್ನೂ, ಕಾಣಿಕೆಯಾಗಿ ಸಮರ್ಪಿಸಿ, ಆತನ ಪಾದಪೂಜೆಯನ್ನುಮಾಡುತ್ತ, ಆಗ ತನಗುಂಟಾದ ಸಂತೋಷದಿಂದ ಕಣ್ಣಿನಲ್ಲಿ ಆನಂದಬಾಷ್ಪವು ಉಕ್ಕಿಬರುತ್ತಿರಲು, ಆ ಕೃಷ್ಣನ ದಿವ್ಯಮೂರ್ತಿಯನ್ನು

ನೋಡುವುದಕ್ಕೂ ಅವಕಾಶವಿಲ್ಲದೆ ಸುಮ್ಮನೆ ಮೈಮರೆತು ನಿಂತಿದ್ದನು. ಹೀಗೆ ಧರ್ಮರಾಜನು ಕೃಷ್ಣನಿಗೆ ಪೂಜೆಗಳನ್ನು ನಡೆಸುವಾಗ, ಅಲ್ಲಿ ನೆರೆದಿದ್ದ ಸಮಸ್ತಜನವೂ ತಲೆಯಮೇಲೆ ಕೈಜೋಡಿಸಿ “ನಮೋ ನಮಃ” ಎಂದು ಜಯಘೋಷವನ್ನು ಮಾಡುತಿತ್ತು ಆಕಾಶದಿಂದ ಪುಷ್ಪವೃಷ್ಟಿಯು ಸುರಿಯಿತು. ಅಲ್ಲಿ ನೆರೆದಿದ್ದ ಸಭಾಜನವೆಲ್ಲವೂ ಏಕವಾಕ್ಯದಿಂದ ಕೃಷ್ಣನ ಗುಣಗಳನ್ನು ಕೊಂಡಾಡುತ್ತಿದ್ದರು. ಇದನ್ನು ಕೇಳಿ ಅಲ್ಲಿದ್ದ ಶಿಶುಪಾಲ ನಿಗೆ ಸಹಿಸಲಾರದ ಸಂಕಟವುಂಟಾಯಿತು. ತಾನು ಕುಳಿತಿದ್ದ ಪೀಠದಿಂದ ಥಟ್ಟನೆ ಮೇಲೆದ್ದು, ಕೈಯನ್ನು ಮೇಲಕ್ಕೆತ್ತಿ, ಆ ಮಹಾಸಭೆಯಲ್ಲಿ ನಿರ್ಭಯವಾಗಿ ನಿಂತು, ಭಗವಂತನಾದ ಆ ಕೃಷ್ಣನನ್ನು ಪರುಷವಾಕ್ಯಗ ಳಿಂದ ಹೀಗೆಂದು ನಿಂದಿಸತೊಡಗಿದನು. “ಆಹಾ! ಕಾಲಗತಿಯನ್ನು ಮೀರು ವುದು ಯಾರಿಗೂ ಸಾಧ್ಯವಲ್ಲವೆಂದೂ, ಬ್ರಹ್ಮಾದಿಗಳೂ ಆ ಕಾಲವಶದಿಂದ ಬುದ್ಧಿಗೆಟ್ಟು ಹೋಗುವರೆಂಬೂ,ಹೇಳುವ ಲೋಕವಾರ್ತೆಯು ಯಥಾರ್ಥವೇ? ಏಕೆಂದರೆ, ಇಲ್ಲಿ ವಯೋವೃದ್ಧರಾದವರಿಗೂಕೂಡ ಅತ್ಯಲ್ಪನಾದ ಒಬ್ಬ ಸಣ್ಣಹುಡುಗನ ಮಾತಿನಿಂದ ಬುದ್ಧಿಯು ಕೆಟ್ಟುಹೋಯಿತಲ್ಲ! ಎಲೈ ಸದ ಸ್ಯರೆ! ನೀವು ಪಾತ್ರಾಪಾತ್ರಗಳನ್ನು ಚೆನ್ನಾಗಿ ಬಲ್ಲವರಾಗಿದ್ದೂ ಹುಡುಗ ನಾದ ಈ ಸಹದೇವನ ಮಾತನ್ನು ಕೇಳಿ, ಈ ಕೃಷ್ಣನೇ ಇಲ್ಲಿನ ಅಗ್ರಪೂ ಜೆಗೆ ಅರ್ಹನೆಂದು ನಂಬಬಹುದೆ! ತಪಸ್ಸಿನಲ್ಲಿಯೂ, ವ್ರತದಲ್ಲಿಯೂ, ಜ್ಞಾನದಲ್ಲಿಯೂ ಮೇಲೆನಿಸಿಕೊಂಡು, ಆ ಜ್ಞಾನಬಲದಿಂದ ಪಾಪಗಳೆಲ್ಲ ವನ್ನೂ ಕಳೆದು ಬ್ರಹ್ಮನಿಷ್ಠರಾದ ಪರಮರ್ಷಿಗಳು ಈ ಸಭೆಯಲ್ಲಿ ಎಷ್ಟೋಮಂದಿಯುಂಟು. ಅವರೆಲ್ಲರೂ ಲೋಕಪಾಲಕರಿಂದಲೂ ಗೌ ರವಿಸಲ್ಪಡತಕ್ಕ ಮಹಾಮಹಿಮೆಯುಳ್ಳವರು. ಅಂತವರೆಲ್ಲರನ್ನೂ ಅಲ ಕ್ಷ್ಯಮಾಡಿ, ನೀಚಕುಲದವನಾದ ಈ ಗೊಲ್ಲನಿಗೆ ಅಗ್ರಪೂಜೆಯನ್ನು ನಡೆಸು ವಿರಾ! ಕಾಗೆಗೆ ಪುರೋಡಾಶವನ್ನು ಕೊಡುವಂತೆ, ಇವನಿಗೆ ಈ ವಿಧವಾದ ಪೂ ಜೆಯನ್ನರ್ಪಿಸುವುದು ಯೋಗ್ಯವೆ!*ಇವನಿಗಾದರೋ ಕುಲವಿಲ್ಲ! ಆಶ್ರಮವಿಲ್ಲ!

* ಶಿಶುಪಾಲನ ನಿಂದಾವಾಕ್ಯಗಳಲ್ಲಿಯೂ ಪರಬ್ರಹ್ಮನ ಗುಣಗಳೇ ವ್ಯಕ್ತ ವಾಗುವುದಾಗಿ ತಿಳಿಯಬೇಕು.

ವರ್ಣನಿಯಮವಿಲ್ಲ! ಆದುದರಿಂದ ಸಮಸ್ತಧರ್ಮಗಳಿಗೂ ಈತನು ಹೊರಗಾಗಿರುವನು ಇವನಿಗೆ ನಿಯಾಮಕರೊಬ್ಬರೂ ಇಲ್ಲದುದರಿಂದ ಯಥೇಚ್ಛವಾಗಿ ಪ್ರವರ್ತಿಸತಕ್ಕವನು ಇವನಲ್ಲಿ ಗುಣವೆಂಬುದು ಲೇಶಮಾತ್ರವೂ ಇಲ್ಲ ಇವನಿಗೆ ಪೂಜೆಯೆಂಬರೇನು? ಇದಲ್ಲದೆ ಹಿಂದೆ ಯಯಾತಿಯ ಶಾಪದಿಂದ ಇವನ ಕುಲವೇ ಸತ್ಪುರುಷರಿಂದ ಬಹಿಷ್ಕೃತವಾಗಿರುವುದು. ಇವನು ಯಾವಾಗಲೂ ನಿಷ್ಕಾರಣವಾದ ಪಾಪಕೃತ್ಯಗಳಿಂದಲೇ ಕಾಲವನ್ನು ಕಳೆದವನು. ಮತ್ತು ಅನೇಕಬ್ರಹ್ಮರ್ಷಿಗಳಿಗೆ ನಿವಾಸವಾದ ಆರ್ಯಾವರ್ತದೇಶಗಳನ್ನು ಬಿಟ್ಟು, ಸಹಜವಾದ ಬ್ರಹ್ಮವರ್ಚಸ್ಸನ್ನು ನೀಗಿ, ಸಮುದ್ರದುರ್ಗವನ್ನಾಶ್ರಯಿಸಿ, ಕಳ್ಳನಂತೆ ಬಂದು ಪ್ರಜೆಗಳನ್ನು ಬಾಧಿಸುತ್ತಿರುವನು ಇಂತವನಿಗೆ ಈ ಸಭೆಯಲ್ಲಿ ಅಗ್ರಪೂಜೆಯೆ?" ಎಂದನು ಹೀಗೆ ಶಿಶುಪಾಲನು, ತನಗೆ ವಿನಾಶಕಾಲವು ಸಮೀಪಿಸಿದ್ದುದರಿಂದ, ಕೃಷ್ಣನನ್ನುಕುರಿತು ಆಡಬಾರದಮಾತುಗಳನ್ನಾಡಿ ನಿಂದಿಸುತಿದ್ದನು. ಅದನ್ನು ಕೇಳುತಿದ್ದಾಗಲೂಕೂಡ ಕೃಷ್ಣನು, ನರಿಗಳ ಕೂಗನ್ನು ಸಿಂಹವು ಹೇಗೋ ಹಾಗೆ ಲಕ್ಷ್ಯಮಾಡದೆ, ಗಂಭೀರಸ್ವಭಾವದಿಂದ ಬಾಯೆತ್ತದೆ ಸುಮ್ಮನಿದ್ದನು. ಆದರೆ ಅಲ್ಲಿದ್ದ ಸಭಾಜನರೆಲ್ಲರೂ ಆ ಕೃಷ್ಣನ ನಿಂದೆಯನ್ನು ಕೇಳಲಾರದೆ ಕಿವಿಗಳನ್ನು ಮುಚ್ಚಿಕೊಂಡು ಶಿಶುಪಾಲನನ್ನೇ ನಿಂದಿಸುತ್ತ, ಆ ಸಭೆಯನ್ನು ಬಿಟ್ಟು ಹೊರಗೆ ಬಂದು ಬಿಟ್ಟರು. ಓ! ಪರೀಕ್ಷಿದ್ರಾಜಾ! ಆ ಭಗವಂತನ ವಿಷಯವಾದ ನಿಂದೆಯಾಗಲಿ, ಭಗವದ್ಭಕ್ತರ ನಿಂದೆಯಾಗಲಿ ಕಿವಿಗೆ ಬಿದ್ದಾಗ, ಯಾವನು ಆ ಸ್ಥಳವನ್ನು ಬಿಟ್ಟು ಹೋಗದಿರುವನೋ, ಅವನಿಗೆ ಅಧೋಗತಿಯು ತಪ್ಪದು! ಈ ಧರ್ಮಸೂಕ್ಷ್ಮವನ್ನು ತಿಳಿದುದರಿಂದಲೇ ಅಲ್ಲಿದ್ದ ಬ್ರಾಹ್ಮಣೋತ್ತಮರೆಲ್ಲರೂ ಹೊರಕ್ಕೆ ಬಂದು ಬಿಟ್ಟರು. ಇಷ್ಟರಲ್ಲಿ ಅಲ್ಲಿ ನೆರೆದಿದ್ದ ಪಾಂಡವ, ಮತ್ಸ್ಯ, ಕೇಕಯ, ಸೃಂಜಯರೆಲ್ಲರೂ ಕೋಪವನ್ನು ತಡೆಯಲಾರದೆ, ಆಯುಧವನ್ನು ಕೈಗೆತ್ತಿಕೊಂಡು, ಆಗಲೇ ಶಿಶುಪಾಲನನ್ನು ಕೊಂದುಬಿಡಬೇಕೆಂದು ಮೇಲಕ್ಕೆದ್ದರು ಇದನ್ನುನೋಡಿ ಶಿಶುಪಾಲನೂ ಕತ್ತಿಗುರಾಣಿಗಳನ್ನೆತ್ತಿಕೊಂಡು, ಕೃಷ್ಣಪಕ್ಷದವರಾದ ಆ ರಾಜರನ್ನು ಹುಂಕಾರದಿಂದ ಗದರಿಸುತ್ತ, ಇದಿರಾಗಿ ನಿಂತನು ಇಷ್ಟರಲ್ಲಿ ಕೃಷ್ಣನು, ತನ್ನ ಆಸನದಿಂದ ಮೇಲೆದ್ದು, ಆ ರಾಜ



೨೨೭೧. ಶಿಶುಪಾಲವಧೆ.

ರೆಲ್ಲರನ್ನೂ ಹಿಂದಕ್ಕೆ ಕಳುಹಿಸಿ, ತೀಕ್ಷ್ಣಧಾರೆಯುಳ್ಳ ತನ್ನ ಚಕ್ರಾಯುಧವನ್ನು ಪ್ರಯೋಗಿಸಿ, ಶಿಶುಪಾಲನ ಶಿರಸ್ಸನ್ನು ಭೇದಿಸಿಬಿಟ್ಟನು. ಆ ಶಿಶುಪಾಲನ ತಲೆಯು ಕೆಳಗೆ ಬಿದ್ದಾಗ, ಅಲ್ಲಿ ದೊಡ್ಡ ಕೋಲಾಹಲವು ಹೊರಟಿತು. ಅವನಪಕ್ಷದವರಾಗಿ ಅಲ್ಲಿಗೆ ಬಂದಿದ್ದ ಇತರರಾಜರೆಲ್ಲರೂ ತಾವು ಬದುಕಿದರೆ ಸಾಕೆಂದು ಪಲಾಯನಮಾಡಿದರು ಶಿಶುಪಾಲನ ತಲೆಯು ಕೆಳಗೆ ಬೀಳುತ್ತಿರುವಾಗಲೇ, ಆಕಾಶದಿಂದ ಭೂಮಿಗೆ ಬಿದ್ದ ಕೊಳ್ಳಿಯಂತೆ, ಆತನ ದೇಹದಿಂದ ಒಂದಾನೊಂದು ದಿವ್ಯತೇಜಸ್ಸು ಹೊರಟುಬಂದು,ಸಮಸ್ತಭೂತಗಳೂ ನೋಡುತ್ತಿದ್ದಹಾಗೆ ಕೃಷ್ಣನ ದೇಹದಲ್ಲಿ ಪ್ರವೇಶಿಸಿತು ಓ! ಪರೀಕ್ಷಿದ್ರಾಜಾ! ಆ ಶಿಶುಪಾಲನು ಹಿಂದಿನ ಮೂರುಜನ್ಮಗಳಿಂದ ವಿಷ್ಣುವಿನಲ್ಲಿ ವೈರಬುದ್ಧಿಯನ್ನಿಟ್ಟು, ಎಡೆಬಿಡದೆ ಅವನನ್ನು ಧ್ಯಾನಿಸುತ್ತಿದ್ದುದರಿಂದ, ಈಗ ಅವನಿಗೆ ವಿಷ್ಣುಸಾಯುಜ್ಯವುಂಟಾಯಿತು ಇದರಿಂದ ಅವರವರ ಚಿತ್ತವೃತ್ತಿಯೇ ಶುಭಾಶುಭಗಳಿಗೆ ಕಾರಣವೆಂಬುದನ್ನು ನೀನುತಿಳಿಯಬಹುದು.ಆಮೇಲೆ ಇತ್ತಲಾಗಿ ಯುಧಿಷ್ಠಿರನು, ಋತ್ವಿಕ್ಕುಗಳಿಗೂ, ಸದಸ್ಯರಿಗೂ, ವಿಶೇಷವಾದ ದಕ್ಷಿಣೆಯನ್ನು ಕೊಟ್ಟುಸತ್ಕರಿಸಿ,ಅವಭೃಥಸ್ನಾನವನ್ನು ಮುಗಿಸಿದನು. ಹೀಗೆ ಯೋಗೀಶ್ವರನಾದ ಕೃಷ್ಣನು ತಾನೇ ಮುಂದಾಗಿ ನಿಂತು ಧರ್ಮರಾಜನಿಂದ ಆ ಯಜ್ಞವನ್ನು ಮಾಡಿಸಿದಮೇಲೆ ತನ್ನ ಇಷ್ಟಮಿತ್ರರೆಲ್ಲರೂ ಅಪೇಕ್ಷಿಸಿದುದರಿಂದ, ಆ ಯಜ್ಞವು ಮುಗಿದಮೇಲೆಯೂ ಕೆಲವು ತಿಂಗಳುಗಳವರೆಗೆ ಅಲ್ಲಿಯೇ ಇರುತ್ತಿದ್ದನು. ಆಗಲೂ ಧರ್ಮರಾಜನಿಗೆ ಕೃಷ್ಣನನ್ನು ಕಳುಹಿಸಿಕೊಡುವುದಕ್ಕೆ ಇಷ್ಟವಿರಲಿಲ್ಲ! ಕೊನೆಗೆ ಕೃಷ್ಣನು, ಪ್ರಯತ್ನಪೂರ್ವಕವಾಗಿ ಯಾವುದೋ ಒಂದು ನಿರ್ಬಂಧದಿಂದ ತನ್ನ ಪತ್ನೀಪರಿವಾರಗಳೊಡನೆ ಅಲ್ಲಿಂದ ಹಿಂತಿರುಗಬೇಕಾಯಿತು ಓ! ಪರೀಕ್ಷಿದ್ರಾಜಾ! ವೈಕುಂಠವಾಸಿಗಳಾದ ಜಯವಿಜಯರಿಗೆ ಬ್ರಾಹ್ಮಣಶಾಪದಿಂದುಂಟಾದ ಮೂರು ರಾಕ್ಷಸಜನ್ಮಗಳನ್ನೂ, ಅವುಗಳ ಚರಿತ್ರವನ್ನೂ ನಿನಗೆ ವಿವರಿಸಿ ತಿಳಿಸಿದೆನು ಧರ್ಮರಾಜನೂಕೂಡ ರಾಜಸೂಯವನ್ನು ಮುಗಿಸಿ,ಅವಭೃಥಸ್ನಾನವನ್ನು ಮಾಡಿದಮೇಲೆ, ಬ್ರಹ್ಮಕ್ಷತ್ರಿಯರಿಂದ ಕೂಡಿದ ಆ ಸಭೆಯಲ್ಲಿ ಸಾಕ್ಷಾದ್ದೇವೇಂದ್ರನಂತೆ ಪ್ರಕಾಶಿಸುತ್ತಿದ್ದನು. ಆ ಯಜ್ಞಕ್ಕಾಗಿ ಬಂದಿದ್ದ ದೇವ

ಮಾನವಗಂಧರ್ವಾದಿಗಳೆಲ್ಲರೂ ಧರ್ಮರಾಜನಿಂದ ಸತ್ಕೃತರಾಗಿ, ಆ ಯಾಗದ ವೈಭವವನ್ನೂ, ಕೃಷ್ಣನ ಪ್ರಭಾವವನ್ನೂ ಕೊಂಡಾಡುತ್ತ, ತಮ್ಮ ತಮ್ಮ ಸ್ಥಾನಗಳಿಗೆ ಹಿಂತಿರುಗಿದರು. ಅಲ್ಲಿಗೆ ಬಂದಿದ್ದ ಲಕ್ಷೋಪಲಕ್ಷಜನರಲ್ಲಿ, ಪರಮಪಾಪಿಯಾಗಿಯೂ, ಕುರುಕುಲಾಧಮನಾಗಿಯೂ ಇರುವ ಧುರ್ಯೋಧನನೊಬ್ಬನುಮಾತ್ರ, ಧರ್ಮರಾಜನ ಐಶ್ವರ್ಯವನ್ನೂ,ಯಾಗ ವೈಭವವನ್ನೂ ನೋಡಿ ಸಹಿಸಲಾರದೆ ಕೊನೆಗೆ ಅವಮಾನಪಟ್ಟು ಹೋದನು. ಓ! ಪರೀಕ್ಷಿದ್ರಾಜಾ! ಭಗವಂತನಾದ ಶ್ರೀಕೃಷ್ಣನು ನಡೆಸಿದ ಈ ಶಿಶುಪಾಲವಧೆ, ಜರಾಸಂಧನ ಸೆರೆಯಲ್ಲಿ ಸಿಕ್ಕಿದ್ದ ರಾಜರ ಬಂಧವಿಮೋಚನೆ, ಧರ್ಮರಾಜನ ರಾಜಸೂಯಸಮಾಪ್ತಿ,ಮುಂತಾದ ಚರಿತ್ರೆಗಳನ್ನು ಯಾವನು ಭಕ್ತಿಯಿಂದ ಪಠಿಸುವನೋ ಅವನು ಸರ್ವಪಾಪವಿಮುಕ್ತನಾಗಿ,ಸಮಸ್ತಶ್ರೇಯಸ್ಸುಗಳನ್ನೂ ಹೊಂದುವನು ಇದು ಎಪ್ಪತ್ತುನಾಲ್ಕನೆಯಅಧ್ಯಾಯವು.

---

{ ಧರ್ಮರಾಜನು ಅವಭೃಥವನ್ನು ನಡೆಸಿದುದು. ದುರ್ಯೋಧನಿಗೆ ಅವಮಾನವಾದುದು. }

ಆಗ ಪರೀಕ್ಷಿದ್ರಾಜನು ಶುಕಮುನಿಯನ್ನು ಕುರಿತು. ‘‘ಓಮಹಾತ್ಮಾ! ಧರ್ಮರಾಜನು ಯಾರಲ್ಲಿಯೂ ದ್ವೇಷಬುದ್ಧಿಯಿಲ್ಲದುದರಿಂದಲ್ಲವೇ ಅಜಾತಶತ್ರುವೆನಿಸಿಕೊಂಡಿರುವನು? ಅವನು ನಡೆಸಿದ ರಾಜಸೂಯಯಾಗದಲ್ಲಿ ದುರ್ಯೋಧನನು ಹೊರತಾಗಿ, ಅಲ್ಲಿಗೆ ಬಂದಿದ್ದ ಇತರರಾಜರೂ, ಋಷಿಗಳೂ, ದೇವತೆಗಳೂ, ಸಂತೋಷದಿಂದ ಹೋದರೆಂದು ಹೇಳಿದೆಯಲ್ಲವೆ? ಆ ದುರ್ಯೋಧನನೊಬ್ಬನುಮಾತ್ರ, ಅವಮಾನಿತನಾಗಿ ಹೋಗುವುದಕ್ಕೆ ಕಾರಣವೇನೆಂಬುದನ್ನು ತಿಳಿಸಬೇಕು” ಎಂದು ಕೇಳಿದನು ಅದಕ್ಕಾಶುಕಮಹರ್ಷಿಯು ‘‘ಓ ರಾಜೇಂದ್ರಾ! ಕೇಳು! ನಿನ್ನ ಪಿತಾಮಹನಾದ ಧರ್ಮರಾಜನ ಯಾಗಕಾಲದಲ್ಲಿ, ಅವನಲ್ಲಿರುವ ಪ್ರೀತಿವಿಶೇಷದಿಂದ, ಅವನ ಬಂಧುಗಳೆಲ್ಲರೂ ಅಕ್ಕರೆಯಿಂದ ಆಯಾಕಾಲೋಚಿತವಾದ ಕಾರ್ಯಗಳನ್ನು ನಡೆಸುತಿದ್ದರು. ಭೀಮಸೇನನು ಅಡಿಗೆಯ ಮನೆಗೆ ಅಧ್ಯಕ್ಷನಾಗಿದ್ದು, ಅದರ ಕಾರ್ಯಗಳನ್ನು ನೋಡಿಕೊಳ್ಳುತಿದ್ದನು. ದುರ್ಯೋಧನನು ಧನಾಧ್ಯಕ್ಷನಾಗಿ

ಬೊಕ್ಕಸದ ಕೆಲಸವನ್ನು ನೋಡುತಿದ್ದನು ಸಹದೇವನು ಯಜ್ಞಕ್ಕಾಗಿ ಬಂದವರನ್ನು ಸನ್ಮಾನಿಸುವ ಕಾರ್ಯದಲ್ಲಿದ್ದನು. ನಕುಲನು ಯಜ್ಞಸಾಮಗ್ರಿಗಳನ್ನೊದಗಿಸಿಡುವುದರಲ್ಲಿ ನಿರತನಾಗಿದ್ದನು. ಅರ್ಜುನನು ಅಲ್ಲಿಗೆ ಬಂದ ಸತ್ಪುರುಷರಿಗೆ ಗಂಧಪುಷ್ಪಾದಿಗಳನ್ನೊಪ್ಪಿಸುತಿದ್ದನು. ಕೃಷ್ಣನು ಅಭ್ಯಾಗತರಾಗಿ ಬಂದ ಸಾಧುಗಳ ಪಾದಪ್ರಕ್ಷಾಳನಕಾರ್ಯವನ್ನು ತಾನೇ ಕೈಕೊಂಡನು. ಹೀಗೆಯೇ ದ್ರುಪದಪುತ್ರನಾದ ಧೃಷ್ಟದ್ಯುಮ್ನನು ಬಂದವರಿಗೆ ಭಕ್ಷ್ಯಭೋಜ್ಯಾದಿಭೋಜನಸಾಮಗ್ರಿಗಳನ್ನು ತಂದಿಡುವುದರಲ್ಲಿಯೂ, ಮಹೋದಾರಸ್ವಭಾವವುಳ್ಳ ಕರ್ಣನು ದಾನಕಾರ್ಯದಲ್ಲಿಯೂ ನಿರತರಾಗಿದ್ದರು ಹೀಗೆಯೇ ಸಾತ್ಯಕಿ, ವಿಕರ್ಣ, ಕೃತವರ್ಮ, ವಿದುರ,ಬಾಹ್ಲೀಕ, ಭೂರಿಶ್ರವಸ್ಸು, ಸಂತರ್ದನ, ಮೊದಲಾದವರೆಲ್ಲರೂ,ಧರ್ಮರಾಜನಿಗೆ ಪ್ರಿಯವನ್ನುಂಟುಮಾಡಬೇಕೆಂಬ ಉದ್ದೇಶದಿಂದ, ತಮತಮಗೆ ನಿಯಮಿತವಾದ ಕಾರ್ಯಗಳನ್ನು ನಿರ್ವಹಿಸುತಿದ್ದರು ಯಾಗಾಂತ್ಯದಲ್ಲಿ ಯಾಗನಿರ್ವಾಹಕರಾದ ಋತ್ವಿಕ್ಪುರೋಹಿತಾದಿಗಳೂ, ಸದಸ್ಯರೂ, ವಿದ್ವಾಂಸರೂ. ಇಷ್ಟಮಿತ್ರರೂ, ಅವರವರ ಅಂತಸ್ತಿಗೆ ತಕ್ಕಂತೆ, ವಸ್ತ್ರಾಭರಣದಕ್ಷಿಣಾದಿಗಳಿಂದಲೂ, ಪ್ರಿಯವಾಕ್ಯಗಳಿಂದಲೂ ಸತ್ಕೃತರಾಗಿ, ಶಿಶುಪಾಲನು ಶ್ರೀಕೃಷ್ಣಸಾಯುಜ್ಯವನ್ನು ಹೊಂದಿದಮೇಲೆ, ಎಲ್ಲರೂ ಗಂಗಾನದಿಯಲ್ಲಿ ಅವಭೃಥಸ್ನಾನಕ್ಕಾಗಿ ಅತಿವೈಭವದಿಂದ ಹೊರಟರು ಅವರ ಮುಂದೆ ಮೃದಂಗ, ಶಂಖ, ಪಣವ, ದುಂದುಭಿ, ಆನಕ, ಗೋಮುಖ, ಮೊದಲಾದ ವಾದ್ಯಗಳು ಮೊಳಗುತಿದ್ದುವು. ನರ್ತಕಿಯರು ಸಂತೋಷದಿಂದ ನರ್ತಿಸುತಿದ್ದರು. ಗಾಯಕರು ಗಾನಮಾಡಿದರು. ಗಾಯಕರು ನುಡಿಸುತಿದ್ದ ವೀಣಾ ವೇಣು ಮೃದಂಗಾದಿವಾದ್ಯಧ್ವನಿಗಳೂ, ಅವರ ಕಲತಾಲಗಳ ಧ್ವನಿಯೂ ಗಗನವ್ಯಾಪಿಯಾಗಿ ಹರಡಿತು. ಧ್ವಜಪತಾಕೆಗಳೊಡನೆ ವಿಚಿತ್ರಾಲಂಕಾರಶೋಭಿತಗಳಾದ ರಥಗಜತುರಗಪದಾತಿಗಳೆಂಬ ಚತುರಂಗಸೈನ್ಯವೂ ಮುಂದೆ ನಡೆಯುತಿತ್ತು. ಯಾದವರು, ಸೃಂಜಯರು, ಕಾಂಭೋಜರು, ಕುರುಗಳು ಕೋಸಲರು, ಕೇಕಯರು,ಮುಂತಾದ ದೇಶಾಧೀಶ್ವರರೆಲ್ಲರೂ, ಸುವರ್ಣಹಾರಗಳಿಂದಲಂಕೃತರಾಗಿ, ಯಾಗದೀಕ್ಷಿತನಾದ ಧರ್ಮರಾಜನನ್ನು ಮುಂದಿಟ್ಟುಕೊಂಡು, ಭೂಮಿಯನ್ನು ನಡು

ಗಿಸುವಂತೆ ತಮ್ಮತಮ್ಮ ದೊಡ್ಡಸೇನೆಗಳೊಡನೆ ಬರುತಿದ್ದರು. ಸದಸ್ಯರೂ ಋತ್ವಿಕ್ಕುಗಳೂ, ಪುರೋಹಿತರೂ, ಇತರಬ್ರಾಹ್ಮಣೋತ್ತಮರೂ ವೇದ ಘೋಷಗಳನ್ನು ಮಾಡುತ್ತ ಬಂದರು. ಈ ಮಹೋತ್ಸವವನ್ನು ನೋಡುವುದಕ್ಕಾಗಿ ದೇವತೆಗಳೂ, ಪಿತೃಗಳೂ, ದೇವರ್ಷಿಗಳೂ, ಗಂಧ ರ್ವರೂ ಆಕಾಶದಲ್ಲಿ ನೆರೆದು ಪುಷ್ಪವೃಷ್ಟಿಯನ್ನು ಕರೆಯುತ್ತ ಸ್ತುತಿಸು ತಿದ್ದರು ಗಂಡಸರು ಹೆಂಗಸರು ಮೊದಲಾಗಿ ಪುರವಾಸಿಗಳೆಲ್ಲರೂ, ಗಂಧ ಪುಷ್ಪವಸ್ತ್ರಾಭರಣಾದಿಗಳಿಂದ ದೇಹವನ್ನಲಂಕರಿಸಿಕೊಂಡು, ಒಬ್ಬರಮೇ ಲೊಬ್ಬರು ನಾನಾಬಣ್ಣದ ಓಕುಳಿಗಳನ್ನೆರಚಾಡುತ್ತ ಹಿಂಬಾಲಿಸಿ ಬರು ತಿದ್ದರು. ಭೋಗಿಗಳಾದ ಪುರುಷರೂ, ವೇಶ್ಯಾಸ್ತ್ರೀಯರೂ, ಒಬ್ಬರ ಮೇ ಲೊಬ್ಬರು, ಸುಗಂಧದೆಣ್ಣೆ, ಗೋರಸ, ಗಂಧದ ನೀರು, ಅರಿಸಿನದ ನೀರು, ಕುಂಕುಮಜಲ ಮುಂತಾದುವುಗಳನ್ನು, ಚೆಲ್ಲಿ, ವಸಂತಮಾಡುತ್ತ ವಿನೋದ ದಿಂದ ಬರುತಿದ್ದರು ರಾಜಪತ್ನಿಯರೆಲ್ಲರೂ ವಿಮಾನಾರೂಢರಾದ ದೇವ ಸ್ತ್ರೀಯರಂತೆ ರಥಾದಿವಾಹನಗಳನ್ನೇರಿ, ಅಂಗರಕ್ಷಕರಾದ ಅನೇಕಭಟರೊ ಡನೆ, ಈ ಅವಭೃಥಸ್ನಾನವನ್ನು ನೋಡುವುದಕ್ಕಾಗಿ ಹೊರಟುಬಂದರು. ಆಗ, ಅವರಲ್ಲಿ ವಿಶೇಷವಾದ ಸಲಿಗೆಯುಳ್ಳ ಸೋದರಮೈದುನರೇ ಮೊದ ಲಾದ ಬಂಧುಗಳೂ, ಸಖಿಯರೂ ಓಕುಳಿಯನ್ನೆರಚಲು, ಆ ಸ್ತ್ರೀಯರೆಲ್ಲರೂ ಮುಖದಲ್ಲಿ ಲಜ್ಜಾವಿಶಿಷ್ಟವಾದ ಮುಗುಳ್ನಗೆಯನ್ನು ತೋರಿಸುತ್ತ, ತಮ್ಮಮೇಲೆ ಓಕುಳಿಯನ್ನೆರಚಿದವರಿಗೆ ತಾವೂ ಪ್ರತೀಕಾರಮಾ ಡಬೇಕೆಂಬ ಹಟದಿಂದ, ಚರ್ಮದ ಚೀಕೊಳವಿಗಳನ್ನು ಹಿಡಿದು, ಅವರಮೇಲೆ ಓಕುಳಿಯನ್ನೆರಚುತಿದ್ದರು ಈ ಓಕುಳಿಯಾಡುವ ಸಂಭ್ರಮ ದಲ್ಲಿ, ಆ ರಾಜಸ್ತ್ರೀಯರ ದುಕೂಲಗಳೆಲ್ಲವೂ ತೊಯ್ದು, ಅವರ ನಡು, ತೊ ಡೆ, ಸ್ತನಗಳು ಮೊದಲಾದ ಅವಯವಗಳು ಸ್ಪಷ್ಟವಾಗಿ ಹೊರಗೆ ಕಾಣು ತ್ತಿರುವುವು. ಬಿಚ್ಚಿದ ತಲೆಕೂದಲುಗಳಿಂದ ಪುಷ್ಪಮಾಲಿಕೆಗಳು ಉದಿರುತ್ತಿರುವುವು ಹೀಗೆ ವಸಂತವಾಡುತಿದ್ದ ಆ ಸ್ತ್ರೀಯರ ವೇಷವು, ಎಂತವರಿಗೂ ಮನಸ್ಸನ್ನು ಕೆದಲಿಸುವಂತಿತ್ತು ಈ ಸಮಸ್ತವೈಭವಗಳೊ ಡಗೂಡಿ, ಧರ್ಮರಾಜನು, ಸುವರ್ಣಮಾಲಿಕೆಯಿಂದಲಂಕೃತವಾದ, ಮತ್ತು

ಉತ್ತಮಾಶ್ವಗಳಿಂದ ಹೂಡಿದ ರಥದಮೇಲೆ ತನ್ನ ಪತ್ನಿಯರೊಡನೆ ಕುಳಿತು ಹೋಗುವಾಗ, ಯಜ್ಞಾಂಗಕ್ರಿಯೆಗಳಿಂದ ಕೂಡಿದ ರಾಜಸೂಯಯಾಗ ದಂತೆಯೇ ಕಾಣುತಿದ್ದನು ಗಂಗಾತೀರಕ್ಕೆ ಬಂದಮೇಲೆ, ಅಲ್ಲಿ ಋತ್ವಿಕ್ಕು ಗಳು ಧರ್ಮರಾಜನಿಂದ, ಪತ್ನೀಸಮ್ಯಾಜ ಮತ್ತು ಅವಭೃಥ್ಯಗಳೆಂಬ ಕ ರ್ಮಗಳನ್ನು ಮಾಡಿಸಿದರು. ಆಮೇಲೆ, ಆಚಮನವನ್ನು ಮಾಡಿಸಿ, ಗಂ ಗಾನದಿಯಲ್ಲಿ ದ್ರೌಪದಿಯೊಡನೆ ಸ್ನಾನಮಾಡಿಸಿದರು ಈ ಅವಭೃಕಸ್ನಾನ ಕಾಲದಲ್ಲಿ ಆಕಾಶದಲ್ಲಿ ದೇವದುಂದುಭಿಗಳೂ, ಭೂಲೋಕದಲ್ಲಿ ಜಯದುಂ ದುಭಿಗಳೂ ಮೊಳಗಿದುವು ಧೇವತೆಗಳೂ, ಋಷಿಗಳೂ, ಪಿತೃದೇವತೆಗಳೂ ಪುಷ್ಪವೃಷ್ಟಿಯನ್ನು ಕರೆದರು. ಅಲ್ಲಿ ನೆರದಿದ್ದ ಜನರೆಲ್ಲರೂ ಪುಷ್ಪಾಂಜಲಿ ಯನ್ನೆರಚುತಿದ್ದರು. ಬೇರೆಬೇರೆ ವರ್ಣಾಶ್ರಮದವರೆಲ್ಲರೂ ಅಲ್ಲಿ ಧರ್ಮರಾ ಜನೊಡನೆ ಗಂಗಾಸ್ನಾನವನ್ನು ಮಾಡಿದರು. ಓ! ಪರೀಕ್ಷಿದ್ರಾಜಾ! ಪಂಚ ಮಹಾಪಾತಕವನ್ನು ನಡೆಸಿದವನೂಕೂಡ, ಈ ಅವಭೃತಕಾಲದಲ್ಲಿ ಸ್ನಾನ ಮಾಡಿದರೆ ಪಾಪವಿಮುಕ್ತನಾಗುವನು. ಸ್ನಾನಾನಂತರದಲ್ಲಿ ಧರ್ಮರಾಜ ನು, ನೂತನವಾದ ಧೌತವಸ್ತ್ರಗಳನ್ನುಟ್ಟು, ದೇಹಾಲಂಕಾರವನ್ನು ಮಾಡಿಕೊಂಡು, ಋತ್ವಿಕ್ಕುಗಳನ್ನೂ, ಸದಸ್ಯರನ್ನೂ, ಬ್ರಾಹ್ಮಣರನ್ನೂ ವಸ್ತ್ರಭೂಷಣಾದಿದಾನಗಳಿಂದ ಸತ್ಕರಿಸಿದನು. ಸಮಸ್ತಭೂತಗ ಳೂ ಭಗವದಾತ್ಮಕವೆಂಬ ತತ್ವವನ್ನು ತಿಳಿದ ಆ ಧರ್ಮರಾಜನು, ಅಲ್ಲಿ ನೆರದಿದ್ದ ಬಂಧುಗಳನ್ನೂ, ರಾಜರನ್ನೂ, ಜ್ಞಾತಿಗಳನ್ನೂ, ಮಿತ್ರ ರನ್ನೂ ಯಥೋಚಿತವಾಗಿ ಭಕ್ತಿಯಿಂದ ಪೂಜಿಸಿದನು. ಅಲ್ಲಿ ಧರ್ಮರಾಜ ನಿಂದ ಸತ್ಕೃತರಾದ ಸಮಸ್ತಜನರೂ, ರತ್ನ ಕುಂಡಲಗಳಿಂದಲೂ, ಪುಷ್ಪ ಮಾಲಿಕೆಗಳಿಂದಲೂ, ರತ್ನಹಾರಗಳಿಂದಲೂ, ಅಂಗಿ, ತಲೆಪಾಗು, ದುಕೂಲ, ಮೊದಲಾದ ವಸ್ತ್ರಗಳಿಂದಲೂ ಅಲಂಕೃತರಾಗಿ, ದೇವಪುರುಷರಂತೆ ಪ್ರಕಾ ಶಿಸುತ್ತಿದ್ದರು. ಅಲ್ಲಿಗೆ ಬಂದಿದ್ದ ಸ್ತ್ರೀಯರೂಕೂಡ, ಕುಂಡಲಾದ್ಯಾಭರಣ ಗಳಿಂದಲೂ, ಸುವರ್ಣದ ಒಡ್ಯಾಣಗಳಿಂದಲೂ ಶೋಭಿತರಾಗಿ, ತಿದ್ದಿದ ಮುಂಗುರುಳುಗಳಿಂದ ಸೊಬಗೇರಿದ ಮುಖಸೌಂದರ್ಯದಿಂದ ಶೋಭಿಸು ತಿದ್ದರು. ಆಮೇಲೆ ಋತ್ವಿಕ್ಕುಗಳೂ, ಬ್ರಹ್ಮವಾದಿಗಳೂ, ಸದಸ್ಯರೂ,

ಬ್ರಾಹ್ಮಣರೂ, ಕ್ಷತ್ರಿಯ, ವೈಶ್ಯ, ಶೂದ್ರಾದಿವರ್ಣದವರೂ, ಮತ್ತು ಆ ಉತ್ಸವವನ್ನು ನೋಡುವುದಕ್ಕಾಗಿ ಬಂದ ದೇವತೆಗಳೂ, ಋಷಿಗಳೂ, ಪಿತೃದೇವತೆಗಳೂ, ತಮ್ಮತಮ್ಮ ಪರಿವಾರಗಳೊಡಗೂಡಿದ ಲೋಕಪಾಲಕರೂ, ಇತರ ಸಮಸ್ತಭೂತಗಳೂ, ಆ ಧರ್ಮರಾಜನಿಂದ ಸತ್ಕೃತರಾಗಿ, ಅವನ ಅನುಮತಿಯನ್ನು ಪಡೆದು, ತಮ್ಮತಮ್ಮ ಸ್ಥಾನಗಳಿಗೆ ಹಿಂತಿರುಗಿದರು. ಇವರೆಲ್ಲರೂ ಹಿಂತಿರುಗಿ ಬರುವಾಗ, ಹರಿಭಕ್ತೋತ್ತಮನಾದ ಆ ಧರ್ಮರಾಜನ ರಾಜಸೂಯವೈಭವವನ್ನು ಎಷ್ಟೆಷ್ಟು ಕೊಂಡಾಡಿದರೂ, ಅಮೃತಪಾನದಿಂದ ಹೇಗೋಹಾಗೆ ತೃಪ್ತಿಯಿಲ್ಲದೆ ಬಾರಿಬಾರಿಗೂ ಪ್ರಶಂಸಿಸುತಿದ್ದರು ಆಮೇಲೆ ಧರ್ಮರಾಜನು ತಾನು ಉತ್ಸವಕ್ಕಾಗಿ ಕರೆಸಿದ್ದ ಇಷ್ಟಮಿತ್ರರನ್ನೂ, ಬಂಧುಗಳನ್ನೂ, ಮುಖ್ಯವಾಗಿ ಶ್ರೀಕೃಷ್ಣನನ್ನೂ ಅಗಲಿರಲಾರದೆ, ಇನ್ನೂ ಕೆಲವು ದಿನಗಳವರೆಗೆ ಅಲ್ಲಿಯೇ ಇರಬೇಕೆಂದು ನಿರ್ಬಂಧಿಸಿ ನಿಲ್ಲಿಸಿಕೊಂಡುದರಿಂದ, ಕೃಷ್ಣನು ಧರ್ಮರಾಜನ ಮಾತನ್ನು ಮೀರಲಾರದೆ, ಸಾಂಬನೇ ಮೊದಲಾದ ಯದುವೀರರೆಲ್ಲರನ್ನೂ ಕಳುಹಿಸಿ, ತಾನು ಮಾತ್ರ ಆ ಧರ್ಮರಾಜನೊಡನೆಯೇ ಇರಬೇಕಾಯಿತು.ಓ ಪರೀಕ್ಷಿದ್ರಾಜಾ! ಹೀಗೆ ಧರ್ಮರಾಜನು ಶ್ರೀ ಕೃಷ್ಣನ ಪರಮಾನುಗ್ರಹಬಲದಿಂದ, ಬೇರೊಬ್ಬರಿಗೆ ದುಸ್ತರವಾದ ತನ್ನ ಮನೋರಥಸಮುದ್ರವನ್ನು ದಾಟಿ ಸಂತೋಷದಿಂದಿರುತಿದ್ದಾಗ, ಆ ಉತ್ಸವಕ್ಕಾಗಿ ಬಂದಿದ್ದ ದುರ್ಯೋಧನನಿಗೆ, ಧರ್ಮರಾಜನ ಐಶ್ವರ್ಯವನ್ನೂ, ಅವನ ಯಾಗವೈಭವವನ್ನೂ ನೋಡಿ ಮನಸ್ಸಿನಲ್ಲಿ ಅಸೂಯೆ ಹೆಚ್ಚುತಿತ್ತು. ಈನಡುವೆ ಒಮ್ಮೆ ದುರ್ಯೋಧನನು ಧರ್ಮರಾಜನ ಅಂತಃಪುರದ ಕಡೆಗಾಗಿ ಹೋಗುತಿದ್ದನು. ಓ ರಾಜೇಂದ್ರಾ! ಅದು ಸಾಕ್ಷಾದ್ವಿಶ್ವಕರ್ಮನಿಂದ ನಿರ್ಮಿತವಾದುದು. ಅಲ್ಲಿ ಭೂಲೋಕದ ಅನೇಕರಾಜಾಧಿರಾಜರಿಗೂ, ಪಾತಾಳಲೋಕದ ದಾನವೇಂದ್ರರಿಗೂ, ಸ್ವರ್ಗಲೋಕದ ದೇವಾಧಿಪತಿಗಳಿಗೂ, ಅನುಭವಯೋಗ್ಯಗಳಾದ ನಾನಾವಿಧಭೋಗಸಾಮಗ್ರಿಗಳು ತುಂಬಿರುವುವು. ಅಂತಹ ದಿವ್ಯಾಂತಃಪುರದಲ್ಲಿ ದ್ರೌಪದೀದೇವಿಯು, ಪತಿಶುಶ್ರೂಷೆಗಾಗಿ ಬೇಕುಬೇಕಾದ ಭೋಗಸಾಮಗ್ರಿಗಳನ್ನೊದಗಿಸುತಿದ್ದಳು. ಈ ಸ್ಥಿತಿಯಲ್ಲಿ

ಆ ದ್ರೌಪದಿಯನ್ನು ಕಂಡೊಡನೆ, ಅವಳಲ್ಲಿ ದುರ್ಯೋಧನನ ಮನಸ್ಸು ಮೋಹಾಕುಲಿತವಾಯಿತು. ಇದಕ್ಕೆ ಮೊದಲೇ ಆಧರ್ಮರಾಜನ ಯಾಗದ ವೈಭವವನ್ನೂ, ಅವನ ಭಾಗ್ಯಸಮೃದ್ಧಿಯನ್ನೂ ನೋಡಿ ಅಸೂಯೆಯಿಂದ ಕುದಿಯುತ್ತಿದ್ದ ದುರ್ಯೊಧನನಿಗೆ, ಆ ಅಂತಃಪುರದ ಸೌಭಾಗ್ಯವನ್ನು ಕಂಡಮೇಲೆ, ಅವನ ಸಂಕಟವನ್ನು ಕೇಳಬೇಕೆ? ಆ ಅಂತಃಪುರದಲ್ಲಿ ಕೃಷ್ಣನ ಪತ್ನಿಯರಾದ ಸಾವಿರಾರುಮಂದಿ ರಾಜಕುಮಾರಿಯರು ದ್ರೌಪದಿಯನ್ನು ಸುತ್ತಿಮುತ್ತಿ ಓಲೈಸುತ್ತಿರಲು, ನಿತಂಬಭಾರದಿಂದ ಜಗ್ಗುವ ನಡೆಯುಳ್ಳವರಾಗಿ, ಕಾಲಂದುಗೆಗಳ ಘಲ್ಘಲಧ್ವನಿಯೊಡನೆ ಅತ್ತಿತ್ತ ಸಂಚರಿಸುತಿದ್ದ ಆ ಸ್ತ್ರೀಯರ ಸೊಬಗನ್ನು ಕೇಳಬೇಕೆ? ಸಣ್ಣನಡು! ಸ್ತನಕುಂಕುಮದಿಂದ ಲೇಪಿತವಾಗಿ ಎದೆಯಲ್ಲಿ ತೂಗಾಡುತ್ತಿರುವ ಮುತ್ತಿನ ಹಾರಗಳು! ಎಣೆಯಿಲ್ಲದ ಸೌಂದರ್ಯವುಳ್ಳ ಮುಖದ ಸೊಗಸು! ಕಿವಿಯಲ್ಲಿ ತೂಗಾಡುತ್ತಿರುವ ಕುಂಡಲಗಳು! ಮುಖಕ್ಕೆ ರೇಖೆಕಟ್ಟಿದಂತೆ ತಿದ್ದಿದ ಮುಂಗುರುಳು! ಇಂತಹ ದಿವ್ಯಸೌಂದರ್ಯದಿಂದ ಶೋಭಿತರಾದ ಆ ಸ್ತ್ರೀಯರನಡುವೆ ದ್ರಾಪದಿಯಿರುವುದನ್ನು ಕಂಡು, ದುರ್ಯೋಧನನು ಸಹಿಸಲಾರದ ಸಂಕಟದಿಂದ ಕುದಿಯುತ್ತಿದ್ದನು. ಇದಲ್ಲದೆ ಅತ್ತಲಾಗಿ ಧರ್ಮರಾಜನೂಕೂಡ ಆಗಾಗ ಮಯನಿರ್ಮಿತವಾದ ರಾಜಸಭೆಯಲ್ಲಿ, ತನ್ನ ತಮ್ಮಂದಿರೊಡನೆಯೂ, ಇಷ್ಟಬಂಧುಗಳೊಡನೆಯೂ, ತನಗೆ ನೇತ್ರಪ್ರಾಯನಾದ ಶ್ರೀ ಕೃಷ್ಣನೊಡನೆಯೂ ಕೂಡಿ ಸುವರ್ಣಪೀಠದಮೇಲೆ ಕುಳಿತು,ಸುಖಸಲ್ಲಾಪಗಳನ್ನು ಮಾಡುತ್ತ, ಸ್ವರ್ಗಸಿಂಹಾಸನವನ್ನೇರಿದ ದೇವೇಂದ್ರನಂತೆ ಕಾಣುತ್ತಿರುವನು. ಸಾಕ್ಷಾದ್ಬ್ರಹ್ಮದೇವನಂತೆ ತೇಜಸ್ಸಿನಿಂದ ಬೆಳಗುತ್ತಿರುವನು. ವಂದಿಮಾಗಧರು ಸುತ್ತಲೂ ನಿಂತು ಅವನ ಗುಣಗಳನ್ನು ಕೊಂಡಾಡುತ್ತಿರುವರು. ಅಂತಹ ಸ್ಥಿತಿಯಲ್ಲಿ, ಒಮ್ಮೆ ದುರ್ಯೋಧನನು ತನ್ನ ತಮ್ಮಂದಿರೊಡನೆ ಆ ಧರ್ಮರಾಜಾದಿಗಳು ಕುಳಿತಿದ್ದ ಸಭಾಸ್ಥಾನವನ್ನೂ ಪ್ರವೇಶಿಸಿಬಿಟ್ಟನು. ಈ ದುರ್ಯೊಧನನಾದರೋ ಲೋಕದಲ್ಲಿ ತನಗೆ ಸಮಾನರಿಲ್ಲವೆಂಬ ಗರ್ವದಿಂದ ಬೀಗುತ್ತಿರುವನು. ಯಾವಾಗಲೂ ಧರ್ಮರಾಜನಲ್ಲಿ ತನಗಿರುವ ಅಸೂಯೆಯಿಂದ ಕುದಿಯುತ್ತಿರುವ

ನು ಇಂತಹ ದುರ್ಯೋಧನನು, ಚಕ್ರವರ್ತಿಯೋಗ್ಯವಾದ ಕಿರೀಟವನ್ನು ತಲೆಯಲ್ಲಿ ಧರಿಸಿ. ಹಾರ ಕುಂಡಲ ಮೊದಲಾದ ಆಭರಣಗಳಿಂದಲಂಕೃತನಾಗಿ, ಕೈಯಲ್ಲಿ ಖಡ್ಗವನ್ನು ಹಿಡಿದು, ತನ್ನ ಮನಸ್ಸಿನಲ್ಲಿರುವ ಹೆಮ್ಮೆಯಿಂದ ಇತರ ರಾಜರೆಲ್ಲರನ್ನೂ ಸಿಂದಿಸುತ್ತ, ಆಸಭೆಯ ಬಾಗಿಲನ್ನು ದಾಟಿ ಮುಂದೆ ಬಂದನು. ವಿಶ್ವಕರ್ಮನ ಶಿಲ್ಪಚಾತುರ್ಯದಿಂದ ನಿರ್ಮಿತವಾದ ಆ ಸಭಾಮಂಟಪದ ಸನ್ನಿವೇಶವು, ಇವನ ಮನಸ್ಸಿಗೆ ದಿಗ್ಭ್ರಮೆ ಹಿಡಿಯುವಂತೆ ಮಾಡಿತು. ಬರೀನೆಲವನ್ನು ನೋಡಿದಾಗ, ಅದರ ಹೊಳಪಿನಿಂದ ಅದು ನೀರು ನಿಂತ ಹಳ್ಳದಂತೆ ಕಾಣುವುದು. ಆಗ ದುರ್ಯೋಧನನು, ಉಟ್ಟ ಬಟ್ಟೆಯು ನೆನೆದು ಹೋಗುವುದೆಂಬ ಭಯದಿಂದ, ಅದನ್ನು ಮೇಲಕ್ಕೆತ್ತಿಕೊಂಡು,ಇಳಿಯುವುದಕ್ಕಾಗಿ ಯತ್ನಿಸಿ ಕೆಳಗೆಬಿಳುವನು. ಹೀಗೆ ದುರ್ಯೋಧನನು, ಮಯನ ಶಿಲ್ಪಮಾಯೆಯಿಂದ ಮೋಹಿತನಾಗಿ, ನೆಲವನ್ನು ನೀರೆಂದೂ,ನೀರನ್ನು ನೆಲವೆಂದೂ ಭ್ರಮಿಸಿ,ಅಲ್ಲಲ್ಲಿಬಿದ್ದೇಳುತ್ತಬರುವುದನ್ನುನೋಡಿ, ಭೀಮನು ಅಟ್ಟಹಾಸದಿಂದ ನಕ್ಕುಬಿಟ್ಟನು. ಅದರಂತೆಯೇ ಅಲ್ಲಿದ್ದ ರಾಜರೂ, ರಾಜಸ್ತ್ರೀಯರೂ, ಅಟ್ಟಹಾಸದಿಂದ ನಕ್ಕರು. ಆದರೆ ಸಾಧುಸ್ವಭಾವವುಳ್ಳ ಧರ್ಮರಾಜನು, ಅವರನ್ನು ಹಾಗೆ ನಗಬಾರದೆಂದು ಬಹಳವಾಗಿ ನಿರ್ಬಂಧಿಸುತ್ತಿದ್ದರೂ, ಕಪಟನಾಟಕ ಸೂತ್ರಧಾರಿಯಾದ ಕೃಷ್ಣನು, ಆ ಧರ್ಮರಾಜನಿಗೂ ತಿಳಿಯದಂತೆ ಕಣ್ಣುಸನ್ನೆಯಿಂದ ಆ ಸ್ತ್ರೀಯರನ್ನು ಮತ್ತಷ್ಟು ಪ್ರೋತ್ಸಾಹಿಸುತಿದ್ದನು. ಈ ಸಂಚನ್ನು ತಿಳಿದು ಅಲ್ಲಿದ್ದವರೆಲ್ಲರೂ ಮತ್ತಷ್ಟು ಹಾಸ್ಯಮಾಡುತ್ತ ಘಕಘಕನೆ ನಗುತಿದ್ದರು. ಆಗ ದುರ್ಯೋಧನನಿಗಾದರೋ ಸಹಿಸಲಾರದ್ದ ನಾಚಿಕೆಯುಂಟಾಯಿತು. ಆ ನಾಚಿಕೆಯಿಂದ ತಲೆಯೆತ್ತಿ ನೋಡದೆ, ಮನಸ್ಸಿನಲ್ಲಿ ಕೋಪದಿಂದ ಕದಿಯುತ್ತ ಥಟ್ಟನೆ ಅಲ್ಲಿಂದ ಹಿಂತಿರುಗಿ ಯಾರಿಗೂ ಹೇಳದೆ ತನ್ನ ರಾಜಧಾನಿಯಾದ ಹಸ್ತಿನಾವತಿಗೆ ಹೊರಟುಹೋದನು. ಕುರುಚಕ್ರವರ್ತಿಯಾದ ದುರ್ಯೋಧನನು ಹೀಗೆ ಅವಮಾನಿತನಾಗಿ ಕೋಪದಿಂದ ಹಿಂತಿರುಗಿದುದನ್ನು ನೋಡಿ ಆಸಭೆಯಲ್ಲಿ ಹಾಹಾಕಾರವು ಹೊರಟಿತು. ಅಜಾತಶತ್ರುವಾದ ಧರ್ಮರಾಜನೂ ಕೂಡ ಈ ವಿಚಾರವನ್ನು ಕುರಿತು ಪರಿತಪಿಸುತಿ

ದ್ದನು. ಆದರೆ ಕೃಷ್ಣನು ಭೂಭಾರಪರಿಹಾರಾರ್ಥವಾಗಿಯೇ ಅವತರಿಸಿದ ನಾದುದರಿಂದು ಮುಂದೆ ನಡೆಯಬೇಕಾದ ಆ ಕಾರ್ಯಕ್ಕೆ,ಇದೇ ಆಸ್ತಿಭಾರವೆಂಬುದನ್ನು ತಿಳಿದು, ಬಾಯೆತ್ತದೆ ಸುಮ್ಮನಿದ್ದನು. ಓ ! ಪರೀಕ್ಷಿದ್ರಾಜಾ! ಹೀಗೆ ದುರ್ಯೋಧನನು,ಆ ಸಭಾಸ್ಥಾನದಲ್ಲಿ ಭ್ರಾಂತನಾಗಿ ಅವಮಾನಪಟ್ಟುದಕ್ಕೆ ಮಯನ ಮಾಯೆಯೆಂಬುದು ನಿಮಿತ್ತಮಾತ್ರವೇಹೊರತು, ಅದು ವಾಸ್ತವದಲ್ಲಿ ಕೃಷ್ಣನ ಮಾಯಾಪ್ರಭಾವವೆಂದೇ ತಿಳಿ! ಧರ್ಮರಾಜನ ರಾಜಸೂಯಯಾಗದಲ್ಲಿ ದುರ್ಯೋಧನನೊಬ್ಬನಿಗೆಮಾತ್ರ ಅವಮಾನವುಂಟಾಗಲು ಕಾರಣವೇನೆಂದು ನೀನು ಕೇಳಿದುದಕ್ಕಾಗಿ, ನಾನು ಇಷ್ಟುವಿಷಯವನ್ನು ನಿನಗೆ ತಿಳಿಸಬೇಕಾಯಿತು. ಆ ದುರ್ಯೋಧನನ ಮನಸ್ಸಿನಲ್ಲಿದ್ದ ಹೆಮ್ಮೆಯೂ, ಮಾತ್ಸರ್ಯವೂ ಅವನನ್ನು ಹೀಗೆ ಅವಮಾನಪಡಿಸಿತಲ್ಲದೆ ಬೇರೆಯಲ್ಲ ! ಇದು ಎಪ್ಪತ್ತೈದನೆಯ ಅಧ್ಯಾಯವು.

---

## ಸಾಲ್ವವಧ ವೃತ್ತಾಂತವು.

ಓ! ಪರೀಕ್ಷಿದ್ರಾಜಾ ! ಲೀಲಾಮಾನುಷನಾದ ಕೃಷ್ಣನು ನಡೆಸಿದ (ಸಾಲ್ವವಧರೂಪವಾದ)ಮತ್ತೊಂದು ಅದ್ಭುತಕಾರ್ಯವನ್ನು ತಿಳಿಸುವೆನುಕೇಳು ಈ ಸಾಲ್ವನು ಶಿಶುಪಾಲನಿಗೆ ಬಹಳಪ್ರಿಯಮಿತ್ರನು. ರುಕ್ಮಿಣಿಯ ವಿವಾಹ ಕಾಲವಲ್ಲಿ ಇವನೂ ಜರಾಸಂಧಾದಿಗಳೊಡನೆ ಶಿಶುಪಾಲನ ಸಹಾಯಕ್ಕಾಗಿ ಬಂದಿದ್ದು,ಅಲ್ಲಿ ಯಾದವರಿಂದ ಪರಾಜಿತನಾಗಿ ಹೊರಟುಹೋದನು. ಆದರೆ ಈ ಸಾಲ್ವನು ಅಷ್ಟರಲ್ಲಿ ಸುಮ್ಮನಿರದೆ, ಜರಾಸಂಧಾಧಿಗಳಮುಂದೆ ಒಂದಾನೊಂದು ಪ್ರತಿಜ್ಞೆಯನ್ನುಮಾಡಿದ್ದನು ಏನೆಂದರೆ "ಎಲೈರಾಜರೆ ! "ಇನ್ನುಕೆಲವು ಕಾಲದೊಳಗಾಗಿ ಈ ಭೂಮಿಯಲ್ಲಿ ಯಾದವರ ಹುಟ್ಟೇ ಇಲ್ಲದಂತೆ,ನಾನುಎಲ್ಲರನ್ನೂನಿರ್ಮೂಲಮಾಡದೆ ಬಿಡುವನಲ್ಲ!ನನ್ನಪೌರುಷವನ್ನಾದರೂ ನೋಡಿರಿ!" ಎಂದು ಹೇಳಿ ಹೊರಟುಹೋದನು. ಮೂಢನಾದ ಸಾಲ್ವನು ಆ ಪ್ರತಿಜ್ಞೆಯನ್ನು ಪೂರೈಸುವುದಕ್ಕಾಗಿ, ಪಶುಪತಿಯಾದ ರುದ್ರನನ್ನು ಕುರಿತು ತಪಸ್ಸುಮಾಡತೊಡಗಿದನು. ಈ ತಪಸ್ಸನ್ನುಮಾಡುವಾಗ ಪ್ರತಿದಿನವೂ ;ಒಂದೊಂದು ಹಿಡಿಯಷ್ಟು ಮಲಳನ್ನುಮಾತ್ರ ಭಕ್ಷಿಸುತ್ತ,

ದೃಢನಿಯಮವನ್ನು ಹಿಡಿದು ಒಂದುವರುಷದವರೆಗೆ ರುದ್ರನನ್ನು ಧ್ಯಾನ ಮಾಡಿದನು. ಆ ವರ್ಷಾಂತ್ಯದಲ್ಲಿ ರುದ್ರನು ಅವನ ತಪಸ್ಸಿಗೆ ಮೆಚ್ಚಿ ಅವನಿಗೆ ಪ್ರತ್ಯಕ್ಷನಾದನು ಆದರೆ ಆ ಸಾಲ್ವನು ಭಗವಂತನಲ್ಲಿ ದ್ವೇಷಬುದ್ಧಿಯಿಂದ ಲೇ ಈ ತಪಸ್ಸನ್ನು ಹಿಡಿದಿದ್ದುದರಿಂದ, ಪೂಜ್ಯನಾದ ಶಂಕರನಿಗೆ ಪೂರ್ಣ ವಾದ ಸಂತೋಷವಿಲ್ಲದಿದ್ದರೂ, ತನ್ನಲ್ಲಿ ಶರಣಾಗತನಾದ ಆಸಾಲ್ವನ ಕೋ ರಿಕೆಯನ್ನು ತೀರಿಸಬೇಕಾದುದು ಧರ್ಮವಾದುದರಿಂದ,ಸ್ವಲ್ಪವಾಗಿ ಸಂತೋ ಷವನ್ನು ತೋರಿಸುತ್ತ ಅವನಿಗೆ ಬೇಕಾದ ವರವನ್ನು ಕೇಳುವಂತೆ ಸಾಲ್ವ ನನ್ನು ಪ್ರೇರಿಸಿದನು. ಆಗ ಸಾಲ್ವನು ರುದ್ರನನ್ನು ಕುರಿತು ತನಗೆ ಕಾಮಗಮನ ವುಳ್ಳ ಒಂದಾನೊಂದು ವಿಮಾನವನ್ನು ನಿರ್ಮಿಸಿಕೊಡಬೇಕೆಂದೂ, ಅದು ಯಾದವರಿಗೆ ಭಯವನ್ನು ಹುಟ್ಟಿಸತಕ್ಕುದಾಗಿ, ದೇವ, ದಾನವ, ಮನುಷ್ಯ, ಗಂಧರ್ವ, ಪನ್ನಗ, ರಾಕ್ಷಸರಲ್ಲಿ ಯಾರಿಗೂ ಅಭೇದ್ಯವಾಗಿರಬೇ ಕೆಂದೂ ಕೇಳಿಕೊಂಡನು ಅದರಂತೆಯೇ ಶಿವನು, ಪಟ್ಟಣದಂತೆ ಅತಿವಿಶಾಲ ವಾದ, ಮತ್ತು ಅಯೋಮಯವಾದ (ಉಕ್ಕಿನ) ಒಂದಾನೊಂದು ವಿಮಾನ ವನ್ನು ನಿರ್ಮಿಸಿ ಕೊಡುವಂತೆ ದಾನವಶಿಲ್ಪಿಯಾದಮಯನಿಗೆಆಜ್ಞಾಪಿಸಲು, ಅದರಂತೆ ಯಮನು ಸಾಲ್ವನಿಗೆ ಸೌಭವೆಂಬ ಒಂದಾನೊಂದು ಪುರವನ್ನು ನಿರ್ಮಿಸಿಕೊಟ್ಟನು ಅದು ಕೇವಲ ಅಂಧಕಾರಮಯವಾಗಿ, ಯಾರ ಕಣ್ಣಿಗೂ ಗೋಚರಿಸದೆ,ಆಕಾಶದಲ್ಲಿ ಇಷ್ಟಬಂದ ಕಡೆಗೆ ಸಂಚರಿಸತಕ್ಕ ಶಕ್ತಿಯುಳ್ಳು ದಾಗಿತ್ತು. ಸಾಲ್ವನು ಆ ವಿಮಾನವನ್ನೇರಿ ಯಾದವರಮೇಲೆ ಹಗೆತೀರಿಸಿ ಕೊಳ್ಳಬೇಕೆಂಬ ಉದ್ದೇಶದಿಂದ ದ್ವಾರಕಾಪುರಿಯಕಡೆಗೆ ಬಂದನು. ಆ ಪಟ್ಟ ಣದಿಂದ ಒಂದು ಪಿಳ್ಳೆಯಾದರೂ ತಪ್ಪಿಸಿಕೊಂಡು ಹೊರಕ್ಕೆ ಹೋಗದಂತೆ ಅದರಸುತ್ತಲೂ ತನ್ನ ದೊಡ್ಡಸೈನ್ಯದಿಂದ ಮುತ್ತಿಗೆಹಾಕಿಸಿ, ತಾನು ವಿಮಾ ನದಿಂದ ಆಕಾಶಮಾರ್ಗವಾಗಿ ಬಂದು, ಅಲ್ಲಿನ ಗೋಪುರಪ್ರಾಕಾರಗಳನ್ನೂ, ಹೆಬ್ಬಾಗಿಲುಗಳನ್ನೂ, ಅಟ್ಟಲೆಗಳನ್ನೂ, ಅಂಗಳಗಳನ್ನೂ, ಕ್ರೀಡಾಸ್ಥಾನಗಳ ನ್ನೂ ಮುರಿದು ಧ್ವಂಸಮಾಡುತ್ತಬಂದನು! ಆ ಸೌಭವಿಮಾನದಿಂದ ದ್ವಾರಕಾಪುರಿಯಮೇಲೆ ಕಲ್ಲುಗುಂಡುಗಳೂ, ಮರಗಳೂ,ಸಿಡಿಲುಗಳೂ,ನಾ ನಾವಿಧಶಸ್ತ್ರಗಳೂ, ಭಯಂಕರಗಳಾದ ವಿಷಸರ್ಪಗಳೂ ಎಡೆಬಿಡದೆ ಸುರಿ

ಯುತಿದ್ದುವು. ಪ್ರಚಂಡವಾದ ಬಿರುಗಾಳಿಯು ಹೊರಟು, ಆ ಪಟ್ಟಣದ ನಾನಾಕಡೆಗಳಿಗೂ ಮಳಲನ್ನು ತಂದೆರಚುತಿತ್ತು. ದೊಡ್ಡ ಮಳೆಯು ಸುರಿಯಲಾರಂಭಿಸಿತು. ಅಲ್ಲಲ್ಲಿ ಭಯಂಕರವಾದ ಸುಳಿಗಾಳಿಯು ನೆಲದ ಧೂಳನ್ನೆಬ್ಬಿಸಿ, ದಿಕ್ಕುಗಳೇ ಕಣ್ಣಿಗೆ ಕಾಣದಂತಾಯಿತು. ನಾನಾವಿಧಗಳಾದ ಈ ಅನಾಹುತಗಳಿಂದ, ಪೂರ್ವದಲ್ಲಿ ತ್ರಿಪುರಾಸುರನ ಬಾಧೆಯಿಂದ ಈ ಭೂಮಿಯು ಹೇಗೋಹಾಗೆ, ದ್ವಾರಕಾಪುರಿಯೆಲ್ಲವೂ ನಿಮಿಷಮಾತ್ರವೂನೆಮ್ಮದಿಯಿಲ್ಲದೆ ತತ್ತಳಿಸುತಿತ್ತು. ಆಗ ಮಹಾತ್ಮನಾದ ಪ್ರದ್ಯುಮ್ನನು, ತನ್ನ ಪ್ರಜೆಗಳಿಗುಂಟಾದ ಬಾಧೆಯನ್ನು ನೋಡಿ ಸಹಿಸಲಾರದೆ, ಅವರಿಗೆ«ಭಯಪಡಬೇಡಿ,ರೆಂದು ಸಮಾಧಾನವನ್ನು ಹೇಳಿ, ಸಾಲ್ವನನ್ನಿದಿರಿಸುವುದಕ್ಕಾಗಿ ರಥವನ್ನೇರಿ ಹೊರಟುಬಂದನು. ಸಾತ್ಯಕಿ, ಚಾರುದೇಷ್ಣ, ಸಾಂಬ, ಅಕ್ರೂರ, ಹಾರ್ದಿಕ್ಯ, ಭಾನುವಿಂದ, ಗದ, ಶುಕ, ಸಾರಣ, ಮುಂತಾದ ಯಾದವಪ್ರಧಾನರೂ, ಮತ್ತು ಪ್ರದ್ಯುಮ್ನನ ಇತರಸಹೋದರರೂ, ಇನ್ನೂ ಕೆಲವು ಧನುರ್ಧಾರಿಗಳೂ, ರಥಿಕರಲ್ಲಿ ಅಗ್ರೇಸರರೆನಿಸಿಕೊಂಡವರೂ, ಯುದ್ಧಕವಚಗಳನ್ನು ತೊಟ್ಟು, ತಮ್ಮ ತಮ್ಮ, ಚತುರಂಗಸೈನ್ಯಗಳನ್ನು ಬೆಂಗಾವಲಾಗಿಟ್ಟುಕೊಂಡು, ಆ ಪ್ರದ್ಯುಮ್ನನನ್ನು ಹಿಂಬಾಲಿಸಿ ಯುದ್ಧಕ್ಕೆ ನಿಂತರು. ಸಾಲ್ವನಕಡೆಯವರಿಗೂ, ಯಾದವರಿಗೂ, ದೇವಾಸುರಯುದ್ಧದಂತೆ ಭಯಂಕರಯುದ್ಧವು ಆರಂಭಿಸಿತು. ಆರಂಭದಲ್ಲಿಯೇ ಪ್ರದ್ಯುಮ್ನನು ತನ್ನ ದಿವ್ಯಾಸ್ತ್ರಪ್ರಭಾವದಿಂದ, ಸೂರ್ಯನು ಅಂಧಕಾರವನ್ನು ಹೇಗೋ ಹಾಗೆ, ಸಾಲ್ವನ ಮಾಯಾಶಕ್ತಿಯನ್ನು ಅಡಗಿಸಿಬಿಟ್ಟನು. ಮತ್ತು ಸುವರ್ಣದ ಹಿಡಿಗಳಿಂದಲೂ, ಉಕ್ಕಿನ ಅಲಗುಗಳಿಂದಲೂ ಕೂಡಿದ ಇಪ್ಪತ್ತೈದು ಬಾಣಗಳನ್ನು ಸಾಲ್ವನ ಮುಖ್ಯಸೇನಾಪತಿಗೆ ಗುರಿಯಿಟ್ಟು ಹೊಡದನು. ಏಕಕಾಲದಲ್ಲಿ ನೂರುಬಾಣಗಳಿಂದ ಸಾಲ್ವನನ್ನೂ ಹೊಡೆದನು ಅವನು ಪ್ರಯೋಗಿಸಿದ ಒಂದೊಂದು ಬಾಣವನ್ನೂ ಒಂದೊಂದು ಬಾಣದಿಂದ ಕತ್ತರಿಸುತ್ತ ಬಂದನು. ಹತ್ತುಹತ್ತು ಬಾಣಗಳಿಂದ ಇತರ ಸೇನಾಪತಿಗಳನ್ನೂ, ಮೂರು ಮೂರು ಬಾಣಗಳಿಂದ ಆನೆ ಕುದುರೆ ಮೊದಲಾದ ವಾಹನಗಳನ್ನೂ ಪ್ರಹರಿಸುತ್ತ ಬಂದನು. ಮಹಾತ್ಮನಾದ ಪ್ರದ್ಯುಮ್ನನ ಈ ಯುದ್ಧಚಾತುರ್ಯ

ವನ್ನು ಉಭಯಪಕ್ಷದವರೂ ಕೊಂಡಾಡುತಿದ್ದರು. ಆದರೇನು? ಆಗ ಮಯ ನಿರ್ಮಿತವಾದ ಆ ಸೌಭವೆಂಬ ವಿಮಾನದ ಮಾಯೆಯು, ಚಿತ್ರವಿಚಿತ್ರವಾಗಿ ಕಾಣಿಸುತಿತ್ತು. ಒಮ್ಮೆ ಆ ವಿಮಾನವು ಅನೇಕರೂಪಗಳಿಂದ ಕಾಣುವುದು. ಮತ್ತೊಮ್ಮೆ ಒಂದೇ ರೂಪದಲ್ಲಿ ನಿಲ್ಲುವುದು. ಒಮ್ಮೆ ಹಾಗೆಯೇ ಅಗೋಚರವಾಗುವುದು ಆ ವಿಮಾನವು ಎಲ್ಲಿ, ಯಾವ ರೂಪದಿಂದಿರುವುದೆಂದು ಊಹಿಸುವುದಕ್ಕೂ ಯಾರಿಗೂ ಸಾಧ್ಯವಿಲ್ಲದಂತಾಯಿತು ಒಮ್ಮೆ ಭೂಮಿಯಲ್ಲಿದ್ದಂತೆ ಕಾಣುವುದು. ಒಡನೆಯೇ ಅಂತರಿಕ್ಷದಲ್ಲಿ ಗೋಚರಿಸುವುದು. ಮತ್ತೊಮ್ಮೆ ಪರ್ವತಶಿಖರದಲ್ಲಿದ್ದಂತೆ ಕಾಣುವುದು ಮತ್ತೊಮ್ಮೆ ನೀರಿನಲ್ಲಿ ಮುಳುಗಿಹೋದಂತೆ ತೋರುವುದು. ಇನ್ನೊಮ್ಮೆ ಅಲಾತಚಕ್ರದಂತೆ ಆಕಾಶದಲ್ಲಿ ಗಿರುಗಿರನೆ ಸುತ್ತುತ್ತಿರುವುದು. ಹೀಗೆ ಆ ಸೌಭವಿಮಾನವು ನಿಂತಲ್ಲಿ ನಿಲ್ಲದೆ ನಾನಾಕಡೆಯಲ್ಲಿ ಗೋಚರಿಸುತಿತ್ತು. ಆದರೆ ಆ ವಿಮಾನದೊಡನೆಯೂ, ಸೈನಿಕರೊಡನೆಯೂ ಸಾಲ್ವನು ಯಾವಯಾವ ಕಡೆಯಲ್ಲಿ ಕಣ್ಣಿಗೆ ಗೋಚರಿಸುತಿದ್ದನೋ, ಆಯಾ ಕಡೆಗೆ ಯಾದವರು ಬಾಣಗಳನ್ನು ಎಡೆಬಿಡದೆ ಪ್ರಯೋಗಿಸುತ್ತಬಂದರು ಅಗ್ನಿಸೂರ್ಯರಂತೆ ತೀಕ್ಷ್ಣವಾಗಿಯೂ, ವಿಷಸರ್ಪದಂತೆ ಕ್ರೂರವಾಗಿಯೂ ಇರುವ ಯಾದವರ ಬಾಣಗಳಿಂದ ಸಾಲ್ವನ ವಿಮಾನವೂ, ಅವನ ಸೇನಾಬಲವೂ ಕ್ರಮಕ್ರಮವಾಗಿ ಛಿನ್ನಭಿನ್ನವಾಗುತ್ತಬಂದುವು. ಆಗ ಸಾಲ್ವನು ಹಿಂದುಮುಂದುತೋರದೆ ಸ್ತಬ್ಧನಾದನು. ಇವರಂತೆಯೇ ಅತ್ತಲಾಗಿ ಸಾಲ್ವನ ಕಡೆಯ ಸೇನಾಧಿಪತಿಗಳೂ, ಯಾದವರಮೇಲೆ ಎಡೆಬಿಡದೆ ಅನೇಕಶಸ್ತ್ರಾಸ್ತ್ರಗಳನ್ನು ಪ್ರಯೋಗಿಸಿದರು. ಅದರಿಂದ ಯಾದವವೀರರು ಬಹಳಬಾಧೆಪಟ್ಟಿದ್ದರೂ, ಮಹಾವೀರರಾದುದರಿಂದ, ತಾವಿದ್ದ ಸ್ಥಳವನ್ನು ಬಿಟ್ಟು ಕದಲದೆ, ಧೈರ್ಯದಿಂದ ಇದಿರಿಸಿನಿಂತಿದ್ದರು. ಇಷ್ಟರಲ್ಲಿ ಸಾಲ್ವನ ಮಂತ್ರಿಯಾದ ದ್ಯುಮಂತನು, ಪ್ರದ್ಯುಮ್ನನು ತನ್ನಮೇಲೆ ಪ್ರಯೋಗಿಸಿದ ಬಾಣಗಳಿಂದ ಬಹಳವಾಗಿ ನೊಂದು, ಆ ಕೋಪವನ್ನು ತಡೆಯಲಾರದೆ, ಒಂದಾನೊಂದು ಉಕ್ಕಿನ ಗದೆಯನ್ನು ಹಿಡಿದು ಮುಂದೆ ಬಂದು, ಪ್ರದ್ಯುಮ್ನನನ್ನು ಪ್ರಹರಿಸಿ ಸಿಂಹನಾದವನ್ನು ಮಾಡಿದನು. ಆ ಗದಾಪ್ರಹಾರವು ಪ್ರದ್ಯುಮ್ನನ ಎದೆಗೆ ಬಿದ್ದುದರಿಂದ, ಅವನಿಗೆ

ಹಾಗೆಯೇ ಮೂರ್ಛೆಬರುವಂತಾಯಿತು. ಆಗ ಅವನಿಗೆ ಸಾರಥಿಯಾಗಿದ್ದ ದಾರುಕನ ಮಗನು,ಯುದ್ಧಧರ್ಮವನ್ನು ತಿಳಿದವನಾದುದರಿಂದ,ಮೂರ್ಛಿತ ನಾಗಿದ್ದ ಆ ಪ್ರದ್ಯುಮ್ನನನ್ನು ರಣರಂಗದಿಂದ ಹೊರಕ್ಕೆ ತಂದುಬಿಟ್ಟನು. ಆಮೇಲೆ ಮುಹೂರ್ತದೊಳಗಾಗಿಯೇ ಪ್ರದ್ಯುಮ್ನನಿಗೆ ಮೂರ್ಛೆತಿಳಿಯಲು, ಆತನು ತನ್ನ ಸಾರಥಿಯನ್ನು ನೋಡಿ "ಆಹಾ! ಸೂತಾ! ಎಂತಹ ತಪ್ಪು ಕೆಲಸವನ್ನುಮಾಡಿದೆ? ರಣರಂಗದಿಂದ ನನ್ನನ್ನು ಹಿಮ್ಮೆಟ್ಟಿಸಿ ಕರೆತಂದೆ ಯಲ್ಲವೆ? ನೀನು ಹೀಗೆ ಮಾಡಬಾರದಾಗಿತ್ತು! ನಮ್ಮ ಯಾದವಕುಲದಲ್ಲಿ ಹೀಗೆ ಯುದ್ಧರಂಗದಿಂದ ಹಿಂಜರಿದು ಬಂದವನನ್ನು ನಾನು ಇದುವರೆಗೂ ಕೇಳಿಯದಿಲ್ಲ. ಕೇವಲಭೀರುಸ್ವಭಾವವುಳ್ಳ ನಿನ್ನನ್ನು ಸಾರಥಿಯಾಗಿಟ್ಟು ಕೊಂಡುದರಿಂದ, ನಾನುಮಾತ್ರ ಇಂತಹ ಅಪಯಶಸ್ಸಿಗೆ ಗುರಿಯಾಗಬೇಕಾ ಯಿತು. ಆಹಾ! ಸೂತಾ! ನನ್ನ ತಂದೆಗಳಾದ ರಾಮಕೃಷ್ಣರನ್ನು ನಾನು ನೋಡುವುದಕ್ಕೆ ಹೋದಾಗ, ಅವರು ನನ್ನನ್ನು ಕುರಿತು, "ಕ್ಷತ್ರಿಯಧರ್ಮ ವನ್ನು ಮೀರಿ ಯುದ್ಧದಿಂದ ನೀನು ಪಲಾಯನಮಾಡಿ ಬಂದವನಲ್ಲವೆ?"ಎಂದು ಕೇಳಿದರೆ, ಅವರಿಗೆ ನಾನು ಏನುತ್ತರವನ್ನು ಕೊಡಲಿ!ನನ್ನ ಸಹೋದರಪತ್ನಿ ಯರೂಕೂಡ ನನ್ನ ಸ್ಥಿತಿಯನ್ನು ಕೇಳಿ ಹಾಸ್ಯಮಾಡದಿರುವರೆ? ಲೋಕದವ ರೆಲ್ಲರೂ ನನ್ನನ್ನು ನಿಂದಿಸದೆ ಬಿಡುವರೆ? ಆಹಾ! ನನ್ನನ್ನು ಎಂತಹ ಅಪವಾ ದಕ್ಕೆ ಗುರಿಮಾಡಿದೆ" ಎಂದನು. ಅದಕ್ಕಾ ಸಾರಥಿಯು ವಿನಯದಿಂದ "ಓ! ಆಯುಷ್ಮಂತಾ! ಪ್ರಭೂ! ನಾನು ಯುದ್ಧಧರ್ಮವನ್ನು ವಿಮ ರ್ಶಿಸಿಯೇ ಈ ಕಾರ್ಯವನ್ನು ಮಾಡಿದೆನು ಪ್ರಾಣಾಪಾಯಕ್ಕೆ ಸಿಕ್ಕಿದ ರಥಿಕ ನನ್ನು ಸಾರಥಿಯೂ, ಸಾರಥಿಯನ್ನು ರಥಿಕನೂ ಹೇಗಾದರೂ ರಕ್ಷಿಸಬೇಕಾ ದುದು ಧರ್ಮವು. ಇದನ್ನು ತಿಳಿದೇ ನಾನು ಮೂರ್ಛಿತನಾದ ನಿನಗೆ ಪ್ರಾಣಾಪಾಯವಿಲ್ಲದಂತೆ ಕಾಪಾಡುವುದಕ್ಕಾಗಿ, ಆ ರಣರಂಗದಿಂದ ಹೊ ರಕ್ಕೆ ತಂದುಬಿಟ್ಟೆನು." ಎಂದನು. ಇದು ಎಪ್ಪತ್ತಾರನೆಯಅಧ್ಯಾಯವು.

---

## ಶ್ರೀಕೃಷ್ಣನು ಸಾಲ್ವನನ್ನು ವಧಿಸಿದುದು.

ಆಮೇಲೆ ಪ್ರದ್ಯುಮ್ನನು ಆಚಮನವನ್ನು ಮಾಡಿ, ದೃಢವಾದ ಬೇರೊಂದು ಯುದ್ಧಕವಚವನ್ನು ತೊಟ್ಟು,ಧನುರ್ಧಾರಿಯಾಗಿ "ಓ! ಸೂತಾ! ಆ ದ್ಯುಮಂತನೆಲ್ಲಿರುವನೋ ಆ ಸ್ಥಳಕ್ಕೆ ರಥವನ್ನು ಬಿಡು ಆತನೇ ನನಗೆ ಸಮಾನನಾದ ವೀರನು"ಎಂದನು. ಅದರಂತೆಯೇ ಸಾರಥಿಯು, ರಥವನ್ನು ಮುಂದೆಬಿಡಲು,ಪ್ರದ್ಯುಮ್ನನು ತನ್ನ ಕಡೆಯ ಅನೇಕಸೈನ್ಯಗಳನ್ನು ಧ್ವಂಸಮಾಡುತ್ತ ಬರುತಿದ್ದ ಆ ದ್ಯುಮಂತನನ್ನಿದಿರಿಸಿ, ಮಂದಹಾಸದಿಂದ ನಗುತ್ತ, ಎಂಟುಬಾಣಗಳನ್ನು ಪ್ರಯೋಗಿಸಿದನು ಅವುಗಳಲ್ಲಿ ನಾಲ್ಕುಬಾಣಗಳಿಂದ ಅವನ ನಾಲ್ಕುರಥಾಶ್ವಗಳನ್ನೂ,ಒಂದು ಬಾಣದಿಂದ ಅವನಸಾರಥಿಯನ್ನೂ, ಮತ್ತೊಂದು ಬಾಣದಿಂದ ಅವನ ಧನುಸ್ಸನ್ನೂ, ಇನ್ನೊಂದುಬಾಣದಿಂದ ಅವನ ಧ್ವಜವನ್ನೂ, ಕೊನೆಯ ಬಾಣದಿಂದ ಆ ದ್ಯುಮಂತನ ಶಿರಸ್ಸನ್ನೂ ಕತ್ತರಿಸಿ ಕೆಡಹಿಬಿಟ್ಟನು, ಇದೇಸಮಯದಲ್ಲಿ ಇತ್ತಲಾಗಿ, ಗದ, ಸಾತ್ಯಕಿ, ಸಾಂಬ,ಮೊದಲಾದ ಯಾದವವೀರರೂ ಸಾಲ್ವನ ಸೈನ್ಯಗಳನ್ನು ಕೊಲ್ಲುತ್ತ ಬಂದರು. ಸೌಭವಿಮಾನದಲ್ಲಿ ಸೇರಿ ಯುದ್ಧಮಾಡುತಿದ್ದ ಸೈನಿಕರನೇಕರು, ಯಾದವರ ಬಾಣಗಳಿಂದ ತಲೆಮುರಿದು ಸಮುದ್ರದಲ್ಲಿ ಬಿದ್ದು ಸತ್ತರು. ಹೀಗೆ ಯಾದವರೂ, ಸಾಲ್ವರೂ ಒಬ್ಬರಿಗೊಬ್ಬರಿಗೆಹೊಡೆದಾಡುತ್ತ,ಇಪ್ಪತ್ತೇಳು ದಿನಗಳವರೆಗೆ ಹಗಲುರಾತ್ರಿಯೂ ಎಡೆಬಿಡದೆ ಹೋರಾಡುತಿದ್ದರು. ಪರೀಕ್ಷಿದ್ರಾಜಾ! ಈ ಸಂಗತಿಯು ಹಾಗಿರಲಿ! ಅತ್ತಲಾಗಿ ಧರ್ಮರಾಜನ ರಾಜಸೂಯಕ್ಕಾಗಿ ಕರೆಸಲ್ಪಟ್ಟಿದ್ದ ಕೃಷ್ಣನು, ಆ ರಾಜಸೂಯಯಾಗವು ಸಾಂಗವಾಗಿ ನೆರವೇರಿ, ಶಿಶುಪಾಲನೂ ಸಂಹೃತನಾದಮೇಲೆ, ಕೆಲವುದಿನಗಳವರೆಗೆ ಅಲ್ಲಿಯೇ ಇರುತಿದ್ದನಷ್ಟೆ?ಈನಡುವೆ ಆ ಕೃಷ್ಣನಿಗೆ ಘೋರವಾದ ಕೆಲವು ದುಶ್ಶಕುನಗಳು ಕಂಡುಬಂದುವು. ಈ ದುರ್ನಿಮಿತ್ತಗಳನ್ನು ಕಂಡೊಡನೆ ಕೃಷ್ಣನು, ಅಲ್ಲಿ ನಿಲ್ಲುವುದಕ್ಕೆ ಮನಸ್ಸಮಾಧಾನವಿಲ್ಲದೆ, ಗುರುವೃದ್ಧರನ್ನೂ, ಭೀಷ್ಮಾದಿಗಳನ್ನೂ, ಕುಂತೀದೇವಿಯನ್ನೂ, ಅವಳ ಮಕ್ಕಳಾದ ಪಂಚಪಾಂಡವರನ್ನೂ ಕಂಡು, ಅವರೊಡನೆ "ನಾನು ಬಲರಾಮನೊಡನೆ ಇಲ್ಲಿಗೆ ಬಂದು ಬಹಳ ದಿನಗಳಾದುವು. ಇಲ್ಲಿ ಶಿಶುಪಾಲನೂ ನನ್ನಿಂದ

ಸಂಹೃತನಾದನು. ಇದರಿಂದ ಶಿಶುಪಾಲನ ಪಕ್ಷದವರಾದ ರಾಜರು,ನಮ್ಮಲ್ಲಿ ದ್ವೇಷದಿಂದ ನಮ್ಮ ಪಟ್ಟಣವನ್ನು ಮುತ್ತಿ,ಅಲ್ಲಿನ ಜನರನ್ನು ತೊಂದರೆಗೊಳಿಸದೆ ಬಿಡಲಾರರು! ಆದುದರಿಂದ ನಾನು ದ್ವಾರಕೆಗೆ ಹೊರಡುವೆನು" ಎಂದು ಹೇಳಿ, ಅವರ ಅನುಮತಿಯನ್ನು ಪಡೆದು,ದ್ವಾರಕೆಗೆ ಬಂದು ಬಿಟ್ಟನು. ಈ ಕಾಲಕ್ಕೆ ಸರಿಯಾಗಿ ಇಲ್ಲಿ ಯಾದವರಿಗೂ ಸಾಲ್ವನಿಗೂ, ಭಯಂಕರವಾದ ಯುದ್ಧವು ಜರುಗುತಿತ್ತು. ಆಗ ಕೃಷ್ಣನು ತನ್ನಣ್ಣನಾದ ಬಲರಾಮನನ್ನು ಪಟ್ಟಣದ ಕಾವಲಿಗಾಗಿ ನಿಯಮಿಸಿ, ತನ್ನ ಸಾರಥಿಯಾದ ದಾರುಕನನ್ನು ಕುರಿತು "ಓ ಸೂತಾ! ನೀನು ಈಕ್ಷಣವೇ ನಮ್ಮ ರಥವನ್ನು ಸಾಲ್ವನಿರತಕ್ಕ ಸ್ಥಳಕ್ಕೆ ಬಿಡು! ನಾನೇ ಅವನೊಡನೆ ಯುದ್ಧಮಾಡಬೇಕಾಗಿರುವುದು. ಸೌಭಪುರಾಧಿಪತಿಯಾದ ಆ ಸಾಲ್ವನು ಬಹಳ ಮಾಯಾವಿಯು. ಬೇಗನೆ ನಡೆ" ಎಂದನು. ಕೃಷ್ಣನ ಮುಖದಿಂದ ಈ ಮಾತು ಹೊರಡುತ್ತಿರುವಾಗಲೇ, ಗರುಡಧ್ವಜವುಳ್ಳ ಆ ರಥವು, ಉಭಯಪಕ್ಷದ ಸೈನಿಕರೂ ನೋಡುತ್ತಿರುವಹಾಗೆಯೇ, ರಣರಂಗಮಧ್ಯದಲ್ಲಿ ಸಾಲ್ವನಿಗಿದಿರಾಗಿ ನಿಂತಿತು. ಇಷ್ಟರೊಳಗಾಗಿ ಸಾಲ್ವನ ಸಮಸ್ತಸೈನ್ಯಗಳೂ ಯಾದವವೀರರಿಂದ ಹತವಾಗಿ, ಸಾಲ್ವನುಮಾತ್ರ ಅಸಹಾಯನಾಗಿದ್ದನು.ಕೃಷ್ಣನು ತನಗಿದಿರಾಗಿ ಬಂದುನಿಂತಿರುವುದನ್ನು ಕಂಡೊಡನೆ ಸಾಲ್ವನು, ಭೀಕರಧ್ವನಿಯುಳ್ಳ ಒಂದಾನೊಂದು ಶಕ್ತ್ಯಾಯುಧವನ್ನು ತೆಗೆದು, ಅದನ್ನು ಕೃಷ್ಣಸಾರಥಿಯಾದ ದಾರುಕನಮೇಲೆ ಪ್ರಯೋಗಿಸಿದನು. ಆಕಾಶದ ಕೊಳ್ಳಿಯಂತೆ ಕಾಂತಿಯಿಂದ ದಿಕ್ಕುಗಳೆಲ್ಲವನ್ನೂ ಬೆಳಗುತ್ತ, ವೇಗದಿಂದ ತನಗಿದಿರಾಗಿ ಬರುತ್ತಿರುವ ಆ ಶಕ್ತ್ಯಾಯುಧವನ್ನುನೋಡಿ ಕೃಷ್ಣನು, ತನ್ನ ಬಾಣಗಳಿಂದ ಅದನ್ನು ನೂರಾರುತುಂಡುಗಳಾಗಿ ಕತ್ತರಿಸಿ ಕೆಡಹಿದನು. ಮತ್ತು ಬೇರೆ ಹದಿನಾರುಬಾಣಗಳಿಂದ ಆ ಸಾಲ್ವನನ್ನೂ, ಆಕಾಶದಲ್ಲಿ ತಿರುಗುತ್ತಿರುವ ಆತನ ಸೌಭವಿಮಾನವನ್ನೂ ಪ್ರಹರಿಸಿ, ಮೇಲೆಮೇಲೆ ಇನ್ನೂ ಕೆಲವು ಬಾಣಗಳಿಂದ ಸೂರ್ಯನು ತನ್ನ ಕಿರಣಗಳಿಂದ ಹೇಗೋಹಾಗೆ, ಆ ವಿಮಾನವನ್ನು ಮುಚ್ಚಿದನು ಆಗ ಸಾಲ್ವನು ಬೇರೊಂದು ಶಸ್ತ್ರವನ್ನು ಕೃಷ್ಣನ ಎಡಗೈಗೆ ಗುರಿಯಿಟ್ಟು ಹೊಡೆಯಲು, ಕೃಷ್ಣನು ಕೈಯಲ್ಲಿ ಹಿಡಿದಿದ್ದ ಶಾರ್ಙ್ಗಧನುಸ್ಸು ಕೆಳಗೆ ಬಿದ್ದು

ಹೋಯಿತು ಸಾಲ್ವನು ತೋರಿಸಿದ ಈ ಪರಾಕ್ರಮವು ಎಲ್ಲರಿಗೂ ಆತ್ಯಾಶ್ಚರ್ಯ ಕರವಾಗಿದ್ದಿತು. ಅಲ್ಲಿದ್ದ ಸಮಸ್ತಭೂತಗಳೂ ಹಾಹಾಕಾರ ದಿಂದ ಕೂಗುತಿದ್ದುವು. ಸಾಲ್ವನೂಕೂಡ ಉತ್ಸಾಹದಿಂದ ಸಿಂಹನಾದ ಮಾಡುತ್ತ ಕೃಷ್ಣನನ್ನು ಕುರಿತು ‹‹ಎಲೆ ಮೂಢಾ! ಕೃಷ್ಣಾ! ನೀನಲ್ಲವೇ ನಮ್ಮೆಲ್ಲರನ್ನೂ ಅವಮಾನಪಡಿಸಿ, ನಮ್ಮ ಸ್ನೇಹಿತನಾದ ಶಿಶುಪಾಲನ ಪತ್ನಿ ಯನ್ನು ಕದ್ದೋಡಿದವನು ಮತ್ತು ಆ ನನ್ನ ಮಿತ್ರನು ಯಾಗಸಭಾಮಧ್ಯ ದಲ್ಲಿ ಅಸಹಾಯನಾಗಿದ್ದಾಗ ಅವನನ್ನು ನೀನು ಕೊಂದೆಯಲ್ಲವೆ? ಹೀಗೆಮೋ ಸದಿಂದ ನನ್ನ ಮಿತ್ರನನ್ನುಕೊಂದು, ನನಗೆ ಸಮಾನರಾದ ವೀರರಿಲ್ಲವೆಂದು ಗರ್ವಪಡುತ್ತಿರುವ ನಿನ್ನನ್ನು, ಇದೋ! ಈಗಲೇ ನನ್ನ ತೀಕ್ಷ್ಣಬಾಣಗಳಿಂದ ಪುನರಾವೃತ್ತಿಯಿಲ್ಲದ ಮೃತ್ಯುವಿನ ಸಮುಖಕ್ಕೆ ಕಳುಹಿಸುವೆನು ನೋಡು. ಮುಂದೆ ಬಂದು ನಿಲ್ಲು" ಎಂದನು. ಅದಕ್ಕಾ ಕೃಷ್ಣನು ಮಂದಹಾಸದಿಂದ ನಗುತ್ತ, ಸಾಲ್ವನನ್ನು ಕುರಿತು. ‹‹ಎಲೆ ಮೂಢಾ! ಸುಮ್ಮನೆ ಬಗುಳುವುದ ರಿಂದ ಪ್ರಯೋಜನವೇನು? ನಿನ್ನ ಬೆನ್ನಹಿಂದೆ ಕಾದಿರುವ ಮೃತ್ಯುವನ್ನೇ ನೀನು ಕಾಣದೆ, ಹೀಗೆ ಆತ್ಮಸ್ತುತಿಯನ್ನು ಮಾಡಿಕೊಂಡುದರಿಂದ ಪ್ರಯೋ ಜನವಿಲ್ಲ. ನಿಜವಾದ ಶೌರ್ಯವುಳ್ಳವರು, ಕಾರ್ಯದಿಂದ ತಮ್ಮ ಪರಾಕ್ರಮವನ್ನು ತೋರಿಸುವರೇಹೊರತು ನಿನ್ನಂತೆ ಬಾಯಿಗೆ ಬಂದಹಾಗೆ ಬಗುಳುವುದಿಲ್ಲ!" ಎಂದುಹೇಳಿ, ಮಹಾಭಯಂಕರವೇಗವುಳ್ಳ ಬಂದಾನೊಂದು ಗದೆಯನ್ನು ತೆಗೆದು, ಅದನ್ನು ಸಾಲ್ವನ ಭುಜದ ಕೀಲಿಗೆ ಗುರಿಯಿಟ್ಟು ಹೊಡೆದನು ಈ ಪ್ರಹಾರದಿಂದ ಆ ಸಾಲ್ವನ ಮೈ ನಡುಗಿ ಹೋಯಿತು. ಅವನ ಬಾ ಯಿಂದ ರಕ್ತವು ಸುರಿಯಲಾರಂಭಿಸಿತು. ಕೃಷ್ಣನು ಆ ಗದೆಯನ್ನು ಉಪ ಸಂಹಾರ ಮಾಡಿದಮೇಲೆ, ಸಾಲ್ವನು ಇದಕ್ಕಿದ್ದಹಾಗೆ ಕಣ್ಮರೆಯಾಗಿ ಬಿಟ್ಟನು. ಸ್ವಲ್ಪ ಹೊತ್ತಿಗೊಳಗಾಗಿ ಮಾಯಾವಿಯಾದ ಸಾಲ್ವನ ಕಡೆಯ ಪುರುಷ ನೊಬ್ಬನು, ಕೃಷ್ಣನಮುಂದೆ ಬಂದು ನಿಂತು ತಲೆಬಗ್ಗಿ ನಮಸ್ಕರಿಸಿ, ದುಃಖ ವನ್ನು ನಟಿಸಿ ಅಳುತ್ತ, ತನ್ನನ್ನು ದೇವಕೀದೇವಿಯು ಕಳುಹಿಸಿ ಕೊಟ್ಟುದಾಗಿ ಹೇಳಿದನು. ಆಗ ಕೃಷ್ಣನು ಅದಕ್ಕೆ ಕಾರಣವೇನೆಂದು ಕೇಳಲು, ಅವನು ಹೀಗೆಂದು ಹೇಳುವನು. ‹‹ಕೃಷ್ಣಾ! ಕೃಷ್ಣಾ! ಹೇಮಹಾಬಾಹೂ!

ದುಷ್ಟನಾದ ಸಾಲ್ವನು, ಕಟುಕನು ಪಶುವನ್ನು ಕೊಲೆಗಾಗಿ ಹಿಡಿದುಕೊಂಡುಹೋಗುವಂತೆ, ನಿನ್ನ ತಂದೆಯಾದ ವಸುದೇವನನ್ನು ಹಿಡಿದು, ಅಪಹರಿಸಿಕೊಂಡು ಹೋಗಿರುವನು. ಪಿತೃವತ್ಸಲನಾದ ನೀನು ಈಗಲೇ ಹೋಗಿ ಅವನನ್ನು ಬಿಡಿಸಬೇಕು!" ಎಂದನು. ಸರ್ವಜ್ಞನಾಗಿದ್ದರೂ ಮನುಷ್ಯಸ್ವಭಾವವನ್ನು ನಟಿಸತಕ್ಕ ಕೃಷ್ಣನು, ಈ ಅಪ್ರಿಯವಾಕ್ಯವನ್ನು ಕೇಳಿ, ಪ್ರಾಕೃತಮನುಷ್ಯನಂತೆ ದುಃಖವನ್ನು ತೋರಿಸುತ್ತ, ತಂದೆಯಲ್ಲಿ ತನಗಿರುವ ಕನಿಕರವನ್ನು ಸೂಚಿಸುವಂತೆ ಹೀಗೆಂದು ಹೇಳುವನು. "ಆಹಾ! ಏನಿದು! ನಾನು ದೇವಾಸುರರಿಗೂ ದುರ್ಜಯನಾದ, ನನ್ನಣ್ಣನಾದ ಬಲರಾಮನನ್ನು ಪುರರಕ್ಷಣೆಗಾಗಿ ನಿಲ್ಲಿಸಿ ಬಂದಿದ್ದೆನು. ಇಂತಹ ಸಂದರ್ಭಗಳಲ್ಲಿ ಆತನು ಎಂದಿಗೂ ಎಚ್ಚರತಪ್ಪುವನಲ್ಲ! ಹೀಗಿರುವಾಗಲೂ ಅಲ್ಪನಾದ ಆ ಸಾಲ್ವನು ನನ್ನ ತಂದೆಯನ್ನು ಹಿಡಿದುಕೊಂಡು ಹೋದನೆ? ಆಹಾ! ದೈವವುಬಹಳ ಪ್ರಬಲವಾದುದು" ಎಂದು ಹೇಳುತ್ತಿರುವಾಗಲೇ ಸಾಲ್ವನು, ಮಾಯೆಯಿಂದ ವಸುದೇವಾಕೃತಿಯೊಂದನ್ನು ನಿರ್ಮಿಸಿ, ಅದನ್ನು ತನ್ನೊಡನೆ ಕರೆದುಕೊಂಡು ಬಂದು, ಕೃಷ್ಣನಿಗೆ ತೋರಿಸಿ "ಕೃಷ್ಣಾ! ನೀನು ಯಾವನಿಗಾಗಿ ಈ ಲೋಕದಲ್ಲಿ ಬದುಕುತ್ತಿರುವೆಯೋ, ಆ ನಿನ್ನ ತಂದೆಯನ್ನು ನೋಡು! ಇದೋ! ನಿನ್ನ ಕಣ್ಣೆದಿರಾಗಿಂದೇ ಇವನತಲೆಯನ್ನು ಕಡಿಯುವೆನು. ಶಕ್ತಿಯಿದ್ದರೆ ಈ ನಿನ್ನ ತಂದೆಯನ್ನು ರಕ್ಷಿಸಿಕೊಳ್ಳುವನಾಗು" ಎಂದನು, ಹೀಗೆ ಮಾಯಾವಿಯಾದ ಸಾಲ್ವನು, ಕೃಷ್ಣನನ್ನು ಹೆದರಿಸಿ ತಾನು ತಂದಿದ್ದ ಆ ಮಾಯಾವಸುದೇವನ ಕಂಠವನ್ನು ಕತ್ತಿಯಿಂದ ಕಡಿದು, ಆ ತಲೆಯನ್ನುಮಾತ್ರ ಎತ್ತಿಕೊಂಡು, ತನ್ನ ಸೌಭವಿಮಾನವನ್ನೇರಿ ಹೊರಟುಹೋದನು. ಆಗ ಕೃಷ್ಣನು ಸ್ವಲ್ಪ ಹೊತ್ತಿನವರೆಗೆ ಮನುಷ್ಯಸ್ವಭಾವಕ್ಕೆ ತಕ್ಕಂತೆ ತನ್ನ ಪಿತೃಮರಣದಿಂದುಂಟಾದ ದುಃಖವನ್ನು ನಟಿಸುತ್ತಿದ್ದು, ಆಮೇಲೆ ಅಸಾಧಾರಣವಾದ ತನ್ನ ಪ್ರಭಾವದಿಂದ ನಿಜಸ್ಥಿತಿಯನ್ನು ತಿಳಿದುಕೊಂಡನು. ಮಯನು ಸಾಲ್ವನಿಗೆ ಉಪದೇಶಿಸಿದ್ದ ಆಸುರಿಯೆಂಬ ಮಾಯೆಯನ್ನು ಹಿಡಿದೇ ಸಾಲ್ವನು ಈ ಕಪಟತಂತ್ರವನ್ನು ತೋರಿಸಿರಬಹುದೆಂದು ಸ್ಪಷ್ಟವಾಗಿ ಕೃಷ್ಣನಿಗೆ ತಿಳಿಯಿತು. ಮೂರ್ಛೆತಿಳಿದೆದ್ದವನಂತೆ ಕಣ್ಣುಬಿಟ್ಟು ನೋಡುವಾಗ, ಅಲ್ಲಿ

ಮೊದಲು ಬಂದಿದ್ದ ದೂತನಾಗಲಿ, ತನ್ನ ತಂದೆಯ ಮುಂಡವಾಗಲಿ ಯಾವುದೂ ಗೋಚರಿಸಲಿಲ್ಲ! ಅದೆಲ್ಲವೂ ಸ್ವಪ್ನಪ್ರಾಯವಾಗಿ ತೋರಿತು. ಅದರ ಆಕಾಶದಲ್ಲಿ ಸೌಭವೆಂಬ ವಿಮಾನದಲ್ಲಿ ಕುಳಿತಿದ್ದ ತನ್ನ ಶತ್ರುವೊಬ್ಬನು ಮಾತ್ರ ಗೋಚರಿಸಿದನು ಒಡನೆಯೇ ಆ ಸಾಲ್ವನನ್ನು ಕೊಂದುಬಿಡಬೇಕೆಂದು ಕೃಷ್ಣನು ಸಂಕಲ್ಪಿಸಿಕೊಂಡನು. ಓ ಪರೀಕ್ಷಿದ್ರಾಜಾ! ಈ ಸಾಲ್ವ ವೃತ್ತಾಂತದಲ್ಲಿ ತತ್ವವಿರುದ್ಧಗಳಾದ ಕೆಲವು ಸಂದರ್ಭಗಳನ್ನು ಕಾಣುವುವು. ಋಷಿಗಳು ಹಿಂದುಮುಂದಿನ ಸಂದರ್ಭಗಳನ್ನು ಸರಿಹೋಲಿಸಿ ನೋಡದಹಾಗೆ ಹೇಳಿರುವಂತಿದೆ! * ಕೇವಲಭಗವದ್ಧ್ಯಾನನಿರತರಾದ ಆ ಮಹರ್ಷಿಗಳು, ಇಂತಹ ಸಂದರ್ಭಗಳಲ್ಲಿ ತಮ್ಮ ಮಾತುಗಳು ಒಂದಕ್ಕೊಂದು ವಿರುದ್ಧವೆಂಬುದನ್ನೂ ಯೋಚಿಸಲಾರರು. ಅಖಂಡವಾದ ಜ್ಞಾನಕ್ಕೂ ಐಶ್ವರ್ಯಕ್ಕೂ ನೆಲೆಯಾದ ಆ ಶ್ರೀ ಕೃಷ್ಣನಿಗೆ ಶೋಕವಾಗಲಿ, ಮೋಹವಾಗಲಿ, ಸ್ನೇಹವಾಗಲಿ, ಅಜ್ಞಾನದಿಂದುಂಟಾಗತಕ್ಕ ಭಯವಾಗಲಿ, ಎಲ್ಲಿಯದು! ಯಾವನ ಪಾದಾರವಿಂದಗಳನ್ನು ಸೇವಿಸುವುದರಿಂದ ಪರಮಾತ್ಮೋಪಾಸನವೆಂಬ ಆತ್ಮವಿದ್ಯೆಯೇ ಕೈವಶವಾಗಿ, ಅನಾದಿಯಾಗಿ ಬಂದ ದೇಹಾತ್ಮಭ್ರಾಂತಿ ಮೊದಲಾದ ಪಿಶಾಚಗಳನ್ನು ನೀಗಿಸುವುದೋ, ಯಾವನ ಉಪಾಸನೆಯಿಂದ ಪ್ರಕೃತಿಬದ್ಧರಾದ ಚೇತನರೂಕೂಡ, ಪಾಪನಿವೃತ್ತಿ ಮೊದಲಾದ ಅಷ್ಟಗುಣಗಳಿಂದ ಕೂಡಿದ ಪರಮೈಶ್ವರ್ಯವನ್ನು ಪಡೆಯುವರೋ, ಅಂತಹ ಪರಮಾತ್ಮನಿಗೆ ಸಾಲ್ವನ ಗದಾಪ್ರಹಾರದಿಂದ ಮೂರ್ಛೆಯೆಂದರೇನು? ಕೃಷ್ಣನು ಮೂರ್ಛಿತನಾಗಿದ್ದನೆಂಬುದು ಸುಳ್ಳು!

---

* ಇಲ್ಲಿ ಪೂರ್ವಾಪರವಿರೋಧಗಳೇನೆಂದರೆ, ಶ್ರೀ ಕೃಷ್ಣನು ರಾಜಸೂಯಯಾಗಕ್ಕೆ ಹೋಗುವಾಗ ಬಲರಾಮನೊಡನೆ ಹೋದವನಲ್ಲ. ಏಕೆಂದರೆ "ಸಂಕರ್ಷಣಮನುಜ್ಞಾಪ್ಯ" ಎಂದು ಹಿಂದೆ ಆ ಬಲರಾಮನ ಅನುಜ್ಞೆಯನ್ನು ಪಡೆದು ತಾನು ಇಂದ್ರಪ್ರಸ್ಥಕ್ಕೆ ಹೋದುದಾಗಿ ಹೇಳಲ್ಪಟ್ಟಿದೆ. ಇದಲ್ಲದೆ ಕೃಷ್ಣನು ಇಂದ್ರಪ್ರಸ್ಥದಲ್ಲಿರುವಾಗ, ಸಾಲ್ವನು ದ್ವಾರಕೆಯಮೇಲೆ ದಂಡೆತ್ತಿ ಬಂದವನಲ್ಲ. ಏಕೆಂದರೆ, ಕೃಷ್ಣನು ಕಾಮ್ಯಕವನದಲ್ಲಿ ಪಾಂಡವರನ್ನು ಕಂಡಾಗ, ತಾನು ಸಾಲ್ವನೊಡನೆ ಯುದ್ಧಕ್ಕೆ ನಿಂತಿದ್ದುದರಿಂದ ಅವರ ದ್ಯೂತವೃತ್ತಾಂತವು ತನಗೆ ತಿಳಿಯದೆಂದು ಹೇಳಿದಹಾಗೆ

* ಸಾಲ್ವನು ಶಸ್ತ್ರಸಮೂಹಗಳಿಂದ ಪ್ರಹರಿಸುತ್ತಿರುವಾಗಲೇ ಅಮೋಘ ಪರಾಕ್ರಮವುಳ್ಳ ಶ್ರೀ ಕೃಷ್ಣನು, ಅವನ ಕವಚವನ್ನೂ, ಧನುಸ್ಸನ್ನೂ, ಶಿರೋರತ್ನವನ್ನೂ ಛೇದಿಸಿ. ತನ್ನ ಗದೆಯಿಂದ ಆತನ ಸೌಭವಿಮಾನವನ್ನೂ ಪ್ರಹರಿಸಿದನು. ಈ ಗದಾಪ್ರಹಾರದಿಂದ ಆ ಸೌಭವು ಸಹಸ್ರಶಕಲಗಳಾಗಿ ಸಮುದ್ರದಲ್ಲಿ ಬಿದ್ದುಹೋಯಿತು. ಆಮೇಲೆ ಸಾಲ್ವನು, ಆ ವಿಮಾನದಿಂದ ಥಟ್ಟನೆ ಕೆಳಕ್ಕೆ ಧುಮುಕಿ, ನೆಲದಲ್ಲಿಯೇ ನಿಂತು. ಗದಾಪಾಣಿಯಾಗಿ ಕೃಷ್ಣನನ್ನಿದಿರಿಸಿಬಂದನು. ಒಡನೆಯೇ ಕೃಷ್ಣನು ಭಲ್ಲಾಯುಧದಿಂದ ಆ ಸಾಲ್ವನ ಭುಜಗಳನ್ನು ಕತ್ತರಿಸಿ, ಆತನನ್ನು ವಧಿಸುವುದಕ್ಕಾಗಿ ಕಲ್ಪಾಂತ ಸೂರ್ಯನಂತೆ ಜ್ವಲಿಸುತ್ತಿರುವ ತನ್ನ ಚಕ್ರಾಯುಧವನ್ನು ಕೈಗೆತ್ತಿಕೊಂಡನು. ಆಗ ಚಕ್ರಧಾರಿಯಾದ ಕೃಷ್ಣನು ಸೂರ್ಯನೊಡಗೂಡಿದ ಉದಯಪರ್ವತದಂತೆ ಪ್ರಕಾಶಿಸುತಿದ್ದನು. ಒಡನೆಯೇ ಆತನು, ತನ್ನ ಚಕ್ರವನ್ನು ಪ್ರಯೋಗಿಸಿ, ಇಂದ್ರನು ವಜ್ರಾಯುಧದಿಂದ ವೃತ್ರನ ತಲೆಯನ್ನು ಹೇಗೋಹಾಗೆ, ಮಹಾಮಾಯಾವಿಯಾದ ಆ ಸಾಲ್ವನ ಶಿರಸ್ಸನ್ನು ಛೇದಿಸಿ, ಕಿರೀಟಕುಂಡಲಗಳೊಡನೆ ಅದನ್ನು ಕೆಳಕ್ಕೆ ಕೆಡಹಿದನು. ಜನರೆಲ್ಲರೂ ಹಾಹಾಕಾರವನ್ನು ಮಾಡುತಿದ್ದರು. ಪಾಪಿಯಾದ ಸಾಲ್ವನು ಸೌಭವಿಮಾನದೊಡನೆ ಹತನಾಗಿ ಬಿದ್ದುದನ್ನು ನೋಡಿ, ಆಕಾಶದಲ್ಲಿ ದೇವತೆಗಳು ಸಂತೋಷದಿಂದ ದುಂದುಭಿ ವಾದ್ಯಗಳನ್ನು ಮೊಳಗಿಸಿದರು. ಇಷ್ಟರಲ್ಲಿಯೇ ಆತನಿಗೆ ಮಿತ್ರನಾದ ದಂತವಕ್ತ್ರನು, ತನಗೆ ಇಷ್ಟರಾದ ಶಿಶುಪಾಲಾದಿಗಳೆಲ್ಲರನ್ನೂ ಕೊಂದ ಕೃಷ್ಣನ ಮೇಲೆ ಹಗೆತೀರಿಸಿಕೊಳ್ಳಬೇಕೆಂಬ ಕೋಪದಿಂದ ಮುಂದೆ ಬಂದನು. ಇದು ಎಪ್ಪತ್ತೇಳನೆಯ ಅಧ್ಯಾಯವು.

---

ಮಹಾಭಾರತದಲ್ಲಿ ಹೇಳಲ್ಪಟ್ಟಿರುವುದು. ಇಲ್ಲಿನ ಸಂದರ್ಭಗಳು ಅದಕ್ಕೆ ವಿರುದ್ಧವಾಗಿರುವುದರಿಂದ, ಋಷಿಗಳ ಮಾತಿನಲ್ಲಿ ಪೂರ್ವಾಪರವಿರೋಧಗಳೆಂದು ಭಾವವು.

* ಈ ಮುಂದೆ ಹೇಳಿದ ವಿಜಯವೇ ಯಥಾರ್ಥವಾದುದೇಹೊರತು ಕೃಷ್ಣನು ಮೂರ್ಛಿತನಾದುದು ಸುಳ್ಳೆಂದು ಭಾವವು.

## ದಂತವಕ್ತ್ರ ವಿಡೂರಥಸಂಹಾರವು.

ಓ ! ಪರೀಕ್ಷಿದ್ರಾಜಾ ! ಶಿಶುಪಾಲ, ಸಾಲ್ವ, ಪೌಂಡ್ರಕನೇ ಮೊದಲಾದ ತನ್ನ ಇಷ್ಟಮಿತ್ರರೆಲ್ಲರೂ, ಕೃಷ್ಣನಿಂದ ಸಂಹೃತರಾದುದನ್ನು ನೋಡಿ ದಂತವಕ್ತ್ರನು, ಅವರಿಗೆ ಪರಲೋಕದಲ್ಲಿಯಾದರೂ ತನ್ನಿಂದಾದ ಸಹಾಯವನ್ನು ಮಾಡಬೇಕೆಂದು ನಿಶ್ಚಯಿಸಿ, ತಾನೊಬ್ಬನೇ ಗದೆಯನ್ನು ಹಿಡಿದು, ಕಾಲುನಡೆಯಿಂದ ಹೊರಟು, ಭೂಮಿಯನ್ನು ನಡುಗಿಸುವಂತೆ ವೇಗದಿಂದ ಹೆಜ್ಜೆಯನ್ನಿಡುತ್ತ, ಕೃಷ್ಣನನ್ನಿದಿರಿಸಿ ಬಂದನು ದಂತವಕ್ತ್ರನು ಹೀಗೆ ತನ್ನ ಮೇಲೆ ಬೀಳುವುದಕ್ಕಾಗಿ ಅತ್ಯಾತುರದಿಂದ ಬರುವುದನ್ನುನೋಡಿ ಕೃಷ್ಣನು, ಗದೆಯನ್ನು ಕೈಗೆತ್ತಿಕೊಂಡು, ಥಟ್ಟನೆ ರಥದಿಂದ ಕೆಳಗಿಳಿದು, ಸಮುದ್ರಪ್ರವಾಹವನ್ನು ಅದರ ದಡವು ಹೇಗೋ ಹಾಗೆ, ಆತನನ್ನು ಅಲ್ಲಿಯೇ ತಡೆದು ನಿಲ್ಲಿಸಿದನು ಆಗ ದಂತವಕ್ತ್ರನು, ತನ್ನ ಕೈಯಲ್ಲಿದ್ದ ಗದೆಯನ್ನು ಮೇಲಕ್ಕೆತ್ತಿಹಿಡಿದು, ಕೃಷ್ಣನನ್ನುಕುರಿತು ಹೆಮ್ಮೆಯಿಂದ “ಎಲಾ! ಕೃಷ್ಣಾ! ದೈವಾಧೀನದಿಂದ ಈಗ ನೀನು ನನ್ನ ಕಣ್ಣಿಗೆ ಸಿಕ್ಕಿಬಿದ್ದಿರುವೆ! ನೀನು ನನ್ನ ಮಾವನ ಮಗನಾಗಿದ್ದರೂ ನನ್ನ ಮಿತ್ರರೆಲ್ಲರಿಗೂ ದ್ರೋಹಮಾಡಿ, ನನ್ನನ್ನೂ ಕೊಲ್ಲುವುದಕ್ಕಾಗಿ ಯತ್ನಿಸುತ್ತಿರುವೆಯಲ್ಲವೆ? ಎಲ ಮೂಢಾ! ಇದೋ! ಈಗಲೇ ನಾನು ವಜ್ರಾಯುಧಕ್ಕೆ ಸಮಾನವಾದ ಈ ಗದೆಯಿಂದ ನಿನ್ನನ್ನು ಕೊಂದು,ನನ್ನ ಮಿತ್ರರ ಸಾಲವನ್ನು ತೀರಿಸಿಕೊಳ್ಳುವೆನು. ದೇಹದಲ್ಲಿ ಹುಟ್ಟಿದ ವ್ಯಾಧಿಯು ಹೇಗೋ ಹಾಗೆ, ನೀನು ನನಗೆ ಬಂಧುರೂಪದಿಂದ ಹುಟ್ಟಿದ ಶತ್ರುವೇಹೊರತು ಬೇರೆಯಲ್ಲ. ವ್ಯಾಧಿಯನ್ನು ನೀಗಿಸುವಂತೆ ನಿನ್ನನ್ನು ಕೊಲ್ಲದೆ ಬಿಡಲಾರೆನು” ಎಂದು ಕ್ರೂರವಾಕ್ಯಗಳಿಂದ ಧಿಕ್ಕರಿಸಿ, ಆನೆಯನ್ನು ಅಂಕುಶದಿಂದ ತಿವಿಯುವಂತೆ, ತನ್ನ ಗದೆಯಿಂದ ಕೃಷ್ಣನತಲೆಯಮೇಲೆ ಪ್ರಹರಿಸಿ, ಸಿಂಹನಾದಮಾಡಿದನು.ಆ ಗದಾಪ್ರಹಾರದಿಂದ ಕೃಷ್ಣನು ಸ್ವಲ್ಪಮಾತ್ರವೂ ಚಲಿಸದೆ, ಕೌಮೋದಕಿಯೆಂಬ ತನ್ನ ಮಹಾಗದೆಯಿಂದ ಆ ದಂತವಕ್ತ್ರನ ಎದೆಯಮೇಲೆ ಪ್ರಹರಿಸಿದನು. ಈ ಒಂದೇಪ್ರಹಾರಕ್ಕೆ ಆ ದಂತವಕ್ತ್ರನ ಎದೆಯು ಭೇದಿಸಿತು. ಅವ

ನು. ಬಾಯಿಂದ ರಕ್ತವನ್ನು ಕಕ್ಕುತ್ತ, ಕೆದರಿದ ತಲೆಯೊಡನೆ ಕೆಳಗೆ ಬಿದ್ದು, ಕೈಕಾಲುಗಳನ್ನು ಚಾಚಿ ಪ್ರಾಣವನ್ನು ಬಿಟ್ಟನು. ಹಿಂದೆ ಶಿಶುಪಾಲವಧಕಾಲ ದಲ್ಲಿ ಹೇಗೋಹಾಗೆ, ಆ ದಂತವಕ್ತ್ರನ ಶರೀರದಿಂದ ಒಂದಾನೊಂದು ದಿವ್ಯ ತೇಜಸ್ಸು ಹೊರಟು, ಅಲ್ಲಿದ್ದವರೆಲ್ಲರೂ ನೋಡುತ್ತಿದ್ದಹಾಗೆಯೇ ಕೃಷ್ಣನ ದೇಹದಲ್ಲಿ ಐಕ್ಯಹೊಂದಿತು. ಇಷ್ಟರಲ್ಲಿ ಆ ದಂತವಕ್ತ್ರನ ತಮ್ಮನಾದ ವಿಡೂರಥನೆಂಬವನು, ತನ್ನಣ್ಣನ ಮರಣವನ್ನು ನೋಡಿ ದುಃಖಿತನಾಗಿ, ಕೋಪದಿಂದ ಬುಸುಗುಟ್ಟುತ್ತ, ಕೃಷ್ಣನನ್ನು ತೀರಿಸಿಬಿಡಬೇಕೆಂದು ಕೈಯಲ್ಲಿ ಕತ್ತಿ ಗುರಾಣಿಗಳನ್ನು ಹಿಡಿದು ಮುಂದೆ ಬಂದನು. ಅವನು ಬರುತ್ತಿರುವಾಗಲೇ ಕೃಷ್ಣನು ತೀಕ್ಷ್ಣಧಾರೆಯುಳ್ಳ ತನ್ನ ಚಕ್ರಾಯುಧದಿಂದ, ಕಿರೀಟಕುಂಡಲವಿಶಿಷ್ಟವಾದ ಅವನತಲೆಯನ್ನು ಕತ್ತರಿಸಿಕೆಡಹಿದನು ಓಪರೀಕ್ಷಿದ್ರಾಜಾ! ಹಿಂದೆ ಕೃಷ್ಣನು ಸಾಲ್ವನನ್ನೂ, ಸೌಭವಿಮಾನವನ್ನೂ, ದಂತವಕ್ತ್ರವಿಡೂರಥರನ್ನೂ, ಅವರಕಡೆಯ ಅನೇಕಪರಿವಾರಗಳನ್ನೂ ತೀರಿಸಿಬಿಟ್ಟಮೇಲೆ, ದೇವತೆಗಳೂ, ಮನುಷ್ಯರೂ, ಮಹರ್ಷಿಗಳೂ, ಸಿದ್ಧಗಂಧರ್ವವಿದ್ಯಾಧರರೂ, ಪನ್ನಗರೂ, ಅಪ್ಸರಸ್ಸುಗಳೂ, ಪಿತೃಗಣಗಳೂ, ಯಕ್ಷ, ಕಿನ್ನರ, ಚಾರಣರೂ, ಕೃಷ್ಣನಮೇಲೆ ಪುಷ್ಪವರ್ಷವನ್ನು ಕರೆದು. ಜಯಘೋಷಗಳನ್ನು ಮಾಡುತ್ತಿದ್ದರು ಹೀಗೆ ಸಮಸ್ತಭೂತಗಳಿಂದ ಸ್ತುತಿಸಲ್ಪಡುತ್ತ, ಕೃಷ್ಣನು ಯಾದವರೊಡನೆ ರಣರಂಗದಿಂದ ಹಿಂತಿರುಗಿ ದ್ವಾರಕಾನಗರವನ್ನು ಪ್ರವೇಶಿಸಿದನು. ಓ! ಪರೀಕ್ಷಿದ್ರಾಜಾ! ಯೋಗೇಶ್ವರನಾಗಿಯೂ, ಸರ್ವಜ್ಞತ್ವ, ಸರ್ವಶಕ್ತಿತ್ವ ಮೊದಲಾದ ಷಡ್ಗುಣಗಳಿಂದ ಪರಿಪೂರ್ಣನಾಗಿಯೂ, ಸಕಲಲೋಕನಿಯಾಮಕನಾಗಿಯೂ ಇರುವ ಆ ಶ್ರೀಕೃಷ್ಣನು, ಹೀಗೆ ಜರಾಸಂಧಾದಿಗಳೊಡನೆ ಯುದ್ಧಮಾಡುವಾಗ, ಒಮ್ಮೆ ತಾನು ಪರಾಜಿತನಾಗಿ ಓಡಿಹೋದಂತೆಯೂ, ಮತ್ತೊಮ್ಮೆ ಅವರನ್ನು ತಾನು ಜಯಿಸಿದಂತೆಯೂ ನಟಿಸಿದುದೆಲ್ಲವೂ, ಪಶುಗಳಂತೆ ಮೂಢರಾದ ಜನರನ್ನು ಮರುಳುಗೊಳಿಸುವುದಕ್ಕಾಗಿಯೇಹೊರತು ಅದು ವಾಸ್ತವವಲ್ಲ! ಹೆಸರಿನಿಂದಲೇ ಅಜಿತನೆನಿಸಿಕೊಂಡು ಆ ಕೃಷ್ಣನಲ್ಲಿ ಪರಾಜಯವೆಂಬ ಮಾತೆಲ್ಲಿಯದು?

ಬಲರಾಮನ ತೀರ್ಥಯಾತ್ರೆ ಮುಂತಾದ ವೃತ್ತಾಂತಗಳು.

ಓ! ಪರೀಕ್ಷಿದ್ರಾಜಾ! ಬಲರಾಮನ ವಿಷಯವಾದ ಮತ್ತೊಂದು ಕಥೆಯನ್ನು ತಿಳಿಸುವೆನು ಕೇಳು! ಕುರುಪಾಂಡವರಿಬ್ಬರಿಗೂ ಯುದ್ಧಪ್ರಯತ್ನವು ನಡೆಯುತ್ತಿತ್ತು. ಬಲರಾಮನು ಈ ಉಭಯಪಕ್ಷದವರನ್ನೂ ಸಮಾನವಾಗಿ ನೋಡುತ್ತಿದ್ದನು. ಆ ಉಭಯಪಕ್ಷದವರಲ್ಲಿ ಯಾರಲ್ಲಿಯೂ, ತಾನು ಪಕ್ಷಪಾತವನ್ನು ತೋರಿಸುವುದಕ್ಕಿಲ್ಲವೆ ಹೋದುದರಿಂದಲೇ, ಅವನು ತೀರ್ಥಯಾತ್ರೆಯೆಂಬ ನೆವವನ್ನು ಹಿಡಿದು ಹೊರಟುಹೋದನೆಂದು ಹೇಳುವರು. ಈ ತೀರ್ಥಯಾತ್ರೆಯಲ್ಲಿ ಆತನು ಮೊದಲು ಪ್ರಭಾಸವೆಂಬ ತೀರ್ಥದಲ್ಲಿ ಸ್ನಾನಮಾಡಿ, ಅಲ್ಲಿ ದೇವತೆಗಳಿಗೂ, ಋಷಿಗಳಿಗೂ, ಪಿತೃಗಳಿಗೂ, ಮನುಷ್ಯರಿಗೂ ವಿಧ್ಯುಕ್ತವಾಗಿ ನಡೆಸಬೇಕಾದ ತರ್ಪಣಕಾರ್ಯಗಳನ್ನು ನಡೆಸಿ, ಬ್ರಾಹ್ಮಣರೊಡನೆ ಅಲ್ಲಿಂದ ಹೊರಟು, ಪಶ್ಚಿಮದಿಕ್ಕಿನ ಸರಸ್ವತೀನದಿಗೆ ಹೋದನು. ಅಲ್ಲಿಯೂ ಸ್ನಾನಾದಿಕರ್ಮಗಳನ್ನು ನಡೆಸಿಕೊಂಡು ಅಲ್ಲಿಂದ ಹೊರಟು ಕ್ರಮವಾಗಿ! ಪೃಥೂದಕ, ಬಿಂದುಸರಸ್ಸು, ತ್ರಿಕೂಟ, ಸುದರ್ಶನ, ವಿಶಾಲ, ಬ್ರಹ್ಮತೀರ್ಥ, ಚಕ್ರತೀರ್ಥ ಪೂರ್ವದಿಕ್ಕಿನಲ್ಲಿ ತ್ರಿವೇಣಿಯೆಂಬ ಹೆಸರುಳ್ಳ ಸರಸ್ವತೀನದಿ, ಯಮುನೆ, ಅದಕ್ಕೆ ಸೇರಿದ ಪುಣ್ಯತೀರ್ಥಗಳು, ಗಂಗಾನದಿ, ಅದಕ್ಕೆ ಸೇರಿದಂತಿರುವ ಪುಣ್ಯತೀರ್ಥಗಳು, ಇವೇ ಮೊದಲಾದ ಪುಣ್ಯಕ್ಷೇತ್ರ, ಪುಣ್ಯತೀರ್ಥಯಾತ್ರೆಗಳನ್ನು ಮಾಡಿ, ಅಲ್ಲಿಂದ ನೈಮಿಶಕ್ಷೇತ್ರಕ್ಕೆ ಬಂದನು. ಅಲ್ಲಿ ಅನೇಕಮಹರ್ಷಿಗಳು ಸೇರಿ ಬಹುಕಾಲದಿಂದ ಸತ್ರಯಾಗವನ್ನು ನಡೆಸುತಿದ್ದರು. ಬಲರಾಮನು ಆಕಸ್ಮಿಕವಾಗಿ ಅಲ್ಲಿಗೆ ಬಂದುದನ್ನು ನೋಡಿದೊಡನೆ, ಎಲ್ಲರೂ ಸಂತೋಷದಿಂದ ಇದಿರೆದ್ದು ಅವನನ್ನು ಅಭಿವಂದಿಸಿ ಸತ್ಕರಿಸಿದರು. ಹೀಗೆ ಬಲರಾಮನೂ, ಅವನೊಡನೆ ಬಂದಿದ್ದ ಬ್ರಾಹ್ಮಣರೂ. ಋಷಿಗಳಿಂದ ಸತ್ಕೃತರಾಗಿ ತಮತಮಗೆ ಯೋಗ್ಯವಾದ ಆಸನದಲ್ಲಿ ಕುಳಿತರು ಅಲ್ಲಿದ್ದ ಋಷಿಗಳೆಲ್ಲರೂ ಬಲರಾಮನನ್ನು ಕಂಡೊಡನೆ,ಇದಿರೆದ್ದು, ಎಷ್ಟೋ ಗೌರವದಿಂದ ಪೂಜಿಸಿ, ಸತ್ಕರಿಸುತ್ತಿರುವಾಗಲೂ, ಅವರಲ್ಲಿ ವ್ಯಾಸಶಿಷ್ಯನಾದ ರೋಮಹರ್ಷಣನೆಂಬವನೊಬ್ಬನುಮಾತ್ರ,ಉಚ್ಚಾಸನದಲ್ಲಿಕುಳಿತು,ಬಲರಾಮನು ಬಂದಾಗ ಎಲ್ಲರಂತೆ

ಎದ್ದು ನಿಂತು ನಮಸ್ಕರಿಸದೆ, ಅಲಕ್ಷ್ಯವಾಗಿದ್ದನು. ಆತನು ಬ್ರಾಹ್ಮಣಬೀಜಕ್ಕೆ ಪ್ರತಿಲೋಮಜಾತಿಯಲ್ಲಿ ಹುಟ್ಟಿದ ಸೂತಕುಲದವನು. ಹೀಗಿದ್ದರೂ ಅವನು ಅನೇಕಬ್ರಹ್ಮರ್ಷಿಗಳ ಸಭೆಯಲ್ಲಿ ಕಲೆತು ಹೆಮ್ಮೆಯಿಂದಿರುವುದನ್ನು ನೋಡಿ, ಬಲರಾಮನಿಗೆ ಮಹತ್ತಾದ ಕೋಪವುಂಟಾಯಿತು. ಆ ಕೋಪದಿಂದ ಅಲ್ಲಿದ್ದ ಸದಸ್ಯರನ್ನು ನೋಡಿ ಬಲರಾಮನು “ ಎಲೈ ಮಹರ್ಷಿಗಳೇ ! ಇದೇ ನಿದು! ಸೂತಕುಲದವನಾದ ಈತನು, ಈಬ್ರಾಹ್ಮಣರ ಗುಂಪಿನಲ್ಲಿ ಹೇಗೆ ಸೇರಿದನು? ಇದಲ್ಲದೆ ನಿಮ್ಮೆಲ್ಲರಿಗಿಂತಲೂ ಉಚ್ಚಾಸನದಲ್ಲಿಯೂ ಕುಳಿತಿರುವನು. ಧರ್ಮರಕ್ಷಕರಾದ ನಮ್ಮನ್ನೂ ಲಕ್ಷ್ಯಮಾಡದೆ, ನಮಗಿಂತಲೂ ಉತ್ತಮಾಸನದಲ್ಲಿರುವನು. ದುರ್ಬುದ್ಧಿಯುಳ್ಳ ಈತನಿಗೆ ವಧವೇ ತಕ್ಕ ಶಿಕ್ಷೆಯು ಭಗವಂತನಾದ ವ್ಯಾಸಮಹರ್ಷಿಗೆ ಶಿಷ್ಯನಾಗಿ, ಇತಿಹಾಸ, ಪುರಾಣ, ಧರ್ಮಶಾಸ್ತ್ರಗಳೆಲ್ಲವನ್ನೂ ಸಾಂಗವಾಗಿ ಓದಿದವನಾಗಿದ್ದರೂ, ಸ್ವಲ್ಪವಾದರೂ ಮರ್ಯಾದೆಯನ್ನು ತಿಳಿಯದೆ,ದೊಡ್ಡವರಲ್ಲಿ ವಿನಯವನ್ನೂ ತೋರಿಸದೆ, ತಾನೇ ಪಂಡಿತನೆಂಬ ಗರ್ವದಿಂದಿರುವನಲ್ಲಾ ! ಇವನು ಅಷ್ಟುಶಾಸ್ತ್ರಗಳನ್ನೋದಿ ಫಲವೇನು ?! ಇಂದ್ರಿಯಜಯವಿಲ್ಲದೆ ಋಷಿವೇಷವನ್ನು ಧರಿಸಿ ಬಂದ ನಟನಂತೆ, ಇವನ ವಿದ್ಯಾಭ್ಯಾಸವೆಲ್ಲವೂ ನಿಷ್ಪ್ರಯೋಜನವಲ್ಲವೆ? ಇಂತಹ ಅಹಂಕಾರಿಗಳನ್ನು ಮುರಿಯುವುದಕ್ಕಾಗಿಯೇ ನಾವು ಇಲ್ಲಿ ಜನಿಸಿರುವೆವು. ಹೀಗೆ ಧಾರ್ಮಿಕರಂತೆ ವೇಷಧಾರಿಗಳಾದವರನ್ನು ಕೊಲ್ಲಬೇಕಾದುದೇ ಉಚಿತವು. ಇವರಿಗಿಂತಲೂ ಲೋಕದಲ್ಲಿ ಮಹಾಪಾತಕಿಗಳಿಲ್ಲ” ಎಂದು ಹೇಳಿ, ತಾನು ಕೈಯಲ್ಲಿ ಹಿಡಿದಿದ್ದ ಒಂದು ದರ್ಭೆಯ ಹುಲ್ಲಿನಿಂದ, ಅವನನ್ನು ಪ್ರಹರಿಸಿ ಕೊಂದುಬಿಟ್ಟನು. ಓ ! ಪರೀಕ್ಷಿದ್ರಾಜಾ ! ಬಲರಾಮನಾದರೋ ಬಹಳ ದಯಾಸ್ವಭಾವವುಳ್ಳವನು. ಕೆಟ್ಟವರಲ್ಲಿಯೂ ಅವನು ಕೈಮಾಡುವವನಲ್ಲ! ಹಾಗಿದ್ದರೂ ದೈವಸಂಕಲ್ಪವು ಹಾಗಿದ್ದುದರಿಂದ, ಬಲರಾಮನಿಗೆ ಆ ಕ್ರೂರಬುದ್ಧಿಯು ಹುಟ್ಟಿತು. ಬಲರಾಮನು ಮಾಡಿದ ಈ ಕಾರ್ಯವನ್ನು ನೋಡಿ ಅಲ್ಲಿದ್ದ ಮಹರ್ಷಿಗಳೆಲ್ಲರೂ ವ್ಯಾಕುಲಿತರಾಗಿ “ ಹಾಹಾ!” ಎಂದು ಕೂಗುತ್ತ, ಬಲರಾಮನನ್ನು ಕುರಿತು “ಓ! ಪ್ರಭೋ ! ಬಲರಾಮಾ ! ನೀನು ಮಾಡಿದುದು ಬಹಳ ಅಧರ್ಮವು ! ನಾವೇ

ಇಷ್ಟಪಟ್ಟು ಇವನಿಗೆ * ಬ್ರಹ್ಮಾಸನವನ್ನು ಕೊಟ್ಟಿದ್ದೆವು ಸತ್ರಯಾಗದಲ್ಲಿ ಪುರಾಣವನ್ನು ಹೇಳತಕ್ಕ ಬ್ರಾಹ್ಮಣನಿಗಾಗಿ ಈ ಆಸನವು ಕ್ಲಪ್ತವಾಗಿರುವುದು. ಈ ಆಸನದಲ್ಲಿ ಕುಳಿತವರು ಎಷ್ಟೇ ದೊಡ್ಡವರು ಬಂದರೂ ಪ್ರತ್ಯುತ್ಥಾನಮಾಡಬೇಕಾದ ಆವಶ್ಯವಿಲ್ಲ! ಆದುದರಿಂದ ಈತನು ನಿನ್ನನ್ನು ಇದಿರೆದ್ದು ಗೌರವಿಸದೆ ಹೋದುದು ತಪ್ಪಲ್ಲ. ಈ ನಮ್ಮ ಸತ್ರಯಾಗವು ಮುಗಿಯುವವರೆಗೂ, ಇವನಿಗೆ ದೇಹಕ್ಕೇನೂ ಶ್ರಮವಿಲ್ಲದಹಾಗೆ ಪೂರ್ಣಾಯುಸ್ಸನ್ನೂ ಅನುಗ್ರಹಿಸಿದ್ದೆವು ಇದೊಂದನ್ನೂ ತಿಳಿಯದೆ ನೀನು ಬ್ರಹ್ಮಹತ್ಯೆಗೆ ಸಮಾನವಾದ ಈ ಪಾಪಕೃತ್ಯವನ್ನು ನಡೆಸಿಬಿಟ್ಟೆಯಲ್ಲಾ! ಆದರೆ! ಓ! ದೇವಾ! ನಿನ್ನ ನಿಜಾಂಶವನ್ನು ನಾವು ಬಲ್ಲೆವು ಯೋಗೀಶ್ವರನಾದ ಭಗವಂತನ ಅಂಶವೇ ನಿನ್ನಲ್ಲಿರುವುದರಿಂದ, ನೀನು ಕರ್ಮವಶ್ಯನಲ್ಲ. ಬ್ರಾಹ್ಮಣರನ್ನು ಕೊಲ್ಲಬಾರದೆಂಬ ಶಾಸ್ತ್ರವಿಧಿಯೂ ನಿನ್ನನ್ನು ಕಟ್ಟಿಡಲಾರದು. ಹಾಗಿದ್ದರೂ, ಓ! ಲೋಕಪಾವನಾ! ನೀನು ಈ ಬ್ರಹ್ಮಹತ್ಯೆಗೆ ಪ್ರಾಯಶ್ಚಿತ್ತವನ್ನು ನಡೆಸಿಕೊಳ್ಳದಿರಬಾರದು. ಈಗ ನೀನು ಅದನ್ನು ನಡೆಸಿದರೆ ಲೋಕಕ್ಕೆ ದಾರಿಯನ್ನು ತೋರಿಸಿಕೊಟ್ಟಂತಾಗುವುದು. ಲೋಕಾನುಗ್ರಹಾರ್ಥವಾಗಿಯಾದರೂ ನೀನು ಇದನ್ನು ನಡೆಸಿಯೇ ತೀರಬೇಕು. ದೊಡ್ಡವರು ಅನುಸರಿಸಿದ ಮಾರ್ಗವನ್ನೇ ಲೋಕವೂ ಅನುಸರಿಸುವುದಲ್ಲವೆ?" ಎಂದರು. ಅದಕ್ಕಾ ಬಲರಾಮನು "ಎಲೈ ಮಹರ್ಷಿಗಳೇ! ನೀವು ಹೇಳಿದಂತೆಯೇ ಆಗಲಿ! ಇದಕ್ಕೆ ಮುಖ್ಯವಾಗಿ ನಡೆಸಬೇಕಾದ ಪ್ರಾಯಶ್ಚಿತ್ತವೇನೆಂಬುದನ್ನು ನೀವೇ ಉಪದೇಶಿಸಬೇಕು. ಇದಲ್ಲದೆ ಈ ರೋಮಹರ್ಷಣನಿಗಾಗಿ ಚಿರಾಯುಸ್ಸು, ದೇಹಬಲ, ಇಂದ್ರಿಯಪಟುತ್ವ, ಮುಂತಾದುವುಗಳಲ್ಲಿ ಯಾವುದನ್ನು ನೀವು ಕೋರುವಿರೋ, ಅದನ್ನೂ ನನಗೆ ತಿಳಿಸಿದರೆ, ನನ್ನ ಯೋಗಶಕ್ತಿಯಿಂದ ಸಾಧಿಸಿಕೊಡುವೆನು" ಎಂದನು. ಆಗ ಋಷಿಗಳು, "ಓ! ರಾಮಾ! ನೀನು ಈತನಮೇಲೆ ಪ್ರಯೋಗಿಸಿದ ದರ್ಭೆಯ ರೂಪವಾದ ಶಸ್ತ್ರದ ವೀ

* ಬ್ರಹ್ಮಾಸನವೆಂದರೆ ಪುರಾಣ ಹೇಳತಕ್ಕ ಬ್ರಾಹ್ಮಣನು ಕುಳಿತು ಕೊಳ್ಳುವ ಆಸನವು. ಇದರಮೇಲೆ ಕುಳಿತವನು ಎಂತವರಿಗೂ ಪ್ರತ್ಯುತ್ಥಾನಮಾಡಬೇಕಾದುದಿಲ್ಲವೆಂಬ ವಿಧಿಯುಂಟು.

ರ್ಯಕ್ಕೂ ಕೊರತೆಯುಂಟಾಗಬಾರದು. ಆದರಿಂದ ಈತನ ಮರಣವೂ ಸುಳ್ಳಾಗಬಾರದು. ನಾವು ಈ ನಮ್ಮ ಸತ್ರಯಾಗವು ಮುಗಿಯುವವರೆಗೆ ಇವನಿಗೆ ದೀರ್ಘಾಯುಷ್ಯವಿರಬೇಕೆಂದು ಅನುಗ್ರಹಿಸಿದ ವರವೂ ಸುಳ್ಳಾಗಬಾರದು. ಇವೆಲ್ಲವೂ ಸತ್ಯವಾಗುವಂತೆ ಮಾಡಬೇಕಾದುದು ನಿನ್ನ ಭಾರವು." ಎಂದರು. ಅದಕ್ಕಾ ರಾಮನು" ಎಲೈ ಮಹರ್ಷಿಗಳೇ! ಹಾಗೆಯೇ ಮಾಡುವೆನು ವೇದಗಳು "ಆತ್ಮಾ ವೈ ಪುತ್ರನಾಮಾಸಿ" "ತಂದೆಯೇ ಪುತ್ರನಾಗುವನು" ಎಂದು ಹೇಳುವುವಲ್ಲವೆ? ಆದುದರಿಂದ ಇವನ ಮಗನಾದ ಉಗ್ರಶ್ರವನೆಂಬವನು ಇದೇ ಬಹ್ಮಾಸನದಲ್ಲಿ ಕುಳಿತು ನಿಮಗೆ ಪುರಾಣವನ್ನು ಹೇಳತಕ್ಕವನಾಗಲಿ! ನೀವು ಕೋರಿದಂತೆ ಅವನಿಗೆ ಆಯುಸ್ಸು, ಇಂದ್ರಿಯಪಟುತ್ವ ಮುಂತಾದುವೆಲ್ಲವೂ ಉಂಟಾಗಲಿ! ಇನ್ನೂ ನಿಮಗೆ ಬೇರೆ - ಕೋರಿಕೆಗಳೇನಾದರೂ ಇದ್ದರೆ ತಿಳಿಸಿ! ಅದನ್ನೂ ನಡೆಸಿಕೊಡುವೆನು. ಆದರೆ ನಾನು ತಿಳಿಯದೆ ಮಾಡಿದ ಈಗಿನ ಪಾಪಕ್ಕೆ ಶಾಸ್ತ್ರೋಕ್ತವಾದ ಪರಿಹಾರವೇನೆಂಬುದನ್ನು ನೀವೇ ಆಲೋಚಿಸಿ ತಿಳಿಸಬೇಕು" ಎಂದನು. ಅದಕ್ಕಾ ಋಷಿಗಳು "ಬಲರಾಮಾ! ಕೇಳು! ಇಲ್ವಲನ ಮಗನಾದ ಬಲ್ವಲನೆಂಬ ಕ್ರೂರದಾನವನೊಬ್ಬನಿರುವನು. ಅವನು ಆಗಾಗ ಪರ್ವಕಾಲಗಳಲ್ಲಿ ಇಲ್ಲಿಗೆ ಬಂದು, ಮಲಮೂತ್ರಗಳನ್ನೂ, ಮದ್ಯಮಾಂಸಗಳನ್ನೂ ಕೀವು, ರಕ್ತ ಮುಂತಾದ ಕಶ್ಮಲಗಳನ್ನೂ ಸುರಿಸಿ, ನಮ್ಮಯಾಗವನ್ನು ಕೆಡಿಸುತ್ತಿರುವನು. ಆ ಪಾಪಿಯನ್ನು ಮೊದಲು ನೀನು ಕೊಂದರೆ,ನಮಗೆ ಎಷ್ಟೋ ಉಪಕಾರವನ್ನು ಮಾಡಿದಂತಾಗುವುದು. ಆಮೇಲೆ ನೀನು, ಅಹಿಂಸೆ, ಬಹ್ಮಚರ್ಯೆ ಮೊದಲಾದ ವ್ರತವನ್ನು ಹಿಡಿದು, ಹನ್ನೆರಡು ವರುಷಗಳವರೆಗೆ ತೀರ್ಥಯಾತ್ರೆಗಳನ್ನು ಮಾಡುತ್ತ ಭೂಪ್ರದಕ್ಷಿಣವನ್ನು ಮಾಡಿ ಬಂದರೆ ಶುದ್ಧನಾಗುವೆ" ಎಂದರು. ಇದು ಎಪ್ಪತ್ತೆಂಟನೆಯ ಅಧ್ಯಾಯವು.

---

ಬಲರಾಮನು ಇಲ್ವಲನನ್ನು ಕೊಂದುದು. ತೀರ್ಥಯಾತ್ರೆ.

ಆಮೇಲೆ ಒಮ್ಮೆ ಪರ್ವದಿನವು ಬಂದಾಗ, ಬಲರಾಮನು ಆ ಯಜ್ಞವಾಟದಲ್ಲಿರುವಾಗಲೇ, ಪ್ರಚಂಡವಾದ ಬಿರುಗಾಳಿಯೊಂದು ತಲೆದೋರಿ,

ಅತಿದುರ್ಗಂಧದೊಡನೆ ನಾನಾಕಡೆಗೆ ಮಣ್ಣನ್ನೆರಚುತ್ತ, ಭಯಂಕರವಾಗಿ ಬೀಸತೊಡಗಿತು. ಓ ರಾಜೇಂದ್ರಾ! ಇದು ಆ ಪಲ್ವಲನ ಮಾಯೆಯೆಂದೇ ತಿಳಿ! ಆ ಗಾಳಿಯೆದ್ದ ಒಂದೆರಡು ಗಳಿಗೆಯಮೇಲೆ, ಆ ಯಜ್ಞಶಾಲೆಯಲ್ಲಿ ಮಲಮೂತ್ರಗಳ ವರ್ಷವೂ ಸುರಿಯಲಾರಂಭಿಸಿತು.ಅದಕ್ಕೆಮೇಲೆ ಆ ಪಲ್ವಲನೆಂಬ ರಾಕ್ಷಸನೇ ತ್ರಿಶೂಲವನ್ನು ಹಿಡಿದು, ಅಲ್ಲಿದ್ದವರ ಮುಂದೆ ಕಾಣಿಸಿಕೊಂಡನು. ಅವನ ಭಯಂಕರಾಕಾರವನ್ನು ಕೇಳಬೇಕೆ? ಇದ್ದಲಿನಂತೆ ಕಪ್ಪಾಗಿ ಪರ್ವತಾಕಾರದಿಂದಿರುವ ಮೈ! ಕಾಸಿದ ತಾಮ್ರದಂತೆ ಕೆಂಪಾದ ತಲೆಮೀಸೆಗಳು! ಕೋರೆದಾಡೆಗಳಿಂದಲೂ, ಹುಬ್ಬುಗಂಟುಗಳಿಂದಲೂ ಭಯಂಕರವಾದ ಮೋರೆ! ಇಂತಹ ಘೋರಾಕೃತಿಯುಳ್ಳ ರಾಕ್ಷಸನು ಕಾಣಿಸಿಕೊಂಡೊಡನೆ, ಬಲರಾಮನು ಶತ್ರುಭೇದಕವಾದ ತನ್ನ ಮುಸಲಾಯುಧವನ್ನೂ, ದೈತ್ಯರನ್ನಡಗಿಸತಕ್ಕ ತನ್ನ ಹಲಾಯುಧವನ್ನೂ (ನೇಗಿಲನ್ನೂ) ಮನಸ್ಸಿನಲ್ಲಿ ಸ್ಮರಿಸಿಕೊಂಡನು. ಒಡನೆಯೇ ಆ ಆಯುಧಗಳೆರಡೂ ಸಿದ್ಧವಾಗಿ ಬಂದು ನಿಂತುವು. ಬಲರಾಮನು ತನ್ನ ನೇಗಿಲನ್ನು ಕೈಗೆತ್ತಿಕೊಂಡು, ಅದರಿಂದ ಆಕಾಶದಲ್ಲಿ ಸಂಚರಿಸುತಿದ್ದ ಬ್ರಹ್ಮದ್ರೋಹಿಯಾದ ಆ ಪಲ್ವಲನ್ನೆಳೆದು, ಮುಸಲಾಯುಧದಿಂದ ಅವನ ತಲೆಯಮೇಲೆ ಪ್ರಹರಿಸಿದನು. ಒಡನೆಯೇ ಆ ರಾಕ್ಷಸನ ಹಣೆಯು ಸೀಳಿಹೋಯಿತು. ಅವನು ಬಾಯಲ್ಲಿ ರಕ್ತವನ್ನು ಕಾರುತ್ತ ಆರ್ತಸ್ವರದಿಂದ ಕೂಗಿ,ವಜ್ರಾಹತವಾದ ಪರ್ವತದಂತೆ ಕೆಳಗೆ ಬಿದ್ದುಸತ್ತನು. ಆಗ ಋಷಿಗಳೆಲ್ಲರೂ ಬಲರಾಮನನ್ನು ಕೊಂಡಾಡುತ್ತ, ಅಮೋಘವಾದ ಆಶೀರ್ವಾದಗಳಿಂದ ಅವನನ್ನು ಮನ್ನಿಸಿ, ಪೂರ್ವದಲ್ಲಿ ವೃತ್ರಾಸುರನನ್ನು ಕೊಂದ ದೇವೇಂದ್ರನನ್ನು ದೇವತೆಗಳು ಹೇಗೋಹಾಗೆ, ಆ ಬಲರಾಮನಿಗೆ ಮಂಗಳಸ್ನಾನವನ್ನು ಮಾಡಿಸಿದರು. ಆಮೇಲೆ ಅವನಿಗೆ ದಿವ್ಯಕಾಂತಿವಿಶಿಷ್ಟಗಳಾಗಿ, ಎಂದಿಗೂ ಬಾಡದ ಕಮಲಗಳಿಂದ ಮಾಡಿದ ವೈಜಯಂತೀಮಾಲಿಕೆಯನ್ನೂ, ಎರಡು ದಿವ್ಯವಸ್ತ್ರಗಳನ್ನೂ ಆಭರಣಗಳನ್ನೂ ಕೊಟ್ಟರು. ಆಮೇಲೆ ಬಲರಾಮನು ಆ ಮಹರ್ಷಿಗಳ ಅನುಜ್ಞೆಯನ್ನು ಪಡೆದು, ತನ್ನ ಸಂಗಡಿಗರಾದ ಬ್ರಾಹ್ಮಣರೊಡನೆ ಕೌಶಿಕೀನದಿಗೆ ಹೋಗಿ ಅಲ್ಲಿ ಸ್ನಾನವನ್ನುಮಾಡಿ, ಅಲ್ಲಿಂದ ಹೊರಟು, ಸರಯೂನದಿಯ

ಉದ್ಭವಸ್ಥಾನವಾದ ಸರೋವರಕ್ಕೆ ಬಂದನು. ಅಲ್ಲಿಯೂ ಸ್ನಾನಾದಿಕರ್ಮ ಗಳನ್ನು ತೀರಿಸಿಕೊಂಡು, ಆ ಸರಯೂತೀರಮಾರ್ಗವಾಗಿಯೇ ಪ್ರಯಾಗ ಕ್ಷೇತ್ರಕ್ಕೆ ಬಂದನು. ಅಲ್ಲಿಯೂ ಸ್ನಾನತರ್ಪಣಾದಿಗಳನ್ನು ನಡೆಸಿ, ಅಲ್ಲಿಂದ ಪುಲಹಾಶ್ರಮಕ್ಕೆ ಬಂದನು ಅಲ್ಲಿಂದಾಚೆಗೆ ಕ್ರಮವಾಗಿ, ಗೋಮತಿ, ಗಂಡಕಿ, ವಿಪಾಶೆಯೆಂಬ ನದಿಗಳಲ್ಲಿಯೂ, ಶೋಣಾನದಿಯಲ್ಲಿಯೂ ಸ್ನಾನ ಮಾಡಿ, ಗಯೆಗೆ ಬಂದನು. ಇವನು ಜೀವತ್ಪಿತೃವಾದುದರಿಂದ, ಅಲ್ಲಿ ಪಿತೃಗಳಿಗೆ ಮನಸ್ಸಿನಿಂದಮಾತ್ರ ಪೂಜಾದಿಗಳನ್ನೊಪ್ಪಿಸಿ, ಅಲ್ಲಿಂದ ಗಂಗಾ ನದಿಯು ಸಮುದ್ರದಲ್ಲಿ ಸಂಗಮವಾಗತಕ್ಕ ಸ್ಥಳಕ್ಕೆ ಬಂದನು ಅಲ್ಲಿ ಸ್ನಾನ ಮಾಡಿದಮೇಲೆ ಮಹೇಂದ್ರಪರ್ವತಕ್ಕೆ ಬಂದು, ಅಲ್ಲಿದ್ದ ಪರುಶುರಾಮನನ್ನು ಕಂಡು ನಮಸ್ಕರಿಸಿದನು. ಅಲ್ಲಿಂದಾಚೆಗೆ ಸಪ್ತಗೋದಾವರಿ, ವೇಣಿ, ಪಂಪೆ, ಭೀಮರಥಿ, ಎಂಬೀ ನದಿಗಳಲ್ಲಿ ಸ್ನಾನಮಾಡಿ, ಅಲ್ಲಿ ಕುಮಾರಸ್ವಾಮಿಯನ್ನು ಕಂಡು, ಆದರಿಂದಾಚೆಗೆ ಶಿವಕ್ಷೇತ್ರವಾದ ಶ್ರೀಶೈಲಕ್ಕೆ ಬಂದನು. ಅಲ್ಲಿಂದ ಹೊರಟು ದ್ರವಿಡದೇಶಗಳಲ್ಲಿ ಪರಮಪುಣ್ಯಕ್ಷೇತ್ರವೆನಿಸಿಕೊಂಡ ವೆಂಕಟಾ ಚಲಕ್ಷೇತ್ರಕ್ಕೆ ಹೋದನು. ಆದರಿಂದಾಚೆಗೆ ಕಾಮಕೋಟಿ, ಕಾಂಚೀಪುರ ಕ್ಷೇತ್ರಗಳನ್ನು ನೋಡಿಕೊಂಡು, ಕಾವೇರೀತೀರದಲ್ಲಿ ಮಹಾಪುಣ್ಯಕ್ಷೇತ್ರ ವೆನಿಸಿಕೊಂಡ ಶ್ರೀರಂಗಕ್ಕೆ ಬಂದನು. ಅಲ್ಲಿ ಭಗವದ್ದರ್ಶನವನ್ನು ಮಾಡಿ ಕೊಂಡು, ಅಲ್ಲಿಂದ ಹೊರಟು, ವಿಷ್ಣುಕ್ಷೇತ್ರಗಳಾದ ಋಷಭಾದ್ರಿ, ದಕ್ಷಿಣಮಥುರೆ, ಇವೆರಡು ಸ್ಥಳಗಳನ್ನೂ ಸುತ್ತಿಬಂದು, ಕೊನೆಗೆ ಸಮಸ್ತ ಪಾಪನಿವಾರಕವಾದ ಸಮುದ್ರಸೇತುವಿಗೆ ಬಂದನು ಅಲ್ಲಿ ಸೇತುಸ್ನಾನವನ್ನು ಮಾಡಿ, ಸಹಸ್ರಗೋದಾನದಿಂದ ಬ್ರಾಹ್ಮಣರನ್ನು ಸಂತೋಷಪಡಿಸಿದನು. ಆಮೇಲೆ ಕೃತಮಾಲೆ, ತಾಮ್ರಪರ್ಣಿಯೆಂಬ ಈ ಎರಡುನದಿಗಳಲ್ಲಿ ಸ್ನಾನ ಮಾಡಿ, ಕುಲಪರ್ವತವೆನಿಕೊಂಡ ಮಲಯಾದ್ರಿಗೆ ಬಂದನು. ಅಲ್ಲಿ ತಪೋ ನಿಷ್ಠನಾಗಿ ಕುಳಿತಿದ್ದ ಅಗಸ್ತ್ಯಮಹರ್ಷಿಯನ್ನು ನಮಸ್ಕರಿಸಿ, ಅವನ ಆಶೀ ರ್ವಾದವನ್ನು ಹೊಂದಿ, ಅಲ್ಲಿಂದ ದಕ್ಷಿಣಸಮುದ್ರತೀರಕ್ಕೆ ಬಂದನು. ಆ ಸಮುದ್ರತೀರದಲ್ಲಿದ್ದ ಕನ್ಯೆಯೆಂಬ ದುರ್ಗಾದೇವಿಯನ್ನು ದರ್ಶನಮಾಡಿ ಕೊಂಡು, ಅಲ್ಲಿಂದ ಅನಂತಪುರವೆಂಬ ಕ್ಷೇತ್ರಕ್ಕೆ ಹೋದನು. ಅಲ್ಲಿಂದ ವಿಷ

ಸಾನ್ನಿಧ್ಯವುಳ್ಳ ಪಂಚಾಪ್ಸರಸ್ಸೆಂಬ ತೀರ್ಥಕ್ಕೆ ಬಂದು ಸ್ನಾನಮಾಡಿ, ಅಲ್ಲಿ ಬ್ರಾಹ್ಮಣರಿಗೆ ಹತ್ತು ಸಾವಿರಗೋವುಗಳನ್ನು ದಾನಮಾಡಿದನು. ಆದರಿಂದಾಚೆಗೆ ಕ್ರಮವಾಗಿ ಕೇರಳ, ಶತಗರ್ತಕದೇಶಗಳಮೇಲೆ ಹೊರಟು, ಗೋಕರ್ಣವೆಂಬ ಶಿವಕ್ಷೇತ್ರಕ್ಕೆ ಬಂದನು. ಅಲ್ಲಿಂದಾಚೆಗೆ ಅದರ ಸಮೀಪದ ದ್ವೀಪದಲ್ಲಿದ್ದ ಆರ್ಯಾದೇವಿಯನ್ನು ದರ್ಶನಮಾಡಿಕೊಂಡು, ಶೂರ್ಪಾರಕವೆಂಬ ಸ್ಥಳಕ್ಕೆ ಬಂದನು. ಅಲ್ಲಿಂದಾಚೆಗೆ ಕ್ರಮವಾಗಿ,ತಾಪಿ,ಪಯೋಷ್ಣಿ, ನಿರ್ವಿಂಧ್ಯೆಯೆಂಬ ನದಿಗಳಲ್ಲಿ ಸ್ನಾನವನ್ನು ತೀರಿಸಿಕೊಂಡು, ದಂಡಕಾವನಕ್ಕೆ ಬಂದು, ಅಲ್ಲಿಂದ ನರ್ಮದೆಗೆ ಹೋದನು. ಅಲ್ಲಿ ಸ್ನಾನಮಾಡಿದಮೇಲೆ, ಆ ನದೀತೀರದಲ್ಲಿದ್ದ ಮಾಹಿಷ್ಮತೀಪುರವನ್ನು ನೋಡಿಕೊಂಡು, ಮನುತೀರ್ಥದಲ್ಲಿ ಸ್ನಾನಮಾಡಿ, ತಿರುಗಿ ಪ್ರಭಾಸತೀರ್ಥಕ್ಕೆ ಬಂದು ಸೇರಿದನು. ಇಷ್ಟರಲ್ಲಿ ಅಲ್ಲಿದ್ದ ಬ್ರಾಹ್ಮಣರು, ಕೌರವಪಾಂಡವಯುದ್ಧದಲ್ಲಿ, ಉಭಯಪಕ್ಷದಲ್ಲಿ ಅನೇಕಾನೇಕರಾಜರು ಹತರಾದ ಸಂಗತಿಯನ್ನು ಕುರಿತು, ಒಬ್ಬರಿಗೊಬ್ಬರಿಗೆ ಮಾತಾಡಿಕೊಳ್ಳುತಿದ್ದುದನ್ನು ಕೇಳಿ, ಅಂದಿಗೆ ಭೂಭಾರಪರಿಹಾರವಾಯಿತೆಂದು ತಿಳಿದುಕೊಂಡನು ಆದರೆ ಭೀಮದುರ್ಯೋಧನರಿಬ್ಬರಿಗೆಮಾತ್ರ ಇನ್ನೂ ಗದಾಯುದ್ಧವು ನಡೆಯುತ್ತಿರುವುದಾಗಿ ತಿಳಿದು ಬಂದುದರಿಂದ, ಅದರಿಂದುಂಟಾಗಬಹುದಾದ ಅನರ್ಥವನ್ನಾದರೂ ತಪ್ಪಿಸಬೇಕೆಂದು ಯೋಚಿಸಿ, ನೆಟ್ಟಗೆ ಆ ಯದ್ಧವು ನಡೆಯುತಿದ್ದ ಸ್ಥಳಕ್ಕೆ ಬಂದನು. ಆಗ ಧರ್ಮರಾಜನೂ, ಕೃಷ್ಣಾರ್ಜುನರೂ, ನಕುಲಸಹದೇವರೂ.ಬಲರಾಮನುಆತುರದಿಂದ ಬರುತ್ತಿರುವುದನ್ನು ಕಂಡು, ಮುಂದೆ ಬಂದು ನಮಸ್ಕರಿಸಿ, ಆವನು ಯಾವ ಉದ್ದೇಶದಿಂದ ಬಂದನೆಂಬುದನ್ನು ತಿಳಿಯದೆ, ಸಂಶಯಗ್ರಸ್ತರಾಗಿ ಸುಮ್ಮನಿದ್ದರು. ಬಲರಾಮನು ನೆಟ್ಟನೆ ರಣರಂಗಕ್ಕೆ ಬಂದು, ಅಲ್ಲಿ ಭೀಮದುರ್ಯೋಧನರಿಬ್ಬರೂ ಗದಾಪಾಣಿಗಳಾಗಿ ಒಬ್ಬರನ್ನೊಬ್ಬರು ಜಯಿಸಬೇಕೆಂಬ ಹಟದಲ್ಲಿ ಚಿತ್ರವಿಚಿತ್ರವಾದ ಮಂಡಲಗತಿಯಿಂದ ಸುತ್ತಿ ಹೋರಾಡುತ್ತಿರುವುದನ್ನು ನೋಡಿದನು. ಆಗ ಬಲರಾಮನು ಅವರಿಬ್ಬರನ್ನೂ ಕುರಿತು ಹೀಗೆಂದು ಹೇಳುವನು. “ಓ ಕೌರವರಾಜಾ! ಓ ಭೀಮಾ! ನೀವಿಬ್ಬರೂ ವೀರ್ಯದಲ್ಲಿ ಸಮಾನರು! ನಿಮ್ಮಲ್ಲಿ ಒಬ್ಬನು (ಭೀಮನು) ದೇಹಬಲದಲ್ಲಿಯೂ, ಮತ್ತೊ

ಬ್ಬನು (ದುರ್ಯೋಧನನು) ಗದಾಯುದ್ಧಶಿಕ್ಷೆಯಲ್ಲಿಯೂ ಮೇಲೆನಿಸಿರುವುದರಿಂದ, ಸಮಾನಬಲರೆನಿಸಿದ ನಿಮ್ಮಲ್ಲಿ ಯಾವನೊಬ್ಬನೂ ಸೋಲುವ ಹಾಗೆ ನನಗೆ ತೋರಲಿಲ್ಲ. ಆದುದರಿಂದ ನಿಮ್ಮ ಯುದ್ಧವು ನಿಷ್ಪ್ರಯೋಜನವೇ! ಈಗ ನೀವು ಯುದ್ಧವನ್ನು ನಿಲ್ಲಿಸಿ ಸುಮ್ಮನಿರುವುದೇ ಉತ್ತಮವು.” ಎಂದನು. ಭೀಮದುರ್ಯೋಧನರಿಬ್ಬರೂ ಆ ಬಲರಾಮನ ಮಾತಿಗೆ ಕಿವಿಗೊಡದೆ, ಬಾಲ್ಯದಿಂದಲೂ ತಮತಮಗೆ ಹೆಚ್ಚಿ ಬರುತ್ತಿದ್ದ ದ್ವೇಷವನ್ನೂ, ಒಬ್ಬರಿಗೊಬ್ಬರು ಮಾಡಿದ ವಿರೋಧಗಳನ್ನೂ, ನಿಂದಾವಾಕ್ಯಗಳನ್ನೂ ಸ್ಮರಿಸಿಕೊಂಡು, ಹೊಡೆದಾಡುತ್ತಲೇ ಇದ್ದರು. ಅದನ್ನು ನೋಡಿ ಬಲರಾಮನು ಅವರ ಪ್ರಾಚೀನಕರ್ಮವಿಧ್ವಂತಾಗಲೆಂದು ತಿಳಿದು, ದ್ವಾರಕೆಗೆ ಹಿಂತಿರುಗಿ, ಅಲ್ಲಿ ಉಗ್ರಸೇನಾದಿಗಳೊಡನೆ ಕಲೆತು ಸಂತೋಷದಿಂದಿದ್ದನು ಅಲ್ಲಿ ಕೆಲವುದಿವಸಗಳನ್ನು ಕಳೆದಮೇಲೆ, ತಿರುಗಿ ಋಷಿಗಳು ಸತ್ರಯಾಗವನ್ನು ನಡೆಸುತಿದ್ದ ನೈಮಿಶಾರಣ್ಯಕ್ಕೆ ಬಂದನು ಆ ಬಲರಾಮನನ್ನು ಅಲ್ಲಿದ್ದ ಋಷಿಗಳೆಲ್ಲರೂ ಗೌರವಿಸಿ, ಅವನಿಂದ ಸಾಂಗವಾಗಿ ಅನೇಕಕ್ರತುಗಳನ್ನು ಮಾಡಿಸಿದರು. ಆಮೇಲೆ ಬಲರಾಮನು ಅವರಿಗೆ ಶುದ್ಧವಾದ ಆತ್ಮಜ್ಞಾನವನ್ನುಪದೇಶಿಸಿ, ಪರಮಾತ್ಮನಾದ ತನ್ನಲ್ಲಿ ಸಮಸ್ತಪ್ರಪಂಚವೂ ಆಧಿಷ್ಠಿತವಾಗಿರುವುದನ್ನೂ, ತಾನು ಸಕಲಪ್ರಪಂಚವನ್ನೂ ವ್ಯಾಪಿಸಿರುವುದನ್ನೂ ತಿಳಿಸಿದನು. ಮೇಲೆ ತನ್ನ ಪತ್ನಿಯೊಡಗೂಡಿ, ಇಷ್ಟಮಿತ್ರಬಂಧುಗಳಿಂದ ಪರೀವೃತನಾಗಿ, ಅವಭೃಥಸ್ನಾನವನ್ನು ಮುಗಿಸಿದನು. ಈ ಸ್ನಾನವಾದಮೇಲೆ ಉತ್ತಮವಾದ ವಸ್ತ್ರಗಳಿಂದಲೂ, ಅಭರಣಗಳಿಂದಲೂ ಅಲಂಕೃತನಾಗಿ ಪೂರ್ಣಕಳೆಗಳಿಂದ ಕೂಡಿದ ಚಂದ್ರನಂತೆ ಪ್ರಕಾಶಿಸುತ್ತಿದ್ದನು. ಓ! ಪರೀಕ್ಷಿದ್ರಾಜಾ! ಅನಂತಾಂಶದಿಂದವತರಿಸಿ, ಅಪ್ರಮೇಯಪ್ರಭಾವವುಳ್ಳ ಆ ಬಲರಾಮನು, ಹೀಗೆ ಮಾಯಾಮನುಷ್ಯನಾಗಿ ನಡೆಸಿದ ಅದ್ಭುತಕಾರ್ಯಗಳು ಇನ್ನೂ ಅನೇಕವಾಗಿರುವುವು. ಈ ಬಲರಾಮನ ಅದ್ಭುತಚರಿತ್ರೆಗಳನ್ನೂ, ಕೃತ್ಯಗಳನ್ನೂ ಯಾವನ ಮನಸ್ಸಿನಿಂದ ಸ್ಮರಿಸುವನೋ, ಕಿವಿಯಿಂದ ಕೇಳುವನೋ, ಬಾಯಿಂದ ನುಡಿಯುವನೋ, ಅಂತವನು ಭಗವಂತನಿಗೆ ವಿಶೇಷಪ್ರಿಯನಾಗುವನು” ಎಂದನು. ಇದು ಎಪ್ಪತ್ತೊಂಬತ್ತನೆಯ ಅಧ್ಯಾಯವು.

## ಕುಚೇಲೋಪಾಖ್ಯಾನವು.

ಪರೀಕ್ಷಿದ್ರಾಜನು ತಿರುಗಿ ಪ್ರಶ್ನೆಮಾಡುವನು. “ಓ! ಮಹಾತ್ಮಾ! ಶುಕಮುನೀಂದ್ರಾ! ಅನಂತವೀರ್ಯನಾದ ಶ್ರೀಕೃಷ್ಣನ ವಿಚಿತ್ರಚರಿತ್ರೆಗಳು ಬೇರೆಯಾವುವಾದರೂ ಇದ್ದರೆ, ಅವೆಲ್ಲವನ್ನೂ ನನಗೆ ತಿಳಿಸಬೇಕು. ಮನುಷ್ಯನು ವಿಷಯಾಸಕ್ತನಾಗಿ ಕಾಮಮಾರ್ಗದಲ್ಲಿಯೇ ತೊಳಲುತ್ತಿದ್ದರೂ ರಸಜ್ಞನಾಗಿದ್ದಪಕ್ಷದಲ್ಲಿ, ಒಂದಾವರ್ತಿ ಆ ಭಗವಂತನ ಚರಿತ್ರೆಗಳನ್ನು ಕೇಳಿದಮೇಲೆ, ಬೇಸರಿಸಿ ಅದನ್ನು ಬಿಡಲಾರನು. ಆ ಭಗವಂತನ ಗುಣಕೀರ್ತನೆಗಳನ್ನು ಮಾಡತಕ್ಕ ವಾಕ್ಕೇ ವಾಕ್ಕು! ಅವನ ಕೈಂಕರ್ಯಗಳನ್ನು ನಡೆಸತಕ್ಕ ಹಸ್ತಗಳೇ ಹಸ್ತಗಳು! ಸಕಲಚರಾಚರಾತ್ಮಕನಾದ ಆ ಭಗವಂತನನ್ನು ಧ್ಯಾನಿಸತಕ್ಕ ಮನಸ್ಸೇ ಮನಸ್ಸು! ಆತನ ಪುಣ್ಯಕಥೆಗಳನ್ನು ಕೇಳತಕ್ಕ ಕಿವಿಗಳೇ ಕಿವಿಗಳು! ವಿಶ್ವಶರೀರಕವಾದ ಆತನ ಪಾದಗಳಿಗೆ ನಮಸ್ಕರಿಸತಕ್ಕ ಶಿರಸ್ಸೇ ಶಿರಸ್ಸು! ಆತನನ್ನು ದರ್ಶನಮಾಡತಕ್ಕ ಕಣ್ಣುಗಳೇ ಕಣ್ಣುಗಳು! ಆ ಭಗವಂತನ ಮತ್ತು ಅವನ ಭಕ್ತರ ಪಾದೋದಕದಿಂದ ಪವಿತ್ರವಾದ ದೇಹವೇ ದೇಹವೆನಿಸುವುದು. ಆದುದರಿಂದ ನೀನು ಆ ಭಗವದ್ಗುಣವರ್ಣನದಿಂದ ನನ್ನ ಮನುಷ್ಯಜನ್ಮವನ್ನು ಸಾರ್ಥಕಪಡಿಸಬೇಕು” ಎಂದನು. ಹೀಗೆ ಪರೀಕ್ಷಿದ್ರಾಜನು ಕೃಷ್ಣಚರಿತ್ರರೂಪವಾದ ಪ್ರಶ್ನೆಯನ್ನು ಕೇಳಿದೊಡನೆ, ಶುಕಮಹರ್ಷಿಯ ಮನಸ್ಸು ಭಗವಂತನಾದ ಆ ವಾಸುದೇವನಲ್ಲಿ ಲೀನವಾಯಿತು! ಸ್ವಲ್ಪಹೊತ್ತಿನವರೆಗೆ ಹಾಗೆಯೇ ಧ್ಯಾನಿಸುತ್ತಿದ್ದು, ಆಮೇಲೆ ಒಂದಾನೊಂದು ಕಥೆಯನ್ನು ಹೇಳತೊಡಗಿದನು. “ಓ ರಾಜೇಂದ್ರಾ ಕೇಳು! ಕೃಷ್ಣನಿಗೆ ಸುಧಾಮನೆಂಬ ಬ್ರಾಹ್ಮಣನೊಬ್ಬನು ಆಬಾಲ್ಯಮಿತ್ರನಾಗಿದ್ದನು. ಆತನು ಬ್ರಹ್ಮವಾದಿಗಳಲ್ಲಿ ಮೇಲೆನಿಸಿಕೊಂಡವನು ಕೇವಲ ವಿರಕ್ತನು. ಶಾಂತಾತ್ಮನು ಜಿತೇಂದ್ರಿಯನು. ಆತನು ತಾನಾಗಿ ಲಭಿಸಿದುದರಲ್ಲಿ ತೃಪ್ತನಾಗಿ, ಗೃಹಸ್ಥಾಶ್ರಮದಲ್ಲಿರುತ್ತಿದ್ದನು. ಆತನು ದಾರಿದ್ರ್ಯದೆಶೆಯಿಂದ ಉಡುವುದಕ್ಕೆ ಸರಿಯಾದ ಬಟ್ಟೆಯೂಇಲ್ಲದೆ, ಕಂಥೆಗಳನ್ನು ಧರಿಸುತಿದ್ದುದರಿಂದ, ಅವನಿಗೆ ಕುಚೇಲನೆಂಬ ಹೆಸರು ಪ್ರಸಿದ್ಧವಾಯಿತು. ಅವನ ಪತ್ನಿಯೂ ಕೂಡ ಬಹಳ ಪತಿವ್ರತೆಯಾಗಿ, ತನ್ನ ಪತಿಯು ಸಂಪಾದಿಸಿ ತಂದುದನ್ನು ಅವನ

ದೇಹಪೋಷಣೆಗಾಗಿಯೇ ಉಪಯೋಗಿಸುತ್ತ, ಹೊತ್ತಿಗೊತ್ತಿಗೆ ಆಹಾರ ವಿಲ್ಲದೆ ಹಸಿವಿನಿಂದ ಬಹಳ ಕೃಶವಾಗಿದ್ದಳು. ಇದರಿಂದ ಅವಳನ್ನು ಕ್ಷುತ್ಕ್ಷಾಮೆಯೆಂದೇ ಹೇಳುತ್ತಿದ್ದರು. ಒಮ್ಮೆ ಆ ಸತೀಮಣಿಯು, ತನ್ನ ದಾರಿದ್ರ್ಯದ ಕಷ್ಟವನ್ನು ಸಹಿಸಲಾರದೆ ಬಾಡಿದ ಮುಖದಿಂದ ಪತಿಯನ್ನು ನೋಡಿ,ಭಯ ದಿಂದ ನಡುಗುತ್ತ ಹೀಗೆಂದು ವಿಜ್ಞಾಪಿಸುವಳು "ಸ್ವಾಮೀ! ನೀನಾದರೋ ಸಾಕ್ಷಾತ್ ಲಕ್ಷ್ಮೀಪತಿಯಾದ ಆ ಶ್ರೀಕೃಷ್ಣನಿಗೆ ಪ್ರೀತಿಯಮಿತ್ರನೆನಿಸಿಕೊಂಡಿರುವೆ! ಅದರಲ್ಲಿಯೂ ಆ ಕೃಷ್ಣನು, ಬ್ರಾಹ್ಮಣರಲ್ಲಿ ಪ್ರೀತಿಯುಳ್ಳವನು ಮರೆಹೊಕ್ಕವರನ್ನು ವಾತ್ಸಲ್ಯದಿಂದ ಪೋಷಿಸತಕ್ಕವನು. ನಿಮ್ಮಂತಹ ಸಾಧುಗಳಿಗೆ ಆತನೇ ದಿಕ್ಕಾಗಿರುವನು ಹೀಗಿರುವಾಗ ನೀನು ಅವನಲ್ಲಿಗೆ ಹೋಗಿ ಯಾಚಿಸಿದರೆ, ಕುಟುಂಬಪೋಷಣೆಗಾಗಿ ನಾವು ಪಡುತ್ತಿರುವ ಕಷ್ಟವನ್ನು ನೋಡಿ, ನಮಗೆ ಬೇಕಾದಷ್ಟು ದ್ರವ್ಯವನ್ನು ಕೊಡಲಾರನೆ? ಆತನು ಈಗ ದ್ವಾರಕೆಯಲ್ಲಿಯೇ ಇರುವನು. ಭೋಜರು, ವೃಷ್ಣಿಗಳು, ಅಂಧಕರು, ಈ ರಾಜರೆಲ್ಲರೂ ಅವನ ಆಜ್ಞಾಧಾರಕರಾಗಿರುವರು. ಅವನು ತನ್ನ ಪಾದಾರವಿಂದವನ್ನು ಸೇವಿಸಿದವರಿಗೆ ತನ್ನನ್ನೇ ಕೊಟ್ಟುಬಿಡುವಷ್ಟು ಉದಾರನು.ಹೀಗಿರುವಾಗ,ಧನಾರ್ಥಿಗಳಾಗಿ ತನ್ನಲ್ಲಿಗೆ ಬಂದವರ ಕೋರಿಕೆಯನ್ನು ನಡೆಸಿ ಕೊಡದಿರುವನೆ? ಆದುದರಿಂದ ನೀನು ಈಗಲೇ ಆ ಕೃಷ್ಣನಲ್ಲಿಗೆ ಹೋಗಿ ಹೇಗಾದರೂ ಸ್ವಲ್ಪಧನವನ್ನು ಯಾಚಿಸಿ ತರಬೇಕು" ಎಂದಳು. ಕೇವಲವಿರಕ್ತನಾದ ಆ ಬ್ರಾಹ್ಮಣನಾಗಿ, ಧನಾರ್ಜನೆಗಾಗಿ ಹೋಗುವುದು ಸಮ್ಮತವಲ್ಲದಿದ್ದರೂ, ತನ್ನ ಹೆಂಡತಿಯು ಬಹಳವಾಗಿ ನಿರ್ಬಂಧಿಸಿದುದರಿಂದ ಒಪ್ಪಿಕೊಳ್ಳಬೇಕಾಯಿತು. ಈ ನೆವದಿಂದ ಆ ಶ್ರೀಕೃಷ್ಣನ ದರ್ಶನವೇ ತನಗೆ ಪರಮಲಾಭವೆಂದು ನಿರ್ಧರಿಸಿ,ಹೊರಡುವುದಕ್ಕೆ ಸಿದ್ಧನಾದನು. ಆಗ ಆ ಕುಚೇಲನು, ತನ್ನ ಪತ್ನಿಯನ್ನು ನೋಡಿ "ಓ ಕಲ್ಯಾಣೀ! ದೈವಸ್ವರೂಪನಾದ ಆ ಶ್ರೀಕೃಷ್ಣನನ್ನು ನೋಡುವುದಕ್ಕೆ ಹೋಗುವಾಗ, ಬರೀ ಕೈಯಿಂದ ಹೋಗಬಾರದು. ಏನಾದರೂ ನಮ್ಮಲ್ಲಿದ್ದುದನ್ನು ಅವನಿಗೆ ಕಾಣಿಕೆಯಾಗಿ ತೆಗೆದುಕೊಂಡು ಹೋಗಬೇಕು ಮನೆಯಲ್ಲಿ ಆಹಾರಪದಾರ್ಥವೇನಾದರೂ ಇದ್ದರೆ ಕೊಡು"ಎಂದನು. ಆಗ ಮನೆಯಲ್ಲಿ ಯಾವುದೊಂದು

ಉಪಹಾರಪದಾರ್ಥಗಳೂ ಇಲ್ಲದುದರಿಂದ, ಅವಳು ಆ ಗ್ರಾಮದಲ್ಲಿದ್ದ ನಾಲ್ಕಾರುಮನೆಗಳಿಂದ ನಾಲ್ಕುಹಿಡಿ ಅವಲಕ್ಕಿಯನ್ನು ಯಾಚಿಸಿತಂದು,ಅದನ್ನು ಅವನ ಚಿಂದಿಬಟ್ಟೆಯ ಸೆರಗಿನಲ್ಲಿ ಕಟ್ಟಿ ಕಳುಹಿಸಿದಳು. ಆ ಬ್ರಾಹ್ಮಣನು ಅದನ್ನೇ ಕಾಣಿಕೆಯಾಗಿ ತೆಗೆದುಕೊಂಡು ದ್ವಾರಕೆಗೆ ಬಂದನು. ಕೇವಲ ಬಡಬ್ರಾಹ್ಮಣನಾದ ತನಗೆ, ಕೃಷ್ಣನ ದರ್ಶನವು ಹೇಗೆ ಲಭಿಸುವುದೋ ಎಂದು ಚಿಂತಿಸುತ್ತ, ಆ ಕೃಷ್ಣನ ಅರಮನೆಯ ಕೋಟೆಯ ಬಾಗಿಲಿನಲ್ಲಿ ನಿಂತಿದ್ದು, ಕೊನೆಗೆ ಹೇಗೋ ಪ್ರಯತ್ನದಿಂದ ಆ ಅರಮನೆಯ ಸುತ್ತಲೂ ಇದ್ದ ಮೂರು ಸೇನಾನಿವೇಶಸ್ಥಾನಗಳನ್ನೂ ದಾಟಿಹೋದನು ಅಲ್ಲಿಂದಾಚೆಗೆ ಆ ಅರಮನೆಯ ಮೂರುಪ್ರಾಕಾರಗಳನ್ನೂ ದಾಟಿದನು. ಅಲ್ಲಿ ಕೃಷ್ಣನಂತೆಯೇ ಗುಣದಿಂದಲೂ, ಸಂಪತ್ತಿನಿಂದಲೂ ಮೇಲೆನಿಸಿಕೊಂಡ ಅಂಥಕ, ವೃಷ್ಣಿ ಮೊದಲಾದ ಯಾದವರ ಅರಮನೆಯ ಸಾಲುಗಳನ್ನು ನೋಡಿದನು. ಅದರಿಂದಾಚೆಗೆ ಹದಿನಾರುಸಾವಿರಮಂದಿ ಕೃಷ್ಣಪತ್ನಿಯರ ಮನೆಗಳಸಾಲನ್ನೂ ಕಂಡನು. ಅವುಗಳಲ್ಲಿ ವಿಶೇಷಶೋಭಾತಿಶಯದಿಂದ ಕೂಡಿದ ಒಂದಾನೊಂದು ಮನೆಯನ್ನು ನೋಡಿ, ಮೋಕ್ಷಸುಖಕ್ಕೆ ಪಾತ್ರನಾದವನು ವೈಕುಂಠವನ್ನು ಪ್ರವೇಶಮಾಡುವಂತೆ, ಅದರೊಳಗೆ ಪ್ರವೇಶಿಸಿದನು. ಓ! ಪರೀಕ್ಷಿದ್ರಾಜಾ! ಅದೇ ರುಕ್ಮಿಣಿದೇವಿಯ ಮನೆ! ಅಲ್ಲಿ ಶ್ರೀಕೃಷ್ಣನು ರುಕ್ಮಿಣಿಯೊಡನೆ ಮಂಚದಲ್ಲಿ ಕುಳಿತು ಸರಸಸಲ್ಲಾಪಗಳನ್ನು ಮಾಡುತ್ತಿದ್ದನು. ಈ ಬ್ರಾಹ್ಮಣನನ್ನು ಕಂಡೊಡನೆ ಕೃಷ್ಣನು, ಥಟ್ಟನೆ ಮಂಚದಿಂದಿಳಿದು ಮುಂದೆಬಂದು, ಆ ಬ್ರಾಹ್ಮಣನನ್ನು ಎರಡುತೋಳುಗಳಿಂದಲೂ ಆಲಿಂಗಿಸಿಕೊಂಡನು ತನಗೆ ಬಾಲ್ಯಸ್ನೇಹಿತನಾದ ಆ ಬ್ರಾಹ್ಮಣನ ಅಂಗಸ್ಪರ್ಶದಿಂದುಂಟಾದ ಆತ್ಮಾನಂದದಿಂದ. ಆ ಕೃಷ್ಣನ ಕಣ್ಣುಗಳಲ್ಲಿ ಫಳಫಳನೆ ಆನಂದಬಾಷ್ಪವು ಸುರಿಯುತಿತ್ತು. ಆ ಬ್ರಾಹ್ಮಣನನ್ನು ಕೈಹಿಡಿದು ಕರೆದು ಕೊಂಡುಹೋಗಿ,ತಾನು ಕುಳಿತಿದ್ದ ಮಂಚದಮೇಲೆಯೇ ಕುಳ್ಳಿರಿಸಿದನು. ಅವನಿಗೆ ಕಾಣಿಕೆಗಳನ್ನು ತಂದೊಪ್ಪಿಸಿದನು. ತನ್ನ ಕೈಯಿಂದಲೇ ಅವನ ಪಾದಗಳನ್ನು ತೊಳೆದು,ಆ ಪಾದತೀರ್ಥವನ್ನು ತಲೆಗೆ ಪ್ರೋಕ್ಷಿಸಿಕೊಂಡನು. ಕುಂಕುಮಕೇಸರಿಯಿಂದ ಕದಡಿದ ಅಗರುಚಂದನವನ್ನು ತಂದು, ತನ್ನ

ಕೈಯಿಂದಲೇ ಅವನ ಮೈಗೆ ಲೇಪಿಸಿದನು. ಸುಗಂಧ, ಧೂಪ, ದೀಪಗಳನ್ನು ತಂದು ಸತ್ಕರಿಸಿದನು. ಬೇಕುಬೇಕಾದ ಉಪಹಾರಗಳನ್ನು ತಂದಿಟ್ಟನು. ಹೀಗೆ ಸಮಸ್ತಸತ್ಕಾರಗಳನ್ನೂ ನಡೆಸಿದಮೇಲೆ, ಉತ್ತಮವಾದ ಗೋದಾನದೊಡನೆ ತಾಂಬೂಲವನ್ನು ಕೊಟ್ಟು, ಕುಶಲಪ್ರಶ್ನೆಗಳನ್ನು ಮಾಡಿದನು. ಆಹಾರವಿಲ್ಲದೆ ಕೃಶನಾಗಿ, ಚರ್ಮವೆಲ್ಲವೂ ಸುಕ್ಕಿ, ಅಂಗಾಂಗಗಳಲ್ಲಿಯೂ ನರಗಳು ಕಾಣಿಸುತ್ತಿರುವ ಆ ಬ್ರಾಹ್ಮಣನನ್ನು, ರುಕ್ಮಿಣೀದೇವಿಯೂಕೂಡ ನಾನಾವಿಧವಾಗಿ ಉಪಚರಿಸಿದಳು. ಅವನ ಆಯಾಸಪರಿಹಾರಾರ್ಥವಾಗಿ ತಾನೇ ಚಾಮರವನ್ನೂ, ಬೀಸಣಿಗೆಯನ್ನೂ ಹಿಡಿದು ಬೀಸುತ್ತಿದ್ದಳು. ಲೋಕೇಶ್ವರನಾದ ಕೃಷ್ಣನು, ಹೀಗೆ ಯಾವನೋ ಒಬ್ಬ ಬಡಬ್ರಾಹ್ಮಣನನ್ನು ಕರೆತಂದು ಮಂಚದಲ್ಲಿ ಕುಳ್ಳಿರಿಸಿ. ಅಷ್ಟು ವಿಧವಾಗಿ ಗೌರವಿಸಿದುದನ್ನು ನೋಡಿ, ಆ ಅಂತಃಪುರದ ಜನವೆಲ್ಲವೂ ಆಶ್ಚರ್ಯಪಡುತ್ತ, “ಆಹಾ! ಇದೇನಿದು? ತಿರುಕನಾದ ಈ ಬ್ರಾಹ್ಮಣನು ಪೂರ್ವದಲ್ಲಿ ಎಷ್ಟು ಪುಣ್ಯವನ್ನು ಮಾಡಿದ್ದನೋ? ಲೋಕದಲ್ಲಿ ಯಾರಿಗೂ ಗಣನೆಗೆ ಬಾರದ ಈ ಬಡಬ್ರಾಹ್ಮಣನೆಲ್ಲಿ? ಮೂರುಲೋಕಕ್ಕೂ ಪ್ರಭುವಾಗಿಯೂ,ಸಾಕ್ಷಾತ್ ಲಕ್ಷ್ಮೀದೇವಿಗೆ ನಿವಾಸಭೂತನಾಗಿಯೂ ಇರುವ ಈ ಕೃಷ್ಣನೆಲ್ಲಿ? ಈ ಬ್ರಾಹ್ಮಣನನ್ನು ಕಂಡೊಡನೆ ಕೃಷ್ಣನು, ತನ್ನೊಡನೆ ಮಂಚದಮೇಲಿದ್ದ ಲಕ್ಷ್ಮೀಸ್ವರೂಪಿಣಿಯಾದ ರುಕ್ಮಿಣಿಯನ್ನೂ ಅನಾದರಿಸಿ, ತನ್ನಣ್ಣನನ್ನು ಹೇಗೋಹಾಗೆ, ಇವನನ್ನು ಆಲಿಂಗಿಸಿಕೊಂಡನಲ್ಲ! ಎಂದು ಒಬ್ಬರಿಗೊಬ್ಬರು ಗುಸುಗುಟ್ಟುತ್ತಿದ್ದರು. ಇಷ್ಟರಲ್ಲಿ ಕೃಷ್ಣಕುಚೇಲರಿಬ್ಬರೂ, ಒಬ್ಬರೊಬ್ಬರ ಕೈಹಿಡಿದು, ಪೂರ್ವದಲ್ಲಿ ತಾವು ಗುರುಕುಲವಾಸದಲ್ಲಿದ್ದಾಗ ನಡೆಸಿದ ಆಟಪಾಟಗಳೆಲ್ಲವನ್ನೂ ಹೇಳಿಕೊಂಡು,ವಿನೋದದಿಂದ ಮಾತಾಡುತಿದ್ದರು. ಇವೆಲ್ಲವೂ ನಡೆದಮೇಲೆ ಕೃಷ್ಣನು, ಆ ಬ್ರಾಹ್ಮಣನ ಯೋಗಕ್ಷೇಮವನ್ನು ವಿಚಾರಿಸತೊಡಗಿದನು. “ಓ ಸುಧಾಮಾ! ಗುರುಕುಲದಲ್ಲಿ ನೀನು ವೇದಾಧ್ಯಯನವನ್ನು ಮುಗಿಸಿದಮೇಲೆ, ವ್ರತಸಮಾರ್ತನವನ್ನು ಮಾಡಿ ಗುರುದಕ್ಷಿಣೆಯನ್ನು ಸಮರ್ಪಿಸು ಬಂದೆಯಲ್ಲವೆ? ಆಮೇಲೆ ನೀನು ಮದುವೆಮಾಡಿಕೊಂಡಿರಬಹುದಷ್ಟೇ? ಮದುವೆಯಾಗಿದ್ದರೆ! ನಿನಗೆ ತಕ್ಕ ಭಾರ್ಯೆಯು ಲಭಿ

ಸಿದಳೆ ? ಅವಳು ನಿನಗೆ ಅನುಕೂಲೆಯಾಗಿರುವಳಷ್ಟೆ ? ಆದರೆ ನಿನ್ನ ಸ್ವಭಾವವನ್ನು ನೋಡಿದರೆ, ನಿನ್ನ ಮನಸ್ಸು ಕಾಮೋಪಭೋಗಗಳಲ್ಲಿ ಸಿಕ್ಕಿಬೀಳುವ ಹಾಗಿಲ್ಲ! ಆದರಿಂದ ಕುಟುಂಬಭೋಗದಲ್ಲಿ ನಿನಗೆ ಅಷ್ಟಾಗಿ ಪ್ರೀತಿಯಿರದು! ನೀನು ವಿವೇಕಿಯಾದ್ದರಿಂದ, ಹಣದಲ್ಲಿಯೂ ಅಷ್ಟಾಗಿ ನಿನಗೆ ಆಸೆಯಿಲ್ಲವೆಂಬ ವಿಷಯವನ್ನೂ ನಾನು ಚೆನ್ನಾಗಿ ಬಲ್ಲೆನು ಹೀಗೆಯೇ ಕೆಲವು ಜ್ಞಾನಿಗಳು, ಕಾಮಕ್ಕೆ ಸಿಕ್ಕಿಬೀಳದೆ ಕರ್ಮಗಳನ್ನು ನಡೆಸುವರು ಅವರು ಪ್ರಕೃತಿ ಸಂಬಂಧವನ್ನು ನೀಗುವ ಉದ್ದೇಶದಿಂದ ಬ್ರಹ್ಮವಿದ್ಯೆಗೆ ಅಂಗಭೂತವಾಗಿಯೇ ಕರ್ಮಗಳನ್ನು ನಡೆಸುವರೇಹೊರತು ಕಾಮಾಭಿಸಂಧಿಯಿಂದಲ್ಲ. ನನ್ನಂತೆಯೇ ಅವರೂ ಆಯಾಕರ್ಮಗಳನ್ನು ನಡೆಸುವುದು,ಲೋಕಕ್ಕೆ ದಾರಿಯನ್ನು ತೋರಿಸಿಕೊಡುವುದಕ್ಕಲ್ಲದೆ ಬೇರೆಯಲ್ಲ ಓ!ಬ್ರಾಹ್ಮಣಾ! ಗುರುಕುಲದಲ್ಲಿ ನಾವಿಬ್ಬರೂ ಸಹಾಧ್ಯಾಯಿಗಳಾಗಿದ್ದುದನ್ನು ನೀನು ಮರೆತಿಲ್ಲವಷ್ಟೆ? ಗುರುಕುಲವಾಸದಿಂದಲ್ಲವೇ ದ್ವಿಜನು, ತಾನು ಅವಶ್ಯವಾಗಿ ತಿಳಿಯಬೇಕಾದ ಆತ್ಮಪರಮಾತ್ಮತತ್ವವನ್ನು ತಿಳಿದು, ಅಜ್ಞಾನವನ್ನು ನೀಗಿಸಿಕೊಳ್ಳುವನು. ಆ ಗುರುಕುಲವಾಸದಿಂದಲ್ಲವೇ ಕರ್ಮಾನುಷ್ಠಾನಕ್ಕೆ ಸಾಧನವಾದ ಜ್ಞಾನವುಂಟಾಗುವುದು. ಗುರುಕುಲವಾಸವನ್ನೂ ಒಂದಾನೊಂದು ಮುಖ್ಯವಾದ ಆಶ್ರಮವೆಂದೇ ಹೇಳಬಹುದು. ತನಗೆ ಜ್ಞಾನೋಪದೇಶಮಾಡತಕ್ಕ ಗುರುವನ್ನು ಆದಿಪುರುಷನಾದ ಈಶ್ವರನೆಂಬ ಭಾವದಿಂದಲೇ ನೋಡಬೇಕು. ಲೋಕದಲ್ಲಿ ಸಂಸಾರಿಯಾದ ದ್ವಿಜನಿಗೆ, ತನ್ನ ಜನನಕ್ಕೆ ಕಾರಣನಾದ ತಂದೆಯೊಬ್ಬನೂ, ಉಪನಯನ ವೇದಾಧ್ಯಯನಗಳನ್ನು ಮಾಡಿಸಿ ಕರ್ಮಾನುಷ್ಠಾನಗಳಿಗೆ ಯೋಗ್ಯತೆಯನ್ನುಂಟುಮಾಡತಕ್ಕ ಆಚಾರನೊಬ್ಬನೂ, ಬ್ರಹ್ಮವಿದ್ಯೆಯನ್ನುಪದೇಶಿಸತಕ್ಕವನೊಬ್ಬನೂ,ಈ ಮೂವರೂ ಗುರುಗಳೆನಿಸಿಕೊಳ್ಳುವರು. ಈ ಮೂವರಲ್ಲಿ ಬ್ರಹ್ಮಜ್ಞಾನವನ್ನುಪದೇಶಿಸಿದವನೇ ಉತ್ತಮಗುರುವು ಅವನನ್ನು ಸಾಕ್ಷಾತ್ತಾಗಿ ನನ್ನಸ್ವರೂಪದಿಂದಲೇ ತಿಳಿಯಬೇಕು. ಓ ! ಬ್ರಾಹ್ಮಣೋತ್ತಮಾ! ಹೀಗೆ ಗುರುರೂಪದಿಂದ ನಾನು ಲೋಕದ ಎಲ್ಲಾವರ್ಣಾಶ್ರಮಗಳಿಗೂ, ಉಪದೇಶಿಸತಕ್ಕ ಜ್ಞಾನವನ್ನಾಶ್ರಯಿಸಿ, ಸಂಸಾರವೆಂಬ ಮಹಾಸಮುದ್ರವನ್ನು ದಾಟುವಂತ

ವರೇ ಪುರುಷಾರ್ಥತತ್ವವನ್ನು ಬಲ್ಲವರು ಸರ್ವಭೂತಾತ್ಮಕನಾದ ನಾನು ಗುರುಶುಶ್ರೂಷೆಯಿಂದ ಹೇಗೆ ತೃಪ್ತನಾಗುವೆನೋ, ಹಾಗೆ ಪಂಚಮಹಾಯಜ್ಞಗಳಿಂದಲಾಗಲಿ, ಕುಲೋನ್ನತಿಯಿಂದಾಗಲಿ, ತಪಸ್ಸಿನಿಂದಾಗಲಿ. ಶಮದಮಾದಿಗುಣಗಳಿಂದಾಗಲಿ ತುಷ್ಟಿಹೊಂದಲಾರೆನು ಎಲೈಮಿತ್ರನೆ! ನಾವಿಬ್ಬರೂ ಗುರುಕುಲದಲ್ಲಿದ್ದಾಗ, ಒಂದಾನೊಂದುದಿನದಲ್ಲಿ, ಗುರುಪತ್ನಿಯು ನಮ್ಮಿಬ್ಬರಿಗೂ ಕಾಡಿನಲ್ಲಿಸೌದೆಯನ್ನು ಕಡಿದುತರಬೇಕೆಂದು ಹೇಳಿಕಳುಹಿಸಿದುದು ನಿನ್ನ ನೆನಪಿನಲ್ಲಿರುವುದಷ್ಟೆ? ಆಗ ಅಕಾಲವಾಗಿದ್ದರೂ ನಾವು, ಆಕೆಯ ಆಜ್ಞೆಯನ್ನು ಮೀರಲಾರದೆ, ಒಂದುದೊಡ್ಡ ಅರಣ್ಯಕ್ಕೆ ಪ್ರವೇಶಿಸಿದೆವು. ಆಗ ಭಯಂಕರವಾದ ಮಳೆಗಾಳಿಗಳು ಆರಂಭಿಸಿದುವು ಮೇಘಗಳು ಭಯಂಕರವಾಗಿ ಗರ್ಜಿಸುತಿದ್ದುವು ಹೊತ್ತುಮುಳುಕೆ,ಸುತ್ತಲೂ ಗಾಢಾಂಧಕಾರವು ಕವಿದುಹೋಯಿತು ಎಲ್ಲಿ ನೋಡಿದರೂ ನೀರುನಿಂತು, ಹಳ್ಳತಿಟ್ಟುಗಳೇ ಕಾಣದಂತಾಯಿತು. ಎಲ್ಲೆಲ್ಲಿಯೂ ಪ್ರವಾಹಗಳು ಹರಿಯುತ್ತಿದ್ದುದರಿಂದ, ನಾವು ಮಳೆಗಾಳಿಗಳ ಬಾಧೆಗೆ ಸಿಕ್ಕಿ,ದಿಕ್ಕುತೋರದೆ,ಒಬ್ಬರಿಗೊಬ್ಬರು ಕೈಹಿಡಿದುಕೊಂಡು, ಹೇಗೋ ಪ್ರಯತ್ನದಿಂದ ಒಂದಿಷ್ಟು ಕಟ್ಟಿಗೆಯನ್ನು ಸಂಗ್ರಹಿಸಿ. ಅದನ್ನು ಹೊರಲಾರದೆ ಹೊತ್ತುಕೊಂಡು,ದಾರಿತಪ್ಪಿ ಆಕಾಡನ್ನೆಲ್ಲಾ ಸುತ್ತುತಿದ್ದೆವಲ್ಲವೆ? ಆರಾತ್ರಿಯೆಲ್ಲಾ ನಾವು ಹಿಂತಿರುಗಿ ಬಾರದುದನ್ನು ನೋಡಿ, ನಮ್ಮ ಗುರುವಾದ ಸಾಂದೀಪನು ಬೆಳಗಾದಮೇಲೆ ತಾನೇ ನಮ್ಮನ್ನು ಹುಡುಕಿಕೊಂಡುಬಂದು, ನಮ್ಮ ದುರವಸ್ಥೆಯನ್ನು ನೋಡಿ ಕನಿಕರಪಡುತ್ತ "ಅಹಾ ! ಬಾಲಕರೆ! ಪ್ರಾಣಿಗಳೆಲ್ಲಕ್ಕೂ ದೇಹಕ್ಕಿಂತಲೂ ಪ್ರಿಯವಾದುದು ಬೇರೊಂದಿಲ್ಲ. ನೀವು ಅದನ್ನೂ ಲಕ್ಷ್ಯಮಾಡದೆ, ನನ್ನಲ್ಲಿರುವ ಭಕ್ತಿಯಿಂದ ನನಗಾಗಿ ಇಷ್ಟುಕಷ್ಟಕ್ಕೆ ಗುರಿಯಾದಿರಲ್ಲವೆ ? ಹೀಗೆ ಪರಿಶುದ್ಧಭಾವದಿಂದ ಆತ್ಮತ್ಯಾಗಪೂರ್ವಕವಾಗಿ ಗುರುವಿಗೆ ಪ್ರಿಯವನ್ನುಂಟುಮಾಡುವುದೇ ಸಚ್ಛಿಷ್ಯರ ಲಕ್ಷಣವು. ಅವರು ಗುರುವಿನಿಂದ ತಾವು ಪಡೆದ ಉಪಕಾರಕ್ಕೆ ಮಾಡಬೇಕಾದ ಪ್ರತ್ಯುಪಕಾರವೂ ಅದೇ! ನಿಮ್ಮ ವಿಧೇಯತೆಗಾಗಿ ನಾನು ಬಹಳ ಸಂತೋಷಪಟ್ಟೆನು. ನಿಮ್ಮ ಕೋರಿಕೆಗಳೆಲ್ಲವೂ ಕೈಗೂಡಲಿ! ನೀವು ನನ್ನಿಂದ ಅಭ್ಯಸಿಸಿದ ವೇದಗಳೆಲ್ಲವೂ ನಿಮಗೆ ಇಹಲೋಕದಲ್ಲಿಯೂ, ಪರಲೋಕ

ದಲ್ಲಿಯೂ ಫಲಕಾರಿಗಳಾಗಲಿ!" ಎಂದು ಅನುಗ್ರಹಿಸಲಿಲ್ಲವೆ? ಹೇಗೆಯೇ ನಾವು ಗುರುಕುಲವಾಸದಲ್ಲಿದ್ದಾಗ ನಡೆದ ಅನೇಕಸಂಗತಿಗಳು ನಿನ್ನ ನೆನಪಿನಲ್ಲಿ ರುವುವಷ್ಟೆ? ಓ! ಬ್ರಾಹ್ಮಣೋತ್ತಮಾ! ಹೀಗೆ ಗುರುವಿನ ಅನುಗ್ರಹಕ್ಕೆ ಪಾತ್ರನಾದವನೇ ಮುಕ್ತಿಗೂ ಅರ್ಹನಾಗುವನು" ಎಂದನು. ಆಗ ಬ್ರಾಹ್ಮಣನು ಕೃಷ್ಣನನ್ನು ಕುರಿತು "ಓ! ದೇವದೇವಾ! ಜಗದ್ಗುರೋ! ನನಗೆ ಆ ಗುರುವಿನ ಅನುಗ್ರಹವು ಹಾಗಿರಲಿ! ಸತ್ಯಸಂಕಲ್ಪನಾದ ನಿನ್ನೊಡನೆ ಸಹವಾಸವು ಲಭಿಸಿದಮಾತ್ರದಿಂದಲೇ ನಾನು ಕೃತಾರ್ಥನಾದೆನು, ನಿನ್ನ ಸಹವಾಸ ಪಾತ್ರನಾದ ನನಗೆ ಯಾವ ಕೋರಿಕೆಯು ತಾನೇ ದುರ್ಲಭವು. ಪ್ರಭೂ! ವೇದಮಯವಾದ ಬ್ರಹ್ಮವು ಯಾವನ ದೇಹವೆನಿಸಿರುವುದೋ, ಸಮಸ್ತ ಪುರುಷಾರ್ಥಗಳಿಗೂ ಯಾವನು ಬೀಜವೆನಿಸಿರುವನೋ, ಲೋಕಗುರುವಾದ ಅಂತಹ ನೀನು ಗುರುಕುಲವಾಸವನ್ನು ಮಾಡುತಿದ್ದುದಕ್ಕಿಂತಲೂ ಆಶ್ಚರ್ಯವೇನಿರುವುದು" ಎಂದನು ಇದು ಎಂಬತ್ತನೆಯ ಅಧ್ಯಾಯವು.

---

## ಕೃಷ್ಣನು ಕುಚೇಲನನ್ನು ಅನುಗ್ರಹಿಸಿದುದು.

ಕೃಷ್ಣಕುಚೇಲರಿಬ್ಬರೂ ಹೀಗೆ ಮಾತಾಡುತ್ತಿರುವಾಗ, ಕೃಷ್ಣನು ಸಮಸ್ತಭೂತಗಳ ಮನೋವ್ಯಾಪಾರವನ್ನೂ ಬಲ್ಲವನಾದುದರಿಂದ, ಕುಚೇಲನ ಮನೋಭಾವವನ್ನು ತಿಳಿದು ಮುಗುಳ್ನಗೆಯೊಡನೆ "ಓ ಬ್ರಾಹ್ಮಣಾ? ನಾನು ನಿನ್ನ ಹಳೆಸ್ನೇಹಿತನಲ್ಲವೆ? ಮನೆಯಿಂದಬರುವಾಗ ನನಗೆ ಯಾವವಸ್ತುವನ್ನು ಕಾಣಿಕೆಯಾಗಿ ತಂದಿರುವೆ? ಸಂಕೋಚವಿಲ್ಲದೆಹೇಳು' ನನ್ನಲ್ಲಿ ಪ್ರೀತಿಯುಳ್ಳವರು ತಂದುಕೊಡತಕ್ಕ ವಸ್ತುವು ಅತ್ಯಲ್ಪವಾಗಿದ್ದರೂ ಅದನ್ನು ನಾನು ಮಹತ್ತಾಗಿ ಭಾವಿಸುವೆನು. ನನ್ನಲ್ಲಿ ನಿಜವಾದ ಪ್ರೀತಿಯಿಲ್ಲದವರು ಎಷ್ಟೇ ಉತ್ತಮಪದಾರ್ಥಗಳನ್ನು ತಂದರೂ, ಅದು ನನಗೆ ಸಂತೋಷವನ್ನುಂಟುಮಾಡಲಾರದು ಒಂದುಪತ್ರವಾಗಲಿ, ಒಂದು ಹೂವಾಗಲಿ, ಒಂದು ಹಣ್ಣಾಗಲಿ, ಕೊನೆಗೆ ಒಂದಿಷ್ಟು ನೀರಾಗಲಿ, ಪರಿಶುದ್ಧಾತ್ಮನಾದವನು ನನಗೆ ಭಕ್ತಿಯಿಂದ ತಂದೊಪ್ಪಿಸಿದ ಕಾಣಿಕೆಯು ಎಷ್ಟೇ ಅಲ್ಪವಾಗಿದ್ದರೂ ಸಂತೋಷದಿಂದ ಭುಜಿಸುವೆನು ಅದುದರಿಂದ ನನಗಾಗಿ ಮನೆಯಿಂದ ಏ

ನಾದರೂ ತಂದಿದ್ದರೆ ಸಂಕೋಚವಿಲ್ಲದೆ ಕೊಡು" ಎಂದನು ಕೃಷ್ಣನು ಇಷ್ಟುವಿಧವಾಗಿ ಹೇಳಿದರೂ, ಆ ಬ್ರಾಹ್ಮಣನು ಸಾಕ್ಷಾತ್ ಲಕ್ಷ್ಮೀಪತಿಯಾದ ಕೃಷ್ಣನಿಗಾಗಿ ತಾನು ಬಟ್ಟೆಯಲ್ಲಿ ಕಟ್ಟಿತಂದಿದ್ದ ಅವಲಕ್ಕಿಯನ್ನು ತೋರಿಸಲಾರದೆ, ಬಹಳ ಹೊತ್ತಿನವರೆಗೆ ತಲೆಯನ್ನು ತಗ್ಗಿಸಿ ನಾಚಿಕೆಯಿಂದ ಸುಮ್ಮನಿದ್ದನು ಕೃಷ್ಣನು ಸರ್ವಸಾಕ್ಷಿಯಾಗಿ, ಸಮಸ್ತ ಭೂತಗಳ ಅಂತರಂಗವನ್ನೂ ತಿಳಿಯಬಲ್ಲವನಾದುದರಿಂದ, ಆ ಬ್ರಾಹ್ಮಣನು ತನ್ನಲ್ಲಿಗೆ ಬಂದ ಕಾರಣವನ್ನು ತಿಳಿದುಕೊಂಡು, ಮನಸ್ಸಿನಲ್ಲಿ "ಈತನಾದರೋ ಇದುವರೆಗೆ ಮೋಕ್ಷಾಪೇಕ್ಷೆಯಿಂದಹೊರತು ಧನಾರ್ಥಿಯಾಗಿ ನನ್ನನ್ನು ಭಜಿಸಿದವನಲ್ಲ ಪತಿವ್ರತೆಯಾದ ತನ್ನ ಪತ್ನಿಯ ನಿರ್ಬಂಧದಿಂದ, ಈಗ ಹಣವನ್ನು ಯಾಚಿಸುವುದಕ್ಕಾಗಿ ನನ್ನಲ್ಲಿಗೆ ಬಂದಿರುವನು. ಈತನು ನನಗೆ ಪರಮಭಕ್ತನುಮಾತ್ರವೇ ಅಲ್ಲದೆ, ಆ ಬಾಲ್ಯಸ್ನೇಹಿತನಾಗಿಯೂ ಇರುವನು ಆದುದರಿಂದ ಈಗ ನಾನು ಇವನಿಗೆ, ಲೋಕದಲ್ಲಿ ಬೇರೊಬ್ಬರಿಗೂ ದುರ್ಲಭವಾದ ಭಾಗ್ಯವನ್ನು ಕೈಗೂಡಿಸುವೆನು" ಎಂದು ಸಂಕಲ್ಪಿಸಿಕೊಂಡನು ತಿರುಗಿ ಆ ಬ್ರಾಹ್ಮಣನನ್ನು, ತನಗಾಗಿ ತಂದಿರುವ ಕಾಣಿಕೆಯೇನೆಂದು ಪುನಃಪುನಃ ನಿರ್ಬಂಧಿಸುತ್ತ, ಕೊನೆಗೆ ತಾನೇ ಬಲಾತ್ಕಾರದಿಂದ ಆ ಬ್ರಾಹ್ಮಣನ ಮೈಯನ್ನು ಶೋಧಿಸಿ, ಅವನು ತನ್ನ ಚಿಂದಿಬಟ್ಟೆಯಲ್ಲಿ ಕಟ್ಟಿದ್ದ ಅವಲಕ್ಕಿಯ ಗಂಟನ್ನು ಕಂಡುಹಿಡಿದು "ಬ್ರಾಹ್ಮಣಾ! ಇದೇನಿದು!" ಎಂದು ಅದನ್ನು ಬಿಚ್ಚಿನೋಡಿದನು ಆಮೇಲೆ ಬ್ರಾಹ್ಮಣನನ್ನು ಕುರಿತು, "ಮಿತ್ರನೆ! ಇದನ್ನೇ ಅಲ್ಲವೇ ನೀನು ನನಗೆ ಕಾಣಿಕೆಯಾಗಿ ತಂದಿರುವೆ? ಈ ಅವಲಕ್ಕಿಯನ್ನು ಕಂಡರೆನನಗೆಬಹಳ ಇಷ್ಟವು. "ತಾನುಂಟೋ, ಮೂರುಲೋಕವುಂಟೋ" ಎಂಬ ಸಾಮತಿಯನ್ನು ಕೇಳಿಲ್ಲವೆ? ಅದರಂತೆ ಈಗ ನಾನು ತೃಪ್ತನಾದರೆ ಲೋಕವೆಲ್ಲವೂ ತೃಪ್ತಿಹೊಂದಿದಂತೆ ಭಾವಿಸುವೆನು." ಎಂದು ಹೇಳಿ, ಅತ್ಯಾತುರದಿಂದ ಅದರಲ್ಲಿ ಒಂದುಹಿಡಿಯಷ್ಟು ಅವಲಕ್ಕಿಯನ್ನು ತೆಗೆದು, ಥಟ್ಟನೆ ಬಾಯಿಗೆ ಹಾಕಿಕೊಂಡನು. ಇನ್ನೊಂದಾವರ್ತಿ ಇನ್ನೊಂದು ಹಿಡಿಯನ್ನು ಎತ್ತುವುದಕ್ಕಾಗಿ ಆ ಗಂಟಿಗೆ ಕೈಯಿಕ್ಕುವಾಗ, ಲಕ್ಷ್ಮೀಸ್ವರೂಪೆಯಾದ ರುಕ್ಮಿಣೀದೇವಿಯು, ಥಟ್ಟನೆ ಬಂದು, ಆ ಕೃಷ್ಣನ ಕೈಯನ್ನು ಹಿಡಿದು, ಅಷ್ಟ

ಕ್ಕೇ ತಡೆದುನಿಲ್ಲಿಸಿ, "ನಾಥಾ! ನೀನು ಮೊದಲು, ಆ ಒಂದುಹಿಡಿಯ ಅವ ಲಕ್ಕಿಯನ್ನು ತಿಂದು ತೃಪ್ತನಾದಮಾತ್ರಕ್ಕೇ, ಅದು, ಇಹಲೋಕ ದಲ್ಲಿಯಾಗಲಿ, ಪರಲೋಕದಲ್ಲಿಯಾಗಲಿ ಅನುಭವಿಸಬಹುದಾದ ಸಂಪತ್ತು ಗಳೆಲ್ಲವನ್ನೂ ಕೈಗೂಡಿಸುವುದಕ್ಕೆ ಸಾಕಾಗಿರುವುದು ಇನ್ನು ಸಾಕು! ನಿಲ್ಲಿಸು" ಎಂದಳು. ಓ! ಪರೀಕ್ಷಿದ್ರಾಜಾ! ಆ ಬ್ರಾಹ್ಮಣನು, ಆ ರಾತ್ರಿ ಯಲ್ಲಿ ಕೃಷ್ಣನ ಅರಮನೆಯಲ್ಲಿಯೇ ಪಾನಭೋಜನಾದಿಗಳನ್ನು ತೀರಿಸಿ ಕೊಂಡು, ಆ ದಿನವನ್ನು ಸುಖವಾಗಿ ಕಳೆದನು. ಆಗ ಅವನಿಗೆ ತಾನು ಸ್ವರ್ಗ ದಲ್ಲಿರುವಂತೆಯೇ ತೋರಿತು ಮರುದಿನದ ಬೆಳಗ್ಗೆ, ಕೃಷ್ಣನು, ತನ್ನ ಮಿತ್ರ ನಾದ ಆ ಬ್ರಾಹ್ಮಣನನ್ನು ಬರೀಬಾಯಿಮಾತುಗಳಿಂದ ಉಪಚರಿಸುತ್ತ, ಅವನು ತನ್ನಲ್ಲಿಗೆ ಬಂದ ಉದ್ದೇಶವೇನೆಂಬುದನ್ನೂ ಕೇಳದೆ, "ಓ! ಬ್ರಾಹ್ಮ ಣಾ! ನಿನಗೆ ವಂದನವು ಇನ್ನು ನೀನು ಹೋಗಿ ಬರಬಹುದು" ಎಂದು ಹೇಳಿ, ತನ್ನ ಅರಮನೆಯ ಬಾಗಿಲಿನವರೆಗೆ ತಾನೂ ಹಿಂಬಾಲಿಸಿ ಬಂದು, ಅವನನ್ನು ಕಳುಹಿಸಿಬಿಟ್ಟನು. ಈ ಬ್ರಾಹ್ಮಣನಾದರೋ ಬಹಳಸಂ ಕೋಚಸ್ವಭಾವವುಳ್ಳವನು ತಾನಾಗಿ ಬಾಯಿಬಿಟ್ಟು ಯಾಚಿಸುವುದಕ್ಕೂ ಅವನಿಗೆ ಧೈರ್ಯವುಂಟಾಗಲಿಲ್ಲ! ದಾರಿದ್ರ್ಯದಿಂದುಂಟಾದ ಲಜ್ಜೆಯು ಬೇರೆ ಅವನನ್ನು ಬಾಯೆತ್ತದಹಾಗೆ ಮಾಡಿತು. ಕೃಷ್ಣನಾದರೂ ಅವನ ಉ ದ್ದೇಶವೇನೆಂದು ವಿಚಾರಿಸಲಿಲ್ಲ. ಕೊನೆಗೆ ಆ ಬ್ರಾಹ್ಮಣನು ಬರೀ ಕೈಯಿಂದಲೇ ತನ್ನ ಮನೆಗೆ ಹಿಂತಿರುಗಬೇಕಾಯಿತು. ಆಗಲೂ ಆ ಬ್ರಾಹ್ಮ ಣನಿಗೆ ಅತೃಪ್ತಿಯುಮಾತ್ರ ಹುಟ್ಟಲಿಲ್ಲ ಮಹಾತ್ಮನಾದ ಭಗವಂತನ ದರ್ಶನವು ಲಭಿಸಿತೆಂಬ ಮಾತ್ರದಿಂದಲೇ ತೃಪ್ತನಾಗಿ, ತನ್ನ ಮನೆಗೆ ಬಂದು ಸೇರಿದನು. ಆ ಬ್ರಾಹ್ಮಣನು ಹೊರಟುಬರುವಾಗ ದಾರಿಯುದ್ದಕ್ಕೂ ತನ್ನೊಳಗೆ ತಾನು "ಆಹಾ! ಆ ಕೃಷ್ಣನಿಗೆ ಬ್ರಾಹ್ಮಣರೆಂದರೆ ಎಷ್ಟು ಪ್ರೀತಿ! ಸಾಕ್ಷಾಲ್ಲಕ್ಷ್ಮೀದೇವಿಯನ್ನೇ ತನ್ನ ವಕ್ಷಸ್ಥಳದಲ್ಲಿಟ್ಟುಕೊಂಡಿರತಕ್ಕ ಆ ಮಹಾತ್ಮನು, ಕೇವಲ ದರಿದ್ರಬ್ರಾಹ್ಮಣನಾದ ನನ್ನನ್ನು ಕೈನೀಡಿ ಆಲಿಂ ಗಿಸಿಕೊಂಡನಲ್ಲಾ! ಪರಮಪಾಪಿಯಾಗಿ ದರಿದ್ರನಾದ ನಾನೆಲ್ಲಿ! ಶ್ರೀದೇ ವಿಗೆ ನಿವಾಸಭೂತನಾದ ಆ ಕೃಷ್ಣನೆಲ್ಲಿ? ನಾನು ಬ್ರಾಹ್ಮಣಕುಲದವನೆಂ



೨೩೦ಲ ಕುಚೇಲನು ತಂದುಕೊಟ್ಟ ಅವಲಕ್ಕಿಯನ್ನು ಕೃಷ್ಣನು ಭುಜಿ
ಸಿದುದು, ರುಕ್ಮಿಣೀದೇವಿಯು ಬೇಡವೆಂದು ತಡೆದುದು.

ಬ ಮಾತ್ರದಿಂದಲ್ಲವೇ,ಆತನು ನನ್ನನ್ನು ಹಾಗೆಕೈನೀಡಿ ಆಲಿಂಗಿಸಿಕೊಂಡನು. ಇಷ್ಟುಮಾತ್ರವಲ್ಲದೆ ನನ್ನನ್ನು ಒಡಹುಟ್ಟಿದವನಂತೆ ಭಾವಿಸಿ, ತನ್ನ ಪ್ರಿಯೆಯಾದ ರುಕ್ಮಿಣಿಯು ಕುಳಿತಿದ್ದ ಮಂಚದಮೇಲೆ ಕರೆತಂದು ಕುಳ್ಳಿರಿಸಿದನು! ನನ್ನ ಆಯಾಸಪರಿಹಾರಾರ್ಥವಾಗಿ ಅವನ ಪಟ್ಟಮಹಿಷಿಯಾದ ರುಕ್ಮಿಣಿಯೇ ತನ್ನ ಕೈಯಿಂದ ಚಾಮರವನ್ನು ಬೀಸಲಿಲ್ಲವೆ? ಅಷ್ಟೇ ಅಲ್ಲ! ಆ ಭಗವಂತನು ದೇವತೆಗಳಿಗೂ ತಾನು ದೇವನಾಗಿದ್ದರೂ, ಸಮಸ್ತವಿಪ್ರಕುಲಕ್ಕೂ ತಾನೇ ನಾಥನಾಗಿದ್ದರೂ, ನನ್ನ ಕಾಲನ್ನು ಹಿಡಿದು ಒತ್ತುತ್ತ, ನನ್ನನ್ನೇ ದೈವದಂತೆ ಗೌರವಿಸಿ ಶುಶ್ರೂಷೆಮಾಡಿದನು ಸ್ವರ್ಗಮರ್ತ್ಯಪಾತಾಳಗಳಲ್ಲಿರುವ ಸಮಸ್ತಸಂಪತ್ತುಗಳಿಗೂ, ಅಣಿಮಾದ್ಯಷ್ಟೈಶ್ವರ್ಯಗಳಿಗೂ, ಸ್ವರ್ಗಮೋಕ್ಷಗಳಿಗೂ ಆ ಭಗವಂತನ ಪಾದಸೇವೆಯೇ ಮೂಲಾಧಾರವು ಆತನು ಸರ್ವಾಭೀಷ್ಟಗಳನ್ನೂ ಕೊಡತಕ್ಕವನಾಗಿದ್ದರೂ, ದ್ರವ್ಯಾರ್ಜನೆಗಾಗಿ ಹೋದ ನನ್ನ ಉದ್ದೇಶವನ್ನು ಈಡೇರಿಸಿದೆ ಹೋದುದಕ್ಕೆ,ಅವನಿಗೆ ನನ್ನಲ್ಲಿರುವ ಪೂರ್ಣಾನುಗ್ರಹವೇ ಕಾರಣವೆಂದು ತೋರುವುದು. ಬಡವನಾದ ನನಗೆ ಧನವನ್ನು ಕೊಟ್ಟು ನನ್ನನ್ನು ಧನವಂತನನ್ನಾಗಿ ಮಾಡಿಬಿಟ್ಟರೆ, ಆ ಹಣದ ಹೆಮ್ಮೆಯಿಂದ ನಾನು ತನ್ನನ್ನು ಮರೆತುಬಿಡಬಹುದೆಂದೆಣಿಸಿ, ಕಾರುಣಿಕನಾದ ಆತನು, ನನಗೆ ಬೇಕಾದ ಹಣವನ್ನುಕೊಡದೆ ಕಳುಹಿಸಿಬಿಟ್ಟಿರಬೇಕು! ಅತನು ನನ್ನಲ್ಲಿ ಅನುಗ್ರಹಬುದ್ಧಿಯಿಂದಲೇ ನನ್ನನ್ನು ಈ ಸ್ಥಿತಿಯಲ್ಲಿರಿಸಿರುವುದರಿಂದ, ನಾನು ಸಂತೋಷಪಡಬೇಕೇ ಹೊರತು ದುಃಖಿಸಬೇಕಾದುದಿಲ್ಲ" ಎಂದು ಸಮಾಧಾನವನ್ನು ಮಾಡಿಕೊಂಡು, ತನ್ನ ಮನೆಯ ಬಾಗಿಲಿಗೆ ಬಂದು ಸೇರಿದನು. ಅಲ್ಲಿ ಬಂದು ನೋಡುವಾಗ, ಅವನ ಆಶ್ಚರ್ಯವನ್ನು ಕೇಳಬೇಕೆ? ಹಿಂದಿನ ಸ್ಥಿತಿಯೊಂದೂ ಅವನಿಗೆ ಕಾಣಿಸಲಿಲ್ಲ ತಾನು ವಾಸಮಾಡುತಿದ್ದ ಆ ಸಣ್ಣ ಜೋಪಡಿಯಿದ್ದ ಸ್ಥಳದಲ್ಲಿ, ಸೂರ್ಯಚಂದ್ರಾಗ್ನಿಗಳಿಗೆ ಸಮಾನವಾದ ದಿವ್ಯಕಾಂತಿಯುಳ್ಳ ವಿಮಾನಗಳು ಸುತ್ತಲೂ ಆವರಿಸಿರುವುವು ಆ ಮನೆಯಸುತ್ತಲೂ, ವಿಚಿತ್ರವಾದ ಉಪವನಗಳೂ, ಉದ್ಯಾನಗಳೂ ಕಂಗೊಳಿಸುವುವು. ಆ ತೋಟಗಳಲ್ಲಿ ವನಪಕ್ಷಿಗಳು ಕಿವಿಗಿಂಪಾಗಿ ಕೂಗುತ್ತಿರುವುವು ನಡುನಡುವೆ ಅರಳಿದ ಕಮಲ

ಕಹ್ಲಾರ, ಕುಮುದಾದಿ ಪುಷ್ಪಗಳಿಂದ ತುಂಬಿದ ಸರೋವರಗಳು ಕಾಣು ವುವು ಆ ಮನೆಯ ನಾನಾಕಡೆಗಳಲ್ಲಿಯೂ ವಸ್ತ್ರಾಭರಣಗಳಿಂದಲಂಕೃತ ರಾದ ಸ್ತ್ರೀಯರೂ, ಪುರುಷರೂ, ಸಂಭ್ರಮದಿಂದ ಸಂಚರಿಸುತ್ತಿರುವುರು. ಅಲ್ಲಿನ ಸನ್ನಿವೇಶವು ಸಾಕ್ಷಾನ್ಮಹೇಂದ್ರಭವನದಂತೆ ಕಾಣುತ್ತಿರುವುದು. ಅದನ್ನು ನೋಡಿ ಕುಚೇಲನಿಗೆ ದಿಗ್ಭ್ರಮೆ ಹಿಡಿದಂತಾಯಿತು. “ಆಹಾ! ಏನಿದು! ಇದು ಯಾರ ಮನೆ! ಇದು ಮೊದಲು ನಾನಿದ್ದ ಸ್ಥಳವೇ ಅಲ್ಲವೆ? ಇದಕ್ಕೆ ಈ ವಿಧವಾದ ಸ್ಥಿತಿಯು ಬಂದುದು ಹೇಗೆ!” ಎಂದು ಹಿಂದುಮುಂದು ತೋರದೆ ಚಿಂತಿಸುತ್ತ, ಭ್ರಾಂತನಾಗಿ ಅಲ್ಲಿಯೇ ನಿಂತುಬಿಟ್ಟನು. ಇಷ್ಟ ರಲ್ಲಿ ಕೆಲವುಮಂದಿ ದಿವ್ಯತೇಜಸ್ಸುಳ್ಳ ಪುರುಷರೂ, ಸ್ತ್ರೀಯರೂ ಇವನನ್ನು ಕರೆದುಕೊಂಡುಹೋಗುವುದಕ್ಕಾಗಿ ಗೀತವಾದ್ಯಗಳೊಡನೆ ಇದಿರು ಗೊಂಡುಬಂದರು. ಆ ಬ್ರಾಹ್ಮಣನ ಪತ್ನಿಯೂಕೂಡ, ಪತಿಯು ಹಿಂತಿರುಗಿ ಬಂದನೆಂಬ ವೃತ್ತಾಂತವನ್ನು ಕೇಳಿ,ಪರಮಸಂಭ್ರಮಗೊಂಡು ಕಮಲವನದಿಂದ ಹೊರಟುಬರುವ ಲಕ್ಷ್ಮೀದೇವಿಯಂತೆ ಮನೆಯಿಂದಹೊರಗೆ ಬಂದಳು. ಪತಿಯನ್ನು ಕಂಡೊಡನೆ ಅವಳ ಕಣ್ಣುಗಳಲ್ಲಿ ಆನಂದಬಾಷ್ಪವು ತುಂಬಿ, ಕಣ್ಣೇ ಕಾಣದಂತಾಯಿತು. ಹಾಗೆಯೇ ಸ್ವಲ್ಪಹೊತ್ತಿನವರೆಗೆ ಆ ಸಾಧ್ವೀಮಣಿಯು,ಕಣ್ಣುಮುಚ್ಚಿ,ಮನಸ್ಸಿನಿಂದಲೇ ಪತಿಯಪಾದಗಳಿಗೆನಮ ಸ್ಕರಿಸಿ, ಆತನ ದೇಹಾಲಿಂಗನಸೌಖ್ಯವನ್ನೂ ಮನಸ್ಸಿನಿಂದಲೇ ಅನುಭವಿಸಿ ದಳು. ಈ ಬ್ರಾಹ್ಮಣನೂಕೂಡ, ವಿಮಾನದಲ್ಲಿರುವ ದೇವತಾಸ್ತ್ರೀಯಂತೆ ಅಪೂರ್ವಕಾಂತಿಯಿಂದ ಶೋಭಿಸುತ್ತಿರುವ ತನ್ನಪತ್ನಿಯನ್ನು ಕಂಡನು ಉ ತ್ತಮವಾದ ಕಂಠಾಭರಣವನ್ನು ಧರಿಸಿದ ಅನೇಕಸ್ತ್ರೀಯರು, ಗೌಡಿಯರಂತೆ ಅವಳ ಸುತ್ತಲೂ ನಿಂತು ಉಪಚರಿಸುತ್ತಿದ್ದರು. ಅದನ್ನು ನೋಡಿ ಆ ಬ್ರಾ ಹ್ಮಣನಿಗೆ ಮತ್ತಷ್ಟು ಆಶ್ಚರ್ಯವುಂಟಾಯಿತು ಪರಮಸಂತೋಷದಿಂದ ಅವ ಳೊಡನೆ ತನ್ನ ಮನೆಯೊಳಗೆ ಪ್ರವೇಶಿಸಿದನು. ಆ ಮನೆಯ ಸೊಬಗನ್ನು ಕೇಳ ಬೇಕೆ? ಆ ಕಟ್ಟಡವು ರತ್ನಖಚಿತವಾದ ನೂರಾರುಕಂಬಗಳಿಂದ ಇಂದ್ರ ಭವನದಂತೆ ಕಾಣುತ್ತಿರುವುದು. ಅದರ ನಡುನಡುವೆ ಚಿನ್ನದ ಚಿತ್ರಕಾರ್ಯ ವುಳ್ಳ ಮಂಚಗಳು! ಅದರಮೇಲೆ ಹಾಲಿನ ನೊರೆಯಂತೆ ಬಿಳುಪಾದ ಹಾಸಿ

ಗೆಗಳು! ಅಲ್ಲಲ್ಲಿ ಸುವರ್ಣದಂಡವುಳ್ಳ ಚಾಮರಗಳು! ಬಂಗಾರದ ಹಿಡಿಗಳುಳ್ಳ ಬೀಸಣಿಗೆಗಳು! ಅಲ್ಲಲ್ಲಿ ಸುವರ್ಣಮಯವಾದ ಆಸನಗಳು! ಅವರಮೇಲೆ ಮೃದುವಾದ ಆಸ್ತರಣಗಳು! ಸುತ್ತಲೂ ಮುತ್ತಿನ ಜಾಲರಿಗಳಿಂದಲಂಕೃತವಾದ ಮೇಲುಕಟ್ಟುಗಳು! ಸ್ಫಟಿಕಮಯವಾದ ಗೋಡೆಗಳು! ಆ ಗೋಡೆಗಳಲ್ಲಿ ಇಂದ್ರನೀಲಮಣಿಗಳಿಂದ ಮಾಡಿದ ಚಿತ್ರಕೆಲಸಗಳು. ನಡುನಡುವೆ ರತ್ನದೀಪಗಳನ್ನು ಕೈಯಲ್ಲಿ ಹಿಡಿದಿರುವ ಸ್ತ್ರೀಪ್ರತಿಮೆಗಳು! ಹೀಗೆ ಸಕಲಸಂಪತ್ಸಮೃದ್ಧವಾದ ಆ ಸ್ಥಳಸನ್ನಿವೇಶವನ್ನು ನೋಡಿ, ಕುಚೇಲನು ಆಶ್ಚರ್ಯದಿಂದ ಏನೊಂದೂ ತೋರದೆ ಸ್ತಬ್ಧನಾಗಿ ನಿಂತನು ಅಕಸ್ಮಾತ್ತಾಗಿ ತನಗೆ ಲಭಿಸಿದ ಆ ಐಶ್ವರ್ಯಸಮೃದ್ಧಿಯನ್ನು ಕುರಿತು, ತನ್ನಲ್ಲಿ ತಾನೇ ಹೀಗೆಂದು ಯೋಚಿಸತೊಡಗಿದನು "ಆಹಾ! ಏನಿದು! ಹುಟ್ಟುದರಿದ್ರನಾದ ನನ್ನ ಮೊದಲಿನ ಸ್ಥಿತಿಯನ್ನು ಯೋಚಿಸಿದರೆ, ಆ ನನ್ನ ದಾರಿದ್ರ್ಯದಶೆಯು ಜನ್ಮಾಂತರಕ್ಕೂ ಬಿಟ್ಟು ಹೋಗುವಹಾಗೆ ತೋರಿರಲಿಲ್ಲ! ಮನಸ್ಸಿನಿಂದ ಯೋಚಿಸುವುದಕ್ಕೂ ಸಾಧ್ಯವಲ್ಲದ ಈ ಮಹಾಭಾಗ್ಯವು ನನಗೆ ಲಭಿಸಿರುವದನ್ನು ನೋಡಿದರೆ, ಉಭಯವಿಭೂತಿಗಳಿಗೂ ಪ್ರಭುವಾದ ಆ ಶ್ರೀಕೃಷ್ಣನ ದರ್ಶನದ ಫಲವೇ ಈ ರೀತಿಯಾಗಿ ಪರಿಣಮಿಸಿರಬೇಕೇಹೊರತು ಇದಕ್ಕೆ ಬೇರೆ ಕಾರಣವನ್ನೂ ಊಹಿಸುವುದಕ್ಕಿಲ್ಲ ಏನಾಶ್ಚರ್ಯವಿದು! ನಾನು ಆ ಶ್ರೀಕೃಷ್ಣನನ್ನು ಪ್ರತ್ಯಕ್ಷವಾಗಿಯೇ ಕಂಡುಬಂದೆನು. ಅವನು ಈ ವಿಷಯವಾಗಿ ನನ್ನೊಡನೆ ಯಾವಮಾತನ್ನೂ ಆಡಲಿಲ್ಲ. ಅಥವಾ! ಮಾಯಾಮಾನುಷನಾದ ಆ ಕೃಷ್ಣನಲ್ಲಿ ಇದೊಂದಾಶ್ಚರ್ಯವಲ್ಲ! ಮೇಘಗಳು ಯಾರಿಗೂ ತಿಳಿಯದಹಾಗೆ ಬಂದು ಸುವೃಷ್ಟಿಯನ್ನು ಕರೆಯುವಂತೆ, ಆ ಭಗವಂತನೂಕೂಡ ಯಾಚಕರಮುಂದೆ ಯಾವಮಾತನ್ನೂ ಆಡದೆ, ತನ್ನ ಉದ್ದೇಶವನ್ನು ಸ್ವಲ್ಪಮಾತ್ರವೂ ಸೂಚಿಸದೆ, ಪರೋಕ್ಷದಲ್ಲಿಯೇ ಇದ್ದು ಅವರಿಗೆ ಬೇಕಾದ ಇಷ್ಟಾರ್ಥಗಳನ್ನು ಕೊಡುವನು ಆ ಭಗವಂತನು ಆಶ್ರಿತರಿಗೆ ತನ್ನನ್ನೇ ಒಪ್ಪಿಸಿಬಿಡುವಷ್ಟು ದಯಾಸ್ವಭಾವವುಳ್ಳವನು ಅವನು ಅನುಭವಿಸತಕ್ಕ ನಿರತಿಶಯವಾದ ಐಶ್ವರ್ಯದೊಡನೆ ಹೋಲಿಸಿನೋಡಿದರೆ, ಬ್ರಹ್ಮಾದಿಗಳ ಭೋಗವೂ ಅತ್ಯಲ್ಪವೆನಿಸುವುದು. ತನ್ನಲ್ಲಿ ಮರೆಹೊಕ್ಕವರಿಗೆ ಅಂತಹ ಅಲ್ಪಭೋಗ

ವನ್ನು ಈಡೇರಿಸಿಕೊಡುವವಿಷಯದಲ್ಲಿ ನಾಚಿಕೆಪಟ್ಟವನಂತೆ ಬಾಯಿಂದ ಯಾವಮಾತನ್ನೂ ಆಡದೆ, ಪರೋಕ್ಷದಲ್ಲಿದ್ದೇ ನಡೆಸಿಬಿಡುವನು ತಾನುಭಕ್ತರಿಗೆ ಮಹತ್ತಾದ ಐಶ್ವರ್ಯವನ್ನು ಕೊಟ್ಟರೂ, ಅದನ್ನು ಅತ್ಯಲ್ಪವೆಂದೇ ಭಾವಿಸುವನು.ಭಕ್ತರು ತನಗೆ ಕೊಡತಕ್ಕುದು ಅತ್ಯಲ್ಪವಾಗಿದ್ದರೂಅದನ್ನೇಮಹತ್ತೆಂದು ತಿಳಿದು ಸಂತೋಷಪಡುವನು. ಆ ಮಹಾತ್ಮನ ಸ್ವಭಾವವೇ ಇದು! ಅದರಿಂದಲ್ಲವೇ ನನ್ನಲ್ಲಿದ್ದ ಒಂದುಹಿಡಿ ಅವಲಕ್ಕಿಯನ್ನು ಎಷ್ಟೋಪ್ರೀತಿಯಿಂದ ಪರಿಗ್ರಹಿಸಿದನು ಹೀಗೆ ಸಮಸ್ತಗುಣಗಳಿಗೂ ನಿವಾಸಭೂತನಾಗಿ, ಮಹಾನುಭಾವನಾಗಿರುವ ಆ ಭಗವಂತನೊಡನೆ ನನಗೆ ಜನ್ಮಜನ್ಮದಲ್ಲಿಯೂ ಇದೇವಿಧವಾದ ಪ್ರೇಮವೂ, ಸ್ನೇಹವೂ, ಹಿತಾಕಾಂಕ್ಷೆಯೂ, ಔದಾರ್ಯವೂ, ಇವೇಮೊದಲಾದ ಸರ್ವವಿಧಸಂಬಂಧವೂ ಉಂಟಾಗಲಿ! ನನಗೆ ಬೇರೆ ಯಾವ ಐಶ್ವರ್ಯದಲ್ಲಿಯೂ ಅಪೇಕ್ಷೆಯಿಲ್ಲ! ಆ ಮಹಾತ್ಮನೊಡನೆಯೂ, ಆತನ ಭಕ್ತರೊಡನೆಯೂ, ನಿರಂತರವಾದ ಸಂಬಂಧವಿದ್ದರೆ ಸಾಕು!ಅವನು ನನ್ನಲ್ಲಿ ವಿಶೇಷಪ್ರೇಮವನ್ನು ತೋರಿಸಿ, ನನಗೆ ಇಷ್ಟೊಂದು ಮಹಾಭಾಗ್ಯವನ್ನು ಕೊಟ್ಟಿರುವುದರಿಂದ,ಅವನು ನನ್ನನ್ನು ತನ್ನ ಭಕ್ತಕೋಟಿಯಲ್ಲಿ ಸೇರಿಸಿಕೊಂಡಿರುವಹಾಗೆ ತೋರಲಿಲ್ಲ! ಏಕೆಂದರೆ, ಆತನು ಯಾರಲ್ಲಿ ಸಂಪೂರ್ಣವಾದ ಪ್ರೀತಿಯನ್ನು ತೋರಿಸಬೇಕೆಂದಿರುವನೋ,ಅವರಿಗೆಈವಿಧವಾದ ಐಶ್ವರ್ಯವನ್ನು ಕೊಡಲಾರನು. ಈ ಸಂಪತ್ತುಗಳೆಲ್ಲವೂ ಮನುಷ್ಯನಿಗೆ ಮದವನ್ನು ಹೆಚ್ಚಿಸಿ,ಭೋಗಾಸಕ್ತನನ್ನಾಗಿ ಮಾಡುವುದರಿಂದ ನರಕಕಾರಣಗಳೆನಿಸುವುವು. ಈ ವಿಷಯವನ್ನು ಯೋಚಿಸಿಯೇ ಆ ಭಗವಂತನು, ತನ್ನ ಅಂತರಂಗಭಕ್ತರಿಗೆ ಇಂತಹ ಭೋಗಸಾಮಗ್ರಿಯನ್ನು ಕೊಡಲಾರನು ಇದರಿಂದ ಆ ಕೃಷ್ಣನಿಗೆ ನನ್ನಲ್ಲಿ ಪ್ರೀತಿಯಿಲ್ಲವೆಂದೇ ಭಾಸಿಸಬೇಕಾಗಿರುವುದು ಆ ಭಗವಂತನಿಗೆ ನನ್ನಲ್ಲಿ ಈ ಅಭಿಪ್ರಾಯವು ಬಿಟ್ಟುಹೋಗುವಂತೆ, ಅವನಲ್ಲಿ ನನಗೆ ನಿರಂತರವಾದ ಭಕ್ತಿಯುಂಟಾಗಲಿ" ಎಂದು ಆ ಕುಚೇಲನು,ಮನಸ್ಸಿನಲ್ಲಿನಿಶ್ಚಯಿಸಿಕೊಂಡು ಕೃಷ್ಣಾನುಗ್ರಹದಿಂದ ತನಗೆ ಲಭಿಸಿದ ಭೋಗಾನುಭವದಲ್ಲಿ ಅಷ್ಟಾಗಿ ಆಸೆಯನ್ನು ತೋರಿಸದೆ, ಆತನಲ್ಲಿ ಭಕ್ತಿಯೊಂದನ್ನೇ ಮುಖ್ಯವಾಗಿಟ್ಟುಕೊಂಡು,ತನ್ನ ಪತ್ನೀಪುತ್ರರೊಡನೆ ಸುಖವಾಗಿರುತ್ತಿದ್ದನು ಓ! ಪರೀಕ್ಷಿ

ದ್ರಾಜಾ! ಪರಾತ್ಪರನೆನಿಸಿಕೊಂಡ ಶ್ರೀ ಕೃಷ್ಣನು, ಆ ದರಿದ್ರಬ್ರಾಹ್ಮಣ ನನ್ನು ತನಗೆ ಸಮಾನವಾಗಿ ಭಾವಿಸಿ,ಅಷ್ಟೊಂದುಗೌರವವನ್ನು ತೋರಿಸಿದು ದೇನೂ ವಿಶೇಷವೆಂದು ತಿಳಿಯಬೇಡ!ತಾನೇ ಬ್ರಹ್ಮಾದಿದೇವತೆಗಳಿಗೂದೇವ ನಾಗಿ, ಯಜ್ಞಪತಿಯೆನಿಸಿಕೊಂಡಿದ್ದರೂ, ಆ ಕೃಷ್ಣನು ಬ್ರಾಹ್ಮಣರೇ ತನ ಗೆ ದೈವವೆಂದೂ,ಅವರೇ ತನಗೆ ಪ್ರಭುಗಳೆಂದೂ, ಆ ಬ್ರಾಹ್ಮಣರಿಗಿಂತಲೂ ತನಗೆ ಮೇಲಾದ ಗುರುವಿಲ್ಲವೆಂದೂ ಭಾವಿಸುವನು ಆ ಭಗವಂತನು ಯಾರಿ ಗೂ ದುರ್ಜಯನಾಗಿದ್ದರೂ, ತನ್ನ ಭಕ್ತರಿಂದ ಜಯಿಸಲ್ಪಟ್ಟಂತೆ ಅವರಿಗೆ ವಶನಾಗುವನು. ಅಂತಹ ಭಗವಂತನಿಗೆ ಆ ಬಾಲ್ಯಸ್ನೇಹಿತನಾದ ಕುಚೇ ಲನು, ಕೃಷ್ಣಾನುಗ್ರಹದಿಂದ ತನಗೆ ಬಂದ ಭಾಗ್ಯವನ್ನನುಭವಿಸುವ ಕಾಲದ ಲ್ಲಿಯೂ, ಆ ಪರಮಾತ್ಮನ ನಿರಂತರಧ್ಯಾನದಿಂದಲೂ, ಅದಕ್ಕೆ ಅಂಗಭೂತ ವಾಗಿ ನಡೆಸಿದ ಯಜ್ಞಾದಿಕರ್ಮಗಳಿಂದಲೂ, ತನ್ನ ಸಂಸಾರಬಂಧವನ್ನು ನೀಗಿ, ಮುಕ್ತರಿಗೆ ಲಭಿಸತಕ್ಕ ಪರಮಪದವನ್ನು ಹೊಂದಿದನು. ಓ! ಪರೀಕ್ಷಿ ದ್ರಾಜಾ! ಬ್ರಾಹ್ಮಣಪ್ರಿಯನಾದ ಶ್ರೀ ಕೃಷ್ಣನ ಈ ಚರಿತ್ರವನ್ನು ಕೇಳಿ, ಇದರಮೂಲಕವಾಗಿ ಆ ಭಗವಂತನಲ್ಲಿ ಭಕ್ತಿಯನ್ನು ಸಾಧಿಸಿದವರೆಲ್ಲ ರೂ, ಆ ಕುಚೇಲನಂತೆಯೇ ಕರ್ಮಬಂಧವನ್ನು ನೀಗಿ ಮುಕ್ತಿಯನ್ನು ಹೊಂ ದುವರು ಇದು ಎಂಬತ್ತೊಂದನೆಯ ಅಧ್ಯಾಯವು

---

## { ಒಮ್ಮೆ ಸೂರ್ಯಗ್ರಹಣಕಾಲದಲ್ಲಿ ಕೃಷ್ಣಾದಿಗಳು ಕುರುಕ್ಷೇತ್ರಕ್ಕೆ ಹೋದುದು }

ಓ! ಪರೀಕ್ಷಿದ್ರಾಜಾ! ಕೇಳು! ಕೃಷ್ಣಬಲರಾಮರಿಬ್ಬರೂ ದ್ವಾರ ಕೆಯಲ್ಲಿ ಸುಖದಿಂದಿರುವಾಗ, ಒಮ್ಮೆ ಕಲ್ಪಾಂತದಲ್ಲಿ ಹೇಗೋಹಾಗೆ ಭಯಂ ಕರವಾದ ಒಂದು ಸೂರ್ಯಗ್ರಹಣವು ಸಂಭವಿಸಿತು. ಜ್ಯೋತಿಷ್ಕರಿಂದ ಮೊದ ದಲೇ ನಿರ್ಣಯಿಸಲ್ಪಟ್ಟಿದ್ದ ಈ ಕಾಲದಲ್ಲಿ, ದ್ವಾರಕಾವಾಸಿಗಳಾದ ಶಿಷ್ಟರೆಲ್ಲರೂ, ಗ್ರಹಣಕಾಲದಲ್ಲಿ ನಡೆಸತಕ್ಕ ಕರ್ಮಗಳನ್ನು ನಡೆಸುವುದ ಕ್ಕಾಗಿ, ಕುರುಕ್ಷೇತ್ರದಲ್ಲಿರುವ ಸ್ಯಮಂತಪಂಚಕವೆಂಬ ಸ್ಥಳಕ್ಕೆ ಹೋದರು. ಆ ಸ್ಯಮಂತಪಂಚಕದ ವೃತ್ತಾಂತವನ್ನು ನೀನೂ ಕೇಳಿರಬಹುದಷ್ಟೆ, ಹಿಂ

ಷೊಮ್ಮೆ ಶಸ್ತ್ರಧಾರಿಗಳಲ್ಲಿ ಮೇಲೆನಿಸಿಕೊಂಡ ಪರಶುರಾಮನು,ಯಾವನೋ ಒಬ್ಬ ಕ್ಷತ್ರಿಯನು ತನ್ನ ತಂದೆಯಾದ ಜಮದಗ್ನಿಯನ್ನು ಕೊಂದನೆಂಬ ಕೋಪಕ್ಕಾಗಿ, ಭೂಮಿಯಲ್ಲಿ ಕ್ಷತ್ರಿಯರ ಹುಟ್ಟೇ ಇಲ್ಲದಂತೆ ಮಾಡುವುದಾಗಿ ಸಂಕಲ್ಪಿಸಿ, ಆದರಂತೆ ಕಂಡಕಂಡ ಕ್ಷತ್ರಿಯರನ್ನು ಕೊಲ್ಲುತ್ತ, ಅವರ ರಕ್ತ ಪ್ರವಾಹದಿಂದ ಐದುಮಡುಗಳನ್ನು ತುಂಬಿಬಿಟ್ಟನು ಅದನ್ನೇ ಸ್ಯಮಂತ ಪಂಚಕವೆಂದು ಹೇಳುವರು ಆ ಪರಶುರಾಮನು ಭಗವಂತನ ಅಂಶಾವತಾರ ವಾದುದರಿಂದ, ಅವನಿಗೆ ಪುಣ್ಯಪಾಪಕರ್ಮಗಳ ಸಂಬಂಧವಿಲ್ಲದಿದ್ದರೂ, ಲೋಕಕ್ಕೆ ಶಿಷ್ಟಾಚಾರವನ್ನು ರಕ್ಷಿಸುವುದಕ್ಕಾಗಿಯೂ,ಸಾಮಾನ್ಯಜನಗಳಿಗೆ ಪಾಪನಿವೃತ್ತಿಯ ಮಾರ್ಗವನ್ನು ತಿಳಿಸುವುದಕ್ಕಾಗಿಯೂ, ತಾನು ಕ್ಷತ್ರಿಯ ರನ್ನು ಕೊಂದ ಪಾಪಕ್ಕೆ ಪ್ರಾಯಶ್ಚಿತ್ತರೂಪವಾಗಿ ಅಲ್ಲಿ ಒಂದಾನೊಂದು ಯಾಗವನ್ನೂ ಮಾಡಿದನು ಅದು ಲೋಕದಲ್ಲಿ ಪ್ರಸಿದ್ಧವಾದ ಪುಣ್ಯ ಕ್ಷೇತ್ರವೆನಿಸಿಕೊಂಡುದರಿಂದ, ಭರತವರ್ಷದ ಪ್ರಜೆಗಳೆಲ್ಲರೂ ತೀರ್ಥಯಾ ತ್ರೆಗಾಗಿ ಅಲ್ಲಿಗೆ ಹೋಗುವುದುಂಟು ಆ ಸಂಪ್ರದಾಯವನ್ನನುಸರಿಸಿಯೇ ಈಗಿನ ಗ್ರಹಣಕಾಲದಲ್ಲಿ, ಅನೇಕವೃಷ್ಣಿಗಳೊಡನೆ ಅಕ್ರೂರನೂ, ವಸುದೇ ವನೂ, ಆಹುಕನೂ, ಗದ, ಪ್ರದ್ಯುಮ್ನ, ಸಾಂಬ, ಸುಚಂದ್ರ, ಶುಕ, ಸಾರಣ, ಮುಂತಾದ ಅನೇಕಯಾದವರೂ, ತಮ್ಮ ಪಾಪಪರಿಹಾರಾರ್ಥ ವಾಗಿ ಗ್ರಹಣಸ್ನಾನವನ್ನು ಮಾಡಬೇಕೆಂದು ಆ ಕ್ಷೇತ್ರಕ್ಕೆ ಹೋದರು. ಯಾದವಸೇನಾಪತಿಯಾದ ಅನಿರುದ್ಧನೂ, ಕೃತವರ್ಮನೂ, ಇವರಿಬ್ಬರು ಮಾತ್ರ, ಪಟ್ಟಣದ ಕಾವಲಿಗಾಗಿ ದ್ವಾರಕೆಯಲ್ಲಿಯೇ ನಿಂತುಬಿಟ್ಟರು. ಆತ್ತ ಲಾಗಿ ತೀರ್ಥಯಾತ್ರೆಗಾಗಿ ಹೊರಟವರೆಲ್ಲರೂ, ತಮ್ಮೊಡನೆ ದೇವಭವ ನಗಳಂತಿರುವ ರಥಗಳನ್ನೂ,ಅಲೆಗಳಂತಿರುವ ಕುದುರೆಗಳನ್ನೂ,ಮೇಘಗಳಂ ತಿರುವ ಆನೆಗಳನ್ನೂ, ವಿದ್ಯಾಧರರಂತ ಕಾಂತಿವಿಶಿಷ್ಟರಾದ ಕಾಲಾಳುಗ ಳನ್ನೂ ಕರೆದುಕೊಂಡು, ಸುವರ್ಣಹಾರಗಳು, ದಿವ್ಯವಸ್ತ್ರಗಳು, ಗಂಧ ಪುಷ್ಪಗಳು,ಮೊದಲಾದಅಲಂಕಾರಸಾಮಗ್ರಿಗಳನ್ನೂ ಸಿದ್ಧಪಡಿಸಿಕೊಂಡು, ತಮ್ಮ ತಮ್ಮ ಪತ್ನಿಯರೊಡನೆ ಬರುವಾಗ ಸಾಕ್ಷಾದ್ದಿವ್ಯಪುರುಷರಂತ ತೋರುತಿದ್ದರು. ಇವರೆಲ್ಲರೂ ಆ ತೀರ್ಥದಲ್ಲಿ ಸ್ನಾನಮಾಡಿ, ನಿಯಮದಿಂದ

ಉಪವಾಸವಿದ್ದು,ಬ್ರಾಹ್ಮಣರಿಗೆವಸ್ತ್ರಭೂಷಣಾದಿಗಳನ್ನೂ,ಧೇನುಗಳನ್ನೂ ದಾನಮಾಡಿದರು ಈ ಧರ್ಮಗಳು ಮುಗಿದಮೇಲೆ, ತಿರುಗಿ ಅವರೆಲ್ಲರೂ ಪರಶುರಾಮನಿಂದ ನಿರ್ಮಿತವಾದ ಆ ಕೊಳಗಳಲ್ಲಿ ಗ್ರಹಣವು ಬಿಟ್ಟಮೇಲೆ ಶಾಸ್ತ್ರೋಕ್ತವಾಗಿ ಮಾಡಬೇಕಾದ ಶುದ್ಧಮಂಡಲದರ್ಶನಸ್ನಾನವನ್ನು ಮಾಡಿ, ತಿರುಗಿ ಬ್ರಾಹ್ಮಣರನ್ನು ಕರೆಸಿ, ಶ್ರೀಕೃಷ್ಣನಲ್ಲಿ ತಮಗೆ ನಿರಂತರವಾದ ಭಕ್ತಿಯುಂಟಾಗುವಂತೆ ಅನುಗ್ರಹವನ್ನು ಪಡೆಯುವುದಕ್ಕಾಗಿ,ಅವರಿಗೆ ಸುವರ್ಣದಾನವನ್ನು ಮಾಡಿ ನಮಸ್ಕರಿಸಿದರು ಆಮೇಲೆ ಅವರೆಲ್ಲರೂ ಶ್ರೀಕೃಷ್ಣನೇ ದೈವವೆಂದು ನಂಬಿದ ಆ ಬ್ರಾಹ್ಮಣರ ಅನುಮತಿಯನ್ನು ಪಡೆದು, ಭೋಜನವನ್ನುಮಾಡಿ, ಅಲ್ಲಲ್ಲಿ ಮರದ ನೆರಳಿನಲ್ಲಿ ಸುಖವಾಗಿ ಕುಳಿತುಕೊಂಡರು. ಗ್ರಹಣಸ್ನಾನಕ್ಕಾಗಿ ಅಲ್ಲಿಗೆ ಬಂದಿದ್ದ ತಮ್ಮ ಬಂಧುಮಿತ್ರರನೇಕರನ್ನೂ, ಬೇರೆಬೇರೆ ದೇಶದ ರಾಜರನ್ನೂ ನೋಡಿ ಅವರೊಡನೆ ಕುಶಲಪ್ರಶ್ನೆಮಾಡುತ್ತಿದ್ದರು ಮತ್ಸ್ಯ, ಉಶೀನರ, ಕೋಸಲ, ವಿದರ್ಭ, ಕುರು, ಸೃಂಜಯ, ಕಾಂಭೋಜ, ಕೇಕಯ, ಮದ್ರ, ಆರಟ್ಟ, ಕೇರಳ, ಮುಂತಾದ ದೇಶಾಧಿಪತಿಗಳೆಲ್ಲರೂ ಅಲ್ಲಿ ನೆರೆದಿದ್ದರು ಇನ್ನೂ ಅಲ್ಲಿ ಯಾದವಪಕ್ಷದವರಾದ ಅನೇಕರಾಜರೂ, ಅವರಿಗೆ ಪ್ರತಿಪಕ್ಷದವರೂ ಬಂದು ಸೇರಿದ್ದರು ಯಾದವರಲ್ಲಿ ವಿಶೇಷಪ್ರೀತಿಯುಳ್ಳ ನಂದಾದಿಗೋಪಾಲಕರೂ, ಗೋಪಸ್ತ್ರೀಯರೂ ಬಂದು ಸೇರಿದರು ಹೀಗೆ ಅಲ್ಲಿ ನೆರೆದಿದ್ದವರೆಲ್ಲರೂ, ಬಹುಕಾಲದಿಂದ ಕಾಣದಿದ್ದ ತಮ್ಮ ಇಷ್ಟಮಿತ್ರರನ್ನು ನೋಡತಕ್ಕ ಸಂಭವವುಂಟಾದುದರಿಂದ, ಪರಮಸಂತೋಷಭರಿತರಾಗಿ ಒಬ್ಬರಿಗೊಬ್ಬರು ಗಾಢಾಲಿಂಗನವನ್ನುಮಾಡಿಕೊಂಡರು ಒಬ್ಬೊಬ್ಬರ ಮುಖದಲ್ಲಿಯೂ ಉಲ್ಲಾಸವು ತುಳುಕುತಿತ್ತು ಒಬ್ಬೊಬ್ಬರೂ ಕಣ್ಣುಗಳಲ್ಲಿ ಆನಂದಬಾಷ್ಪವನ್ನು ಬಿಡುತಿದ್ದರು ಒಬ್ಬೊಬ್ಬರಿಗೂ ದೇಹದಲ್ಲಿ ರೋಮಾಂಚವುಂಟಾಯಿತು ಗದ್ಗದಸ್ವರದಿಂದ ಪರಸ್ಪರಕುಶಲಪ್ರಶ್ನವನ್ನು ಮಾಡುವುದಕ್ಕೂ ಮಾತು ಹೊರಡದಂತಾಯಿತು ಎಲ್ಲರೂ ಸಂತೋಷಸಾಗರದಲ್ಲಿ ಮುಳುಗಿದಂತಿದ್ದರು. ಹಾಗೆಯೇ ಅಲ್ಲಿಗೆಬಂದಿದ್ದ ಸ್ತ್ರೀಯರೂಕೂಡ ಒಬ್ಬರಿಗೊಬ್ಬರು ಮುಖದಲ್ಲಿ ಮುಗುಳ್ನಗೆಯಿಂದಲೂ, ಪ್ರೀತಿಪೂರ್ವಕವಾದ ಕಟಾಕ್ಷವೀಕ್ಷಣದಿಂದಲೂ,

ಆನಂದಬಾಷ್ಪದಿಂದಲೂ ಅನ್ಯೋನ್ಯಪ್ರೇಮವನ್ನು ತೋರಿಸುತ್ತ, ಒಬ್ಬರ ನ್ನೊಬ್ಬರು ಕೈನೀಡಿ ಆಲಿಂಗಿಸಿಕೊಂಡರು ಆಮೇಲೆ ಆ ಸ್ತ್ರೀಪುರುಷರೆಲ್ಲರೂ, ಅಲ್ಲಿ ಬಂದಿದ್ದ ಗುರುಹಿರಿಯರಿಗೆ ನಮಸ್ಕರಿಸಿ, ತಮಗಿಂತಲೂ ಕಿರಿಯವರಾಗಿ ತಮಗೆ ನಮಸ್ಕಾರಮಾಡಿದವರನ್ನು ಪ್ರೇಮದಿಂದ ಮನ್ನಿಸಿ, ಅವರ ಕುಶಲ ಪ್ರಶ್ನವನ್ನು ಕೇಳುತ್ತ. ಕೊನೆಗೆ ಎಲ್ಲರೂ ಗುಂಪಾಗಿ ಕುಳಿತು ವಿನೋದ ದಿಂದ ಮಾತಾಡುತಿದ್ದರು. ಹಾಗೆಯೇ ಅಲ್ಲಿ ಸ್ನಾನಕ್ಕಾಗಿ ಬಂದ ಕುಂತೀದೇವಿಯೂಕೂಡ ತನ್ನ ಸಹೋದರರನ್ನೂ, ಸಹೋದರಿಯರನ್ನೂ ಅವರವರ ಮಕ್ಕಳನ್ನೂ, ಸಹೋದರಪತ್ನಿಯರನ್ನೂ, ಶ್ರೀ ಕೃಷ್ಣನನ್ನೂ ಕಂಡು ಮಾತಾಡಿಸುತ್ತ, ತಾನು ಹಿಂದೆ ಅನುಭವಿಸಿದ ದುಃಖವನ್ನೇ ತಿಳಿಯ ದಂತೆ ಸಂತೋಷದಿಂದಿದ್ದಳು ಆಮೇಲೆ ಆಕೆಯು ಅಣ್ಣನಾದ ವಸು ದೇವನನ್ನು ನೋಡಿ "ಅಣ್ಣಾ ! ಲೋಕದಲ್ಲಿ ನನ್ನ ಜನ್ಮವು ನಿರರ್ಥಕವು. ನಾನು ಹುಟ್ಟಿ ಒಂದು ಸುಖವನ್ನಾದರೂ ಅನುಭವಿಸಲಿಲ್ಲ. ನನ್ನ ಇಷ್ಟ ವೊಂದಾದರೂ ಕೈಗೂಡಲಿಲ್ಲ! ನಾನು ಕಷ್ಟದಲ್ಲಿದ್ದಾಗ ಬೇರೊಬ್ಬರು ನನ್ನ ಮಾತನ್ನಾದರೂ ಮನಸ್ಸಿಗೆ ತಂದುಕೊಳ್ಳುತ್ತಿರಲಿಲ್ಲ! ನನಗೆ ಮಾತ್ರವೇನು! ದೈವವು ಯಾರಿಗೆ ಪ್ರತಿಕೂಲವೋ, ಅಂತವರನ್ನು ಸ್ನೇಹಿತರಾಗಲಿ, ಬಂಧುಗಳಾಗಲಿ, ಅಣ್ಣತಮ್ಮಂದಿರಾಗಲಿ ತಾಯಿ ತಂದೆಗಳಾಗಲಿ ಲಕ್ಷ್ಯಮಾಡುವುದಿಲ್ಲ"ಎಂದಳು ಆಗ ವಸುದೇವನು. ಕುಂತಿ ಯನ್ನು ಕುರಿತು "ಅಮ್ಮಾ ! ಮನುಷ್ಯರೆಲ್ಲರೂ ಈಶ್ವರನ ಆಜ್ಞಾಧೀನರಾ ಗಿ ನಡೆಯತಕ್ಕವರಲ್ಲವೆ? ಹೀಗಿರುವಾಗ ನಮ್ಮಲ್ಲಿ ನೀನು ಅಸಮಾಧಾನ ಪಡಬಾರದು ಏಕೆಂದರೆ, ಈಶ್ವರನು ಜನರನ್ನು ತನ್ನ ವಶಾನುವರ್ತಿಗಳನ್ನಾಗಿ ಮಾಡಿಕೊಂಡು.ತನಗೆ ಇಷ್ಟಬಂದ ರೀತಿಯಲ್ಲಿ ಅವರಿಂದ ಕೆಲಸವನ್ನು ಮಾಡಿ ಸುವನು. ಆದುದರಿಂದ ಯಾವ ಮನುಷ್ಯನೇ ಆಗಲಿ ತನ್ನ ಇಷ್ಟದಂತೆ ನಡೆಯಲಾರನು. ನಾವೂ ಕಂಸನ ಭಯದಿಂದ ದಿಕ್ಕುದಿಕ್ಕಿಗೆ ಪಲಾಯನ ಮಾಡಿದ್ದೆವಲ್ಲವೆ? ಓ! ತಂಗೀ! ದೈವಾನುಗ್ರಹದಿಂದ ಈಗಲ್ಲವೇ ನಾವೂ ಇಲ್ಲಿಗೆ ಬಂದು ಪೂರ್ವಸ್ಥಿತಿಯಲ್ಲಿರುವೆವು" ಎಂದನು. ಓ ! ಪರೀಕ್ಷಿದ್ರಾಜಾ! ಹೀಗೆಯೇ ಒಬ್ಬರಿಗೊಬ್ಬರು ತಮ್ಮ ಯೋಗಕ್ಷೇಮವನ್ನು ಹೇಳಿಕೊಳ್ಳು

ತ್ತಿರುವಾಗ. ಕೃಷ್ಣನೂಕೂಡ, ಉಗ್ರಸೇನನೇ ಮೊದಲಾದ ರಾಜರೆಲ್ಲರನ್ನೂ ನೋಡಿ ಅವರ ಸುಖದುಃಖಗಳನ್ನು ವಿಚಾರಿಸುತ್ತಿದ್ದನು. ಅವರೂ ಶ್ರೀಕೃಷ್ಣ ದರ್ಶನದಿಂದ ಪರಮಾನಂದಭರಿತರಾಗಿದ್ದರು. ಅಲ್ಲಿ ಯಾತ್ರೆಗಾಗಿ ಬಂದಿದ್ದ ಭೀಷ್ಮ, ದ್ರೋಣ, ಧೃತರಾಷ್ಟ್ರ, ಗಾಂಧಾರಿ, ಅವಳ ಮಕ್ಕಳಾದ ದುರ್ಯೋಧನಾದಿಗಳು, ಅವರ ಪತ್ನಿಯರು, ಪಾಂಡವರು, ಕುಂತಿ, ಸಂಜಯ, ವಿದುರ, ಕೃಪ, ಕುಂತಿಭೋಜ, ವಿರಾಟ,ಭೀಷ್ಮಕ,ಇಂದ್ರಜಿತ್ತು,ಪುರುಜಿತ್ತು, ದ್ರುಪದ, ಶಲ್ಯ, ಧೃಷ್ಟಕೇತು, ಕಾಶಿರಾಜ, ದಮಘೋಷ, ವಿಶಾಲಾಕ್ಷ, ಮೈಥಿಲ, ಮದ್ರ, ಕೇಕಯ,ಯುಧಾಮನ್ಯು, ಸುಶರ್ಮ, ಬಾಹ್ಲಿಕ, ಮೊದಲಾದ ರಾಜರು, ತಮ್ಮ ಪತ್ನೀಪುತ್ರಾದಿಗಳೊಡನೆ ಬಂದು, ಲಕ್ಷ್ಮಿಗೆ ನಿವಾಸಭೂತವಾದ ಶ್ರೀಕೃಷ್ಣನ ದಿವ್ಯಮೂರ್ತಿಯನ್ನು ದರ್ಶನ ಮಾಡಿ, ಆನಂದಾಶ್ಚರ್ಯಗಳಲ್ಲಿ ಮಗ್ನರಾಗಿದ್ದರು. ಇನ್ನೂ ಕೆಲವು ರಾಜರು, ಧರ್ಮರಾಜನ ಮೂಲಕವಾಗಿ ಶ್ರೀಕೃಷ್ಣನ ದರ್ಶನವನ್ನು ಮಾಡಿ ಆನಂದಿತರಾದರು. ಆಗ ಬಲರಾಮಕೃಷ್ಣರಿಬ್ಬರೂ ತನ್ನನ್ನು ನೋಡುವುದಕ್ಕಾಗಿ ಬಂದ ರಾಜರೆಲ್ಲರನ್ನೂ ಯಥೋಚಿತವಾಗಿ ಗೌರವಿಸಿದರು. ಆಗ ಆ ರಾಜರೆಲ್ಲರೂ, ಶ್ರೀ ಕೃಷ್ಣನ ಆಶ್ರಯದಲ್ಲಿರುವ ವೃಷ್ಣಿಗಳನ್ನು ನೋಡಿ, ಅವರ ಭಾಗ್ಯವನ್ನು ಕೊಂಡಾಡುತ್ತ ಹೀಗೆಂದು ಹೇಳುವರು. “ಓ ಭೂಪತೀ ! ಉಗ್ರಸೇನಾ! ಈ ಮನುಷ್ಯಲೋಕದಲ್ಲಿ ನಿಮ್ಮ ಜನ್ಮವೇ ಸಾರ್ಥಕವು!ಏಕೆಂದರೆ, ಮಹಾಯೋಗಿಗಳಿಗೂ ಗೋಚರನಲ್ಲದ ಶ್ರೀಕೃಷ್ಣನು,ಯಾವಾಗಲೂ ನಿಮ್ಮ ಕಣ್ಣಮುಂದೆ ನಿಂತಿರುವನು. ವೇದಾಂತಗೋಚರವಾದ ಯಾವನ ಕೀರ್ತಿಯೂ, ಯಾವನ ಪಾದತೀರ್ಥವಾದ ಗಂಗಾನದಿಯೂ, ಯಾವನ ವಾಕ್ಯರೂಪಗಳಾದ ಕಾವ್ಯಪುರಾಣಾದಿಗಳೂ, ಶಾಸನರೂಪವಾದ ವೇದವೂ, ಈ ಜಗತ್ತೆಲ್ಲವನ್ನೂ ಪಾವನಮಾಡುತ್ತಿರುವುವೊ, ಈ ಭೂಮಿಗೆ ದುಷ್ಕಾಲವಶದಿಂದ ತನ್ನ ಸಹಜವಾದ ಮಹಿಮೆಯು ಕೆಟ್ಟುಹೋಗಿದ್ದರೂ, ಯಾವನ ಪಾದಸ್ಪರ್ಶಬಲದಿಂದ ತಿರುಗಿ ಅದು ತನ್ನ ಮಹತ್ವವನ್ನು ಹೊಂದಿ. ನಮಗೆ ಸರ್ವಾಭೀಷ್ಟಗಳನ್ನೂ ಕೊಡುತ್ತಿರುವುದೋ, ಅಂತಹ ಪರಮಾತ್ಮನಾದ ಶ್ರೀ ಕೃಷ್ಣನೊಡನೆ ನಿಮಗೆ ನಿತ್ಯಸಹವಾಸವಿರುವುದಲ್ಲವೆ? ಮತ್ತು

ಆಶ್ರೀ ಕೃಷ್ಣನ ದರ್ಶನದಿಂದಲೂ, ಆತನ ಅಂಗಸ್ಪರ್ಶದಿಂದಲೂ, ಆಗಾಗ ಆತನೊಡನೆ ಸಂಭಾಷಣದಿಂದಲೂ, ಆಗಾಗ ಅವನನ್ನು ಹಿಂಬಾಲಿಸುವುದರಿಂದಲೂ, ಅವನೊಡನೆ ಶಯನಾಸನಭೋಜನಾದಿಗಳಿಂದಲೂ, ವಿವಾಹಸಂಬಂಧದಿಂದಲೂ, ಕುಲಗೋತ್ರಸಂಬಂಧದಿಂದಲೂ ನೀವು ಧನ್ಯರಾಗಿರುವಿರಿ? ಅಷ್ಟೇಕೆ? ಆ ಭಗವಂತನು ಸಾಕ್ಷಾತ್ತಾಗಿ ನಿಮ್ಮ ಮನೆಯಲ್ಲಿಯೇ ಅವತರಿಸಿರತಕ್ಕವನು ನೀವು ಪ್ರವೃತ್ತಿಮಾರ್ಗದಲ್ಲಿ ವರ್ತಿಸುತ್ತಿದ್ದರೂ, ಆ ಭಗವಂತನ ಸಂಬಂಧದಿಂದ ಸ್ವರ್ಗಾಪವರ್ಗಗಳಲ್ಲಿಯೂ ನಿಮಗೆ ಆಸೆಯುಂಟಾಗದು ಈ ವಿಧವಾದ ನಿಮ್ಮ ಜನ್ಮವಲ್ಲವೇ ಲೋಕದಲ್ಲಿ ಉತ್ತಮಜನ್ಮವೆನಿಸುವುದು" ಎಂದು ಸ್ತೋತ್ರಮಾಡುತಿದ್ದರು ಓ! ಪರೀಕ್ಷಿದ್ರಾಜಾ! ಯಾದವರೆಲ್ಲರೂ ಕೃಷ್ಣನೊಡನೆ ಕುರುಕ್ಷೇತ್ರಕ್ಕೆ ಹೋಗಿರುವ ಸಂಗತಿಯನ್ನು ತಿಳಿದೇ ನಂದಗೋಪನೂ, ಅವರನ್ನು ನೋಡುವುದಕ್ಕಾಗಿ ತನ್ನ ಕಡೆಯ ಕೆಲವು ಗೋಪಾಲಕರನ್ನು ಕರೆದುಕೊಂಡು, ಅಲ್ಲಿಗೆ ಹೊರಟುಬಂದಿದ್ದನು ಆಗ ವೃಷ್ಣಿಗಳೆಲ್ಲರೂ ಬಹುಕಾಲದಿಂದ ಕಾಣದಿದ್ದ ಆ ನಂದನನ್ನು ಕಂಡೊಡನೆ, ಹೋಗಿದ್ದ ಪ್ರಾಣವನ್ನು ತಿರುಗಿ ಪಡೆದಷ್ಟು ಸಂತೋಷದಿಂದ, ಇದಿರೆದ್ದು ಬಂದು, ಆತನನ್ನಾಲಿಂಗಿಸಿಕೊಂಡರು. ವಸುದೇವನೂಕೂಡ ಪರಮಪ್ರೇಮದಿಂದ ಅವರೆಲ್ಲರನ್ನೂ ಆಲಿಂಗಿಸಿಕೊಂಡನು ಅಲ್ಲಿ ಬಲರಾಮಕೃಷ್ಣರನ್ನು ಕಂಡೊಡನೆ, ನಂದನಿಗೆ ಹಿಂದೆ ಕಂಸನಿಂದ ಅವರಿಗುಂಟಾದ ಕಷ್ಟಗಳೂ, ಅವರನ್ನು ಗೋಕುಲದಲ್ಲಿ ಬಚ್ಚಿಟ್ಟಿದ್ದುದೂ, ಇವೇ ಮೊದಲಾದ ಪೂರ್ವವೃತ್ತಾಂತಗಳೆಲ್ಲವೂ ನೆನಪಿಗೆ ಬಂದುವು ರಾಮಕೃಷ್ಣರಿಬ್ಬರೂ ಮುಂದೆ ಬಂದು, ತಂದೆತಾಯಿಗಳಿಗೆ ನಮಸ್ಕರಿಸಿ ಅವರನ್ನಾಲಿಂಗಿಸಿಕೊಂಡರು ತಂದೆತಾಯಿಗಳನ್ನು ನೋಡಿದ ಸಂತೋಷದಿಂದ ಅವರ ಕಣ್ಣುಗಳಲ್ಲಿ ಆನಂದಬಾಷ್ಪವು ಉಕ್ಕಿಬರುತಿತ್ತು. ಗದ್ಗದಸ್ವರದಿಂದ ಸ್ಪಷ್ಟವಾಗಿ ಮಾತಾಡಲಾರದೆ,ಸುಮ್ಮನೆ ಆನಂದಪರವಶರಾಗಿ ನಿಂತಿದ್ದರು ಆಗ ನಂದಯಶೋದೆಯರಿಬ್ಬರೂ, ಆಮಕ್ಕಳನ್ನು ಕರೆದು, ತೊಡೆಯಮೇಲೆ ಕುಳ್ಳಿರಿಸಿಕೊಂಡು, ಆ ಆನಂದದಿಂದ ಹಿಂದಿನ ದುಃಖವನ್ನೆಲ್ಲಾ ಮರೆತರು. ಈ ಸಮಯಕ್ಕೆ ಸರಿಯಾಗಿ, ಬಲರಾಮಕೃಷ್ಣರಿಗೆ ಹೆತ್ತ ತಾಯಿಯರಾದ

ರೋಹಿಣೀದೇವಕಿಯರೂಕೂಡ, ಆ ಯಶೋದೆಯನ್ನು ಪ್ರೇಮದಿಂದಾಲಿಂಗಿಸಿ, ಹಿಂದೆ ಅವಳು ತಮಗೆ ಮಾಡಿದ ಉಪಕಾರವನ್ನು ಸ್ಮರಿಸಿಕೊಂಡು ಪ್ರೇಮಬಾಷ್ಪವನ್ನು ಸುರಿಸುತ್ತ, ಗದ್ಗದಸ್ವರದಿಂದ ಹೀಗೆಂದು ಹೇಳುವರು. “ಓ! ವ್ರಜೇಶ್ವರಿ! ನೀನೂ, ನಿನ್ನ ಪತಿಯಾದ ನಂದಗೋಪನೂ, ನಮ್ಮಲ್ಲಿ ತೋರಿಸಿದ ಪ್ರೇಮವನ್ನು ಎಂದಿಗೆತಾನೇ ಮರೆಯುವೆವು! ಆ ವಿಧವಾದ ಉಪಕಾರವನ್ನು ಈ ದೇಹವಿರುವವರೆಗೂ ಮರೆಯಲಾರೆವು! ನಿನ್ನಿಂದ ನಾವು ಪಡೆದಉಪಕಾರಕ್ಕೆ, ನಿಮಗೆ ಮಹೇಂದ್ರನ ಐಶ್ವರ್ಯವನ್ನು ಕೊಟ್ಟರೂ ಸಾಟಿಯಾಗಲಾರದು ಈ ಮಕ್ಕಳಿಬ್ಬರೂ ತಮಗೆ ಹೆತ್ತ ತಾಯಿತಂದೆಗಳಾರೆಂಬುದನ್ನೇ ತಿಳಿಯಲಾರದಷ್ಟು ಶೈಶವಾವಸ್ಥೆಯಲ್ಲಿದ್ದಾಗ,ನಿಮ್ಮ ಕೈಯಲ್ಲಿಬಿದ್ದು ಸರ್ವವಿಧದಿಂದಲೂ ನಿಮ್ಮಿಂದ ಪೋಷಿಸಲ್ಪಟ್ಟರು ಅವರಿಗೆ ನಾಮಕರಣಾದಿಸಂಸ್ಕಾರಗಳೂ ನಿಮ್ಮಿಂದಲೇ ನಡೆದುವು ಇವರು ಇಷ್ಟುಪರೋವೃದ್ಧಿಗೆ ಬಂದುದೂ ನಿಮ್ಮಿಂದಲೇ! ರೆಪ್ಪೆಗಳು ಕಣ್ಣನ್ನು ಹೇಗೋಹಾಗೆ, ನೀವಿಬ್ಬರೂಇವರನ್ನು ಎಷ್ಟೋ ಜಾಗರೂಕತೆಯಿಂದ ಕಾಪಾಡುತ್ತಬಂದಿರಿ! ಇವರಿಬ್ಬರೂ ನಿಮ್ಮಿಂದ ರಕ್ಷಿತರಾಗಿ ಯಾವಭಯವನ್ನೂ ಕಾಣದೆ,ನಿಮ್ಮಮನೆಯಲ್ಲಿಬೆಳೆದು ಮುಂದಕ್ಕೆ ಬಂದರು ಆದರೆ ಈವಿಷಯದಲ್ಲಿ ನಾವು ನಿಮ್ಮನ್ನು ಹೊಸದಾಗಿ ಸ್ತೋತ್ರಮಾಡಬೇಕಾದುದೇನೂ ಇಲ್ಲ, ನಿಮ್ಮಂತಹ ಸಾತ್ವಿಕಸ್ವಭಾವವುಳ್ಳವರಿಗೆ, ತನ್ನವರೆಂದೂ, ಇತರರೆಂದೂ ಭೇದಬುದ್ಧಿಯಿಲ್ಲದಿರುವುದು ಸಹಜವೇ! ಆದುದರಿಂದ,ಕಂಡವರ ಮಕ್ಕಳನ್ನು ತಮ್ಮಮಕ್ಕಳಂತೆಯೇ ನೋಡುತ್ತಿದ್ದುದು, ನಿಮ್ಮ ವಿಷಯದಲ್ಲಿ ಏನೂ ವಿಶೇಷವಲ್ಲ.” ಎಂದರು ಓ! ಪರೀಕ್ಷಿದ್ರಾಜಾ! ಹೀಗೆಯೇ ನಂದನೊಡನೆ ಬಂದಿದ್ದ ಗೋಪಿಯರೂಕೂಡ, ತಮಗೆ ಬಹುಕಾಲದಿಂದ ಕಾಣದಿದ್ದ ಕೃಷ್ಣನನ್ನು ನಟ್ಟದೃಷ್ಟಿಯಿಂದ ನೋಡುತ್ತ, ಆ ಕೃಷ್ಣದರ್ಶನಕ್ಕೆ ಆಗಾಗ ವಿಘಾತವನ್ನುಂಟುಮಾಡುವ ತಮ್ಮ ಎವೆಯಾಟವನ್ನು ನಿಂದಿಸುತ್ತ, ನೇತ್ರರಂಧ್ರಗಳ ಮೂಲಕವಾಗಿ ಆತನ ಮೂರ್ತಿಯನ್ನು ಹೃದಯದಲ್ಲಿಟ್ಟುಕೊಂಡು,ಮನಸ್ಸಿನಿಂದಲೇ ಆಲಿಂಗಿಸಿಕೊಂಡರು. ಆತನ ಸಂತತಧ್ಯಾನದಿಂದ, ಯೋಗಿಗಳಿಗೂ ದುರ್ಲಭವಾದ ತನ್ಮಯತ್ವವನ್ನು ಹೊಂದಿದಂತಾದರು ಹೀಗೆ ಗೋಪಿಯ

ರು ತನ್ನನ್ನೇ ಏಕಾಗ್ರಮನಸ್ಸಿನಿಂದ ಧ್ಯಾನಿಸುತ್ತಿರುವುದನ್ನು ನೋಡಿ ಕೃಷ್ಣನು,ಅವರಲ್ಲಿ ಒಬ್ಬೊಬ್ಬರೊಡನೆಯೂ ಏಕಾಂತವಾಗಿ ಕಲೆತು,ಕುಶಲ ಪ್ರಶ್ನಪೂರ್ವಕವಾಗಿ ಅವರನ್ನು ಪ್ರೇಮದಿಂದಾಲಿಂಗಿಸಿಕೊಂಡು, ಕೊನೆಗೆ ಅವರೆಲ್ಲರನ್ನೂ ನೋಡಿ ಮಂದಹಾಸಪೂರ್ವಕವಾಗಿ ಹೀಗೆಂದು ಹೇಳುವನು. "ಓ ಸಖೀಮಣಿಯರೆ! ನಾವು ಸಾಧುಜನಗಳ ಕಾರ್ಯಾರ್ಥವಾಗಿ ನಿಮ್ಮನ್ನು ಬಿಟ್ಟು ಹೋಗಿ ಬಹಳದಿವಸಗಳಾದುವು ನೀವು ನಮ್ಮನ್ನು ಮರೆತಿಲ್ಲವಷ್ಟೆ? ಲೋಕಕಂಟಕರಾದ ಶತ್ರುಗಳನ್ನು ನಿಗ್ರಹಿಸುವುದಕ್ಕಾಗಿ ನಾವು ಅಲ್ಲಿ ನಿಂತುಬಿಡಬೇಕಾಯಿತೇಹೊರತು, ನಿಮ್ಮಲ್ಲಿ ಅಲಕ್ಷ್ಯಭಾವದಿಂದಲ್ಲ! ನೀವು ನಮ್ಮನ್ನು ಕೃತಘ್ನರೆಂದು ಶಂಕಿಸಬಾರದು. ಭಗವಂತನು ತನ್ನ ಇಚ್ಛಾನುಸಾರವಾಗಿ ಪ್ರಾಣಿಗಳಿಗೆ ಸಂಯೋಗವಿಯೋಗಗಳನ್ನು ಉಂಟುಮಾಡುವನು. ಆದುದರಿಂದ, ನಮ್ಮನಮ್ಮ ಕೂಡಾಟಗಳಿಗೂ, ಅಗಲಿಕೆಗೂ ಆ ದೈವಸಂಕಲ್ಪವೇ ಮುಖ್ಯಕಾರಣವು. ಗಾಳಿಯು ಆಕಾಶದಲ್ಲಿರುವ ಮೇಘಗಳನ್ನೂ, ಹುಲ್ಲುಕಡ್ಡಿಗಳನ್ನೂ, ದೂಳಿಯನ್ನೂ,ನೆಲದ ರೇಣುಗಳನ್ನೂ, ಆಗಾಗ ತನ್ನವೇಗದಿಂದ ಒಟ್ಟುಗೂಡಿಸಿ, ತಿರುಗಿ ಕದಲಿಸಿಬಿಡುವಂತೆಯೇ, ಸೃಷ್ಟಿಕರ್ತನಾದ ಭಗವಂತನೂಕೂಡ, ಭೂತಗಳನ್ನು ಸೇರಿಸುತ್ತಲೂ ಅಗಲಿಸುತ್ತಲೂ ಇರುವನು. ಈ ವಿಷಯದಲ್ಲಿ ನಮ್ಮ ಯತ್ನವೇನಿದೆ? ಓ! ಸಖಿಯರೇ! ಈವಿಧವಾದ ಸಂಯೋಗ ವಿಯೋಗಗಳಿಂದುಂಟಾಗುವ ಸುಖದುಃಖಗಳನ್ನು ನೀಗಿಸಿ, ಮುಕ್ತಿಯನ್ನುಂಟುಮಾಡುವುದಕ್ಕೆ, ನನ್ನಲ್ಲಿ ದೃಢವಾದ ಭಕ್ತಿಯೊಂದೇ ಮುಖ್ಯಸಾಧಕವು ದೈವಾಧೀನದಿಂದ ನಿಮಗೆ ಆವಿಧವಾದ ಭಕ್ತಿಯೂ ಹುಟ್ಟಿರುವುದು.ಈ ಭಕ್ತಿಯೇ ಮುಂದೆ ನಿಮಗೆ ನನ್ನೊಡನೆ ನಿರಂತರವಾದ ಸಂಬಂಧವನ್ನುಂಟುಮಾಡುವುದು ಮುಖ್ಯವಾದ ತತ್ವವನ್ನು ತಿಳಿಸುವೆನು ಕೇಳಿರಿ!ಸಮಸ್ತಭೂತಗಳ ಆದಿಯೂ ಅಂತವೂ ನಾನೇ!ನಾನು ಎಲ್ಲಾಭೂತಗಳ ಒಳಗೂ, ಹೊರಗೂ ವ್ಯಾಪಿಸಿರತಕ್ಕವನು ಪೃಥಿವಿ, ಅಪ್ಪು, ತೇಜಸ್ಸು, ವಾಯು, ಆಕಾಶವೆಂಬ ಪಂಚಭೂತಗಳೂ, ತಮ್ಮ ವಿಕಾರರೂಪವಾದ ದೇವಮನುಷ್ಯಾದಿಶರೀರಗಳಲ್ಲಿ ಒಳಗೂ, ಹೊರಗೂ ವ್ಯಾಪಿಸಿರುವಂತೆಯೇ, ನಾನೂ, ಸಮಸ್ತಪ್ರಪಂಚದ ಒಳಗೂ, ಹೊರಗೂ

ವ್ಯಾಪಿಸಿರುವೆನು. ಆಕಾಶಾದಿಮಹಾಭೂತಗಳೂ, ಅವುಗಳ ಕಾರ್ಯರೂಪ ವಾದ ಶರೀರವೂ, ಜೀವಾತ್ಮನೂ, ನನ್ನಿಂದ ವ್ಯಾಪ್ತವಾಗಿರುವುವು. ಆದುದ ರಿಂದ ಈ ಸಮಸ್ತಚೇತನಾಚೇತನಗಳೂ ನನ್ನ ಸ್ವರೂಪವೇ! ನಾನು ಹೀಗೆ ಸರ್ವವ್ಯಾಪಿಯಾಗಿದ್ದರೂ,ಅವುಗಳಿಗಿಂತ ಬೇರೆಯಾಗಿ,ಅವುಗಳ ದೋ ಷಕ್ಕೂ ಈಡಾಗದಿರುವುದರಿಂದ, ಪರನೆಂದೂ, ಅಕ್ಷರನೆಂದೂ ಹೇಳಿಸಿ ಕೊಳ್ಳುವೆನು" ಎಂದನು. ಓ! ಪರೀಕ್ಷಿದ್ರಾಜಾ! ಹೀಗೆ ಕೃಷ್ಣನು,ಅಧ್ಯಾತ್ಮ ವಿದ್ಯೆಯನ್ನು ಪದೇಶಿಸಿದಮೇಲೆ,ಗೋಪಿಯರೆಲ್ಲರೂ, ಆ. ಉಪದೇಶವನ್ನೇ ಹೃ ದ್ಗತವಾಗಿ ಮನನಮಾಡಿಕೊಂಡಿದ್ದರು ಇದರಿಂದ ಅವರು ಗೂಡಿನಂತೆ ಜೀವಾತ್ಮನನ್ನು ಮುಚ್ಚಿಟ್ಟುಕೊಂಡಿರುವ ಕರ್ಮಮೂಲಕವಾದ ಅಜ್ಞಾನವನ್ನು ನೀಗಿ,ಆ ಕೃಷ್ಣನ ವಿಷಯವಾದ ಚಿಂತೆಯಲ್ಲಿಯೇ ಇದ್ದರು ಕೊನೆಗೆ ಅವರೆಲ್ಲರೂ ಕೃಷ್ಣನನ್ನು ನೋಡಿ, "ಓ! ಪದ್ಮನಾಭಾ! ಮಹಾ ಜ್ಞಾನಿಗಳಾದ ಯೋಗೀಶ್ವರರಿಗೂಕೂಡ, ಸಾಕ್ಷಾತ್ತಾಗಿ ಕಣ್ಣಿಗೆ ಗೋಚರಿ ಸದೆ, ಕೇವಲಧ್ಯಾನಮಾತ್ರವಿಷಯವಾಗಿಯೂ, ಸಂಸಾರಸಾಗರದಲ್ಲಿ ಬಿದ್ದವರನ್ನು ಉದ್ಧರಿಸತಕ್ಕುದಾಗಿಯೂ ಇರುವ ನಿನ್ನಪಾದಾರವಿಂದವು ಈ ಪ್ರಾಕೃತದೇಹದಲ್ಲಿರುವಾಗಲೂ ನಮ್ಮ ಮನಸ್ಸಿಗೆ ಯಾವಾಗಲೂ ಸಾಕ್ಷಾತ್ತಾಗಿ ಗೋಚರಿಸುವಂತೆ ಅನುಗ್ರಹಿಸಬೇಕು. ಇಷ್ಟೇ ನಮ್ಮ ಕೋ ರಿಕೆ" ಎಂದರು ಇದು ಎಂಬತ್ತೆರಡನೆಯ ಅಧ್ಯಾಯವು.

---

{ಕೃಷ್ಣಪತ್ನಿಯರು ದ್ರೌಪದಿಗೆ ತಮ್ಮತಮ್ಮ ವಿವಾಹ ಕ್ರಮಗಳನ್ನು ತಿಳಿಸಿದುದು}

ಹೀಗೆ ಕೃಷ್ಣನು ಗೋಪಿಯರಿಗೆ ತನ್ನ ಪಾದಸಂಬಂಧವನ್ನನುಗ್ರ ಹಿಸಿ, ಆಮೇಲೆ ಧರ್ಮರಾಜನೇ ಮೊದಲಾದ ತನ್ನ ಬಂಧುಮಿತ್ರರೆಲ್ಲರನ್ನೂ ಕುಶಲಪ್ರಶ್ನಾದಿಗಳಿಂದ ಮನ್ನಿಸಿದನು. ಲೋಕನಾಥನಾದ ಕೃಷ್ಣ ನಿಂದ ಸತ್ಕೃತರಾದ ಆ ರಾಜರೆಲ್ಲರೂ, ಆ ಭಗವಂತನ ಪಾದಾರವಿಂದದರ್ಶ ನದಿಂದ ಪಾಪಮುಕ್ತರಾಗಿ, ಪರಮಸಂತೋಷದಿಂದ ಆತನನ್ನು ಕುರಿತು "ಓ ಪ್ರಭೂ! ನಮ್ಮನ್ನು ಕುಶಲಪ್ರಶ್ನಮಾಡಿದೆಯಲ್ಲವೆ? ಅಮೃತದಂತೆ ಮಧು

ರವಾಗಿಯೂ, ಮಹಾತ್ಮರ ಪರಿಶುದ್ಧವಾದ ಮುಖಾರವಿಂದದಿಂದ ಸ್ರವಿಸಿ ದುದಾಗಿಯೂ, ಜೀವನಿಗೆ ಪ್ರಕೃತಿ (ದೇಹ) ಸಂಬಂಧಕಾರಣವಾದ ಅನಾದಿ ಮಾಯೆಯನ್ನು ನೀಗಿಸತಕ್ಕುದಾಗಿಯೂ ಇರುವ ನಿನ್ನ ಕಥಾರಸವನ್ನು, ಕರ್ಣಪುಟದಿಂದ ಪಾನಮಾಡತಕ್ಕವರಿಗೆ ಅಶುಭವೆಲ್ಲಿಯದು? ದೇವಾ! ನಿನ್ನ ನಿಜಸ್ವರೂಪವಾದರೋ ಆನಂದರಸಪ್ರವಾಹರೂಪವಾಗಿ, ಅಖಂಡ ವಾಗಿ, ಜ್ಞಾನಮಯವಾಗಿರುವುದು. ಪ್ರಪಂಚದ ಸೃಷ್ಟಿಸ್ಥಿತಿಸಂಹಾ ರಗಳಿಗೆ ನೀನು ನಿರ್ವಾಹಕನೇಹೊರತು, ಆ ವಿಕಾರಗಳು ನಿನ್ನನ್ನು ಮುಟ್ಟಲಾ ರವು ಇಂತಹ ಅಪ್ರಾಕೃತಸ್ವರೂಪವನ್ನೂ ಬಿಟ್ಟು, ನೀನು ಸ್ವೇಚ್ಛೆಯಿಂದ ಈ ಮಾನುಷರೂಪವನ್ನು ಪರಿಗ್ರಹಿಸಿರುವುದು, ಕಾಲಗತಿಯಿಂದ ಕೆಟ್ಟು ಹೋದ ವೇದಧರ್ಮಗಳನ್ನು ರಕ್ಷಿಸುವುದಕ್ಕೇಹೊರತು ಬೇರೆಯಲ್ಲ. ಹೀಗೆ ಆಶ್ಚರ್ಯಕರವಾದ ಯೋಗಮಾಯಾಶಕ್ತಿಯಿಂದ ಈ ದಿವ್ಯನಿಗ್ರಹವನ್ನು ತಾಳಿ, ಪರಮಹಂಸರಾದ ಯೋಗಿಗಳಿಗೂ ಗತಿಯೆನಿಸಿಕೊಂಡ ನಿನ್ನನ್ನು ವಂ ದಿಸುವೆವು" ಎಂದು ಸ್ತೋತ್ರಮಾಡಿದರು ಹೀಗೆಯೇ ಕೌರವಯಾದವ ಸ್ತ್ರೀಯರೂಕೂಡ, ಅಲ್ಲಲ್ಲಿ ಗುಂಪುಗೂಡಿ, ಪುಣ್ಯಶ್ಲೋಕಶಿಖಾಮಣಿಯಾದ ಆ ಶ್ರೀಕೃಷ್ಣನ ಗುಣಗಳನ್ನೂ, ಚರಿತ್ರಗಳನ್ನೂ ಕೊಂಡಾಡುತ್ತಿದ್ದರು. ಹೀಗೆ ಸ್ತ್ರೀಯರೆಲ್ಲರೂ ಸೇರಿ, ಕೃಷ್ಣಕಥಾಲಾಪಗಳನ್ನು ಮಾಡುತ್ತಿರುವಾಗ ದ್ರೌಪದಿಯು ಕೃಷ್ಣನ ಭಾರ್ಯೆಯರನ್ನು ಕುರಿತು ಹೀಗೆಂದು ಪ್ರಶ್ನೆಮಾಡು ವಳು. 'ಓ ರುಕ್ಮಿಣೀ! ಓ ಭದ್ರೇ! ಜಾಂಬವತೀ! ಸತ್ಯಭಾಮೇ! ಕಾ ಳಿಂದೀ! ಮಿತ್ರವಿಂದೇ! ರೋಹಿಣೀ! ಲಕ್ಷ್ಮಣೇ! ಓ ಕೃಷ್ಣಪತ್ನಿಯರೆ! ನಿಜಮಾಯೆಯಿಂದ ಲೀಲಾಮಾನುಷವಿಗ್ರಹವನ್ನು ಧರಿಸಿದ ಭಗವಂತನು, ನಿಮ್ಮೆಲ್ಲರನ್ನೂ ಯಾವಯಾವ ವಿಧದಿಂದ ವಿವಾಹಮಾಡಿಕೊಂಡನೋ, ಆ ವೃತ್ತಾಂತವನ್ನು ಕೇಳಬೇಕೆಂದು ನನಗೆ ಬಹಳ ಕುತೂಹಲವಿರುವುದು. ನಿಮ್ಮನಿಮ್ಮ ವಿವಾಹಕ್ರಮವನ್ನು ನನಗೆ ತಿಳಿಸಬೇಕು" ಎಂದಳು.

ಆಗ ರುಕ್ಮಿಣಿಯು "ಅಮ್ಮಾ ದ್ರೌಪದಿ! ನನ್ನ ಸಂಗತಿಯನ್ನು ಕೇಳು! ಧನುರ್ಧಾರಿಗಳಾದ ಅನೇಕರಾಜರು ನನ್ನನ್ನು ಶಿಶುಪಾಲನಿಗೆ ಕೊಟ್ಟು ವಿವಾ ಹಮಾಡಬೇಕೆಂಬ ಹಟದಿಂದ ಕಾದಿದ್ದರು ಆದರೇನು? ಲೋಕದಲ್ಲಿ ದುರ್ಜ

ಯರೆನಿಸಿಕೊಂಡ ಮಹಾವೀರರಿಗೂ ಯಾವನ ಪಾದಧೂಳಿಯು ತಲೆಯಿಂದ ಧರಿಸತಕ್ಕದಾಗಿರುವುದೋ, ಅಂತಹ ಮಹಾತ್ಮನಾದ ಕೃಷ್ಣನು, ಮೇಕೆಗಳ ಗುಂಪಿನಲ್ಲಿರುವ ಆಹಾರವನ್ನು ಸಿಂಹವು ಎತ್ತಿಕೊಂಡು ಹೋಗುವಂತೆ, ಆ ರಾಜರ ಗುಂಪಿನಿಂದ ನನ್ನನ್ನು ಸಾಗಿಸಿ ಕರೆತಂದನು. ಅದರಿಂದ ನಾನು ಶ್ರೀಮಹಾಲಕ್ಷ್ಮಿಗೂ ವಿಹಾರಸ್ಥಾನವಾದ ಆ ಶ್ರೀಕೃಷ್ಣನ ಪಾದಶುಶ್ರೂಷೆಯನ್ನು ಮಾಡುವ ಭಾಗ್ಯಕ್ಕೆ ಪಾತ್ರಳಾದೆನು." ಎಂದಳು

ಆಮೇಲೆ ಸತ್ಯಭಾಮೆಯು "ಅಮ್ಮ ಪಾಂಚಾಲಿ! ನನ್ನ ತಂದೆಯಾದ ಸತ್ರಾಜಿತನಿಗೆ ಪ್ರಸೇನನೆಂಬ ತಮ್ಮನಿದ್ದನು. ಅವನು ಬೇಟೆಗೆ ಹೋದಾಗ ಒಂದಾನೊಂದು ಸಿಂಹದ ಬಾಯಿಗೆ ತುತ್ತಾದನು ಈ ನಿಜಸ್ಥಿತಿಯನ್ನು ತಿಳಿಯದ ನನ್ನ ತಂದೆಯು, ಶ್ರೀಕೃಷ್ಣನಮೇಲೆ ಇಲ್ಲದ ಅಪವಾದವನ್ನು ಹೊರಿಸಲು, ಆ ಅಪವಾದಪರಿಹಾರಾರ್ಥವಾಗಿ ಕೃಷ್ಣನೇ ಪ್ರಸೇನನನ್ನು ಹುಡುಕುತ್ತ ಕಾಡಿಗೆ ಹೊರಟು,ಅಲ್ಲಿ ಭಲ್ಲೂಕರಾಜನಾದ ಜಾಂಬವಂತನನ್ನು ಜಯಿಸಿ, ಅವನಲ್ಲಿದ್ದ ಸ್ಯಮಂತಕಮಣಿಯನ್ನು ತಂದು ನನ್ನತಂದೆಗೊಪ್ಪಿಸಿ, ಪ್ರಸೇನನು ಮೃತಿಹೊಂದಿದ ಕಾರಣವನ್ನು ಸ್ಪಷ್ಟಪಡಿಸಿದನು. ಆಗ ನನ್ನ ತಂದೆಯು ಕೃಷ್ಣನಮೇಲೆ ಅಪವಾದಹೊರಿಸಿದ ಅಪರಾಧಕ್ಷಾಪಣಕ್ಕಾಗಿ, ಆ ರತ್ನದೊಡನೆ ನನ್ನನ್ನೂ ಅತನಿಗೆ ಕೊಟ್ಟುಬಿಟ್ಟನು" ಎಂದಳು.

ಆಮೇಲೆ ಜಾಂಬವತಿಯು "ಅಮ್ಮ ಯಾಜ್ಞಸೇನಿ! ಈಗ ಸತ್ಯಭಾಮೆಯು ಹೇಳಿದ ಜಾಂಬವಂತನ ಮಗಳೇ ನಾನು!ನನ್ನ ತಂದೆಯು ಶ್ರೀರಾಮನಿಗೆ ಪರಮಭಕ್ತನೆಂಬುದನ್ನು ಬಲ್ಲೆಯಷ್ಟೆ? ಆದರೆ ನನ್ನ ತಂದೆಯು ಆ ಕೃಷ್ಣನೇ ತನಗೆ ಸ್ವಾಮಿಯೂ, ಕುಲದೈವವೂ ಆದ ಶ್ರೀರಾಮನ ಅವತಾರವೆಂಬುದನ್ನು ತಿಳಿಯದೆ, ಅವನೊಡನೆ ಇಪ್ಪತ್ತೇಳುದಿನಗಳವರೆಗೆ ಯುದ್ಧಮಾಡುತಿದ್ದನು ಕೊನೆಗ ಆ ಭಗವಂತನ ಅಸಾಧಾರಣಬಲವನ್ನು ನೋಡಿದಮೇಲೆ, ನನ್ನ ತಂದೆಗೆ, ಅವನೇ ತನ್ನ ಸ್ವಾಮಿಯಾದ ರಾಮನೆಂಬುದು ತಿಳಿಯಿತು ತಾನು ಸಿಂಹವನ್ನು ಕೊಂದು ತಂದಿದ್ದ ಸ್ಯಮಂತಕಮಣಿಯೊಡನೆ ನನ್ನನ್ನೂ ಆಭಗವಂತನ ಪಾದಗಳಿಗೆ ಒಪ್ಪಿಸಿಬಿಟ್ಟನು ಆಗಿನಿಂದ ನಾನು ಈ ಕೃಷ್ಣನ ದಾಸ್ಯವನ್ನು ಮಾಡುತ್ತಿರುವೆನು."! ಎಂದಳು.

ಆಮೇಲೆ ಕಾಳಿಂದಿಯು “ಅಮ್ಮ ದ್ರೌಪದಿ! ನಾನು ಆ ಭಗವಂತನ ಪಾದಸೇವೆಯನ್ನು ಪಡೆಯಬೇಕೆಂದೇ ತಪಸ್ಸುಮಾಡುತಿದ್ದೆನು ಸರ್ವಜ್ಞನಾದ ಕೃಷ್ಣನು ಇದನ್ನು ತಿಳಿದು, ತನ್ನ ಸ್ನೇಹಿತನಾದ ಅರ್ಜುನನೊಡನೆ ಯಾವುದೋ ಒಂದುನೆವದಿಂದ ತಾನೇ ನಾನಿದ್ದಲ್ಲಿಗೆ ಬಂದು, ನನ್ನನ್ನು ಕೈಹಿಡಿದನು. ಅದುಮೊದಲು ನಾನು ಆತನ ಮನೆಯನ್ನು ಗುಡಿಸಿ, ಸಾರಿಸಿ ಕೆಲಸಮಾಡುವ ದಾಸಿಯಾಗಿರುವೆನು?” ಎಂದಳು

ಆಮೇಲೆ ಭದ್ರೆಯು “ಅಮ್ಮ ಯಾಜ್ಞಸೇನಿ! ಕೇಳು! ನನ್ನ ಸ್ವಯಂವರಕಾಲದಲ್ಲಿ ಕೃಷ್ಣನು, ನನ್ನಮೇಲೆ ಕಣ್ಣಿಟ್ಟಿದ್ದ ಇತರ ರಾಜರನ್ನು ಜಯಿಸಿ, ನಾಯಿಗಳ ಗುಂಪಿನಲ್ಲಿರುವ ಆಹಾರವನ್ನು ಸಿಂಹವು ಹೇಗೋಹಾಗೆ, ಆ ರಾಜರ ಗುಂಪಿನಿಂದ ನನ್ನನ್ನು ಕರೆದುಕೊಂಡು ಹೋದನು ನನ್ನ ಸಹೋದರರೇ ಆವನಿಗೆ ವಿರೋಧಿಗಳಾಗಿ ನಿಂತಿದ್ದರು ಅವರನ್ನೂ ನಿಗ್ರಹಿಸಿ, ನನ್ನನ್ನು ದ್ವಾರಕೆಗೆ ಕರೆತಂದು ವಿವಾಹಮಾಡಿಕೊಂಡನು ಈಗ ನಾನು ಲಕ್ಷ್ಮಿಗೆ ನಿವಾಸಭೂತವಾದ ಆ ಮಹಾತ್ಮನ ಪಾದಗಳನ್ನು ತೊಳೆಯುವ ಕೆಲಸದಲ್ಲಿರುವೆನು. ನನಗೆ ಮುಂದಿನ ಜನ್ಮಗಳಲ್ಲಿಯೂ ಈ ವಿಧವಾದ ಸೇವೆಯೇ ಲಭಿಸುತ್ತಿರಲೆಂದು ಪ್ರಾರ್ಥಿಸುವೆನು” ಎಂದಳು.

ಆಮೇಲೆ ಸತ್ಯೆಯು “ಅಮ್ಮ ದ್ರೌಪದಿ! ನನ್ನ ತಂದೆಯು ನನ್ನ ಸ್ವಯಂವರದಲ್ಲಿ ರಾಜರ ಪರಾಕ್ರಮವನ್ನು ಪರೀಕ್ಷಿಸುವುದಕ್ಕಾಗಿ ಮಹಾಬಲವುಳ್ಳ ಮತ್ತು ತೀಕ್ಷ್ಣವಾದ ಕೊಂಬುಗಳುಳ್ಳ ಏಳು ವೃಷಭಗಳನ್ನು ಸಾಕಿದ್ದನು. ಇದನ್ನು ಕೇಳಿ ಕೃಷ್ಣನು, ಸಣ್ಣಮಕ್ಕಳು ಆಡಿನ ಮರಿಯನ್ನು ಹಿಡಿದು ಕಟ್ಟುವಂತೆ, ಆ ವೃಷಭಗಳನ್ನು ಲೀಲಾಮಾತ್ರದಿಂದ ಹಿಡಿದು ಬಂಧಿಸಿದನು. ಆಗ ಅನೇಕರಾಜರು ಅಸೂಯೆಯಿಂದ ಅವನನ್ನಿದಿರಿಸಿದರು ಕೃಷ್ಣನು ಅವರೆಲ್ಲರನ್ನೂ ಯುದ್ಧದಲ್ಲಿ ಜಯಿಸಿ, ಎಣೆಯಿಲ್ಲದ ತನ್ನ ವೀರ್ಯವನ್ನೇ ಕನ್ಯಾಶುಲ್ಕವನ್ನಾಗಿ ಮಾಡಿ,ಅನೇಕದಾಸಿಯರೊಡನೆಯೂ, ಚತುರಂಗಸೈನ್ಯದೊಡನೆಯೂ, ನನ್ನನ್ನೂ ದ್ವಾರಕೆಗೆ ಕರೆತಂದು ಮದಿವೆಯಾದನು. ಜನ್ಮಜನ್ಮಾಂತರಕ್ಕೂ ನನಗೆ ಆ ಮಹಾತ್ಮನ ದಾಸ್ಯವೇ ಲಭಿಸಲೆಂದು ಕೋರುವೆನು” ಎಂದಳು.

ಆಮೇಲೆ ಮಿತ್ರವಿಂದೆಯು "ಎಲೆ ಕೃಷ್ಣೆ! ಕೇಳು! ನನಗೆ ಮೊದಲಿಂದಲೂ ಆ ಕೃಷ್ಣನಲ್ಲಿಯೇ ಮೋಹವಿದ್ದಿತು. ಆ ಕೃಷ್ಣನು ನನ್ನ ತಂದೆಗೆ ಮಾವನ ಮಗನಾದುದರಿಂದ, ಅವನೊಡನೆ ನಮಗೆ ಬಂಧುತ್ವದ ಸಂಬಂಧವೂ ಉಂಟು ಇವೆಲ್ಲವನ್ನೂ ನೋಡಿ ನನ್ನ ತಂದೆಯು, ತಾನಾಗಿಯೇ ಕೃಷ್ಣನನ್ನು ಕರೆದು ನನ್ನನ್ನು ವಿವಾಹಮಾಡಿಕೊಟ್ಟನು. ಒಂದಕ್ಷೋಹಿಣೀಸೈನ್ಯವನ್ನೂ, ಅನೇಕದಾಸೀಜನರನ್ನೂ ಬಳುವಳಿಯಾಗಿಯೂ ಕಳುಹಿಸಿಕೊಟ್ಟನು ಪುಣ್ಯಪಾಪಕರ್ಮಗಳಿಂದ ಸಂಸಾರದಲ್ಲಿ ತೊಳಲುತ್ತಿರುವವರಿಗೆ ಆ ಸಂಸಾರಬಂಧವನ್ನು ನೀಗಿಸತಕ್ಕ ಆ ಶ್ರೀಕೃಷ್ಣನ ಪಾದಸೇವೆಯು ಜನ್ಮಜನ್ಮಾಂತರಗಳಲ್ಲಿಯೂ ನನಗೆ ಲಭಿಸುತ್ತಿರಲೆಂದು ನಾನು ಭಗವಂತನನ್ನು ಪ್ರಾರ್ಥಿಸುವೆನು" ಎಂದಳು.

ಆಮೇಲೆ ಲಕ್ಷ್ಮಣೆಯೆಂಬವಳು "ಅಮ್ಮ ಪಾಂಚಾಲಿ! ನಾನು ಆಗಾಗ ನಾರದನ ಮುಖದಿಂದ ಆ ಶ್ರೀಕೃಷ್ಣನ ಗುಣಕರ್ಮಗಳನ್ನು ಕೇಳುತ್ತಿದ್ದೆನು. ಆದರಿಂದ ನನ್ನ ಮನಸ್ಸು ಅವನಲ್ಲಿಯೇ ನೆಲೆಗೊಂಡಿತು. ಪದ್ಮಹಸ್ತೆಯಾದ ಸಾಕ್ಷಾತ್ ಲಕ್ಷ್ಮೀದೇವಿಯೂಕೂಡ, ಕ್ಷೀರಸಮುದ್ರದಿಂದ ಉದ್ಭವಿಸಿದೊಡನೆ,ಸಮಸ್ತಲೋಕಪಾಲಕರನ್ನೂ ಅನಾದರಿಸಿ,ಯಾವನನ್ನು ವರಿಸಿದಳೋ,ಅಂತಹ ಭಗವಂತನಲ್ಲಿ ನನಗೆ ಮೋಹವುಂಟಾಗುವುದೇನಾಶ್ಚರ್ಯವು!ನನ್ನ ತಂದೆಯಾದ ಬೃಹತ್ಸೇನನೆಂಬವನಿಗೆ,ನನ್ನಲ್ಲಿ ಬಹಳ ಪ್ರೀತಿಯಿದ್ದುದರಿಂದ, ನನ್ನ ಉದ್ದೇಶವನ್ನು ತಿಳಿದು,ನನ್ನನ್ನು ಕೃಷ್ಣನಿಗೆ ವಿವಾಹಮಾಡುವುದಕ್ಕಾಗಿ ಒಂದುಪಾಯವನ್ನು ಏರ್ಪಡಿಸಿದ್ದನು ಏನೆಂದು ಕೇಳುವೆಯಾ? ನಿನ್ನ ತಂದೆಯು ನಿನ್ನನ್ನು ಅರ್ಜುನನಿಗೇ ಕೊಡಬೇಕೆಂಬ ಉದ್ದೇಶದಿಂದ ಮತ್ಸ್ಯಯಂತ್ರವನ್ನು ಏರ್ಪಡಿಸಿದ್ದನಲ್ಲವೆ? ಅದರಂತೆ ಈಗ ನನ್ನ ತಂದೆಯೂ ಒಂದು ಮತ್ಸ್ಯಯಂತ್ರವನ್ನಿಟ್ಟಿದ್ದನು ಆದರೆ ಈಗಿನ ಮತ್ಸ್ಯಯಂತ್ರದಲ್ಲಿ ಒಂದು ವಿಶೇಷವುಂಟು. ಆಗಿನ ಮತ್ಸ್ಯಯಂತ್ರವನ್ನು ಮೇಲೆನೋಡಿ !ಹೊಡೆಯಬಹುದಾಗಿದ್ದಿತು. ಈಗಿನ ಮತ್ಸ್ಯಯಂತ್ರವನ್ನಾದರೋ, ಮೇಲೆ ನೋಡಿ ಹೊಡೆಯುವುದಕ್ಕಿಲ್ಲದೆ. ಕೆಳಗೆ ನೀರಿನಲ್ಲಿ ಅದರ ಪ್ರತಿಬಿಂಬವನ್ನು ನೋಡಿ ಹೊಡೆಯಬೇಕಾಗಿದ್ದಿತು.

ಹೀಗೆ ನನ್ನ ತಂದೆಯು ಮತ್ಸ್ಯಯಂತ್ರಭೇದನವನ್ನೇ ಕನ್ಯಾಶುಲ್ಕವಾಗಿ ಟ್ಟಿರುವುದನ್ನು ಕೇಳಿ, ನಾನಾಕಡೆಯಿಂದ ಅನೇಕಶಸ್ತ್ರಾಸ್ತ್ರಗಳ ತತ್ವವನ್ನು ತಿಳಿದ ರಾಜರೆಲ್ಲರೂ, ತಮ್ಮ ತಮ್ಮ ಧನುರ್ವಿದ್ಯಾಚಾರ್ಯರೊಡನೆ ಅಲ್ಲಿಗೆ ಬಂದು ಸೇರಿದರು ನನ್ನ ತಂದೆಯು,ಅವರವರ ವಯಸ್ಸಿಗೂ,ಪರಾಕ್ರಮಕ್ಕೂ ತಕ್ಕಂತೆ ಅವರೆಲ್ಲರನ್ನೂ ಯಥೋಚಿತವಾಗಿ ಸತ್ಕರಿಸಿ ಸಭೆಗೂಡಿಸಿದನು. ಎಲ್ಲರಿಗೂ ನನ್ನಮೇಲೆ ಕಣ್ಣಿದ್ದುದರಿಂದ, ಒಬ್ಬೊಬ್ಬರೂ ಆ ಯಂತ್ರಭೇದ ನಕ್ಕಾಗಿ ಪ್ರಯತ್ನಿಸುತ್ತಿದ್ದರು. ಆದರೇನು? ಕೆಲವರು ಆ ಯಂತ್ರಭೇದನ ಕ್ಕಾಗಿ ಇಟ್ಟಿದ್ದ ಬಿಲ್ಲನ್ನು ಕೈಗೆತ್ತಿಕೊಂಡು, ಅದರ ನಾಣನ್ನೆಳೆದು ಕಟ್ಟುವು ದಕ್ಕೆ ಸಾಧ್ಯವಿಲ್ಲದೆ ಬಿಟ್ಟುಹೋದರು. ಮತ್ತೆ ಕೆಲವರು ಆ ಬಿಲ್ಲಿನ ಕೊನೆಯವರೆಗೆ ಪ್ರಯತ್ನಪೂರ್ವಕವಾಗಿ ನಾಣನ್ನೆಳೆದು, ಅದನ್ನು ತಗುಲಿಸು ವಷ್ಟರಲ್ಲಿ, ಅದು ಹಿಡಿತಪ್ಪಿ, ಚಿಮ್ಮಿ ಮುಖಕ್ಕೆ ಬಡಿದುದರಿಂದ ಹಾಗೆಯೇ ಮೂರ್ಛಿತರಾಗಿ ಬಿದ್ದರು ಅದರಿಂದಾಚೆಗೆ ಜರಾಸಂಧ, ಅಂಭ ಷ್ಟ, ಶಿಶುಪಾಲ, ಭೀಮ, ಕರ್ಣ, ದುರ್ಯೋಧನ, ಮೊದಲಾದ ಕೆಲವು ಮಹಾವೀರರು, ತಮ್ಮ ಅಸಾಧಾರಣಶಕ್ತಿಯಿಂದ ಅದಕ್ಕೆ ನಾಣ ನ್ನೂ ಎಳೆದುಕಟ್ಟಿ, ಬಾಣಪ್ರಯೋಗವನ್ನು ಮಾಡುವಾಗ, ಆ ಮತ್ಸ್ಯದ ಗುರಿಯನ್ನು ಕಂಡುಹಿಡಿಯಲಾರದೆ ಹೋದರು ಕೊನೆಗೆ ನಿನ್ನ ಪತಿಯಾದ ಅರ್ಜುನನು ಬಂದು, ನಾಣನ್ನೂ ಎಳೆದುಕಟ್ಟಿದನು ಜಲದಲ್ಲಿ ಆ ಮೀನಿನ ಪ್ರತಿಬಿಂಬವನ್ನು ನೋಡಿ ಯಂತ್ರದ ಗುರಿಯನ್ನೂ ಕಂಡುಕೊಂಡನು. ಯಂತ್ರಕ್ಕೆ ಗುರಿಯಿಟ್ಟು ಬಾಣವನ್ನೂ ಪ್ರಯೋಗಿಸಿದನು. ಆದರೇನು? ಆ ಬಾಣವು ಯಂತ್ರವನ್ನು ಸುಮ್ಮನೆ ತಾಗಿ ಕೆಳಗೆ ಬಿದ್ದುಹೋಯಿತೇ ಹೊರತು, ಆ ಮತ್ಸ್ಯವನ್ನು ಭೇದಿಸಲಾರದೆ ಹೋಯಿತು ಹೀಗೆ ರಾಜ ರೆಲ್ಲರೂ ವಿಫಲಪ್ರಯತ್ನರಾಗಿ ಲಜ್ಜೆಯಿಂದ ಹಿಂತಿರುಗಿದುದನ್ನು ನೋಡಿ, ಕೃಷ್ಣನು ಮುಂದೆ ಬಂದು, ಲೀಲಾಮಾತ್ರದಿಂದ ಬಿಲ್ಲಿಗೆ ನಾಣೇರಿಸಿ ಕಟ್ಟಿ ಒಂದಾವರ್ತಿ ನೀರಿನಲ್ಲಿ ನೋಡಿದಮಾತ್ರದಿಂದಲೇ ಗುರಿಹಿಡಿದು, ಆ ಯಂತ್ರ ವನ್ನು ಬಾಣದಿಂದ ಭೇದಿಸಿ ಕೆಡಹಿದನು. ಆಗ ಸೂರ್ಯನು ಅಭಿಜಿತ್ತೆಂಬ ಮುಹೂರ್ತದಲ್ಲಿದ್ದನು ಭಗವಂತನು ಈ ಮತ್ಸ್ಯಯಂತ್ರವನ್ನು ಭೇದಿಸಿ

ದೊಡನೆ ಭೂಮಿಯಲ್ಲಿ ಜಯಶಬ್ದವೂ, ಆಕಾಶದಲ್ಲಿ ದೇವದುಂದುಭಿಶಬ್ದ ವೂ ಮೊಳಗಿದುವು ದೇವತೆಗಳು ಸಂತೋಷದಿಂದ ಪುಷ್ಪವರ್ಷವನ್ನು ಕರೆ ದರು. ಒಡನೆಯೇ ನಾನು ರತ್ನಖಚಿತವಾದ ಸುವರ್ಣಮಾಲೆಯನ್ನು ಹಿಡಿದು ಹೊಸದಾದ ಪಟ್ಟೆಮಡಿಗಳನ್ನುಟ್ಟು, ಪುಷ್ಪಗಳನ್ನು ಮುಡಿದು, ಕಾಲಂದು ಗೆಗಳ ಘಲ್ಘಲಧ್ವನಿಯೊಡನೆ, ಮುಖದಲ್ಲಿ ಲಜ್ಜಾಗರ್ಭಿತವಾದ ಮಂದ ಹಾಸವನ್ನು ತುಳುಕಿಸುತ್ತ,ರಂಗಸ್ಥಳವನ್ನು ಪ್ರವೇಶಿಸಿದೆನು. ಅಲ್ಲಿ ನನ್ನ ಸು ರುಳಿಗಟ್ಟಿದ ಮುಂಗುರಳನ್ನೂ, ಕುಂಡಲಕಾಂತಿಯಿಂದ ಕೂಡಿದ ಕಪೋಲವ ನ್ನೂ ನೋಡಿ, ರಾಜರೆಲ್ಲರೂ ಮೋಹಿತರಾಗುತ್ತಿರಲು,ನಾನು ಮೆಲ್ಲಗೆ ಮುಖ ವನ್ನೆತ್ತಿ, ಮಂದಹಾಸವಿಶಿಷ್ಟವಾದ ಕಡೆಗಣ್ಣಿನಿಂದ ಸುತ್ತಲೂ ಇದ್ದ ರಾಜರೆಲ್ಲರನ್ನೂನೋಡುತ್ತ ಮೆಲ್ಲಗೆ ಶ್ರೀಕೃಷ್ಣನಬಳಿಗೆ ಬಂದು, ಅ ವನ ಕಂಠಕ್ಕೆ ಮಾಲೆಯಿಕ್ಕಿದೆನು. ಆಕಾಲದಲ್ಲಿ ಮೃದಂಗ, ಪಟಹ, ಶಂಖ, ಭೇರಿ, ಆನಕ ಮೊದಲಾದ ಮಂಗಳವಾದ್ಯಗಳು ಮೊಳಗಿದುವು. ನಟನರ್ತಕಿ ಯರು ಸಂಗೀತದೊಡನೆ ನರ್ತನವನ್ನು ಮಾಡುತ್ತಿದ್ದರು. ಗಾಯಕರು ಗಾ ನಮಾಡಿದರು ಹೀಗೆ ನಾನು ಅನುರಾಗಪೂರ್ವಕವಾಗಿ ಕೃಷ್ಣನ ಕಂಠಕ್ಕೆ ಮಾಲೆಯಿಕ್ಕಿದುದನ್ನು ನೋಡಿ ಸಹಿಸಲಾರದೆ, ಅಲ್ಲಿದ್ದ ರಾಜರೆಲ್ಲರೂ ಸಂಕ ಟದಿಂದ ಕೃಷ್ಣನಮೇಲೆ ಕಲಹಾತುರರಾಗಿದ್ದರು ಒಡನೆಯೇ ಕೃಷ್ಣನು ನಾಲ್ಕು ಉತ್ತಮಾಶ್ವಗಳಿಂದ ಕೂಡಿದ ತನ್ನ ರಥದಲ್ಲಿ ನನ್ನನ್ನುಕುಳ್ಳಿರಿಸಿ, ತಾನೂ ಶಾರ್ಙ್ಗವೆಂಬ ತನ್ನ ಧನುಸ್ಸನ್ನು ಕೈಗೆತ್ತಿಕೊಂಡು, ಆ ರಾಜರೊ ಡನೆ ಯುದ್ಧಸನ್ನದ್ಧನಾದನು ಆಗ ಕೃಷ್ಣನು ಚತುರ್ಭುಜಗಳುಳ್ಳವನಾಗಿ ಯೇ ಕಾಣಿಸುತ್ತ, ಎರಡು ಕೈಗಳಿಂದ ಧನುರ್ಬಾಣಗಳನ್ನು ಹಿಡಿದು, ಮತ್ತೆ ರಡು ತೋಳುಗಳಿಂದ ಭಯಾತುರೆಯಾಗಿದ್ದ ನನ್ನನ್ನು ಆಲಂಗಿಸಿಕೊಂಡೇ ಯುದ್ಧವನ್ನಾರಂಭಿಸಿದನು. ಒಡನೆಯೇ ದಾರುಕನು, ಸುವರ್ಣಾಲಂಕೃತ ವಾದ ಆರಥವನ್ನು ಮುಂದೆ ನಡೆಸಿಕೊಂಡುಬರಲು,ಮೃಗಗಳ ಹಿಂಡನ್ನು ಪ್ರ ವೇಶಿಸುವ ಮೃಗರಾಜನಂತೆ ಆರಾಜರ ನಡುವೆ ಬಂದು ಸೇರಿದನು. ಇಷ್ಟರಲ್ಲಿ ಕೆಲವುರಾಜರು ಧನುರ್ಧಾರಿಗಳಾಗಿ, ನಾಯಿಗಳು ಸಿಂಹವನ್ನು ತಡೆಯು ವಂತೆ, ಕೃಷ್ಣನನ್ನು ತಡೆದು ಮುಂದೆಬಂದು ನಿಂತರು ಕೆಲವರು ಹಿಂದಿನಿಂದ

ಬೆನ್ನಟ್ಟಿಬಂದರು. ಆದರೇನು ? ಕೃಷ್ಣನ ಶಾರ್ಙ್ಗಧನುಸ್ಸಿನಿಂದ ಹೊರಟಬಾಣಪರಂಪರೆಗಳ ವೇಗಕ್ಕೆಸಿಕ್ಕಿ ಅನೇಕರು ಕೈಕಾಲುಮುರಿದು,ತಲೆಹರಿದು ಕೆಳಗೆಬಿದ್ದರು. ಕೆಲವರು ಭಯಪಟ್ಟು ಆಸ್ಥಲವನ್ನೇ ಬಿಟ್ಟು ಪಲಾಯನಮಾಡಿದರು. ಹೀಗೆ ಆ ರಾಜರೆಲ್ಲರನ್ನೂ ನಿಗ್ರಹಿಸಿದಮೇಲೆ ಕೃಷ್ಣನು, ನನ್ನನ್ನು ಆರಥದಲ್ಲಿ ಕುಳ್ಳಿರಿಸಿಕೊಂಡು, ಸೂರ್ಯನು ಉದಯಾಚಲವನ್ನು ಪ್ರವೇಶಿಸುವಂತೆ, ವಿಚಿತ್ರಧ್ವಜ ತೋರಣಾದಿಗಳಿಂದಲಂಕೃತವಾದ ಕುಶಸ್ಥಲಿಯೆಂಬ ನಮ್ಮರಾಜಧಾನಿಯನ್ನು ಪ್ರವೇಶಿಸಿದನು ಅಲ್ಲಿ ನನ್ನ ತಂದೆಯು, ಶ್ರೀಕೃಷ್ಣನಿಗೂ, ಆತನ ಇಷ್ಟಮಿತ್ರ ಬಂಧುಗಳಿಗೂ ಯಥೋಚಿತವಾಗಿ ವಸ್ತ್ರಾಲಂಕಾರಗಳನ್ನೂ, ಶಯನಾಸನಗಳನ್ನೂ ಕೊಟ್ಟು ಸತ್ಕರಿಸಿ, ಬಹಳವಾಗಿ ಗೌರವಿಸಿದನು ಮತ್ತು ಆತನು ಕೃಷ್ಣನಲ್ಲಿರುವ ತನ್ನ ಭಕ್ತಿಯನ್ನುತೋರಿಸುವುದಕ್ಕಾಗಿ, ಪೂರ್ಣಕಾಮನಾದ ಆ ಭಗವಂತನಿಗೆ ಅನೇಕದಾಸದಾಸೀಜನರನ್ನೂ, ರಥ, ಗಜ, ತುರಗ, ಪದಾತಿಗಳೆಂಬ ಚತುರಂಗಸೈನ್ಯವನ್ನೂ, ಉತ್ತಮಾಯುಧಗಳನ್ನೂ, ಅನೇಕವಿಧವಾದ ಸಂಪತ್ತುಗಳನ್ನೂ, ಉಡುಗೆರೆಯಾಗಿ ಕೊಟ್ಟನು ..ಅಮ್ಮ ದ್ರೌಪದಿ ! ರುಕ್ಮಿಣಿ ಮೊದಲಾದ ನಾವು ಎಂಟುಮಂದಿಯೂ ಪೂರ್ವಜನ್ಮದಲ್ಲಿ ಮಾಡಿದ ತಪಸ್ಸಿನಿಂದಲೂ, ಸರ್ವಸಂಗ ನಿವೃತ್ತಿರೂಪವಾದ ವೈರಾಗ್ಯದಿಂದಲೂ, ಆತ್ಮಾನಂದಪೂರ್ಣನಾದ ಆ ಭಗವಂತನಿಗೆ ಗೃಹದಾಸಿಗಳಾಗಿ ಏರ್ಪಟ್ಟೆವು" ಎಂದಳು.

ಆಮೇಲೆ ನರಕಾಸುರನ ಸೆರೆಯಲ್ಲಿದ್ದು ಕೃಷ್ಣನಿಂದ ಬಿಡಿಸಲ್ಪಟ್ಟ ಹದಿನಾರು ಸಾವಿರಮಂದಿ ರಾಜಕನ್ಯೆಯರೂ ದ್ರೌಪದಿಯನ್ನು ಕುರಿತು "ಓ ಸಾಧ್ವಿ ! ನಾವೂ ಕೃಷ್ಣನನ್ನು ವರಿಸಿದ ಸಂಗತಿಯನ್ನು ತಿಳಿಸುವೆವು ಕೇಳು. ಹಿಂದೆ ನರಕಾಸುರನು ದಿಗ್ವಿಜಯಕ್ಕಾಗಿ ಹೊರಟು, ಅನೇಕರಾಜರನ್ನು ಜಯಿಸಿ ಅವರ ಕನ್ಯೆಯರಾದ ನಮ್ಮೆಲ್ಲರನ್ನೂ ಸೆರೆಹಿಡಿದು ತಂದಿದ್ದನು. ನಾವು ಸಂಸಾರಬಂಧವಿಮೋಚಕನಾದ ಆ ಶ್ರೀಕೃಷ್ಣನೇ ಗತಿಯೆಂದು ನಂಬಿ, ಅಹೋರಾತ್ರವೂ ಆತನನ್ನೇ ಸ್ಮರಿಸುತ್ತ, ದುಃಖದಿಂದ ಕೊರಗುತಿದ್ದೆವು. ಇದನ್ನು ತಿಳಿದು ಶ್ರೀಕೃಷ್ಣನು, ತಾನು ಪೂರ್ಣಕಾಮನಾಗಿದ್ದರೂ, ನಮ್ಮ ಕೋರಿಕೆಯನ್ನೀಡೇರಿಸಬೇಕೆಂಬ ಕನಿಕರದಿಂದ,ಆ ನರಕಾಸುರನನ್ನೂ, ಅವನ ಪರಿವಾ

ರವನ್ನೂ ಕೊಂದು, ನಮ್ಮನ್ನು ಮದಿವೆಮಾಡಿದನು. ಈಗ ನಾವೆಲ್ಲರೂಅವನ ಪಾದಸೇವೆಯಲ್ಲಿರುವೆವು ದ್ರೌಪದೀ! ಇನ್ನು ಹೆಚ್ಚುಮಾತಿನಿಂದೇನು? ಈಗ ನಾವು ಸಾರ್ವಭೌಮ ಸಂಪತ್ತನ್ನಾಗಲಿ, ಇಂದ್ರಪದವಿಯನ್ನಾಗಲಿ, ಅಣಿಮಾದಿಸಿದ್ಧಿಗಳನ್ನಾಗಲಿ, ಬ್ರಹ್ಮಪದವನ್ನಾಗಲಿ, ಶಾಶ್ವತವಾದ ವಿಷ್ಣು ಪದವನ್ನಾಗಲಿ, ಬೇರೆ ಯಾವ ಸೌಖ್ಯವನ್ನಾಗಲಿ ಅಪೇಕ್ಷಿಸತಕ್ಕವರಲ್ಲ! ಸಾಕ್ಷಾತ್ ಲಕ್ಷ್ಮೀದೇವಿಯ ಕುಚಕುಂಕುಮರೇಣುವಿನಿಂದ ಸುವಾಸಿತವಾದ ಆ ಶ್ರೀಕೃಷ್ಣನ ಪಾದಧೂಳಿಯು ಯಾವಾಗಲೂ ನಮ್ಮ ಶಿರಸ್ಸಿನಲ್ಲಿರಬೇಕೆಂಬುದೊಂದೇ ನಮ್ಮ ಕೋರಿಕೆ! ನಮಗೆ ಅದಕ್ಕಿಂತಲೂ ಅತಿಶಯವಾದ ಸುಖವಿಲ್ಲ. ಆ ಕೃಷ್ಣನು ನಂದಗೋಕುಲದಲ್ಲಿ ಗೋವುಗಳನ್ನು ಮೇಯಿಸುತ್ತಿದ್ದಾಗ, ಅಲ್ಲಿನಗೊಲ್ಲತಿಯರೂ, ಅದರ ಸಮೀಪದ ಕಾಡಿನಲ್ಲಿದ್ದ ಬೇಡಿತಿಯರೂ ಅಲ್ಲಿನ ಹುಲ್ಲು ಕಡ್ಡಿ ಗಿಡ ಬಳ್ಳಿ ಮೊದಲಾದುವುಗಳೂ ಯಾವನಪಾದಸ್ಪರ್ಶವೆಂಬ ಭಾಗ್ಯಕ್ಕೆ ಪಾತ್ರವಾಗಿದ್ದುವೋ ಅಂತಹ ಪಾದಸ್ಪರ್ಶವೇ ನಿರಂತರವೂ ನಮಗೆ ಲಭಿಸಲೆಂದರು." ಇದು ಎಂಭತ್ತುಮೂರನೆಯ ಅಧ್ಯಾಯವು.

---

## ವಸುದೇವನು ಯಾಗಮಾಡಿದುದು.

ಹೀಗೆ ರುಕ್ಮಿಣಿ ಮೊದಲಾದ ಕೃಷ್ಣನ ಪತ್ನಿಯರೆಲ್ಲರೂ ತಮಗೆ ಕೃಷ್ಣನಲ್ಲಿರುವಅಸಾಧಾರಣವಾದ ಮತ್ತು ನಿಷ್ಕಪಟವಾದ ಪ್ರೇಮವನ್ನೂ, ತಮ್ಮತಮ್ಮ ವಿವಾಹವೃತ್ತಾಂತವನ್ನೂ ಹೇಳುತಿದ್ದಾಗ, ದ್ರೌಪದಿ, ಕುಂತಿ ಗಾಂಧಾರಿ, ಸುಭದ್ರೆ, ಮುಂತಾದವರೂ, ಇತರ ರಾಜಪತ್ನಿಯರೂ ಅದನ್ನು ಕೇಳಿ ಆಶ್ಚರ್ಯಪಟ್ಟರು ಅವರ ಕಣ್ಣುಗಳಲ್ಲಿ ಆನಂದಬಾಷ್ಪವು ತುಳುಕುತಿತ್ತು. ಹೀಗೆ ಆ ಕುರುಕ್ಷೇತ್ರದಲ್ಲಿ, ಸ್ತ್ರೀಯರು ಒಂದುಕಡೆಯಲ್ಲಿ ಪುರುಷರು, ಮತ್ತೊಂದುಕಡೆಯಲ್ಲಿ ಗುಂಪುಗುಂಪಾಗಿ ಕಲೆತು, ಕೃಷ್ಣನ ಗುಣಗಳನ್ನು ಕೊಂಡಾಡುತ್ತ ನಾನಾವಿಧಸಲ್ಲಾಪಗಳನ್ನು ಮಾಡುತ್ತಿರುವಸಮಯದಲ್ಲಿ, ಬಲರಾಮಕೃಷ್ಣರನ್ನು ನೋಡಬೇಕೆಂಬ ಉದ್ದೇಶದಿಂದ, ಅನೇಕ ಮಹರ್ಷಿಗಳೂ ಅಲ್ಲಿಗೆ ಬಂದುಸೇರಿದರು. ಅವರಲ್ಲಿ ವ್ಯಾಸ, ನಾರದ, ಚ್ಯವನ, ಆಸಿತ, (ದೇವಲ) ವಿಶ್ವಾಮಿತ್ರ, ಶತಾನಂದ, ಭರದ್ವಾಜ, ಗೌತಮ

ಪರಶುರಾಮ, ವಸಿಷ್ಠ, ಗಾಲವ, ಭೃಗು, ಪುಲಸ್ತ್ಯ, ಕಶ್ಯಪ, ಅತ್ರಿ, ಮಾರ್ಕಂಡೇಯ, ಬೃಹಸ್ಪತಿ, ಬ್ರಹ್ಮಪುತ್ರನಾದ ಅಂಗಿರಸ್ಸು, ಅಗಸ್ತ್ಯ, ಯಾಜ್ಞವಲ್ಕ್ಯ, ವಾಮದೇವ, ಮುಂತಾದವರೆಲ್ಲರೂ ತಮ್ಮತಮ್ಮ ಶಿಷ್ಯರೊಡನೆ ಕಲೆತು, ಒಬ್ಬೊಬ್ಬರಾಗಿಯೂ ಇಬ್ಬಿಬ್ಬರಾಗಿಯೂ, ಮೂವರುಮೂವರಾಗಿಯೂ ಬಂದುಸೇರಿದ್ದರು ಈಮಹರ್ಷಿಗಳನ್ನು ಕಂಡೊಡನೆ ಅಲ್ಲಿದ್ದ ರಾಜರೂ, ಪಾಂಡವರೂ, ಬಲರಾಮಕೃಷ್ಣರೂ ಥಟ್ಟನೆ ಇದಿರೆದ್ದು ನಮಸ್ಕರಿಸಿ, ಕುಶಲಪ್ರಶ್ನವನ್ನು ಮಾಡಿ, ಅರ್ಘ್ಯ, ಪಾದ್ಯ, ಆಸನ, ಧೂಪ, ದೀಪ, ಗಂಧ ಮಾಲ್ಯ, ಮೊದಲಾದ ಸರ್ವೋಪಚಾರಗಳಿಂದ ಸತ್ಕರಿಸಿದರು ಆಗ ಧರ್ಮ ರಕ್ಷಣಾರ್ಥವಾಗಿ ಅವತರಿಸಿದ ಭಗವಂತನು, ಆ ಸಭೆಯಲ್ಲಿದ್ದವರೆಲ್ಲರೂ ಸಾವಧಾನದಿಂದ ಕೇಳುತ್ತಿರುವಾಗ ಹೀಗೆಂದು ಹೇಳುವನು. “ಆಹಾ! ನಮ್ಮ ಜನ್ಮವೇ ಜನ್ಮವು! ನಾವು ಜನ್ಮವನ್ನೆತ್ತಿದುದಕ್ಕೆ ಪೂರ್ಣವಾದ ಫಲ ವನ್ನು ಹೊಂದಿದೆವು ದೇವತೆಗಳಿಗೂ ದುರ್ಲಭವಾದ ತಮ್ಮಂತಹ ಯೋಗೀಶ್ವರರ ದರ್ಶನವು ಈಗ ನಮಗೆ ಲಭಿಸಿತಲ್ಲವೆ ದೇವತಾಪ್ರತಿಮೆಗಳಲ್ಲಿ ದೈವ ಬುದ್ಧಿಯನ್ನಿಟ್ಟು, ಮೂಢಭಕ್ತಿಯಿಂದ ಅವುಗಳನ್ನೇ ಆರಾಧಿಸತಕ್ಕ ಅಲ್ಪಪುಣ್ಯರಾದ ನಮ್ಮಂತಹ ಮನುಷ್ಯರಿಗೆ, ನಿಮ್ಮ ಸಾಕ್ಷಾದ್ದರ್ಶನವೂ, ಪ್ರತ್ಯಕ್ಷವಾಗಿ ನಿಮ್ಮಪಾದಸ್ಪರ್ಶವೂ, ನಿಮ್ಮೊಡನೆ ಕುಶಲಪ್ರಶ್ನಾದಿಗಳೂ, ನಿಮ್ಮ ಪಾದಪೂಜೆಯೂ, ನಿಮ್ಮ ಪಾದಪ್ರಣಾಮವೂ ಲಭಿಸಬೇಕಾದರೆ. ನಮ್ಮ ಭಾಗ್ಯವು ಎಷ್ಟಿರಬೇಕು? ಇಂತಹ ಮಹಾಭಾಗ್ಯವು ನಮಗೆ ಯಾವ ಪುಣ್ಯ ಫಲದಿಂದ ಲಭಿಸಿತೋ ಕಾಣೆನು! ವಾಸ್ತವದಲ್ಲಿ ನೋಡಿದರೆ, ಜಲಮಯವಾದ ಮಡುಗಳು ತೀರ್ಥಗಳಲ್ಲ! ಕಲ್ಲುಮಣ್ಣಿನ ವಿಗ್ರಹಗಳು ದೇವತಾಮೂರ್ತಿಗಳಲ್ಲ! ಅವೆಲ್ಲವೂ ದರ್ಶನಮಾತ್ರದಿಂದ ಪಾವನಮಾಡಲಾರವು. ಅವುಗಳ ಪೂಜಾಫಲವೂ ಬಹುಕಾಲಕ್ಕೆ ಸಿದ್ಧಿಸುವುದು ನಿಮ್ಮಂತಹ ಸಾಧುಗಳು ದರ್ಶನಮಾತ್ರದಿಂದಲೇ ಪಾವನಮಾಡುವರು. ಲೋಕದಲ್ಲಿ ಎಲ್ಲಾಬಗೆಯ ಪಾಪಗಳಿಗೂ ಒಂದೊಂದು ವಿಧವಾದ ಶುದ್ಧಿಯುಂಟು. ದೇಹಗತವಾದ ಭೇದವನ್ನು ಆತ್ಮನಲ್ಲಿ ಆರೋಪಿಸಿತಕ್ಕ ಮಹಾಪಾಪವನ್ನು, ಅಗ್ನಿ, ಸೂರ್ಯ, ಚಂದ್ರ, ನಕ್ಷತ್ರಗಳು, ಭೂಮಿ, ಜಲ, ಆಕಾಶ, ವಾಯು, ವಾಕ್ಕು, ಮನಸ್ಸು,

ಮುಂತಾದುವುಗಳಲ್ಲಿ ಯಾವುದೂ, ಅನೇಕಕಾಲದವರೆಗೆ ಅನೇಕವಿಧದಿಂದ ಉಪಾಸಿಸಿದರೂ, ಪರಿಹರಿಸಲಾರವು ಸಾಧುಗಳ ಸೇವೆಯಿಂದಮಾತ್ರ,ಮುಹೂರ್ತಮಾತ್ರದಲ್ಲಿಯೇ ಅದು ಪರಿಹೃತವಾಗುವುದು ವಾತ, ಪಿತ್ತ,ಶ್ಲೇಷ್ಮಗಳಿಂದ ತುಂಬಿ,ಶವಪ್ರಾಯವಾದ ದೇಹದಲ್ಲಿ ಯಾವನಿಗೆ ತಾನೆಂಬ ಅಭಿಮಾನವೂ, ಹೆಂಡಿರುಮಕ್ಕಳಲ್ಲಿ ತನ್ನವರೆಂಬ ಬುದ್ಧಿಯೂ, ಕಲ್ಲುಮಣ್ಣಿನ ಬೊಂಬೆಗಳಲ್ಲಿ ದೇವತಾಬುದ್ಧಿಯೂ, ಗಂಗಾದಿಜಲಗಳಲ್ಲಿ ತೀರ್ಥಬುದ್ಧಿಯೂ ಇವು ಮಾತ್ರವೇ ಇದ್ದು, ಆತ್ಮಪರಮಾತ್ಮ ತತ್ವವನ್ನು ತಿಳಿದ ನಿಮ್ಮಂತಹ ಸಾಧುಗಳಲ್ಲಿ ಆ ವಿಧವಾದ ಗೌರವಬುದ್ಧಿಯು ಇರುವುದಿಲ್ಲವೋ, ಅಂತವನನ್ನು ಪಶುಗಳಿಗಿಂತಲೂ, ಕತ್ತೆಗಳಿಗಿಂತಲೂ ಕಡೆಯೆಂದೇಹೇಳಬಹುದು" ಎಂದನು ಓ ಪರೀಕ್ಷಿದ್ರಾಜಾ! ಹೀಗೆ ಸರ್ವೇಶ್ವರನಾದ ಭಗವಂತನು, ತನಗೆ ಅನುರೂಪವಲ್ಲದ ಆ ಮಾತುಗಳನ್ನು ಆಡುತ್ತಿರುವಾಗ, ಋಷಿಗಳೆಲ್ಲರೂ ಭ್ರಾಂತರಾಗಿ "ಆಹಾ! ಯಾವನ ಪಾದಸೇವೆಯಿಂದಲೇ ನಾವು ಕೃತಾರ್ಥರಾಗಿರುವೆವೋ, ಅಂತಹ ಭಗವಂತನು, ನಮ್ಮನ್ನೇ ತನಗಿಂತಲೂ ಇಷ್ಟು ಮೇಲಾಗಿ ಹೇಳುತ್ತಿರುವನಲ್ಲಾ!" ಎಂದು ಆಶ್ಚರ್ಯದಿಂದ, ಮಾತಾಡುವುದಕ್ಕೂ ತೋರದೆ ಸುಮ್ಮನಿದ್ದರು. ಅವರೆಲ್ಲರೂ, ಕೃಷ್ಣನು ತಮ್ಮನ್ನು ಇಷ್ಟೊಂದುವಿಧವಾಗಿ ಹೊಗಳುವುದಕ್ಕೆ ಕಾರಣವೇನೆಂದು ಬಹುಕಾಲದವರೆಗೆ ಯೋಚಿಸಿ, ಲೋಕದಲ್ಲಿ ತಿಳಿಯದ ಜನರಿಗೆ ದಾರಿಯನ್ನು ತೋರಿಸುವದಕ್ಕಾಗಿಯೇ ಅವನು ತನ್ನಲ್ಲಿ ನೈಚ್ಯಾನುಸಂಧಾನವನ್ನು ಮಾಡಿರಬೇಕೆಂದು ನಿಶ್ಚಯಿಸಿಕೊಂಡು, ಲೋಕಗುರುವಾದ ಆ ಕೃಷ್ಣನನ್ನು ನೋಡಿ ಮುಗುಳ್ನಗೆಯೊಡನೆ ಹೀಗೆಂದು ಹೇಳುವರು. "ಬ್ರಹ್ಮಾದಿಗಳಿಗೂ ಪ್ರಭುವಾದ ಓ ಕೃಷ್ಣಾ! ನಮ್ಮನ್ನು ತತ್ವಜ್ಞರೆಂದು ನೀನು ಸ್ತೋತ್ರಮಾಡಿದೆಯಲ್ಲವೆ? ನಮಗೆ ಆ ತತ್ವಜ್ಞಾನವು ನಿನ್ನ ಅನುಗ್ರಹದಿಂದಲ್ಲವೇ ಹುಟ್ಟಿರಬೇಕು?ನಾವು ಎಷ್ಟು ತತ್ವಗಳನ್ನು ತಿಳಿದರೇನು? ನಿನ್ನ ಮಾಯೆಯಿಂದ ಮೋಹಿತರಾಗಿ ಭ್ರಮಿಸುವೆವು. ನೀನು ಬ್ರಹ್ಮಾದಿದೇವತೆಗಳಿಗೂ ಪ್ರಭುವಾಗಿದ್ದರೂ,ಮನುಷ್ಯಚೇಷ್ಟೆಯಿಂದ ನಿಜಸ್ವರೂಪವನ್ನು ಮರೆಸಿಕೊಂಡು, ಕರ್ಮವಶ್ಯರಾದ ಪ್ರಾಕೃತರಂತೆ ನಟಿಸುತ್ತಿರುವೆಯಲ್ಲವೆ! ಈ ನಿನ್ನ ಆಶ್ಚರ್ಯವ್ಯಾಪಾರವನ್ನು ಒಮ್ಮೊಮ್ಮೆ ನಾವೂ

ತಿಳಿಯದೆ,ನಿನ್ನನ್ನು ಮನುಷ್ಯನೆಂದೇ ಭ್ರಮಿಸಿ ಮೋಸಹೋಗುವೆವು ಆಹಾ! ನಿನ್ನ ಚರಿತ್ರವು ಅತಿವಿಚಿತ್ರವಾದುದು! ನೀನು ಕರ್ಮಾಧೀನವಾದ ವಿಕಾರಗಳಿಲ್ಲದವನಾಗಿದ್ದರೂ, ಸೃಷ್ಟಿಗೆ ಮೊದಲು ಕಾರಣಾವಸ್ಥೆಯಲ್ಲಿರುವಾಗ ನಾಮರೂಪವಿಭಾಗಗಳೊಂದೂ ಇಲ್ಲದ ಚೇತನಾಚೇತನಗಳೆರಡನ್ನೂ ಶರೀರವಾಗಿ ಹೊಂದಿ,ಒಬ್ಬನೇ ಒಬ್ಬನಾಗಿ ತೋರುವೆ' ಆಮೇಲೆ ಆ ಚಿದಚಿತ್ತುಗಳನ್ನೇ ನಾಮರೂಪವಿಭಾಗಗಳಿಂದ, ಅನೇಕವಿಧವಾಗಿ ಸೃಷ್ಟಿಸಿ, ಅದನ್ನು ನೀನೇ ರಕ್ಷಿಸುತಿದ್ದು,ಕೊನೆಗೆ ನೀನೇ ಸಂಹರಿಸುವೆ!ಆದರೆ ನೀನೊಬ್ಬನುಮಾತ್ರ ಈವಿಕಾರಗಳೊಂದಕ್ಕೂ ಈಡಾಗತಕ್ಕವನಲ್ಲ!ಭೂಮಿಯು ತಾನೊಂದೇ ಆಗಿದ್ದರೂ,ಮಣ್ಣು,ಮಡಿಕೆ,ಹರವಿ, ಮೊದಲಾದ ವಿಕಾರಗಳಿಂದ ಬೇರೆಬೇರೆ ನಾಮರೂಪಭೇದಗಳನ್ನು ಹೊಂದುವಂತೆ, ನೀನೇ ನಿನ್ನ ಶರೀರದಲ್ಲಿ ಅನೇಕ ನಾಮರೂಪಭೇದಗಳನ್ನು ತೋರಿಸುವೆ. ಹೀಗೆ ನೀನು ಸರ್ವಸ್ವರೂಪನಾಗಿದ್ದರೂ,ಪ್ರಕೃತಿಪುರುಷವಿಲಕ್ಷಣನಾದ ಪರಮಾತ್ಮನಾಗಿದ್ದರೂ, ವರ್ಣಾಶ್ರಮಭೇದವುಳ್ಳ ಜೀವನಂತೆ ಕಾಣುತ್ತ, ದುಷ್ಟನಿಗ್ರಹಶಿಷ್ಟಪರಿಪಾಲನಕ್ಕಾಗಿ ಈ ಮನುಷ್ಯದೇಹವನ್ನು ಧರಿಸಿರುವೆ' ನೀನು ಧರಿಸತಕ್ಕ ಮನುಷ್ಯದೇಹವೂಕೂಡ ಶುದ್ಧಸತ್ವಮಯವಾದುದೇಹೊರತು, ಪ್ರಾಕೃತದೇಹದಂತೆ ದೋಷಾಸ್ಪದವಲ್ಲ ನೀನು ಲೀಲಾರ್ಥವಾಗಿ ಕೈಕೊಂಡ ಕಾರ್ಯಗಳಿಂದಲೇ, ಈಪ್ರಪಂಚಕ್ಕೆಸನಾತನವಾದವೇದಮಾರ್ಗವನ್ನು ತೋರಿಸುತ್ತಿರುವೆ. ಹೀಗೆ ಲೋಕದಲ್ಲಿ ವೇದಧರ್ಮಗಳನ್ನು ನೆಲೆಗೊಳಿಸಬೇಕೆಂಬ ಉದ್ದೇಶದಿಂದಲೇ ಅವತರಿಸಿದ ನಿನಗೆ,ಆ ವೇದವನ್ನೇ ನಂಬಿದ ನಮ್ಮಂತಹ ಬ್ರಾಹ್ಮಣರನ್ನು ಗೌರವಿಸುವುದೇನೋ ಯುಕ್ತವೆ? ಆ ವೇದಗಳಿಂದಲೇ ತಪಸ್ಸೂ, ಧರ್ಮವೂ, ವ್ಯಕ್ತಾವ್ಯಕ್ತಗಳೆನಿಸಿಕೊಂಡ ದೇಹಾತ್ಮಸ್ವರೂಪವೂ, ಇವೆರಡಕ್ಕಿಂತಲೂ ವಿಲಕ್ಷಣವಾದ ಪರಮಾತ್ಮಸ್ವರೂಪವೂ ಇವೆಲ್ಲವೂ ಸ್ಪಷ್ಟವಾಗಿ ತಿಳಿಯುವುವು ಶುದ್ಧಬ್ರಹ್ಮಸ್ವರೂಪವಾದ ಆ ವೇದವೇ ನಿನ್ನ ಹೃದಯವು ಆ ವೇದದಿಂದಲೇ ನಿನ್ನ ಸ್ವರೂಪವನ್ನು ಕಂಡುಕೊಳ್ಳಬೇಕು ಈ ಲೋಕದಲ್ಲಿ ಆ ವೇದಗಳಿಗೆಬ್ರಾಹ್ಮಣಕುಲವೇ ಆಧಾರವಾದುದರಿಂದ,ನಿನ್ನಸ್ವರೂಪವನ್ನು ತಿಳಿಸುವುದಕ್ಕೆ ಬ್ರಹ್ಮಕುಲವೇ ಸ್ಥಾನವಾಗಿರುವುದು. ಅಂತಹ ಬ್ರಾಹ್ಮಣ

ಕುಲವನ್ನು ನೀನು ಬಹುಮಾನಿಸುವುದೂ ಸಹಜವೇ? ಇದರಿಂದಲ್ಲವೇ ನೀನು ಬ್ರಹ್ಮಣ್ಯರಲ್ಲಿ ಮೇಲೆನಿಸಿಕೊಂಡಿರುವೆ ಕೃಷ್ಣಾ ! ಈಗ ನಿನ್ನ ಸಮಾಗಮ ದಿಂದ ನಮ್ಮ ಜನ್ಮವು ಸಾರ್ಥಕವಾಯಿತು! ನಮ್ಮ ಕಣ್ಣುಗಳು ಸಫಲವಾದು ವು.ನಮ್ಮವಿದ್ಯೆ, ನಮ್ಮ ತಪಸ್ಸು,ಇವೆಲ್ಲವೂ, ಈಗ ಸಾರ್ಥಕ್ಯವನ್ನು ಹೊಂದಿ ದುವು. ನಿನ್ನ ಸಂದರ್ಶನಮಾತ್ರವೇ ಸಮಸ್ತಶ್ರೇಯಸ್ಸಿಗೂ ಮೇಲಾದ ಶ್ರೇ ಯಸ್ಸು!ದೇವಾ!ಯೋಗಮಾಯೆಯೆಂಬ ಆತ್ಮೈಶ್ವರ್ಯಶಕ್ತಿಯಿಂದ ತನ್ನ ಪರಮೈ ಶ್ವರ್ಯವನ್ನು ಮರೆಸಿಕೊಂಡು,ಅಕುಂಠಿತಜ್ಞಾನಸಂಪನ್ನನಾಗಿ,ಪರಮಾತ್ಮನೆನಿ ಸಿಕೊಂಡ ನಿನಗೆ ನಮಸ್ಕಾರವು. ಓ! ಪ್ರಭೂ! ನೀನು ಮಾಯೆಯೆಂಬ ತೆರೆ ಯಿಂದ, ನಿನ್ನ ಪರಸ್ವರೂಪವನ್ನು ಕಾಣಿಸದೆ, ಸಮಸ್ತಜೀವಗಳನ್ನೂ ಮೋ ಹಗೊಳಿಸುತ್ತ, ಪರಮಾತ್ಮರೂಪದಿಂದ ಆ ಸಮಸ್ತಜೀವರಾಶಿಗಳ ಒಳಗೂ, ಕಾಲರೂಪದಿಂದ ಹೊರಗೂ ವ್ಯಾಪಿಸಿರತಕ್ಕವನು ಆತ್ಮಾನುಭವವೆಂಬ ಆ ನಂದದಲ್ಲಿಯೇ ನಿರತರಾದ ಯೋಗಿಗಳೂ,ಈನಿನ್ನ ನಿಜಸ್ಥಿತಿಯನ್ನು ತಿಳಿಯಲಾ ರರು ಇನ್ನು ಇಲ್ಲಿರತಕ್ಕ ಸಾಮಾನ್ಯರಾಜರು ಹೇಗೆತಾನೇ ತಿಳಿಯಬಲ್ಲರು ? ಈ ರಾಜರ ಸಂಗತಿಯೂ ಹಾಗಿರಲಿ! ನಿನ್ನೊಡನೆ ಯಾವಾಗಲೂ ಕಲೆತಿರುವ ಯಾದವರೂಕೂಡ, ನಿನ್ನ ಮಹಿಮೆಯನ್ನು ಹೀಗೆಂದು ಕಂಡುಕೊಳ್ಳಲಾರ ರು.ಗುಣಪರಿಣಾಮರೂಪವಾದ ದೇಹವನ್ನೇ ಆತ್ಮವೆಂದು ತಿಳಿಯತಕ್ಕಪುರು ಷನು, ತನ್ನ ಶರೀರವನ್ನು ಮರೆತು ಮಲಗಿರುವಾಗಲೂ ಕೂಡ, ಸ್ವಪ್ನದಲ್ಲಿ ತನ್ನನ್ನು ನಾಮರೂಪೇಂದ್ರಿಯಗಳಿಂದ ಕೂಡಿರುವಂತೆಯೇ ತಿಳಿಯುವನೇ ಹೊರತು, ತನ್ನ ಆತ್ಮವು ದೇಹಕ್ಕಿಂತಲೂ ವಿಲಕ್ಷಣವೆಂಬುದನ್ನಾಗಲಿ,ಅದ ಕ್ಕೆ ನಾಮರೂಪಭೇದಗಳೊಂದೂ ಇಲ್ಲವೆಂಬುದನ್ನಾಗಲಿ ಹೇಗೆ ಕಂಡು ಕೊಳ್ಳಲಾರನೋ, ಹಾಗೆಯೇ ಎಚ್ಚರಗೊಂಡಿರುವಾಗಲೂ,ನಿನ್ನ ಮಾಯಾ ಮೂಲಕವಾಗಿನಾಮರೂಪೇಂದ್ರಿಯಗಳಿಗೆ ಅನುಗುಣವಾಗಿಹುಟ್ಟಿದಚೇಷ್ಟೆ ಯಿಂದ,ಸ್ವಸ್ವರೂಪ ಪರಸ್ವರೂಪ ಜ್ಞಾನವನ್ನು ಮರೆತು,ಆತ್ಮವಲ್ಲದ ದೇಹ ವನ್ನೇ ಆತ್ಮವೆಂದೂ, ಪರತಂತ್ರವಾದ ಆತ್ಮವನ್ನೇ ಸ್ವತಂತ್ರವೆಂದೂ ಭ್ರ ಮಿಸುವನು. ಹೀಗೆ ತನ್ನ ಆತ್ಮಸ್ವರೂಪವನ್ನೇ ತಿಳಿಯಲಾರದವನು, ಆ ಆತ್ಮಕ್ಕೂ ಅಂತರಾತ್ಮನಾಗಿ, ಅದಕ್ಕೆ ಆಶ್ರಯನಾದ ಪರಮಾತ್ಮನ (ನಿನ್ನ)

ಸ್ವರೂಪವನ್ನು ಹೇಗೆತಾನೇ ತಿಳಿಯಬಲ್ಲನು? ಓಕೃಷ್ಣಾ ! ಹೀಗೆ ನಿನ್ನ ಸಾ ಕ್ಷಾತ್ಕಾರವು ಎಂತವರಿಗೂ ದುರ್ಲಭವಾಗಿದ್ದರೂ. ನಮಗೆ ಈಗ ನಿನ್ನನ್ನು ಪ್ರತ್ಯಕ್ಷವಾಗಿ ಕಾಣುವ ಭಾಗ್ಯವು ಲಭಿಸಿತು ಸಮಸ್ತಪಾಪನಿವಾರಕಗಳಾದ ಗಂಗಾದಿತೀರ್ಥಗಳಿಗೂ ಮೂಲಭೂತವಾಗಿ, ಭಕ್ತಿಯೋಗಪರಿಪಾಕವುಳ್ಳ ಯೋಗಿಗಳು ತಮ್ಮ ಹೃದಯದಿಂದಮಾತ್ರ ಸಾಕ್ಷಾತ್ಕರಿಸತಕ್ಕುದಾಗಿರುವ ನಿನ್ನ ಪಾದಾರವಿಂದವನ್ನು, ಈಗ ನಾವುಪ್ರತ್ಯಕ್ಷವಾಗಿನೋಡುವಂತಾಯಿತು. ಕರ್ಮವಾಸನೆಗಳನ್ನೂ, ಆತ್ಮವನ್ನು ಮರೆಸತಕ್ಕ ಅಜ್ಞಾನವನ್ನೂ ಭಕ್ತಿಪ ರಿಪಾಕದಿಂದ ನೀಗಿಸಿಕೊಂಡವರೇ ನಿನ್ನ ಸಾನ್ನಿಧ್ಯವನ್ನು ಹೊಂದುವರು. ಆದುದರಿಂದ ನಮಗೂ ಆವಿಧವಾದ ಭಕ್ತಿಯುಂಟಾಗುವಂತೆ ಅನುಗ್ರಹಿಸ ಬೇಕು." ಎಂದರು ಓ ಪರೀಕ್ಷಿದ್ರಾಜಾ! ಹೀಗೆ ಆ ಮಹರ್ಷಿಗಳೆಲ್ಲರೂ ಕೃಷ್ಣನನ್ನು ಕಂಡು, ಅವನ ಗುಣಗಳನ್ನು ಕೊಂಡಾಡಿ,ಆಮೇಲೆ ಧೃತರಾಷ್ಟ್ರ ಯುಧಿಷ್ಠಿರಾದಿಗಳನ್ನೂ ಕಂಡು ಮಾತಾಡಿಸಿ,ಅವರ ಅನುಮತಿಯನ್ನು ಪಡೆ ದು, ತಮ್ಮತಮ್ಮ ಆಶ್ರಮಗಳಿಗೆ ಹಿಂತಿರುಗುವ ಸನ್ನಾಹದಲ್ಲಿದ್ದರು ಆಗ ಮಹಾಯಶಸ್ವಿಯಾದ ವಸುದೇವನು, ಅವರಬಳಿಗೆ ಬಂದು, ಪಾದಪ್ರಣಾ ಮವನ್ನು ಮಾಡಿ ಹೀಗೆಂದು ಪ್ರಾರ್ಥಿಸುವನು "ಓ ಮಹರ್ಷಿಗಳಿರಾ! ಸಕಲದೇವತಾಸ್ವರೂಪರಾದ ನಿಮ್ಮನ್ನು ವಂದಿಸುವೆನು ನನ್ನ ಇದೊಂದು ಪ್ರಾರ್ಥನೆಯನ್ನು ಲಾಲಿಸಬೇಕು ಪ್ರಾಚೀನಪುಣ್ಯಪಾಪಕರ್ಮಗಳೆ ಲ್ಲವೂ ಭಕ್ತಿಯೋಗವನ್ನು ಹುಟ್ಟಿಸುವುದಕ್ಕೆ ಪ್ರತಿಬಂಧಕಗಳೆಂದು ಕೇಳಿರು ವೆನು ವರ್ಣಾಶ್ರಮಗಳಿಗೆ ಅನುಗುಣಗಳಾದ ಕರ್ಮಗಳಿಂದ ಪ್ರಾರಬ್ಧಕರ್ಮ ಗಳು ನೀಗಿ, ಅವು ಭಕ್ತಿಯೋಗಕ್ಕೆ ಸಾಧಕಗಳಾಗುವುವೆಂದೂ ಹೇಳುವರು. ಕರ್ಮಗಳಿಂದಲೇ ಕರ್ಮಕ್ಷಯವಾಗುವುದು ಹೇಗೆ? ಇದರ ತತ್ವವನ್ನು ನನಗೆ ತಿಳಿಸಬೇಕು" ಎಂದನು ಸರ್ವೇಶ್ವರನಾಗಿಯೂ, ಸರ್ವಜ್ಞನಾಗಿಯೂ ಇರು ವ ಶ್ರೀಕೃಷ್ಣನೇ ತನ್ನ ಗರ್ಭದಲ್ಲಿ ಜನಿಸಿ, ಯಾವಾಗಲೂ ತನ್ನ ಕಣ್ಣ ಮುಂದೆ ಇರುತ್ತಿರುವಾಗಲೂ, ವಸುದೇವನು, ಅವನನ್ನು ಬಿಟ್ಟು, ತಮ್ಮಲ್ಲಿ ಈ ಪ್ರಶ್ನವನ್ನು ಮಾಡಿದುದಕ್ಕಾಗಿ, ಅಲ್ಲಿದ್ದ ಋಷಿಗಳೆಲ್ಲರೂ ಸಂ ಭ್ರಾಂತರಾಗಿರಲು,ನಾರದನು ಅವರ ಮನೋಭಿಪ್ರಾಯವನ್ನು ತಿಳಿದುಕೊಂ

ಡು ಹೀಗೆಂದು ಹೇಳುವನು, “ಓ ಬ್ರಾಹ್ಮಣೋತ್ತಮರೆ! ಈ ವಸುದೇವನು ತನಗೆ ಶ್ರೇಯಸ್ಸಾಧಕವಾದ ಈ ವಿಷಯವನ್ನು ಕುರಿತು ನಮ್ಮನ್ನು ಪ್ರಶ್ನೆ ಮಾಡುವುದೇನೂ ಆಶ್ಚರ್ಯವಲ್ಲ! ಏಕೆಂದರೆ, ಈತನು ಕೃಷ್ಣನನ್ನು ತನ್ನ ಮಗನನ್ನಾಗಿಯೇ ಭ್ರಮಿಸಿರುವನು ಅತಿಪರಿಚಯವು ಅನಾದರಕ್ಕೆ ಕಾರಣವೆಂಬುದನ್ನು ನೀವು ಕೇಳಿಲ್ಲವೆ? ಮನುಷ್ಯರಿಗೆ ಯಾವಾಗಲೂ ತಮ್ಮ ಸಮೀಪದಲ್ಲಿಯೇ ಇರತಕ್ಕ ವಸ್ತುಗಳಲ್ಲಿ ಅನಾದರವು ಹುಟ್ಟುವುದು ಸಹ ಜವೇ! ಪರಮಪಾವನವಾದ ಗಂಗಾತೀರದಲ್ಲಿ ವಾಸಮಾಡತಕ್ಕವರು, ತಮ್ಮ ಶುದ್ಧಿಗಾಗಿ ಮತ್ತೊಂದು ಪುಣ್ಯತೀರ್ಥವನ್ನು ಹುಡುಕುತ್ತ ಹೋಗುವರಲ್ಲವೆ? ಈ ವಸುದೇವನ ಸ್ಥಿತಿಯೂ ಹಾಗೆಯೇ ಇರುವುದು ಇವನ ಪುತ್ರನೆನಿಸಿದ ಶ್ರೀಕೃಷ್ಣನಾದರೋ, ತಾನೇ ಜ್ಞಾನಸ್ವರೂಪನಾಗಿರುವನು ಆವನ ಜ್ಞಾನವು ಸಾಮಾನ್ಯಜೀವರ ಜ್ಞಾನದಂತೆ ಕಾಲದಿಂದಾಗಲಿ, ಪ್ರಾಪಂಚಿಕಗಳಾದ ಉತ್ಪತ್ತಿವಿನಾಶಾದಿವಿಕಾರಗಳಿಂದಾಗಲಿ, ತನ್ನಿಂದ ತಾನಾಗಲಿ, ಮತ್ತೊಬ್ಬರಿಂದಾಗಲಿ, ಸತ್ವಾದಿಗುಣಗಳಿಂದಾಗಲಿ, ಬೇರೆ ಯಾವವಿಧದಿಂದಾಗಲಿ ನಶಿಸಲಾರದು. ಆ ಕೃಷ್ಣನು ದೇಹಕ್ಲೇಶದಿಂದಾಗಲಿ, ಪುಣ್ಯಪಾಪಕರ್ಮಗಳಿಂದಾಗಲಿ, ಅವುಗಳ ಫಲರೂಪವಾದ ಸುಖದುಃಖಗಳಿಂದಾಗಲಿ, ಸತ್ವಾದಿಗುಣಗಳ ಮೇಲುಮೇಲಿನ ಪ್ರವಾಹದಿಂದಲಾಗಲಿ, ತನ್ನ ಮಹಿಮೆಯಲ್ಲಿ ಕುಂದತಕ್ಕವನಲ್ಲ. ಮತ್ತು ಆತನು ಸರ್ವಸ್ವತಂತ್ರನು! ಅದ್ವಿತೀಯನು ಅಂತವನನ್ನು, ಅಜ್ಞಾನಾದವನು,ತನ್ನಂತೆಯೇ ಪ್ರಾಣೇಂದ್ರಿಯಾದಿಗಳಿಂದ ಕೂಡಿದವನನ್ನಾಗಿ ಭ್ರಮಿಸುವರು. ಸೂರ್ಯನು ಯಾವಾಗಲೂ ತನ್ನ ಪ್ರಕಾಶಕ್ಕೆ ಕಂದುಕುಂದಿಲ್ಲದೆ ಬೆಳಗುತಿದ್ದರೂ, ಮಂಜು, ಮೇಘ, ರಾಹು ಮೊದಲಾದುವುಗಳು ಅಡ್ಡಬಂದಾಗ. ಅವುಗಳಿಂದ ಆ ಸೂರ್ಯನ ಕಾಂತಿಗೇ ಕುಂದಕವುಂಟಾದಂತೆ ಭಾವಿಸುವುದು ಹೇಗೆ ಅಜ್ಞತೆಯೆನಿಸುವುದೋ, ಹಾಗೆಯೇ ಆಭಗವಂತನ ಮಹಿಮೆಗೆ ಈಮನುಷ್ಯನಟನಗಳಿಂದ ಕುಂದುಂಟಾದಂತೆ ಭಾವಿಸುವುದು ಮೌಢ್ಯವು?” ಎಂದನು ಆಗ ಮಹರ್ಷಿಗಳು ವಸುದೇವನನ್ನು ಕರೆದು, ಸಮಸ್ತರಾಜರೂ, ಬಲರಾಮಕೃಷ್ಣರೂ ಕೇಳುತ್ತಿರುವಹಾಗೆಯೇ ಹೀಗೆಂದು ಹೇಳುವರು. “ಓ ಯದೂ

ತ್ತಮಾ ! ಕರ್ಮಗಳಿಂದ ಕರ್ಮವು ನೀಗುವುದೆಂಬ ನೀತಿಯು ಸ್ಪಷ್ಟವಾಗಿ ಯೇ ನಿರೂಪಿಸಲ್ಪಟ್ಟಿರುವುದು ಹೇಗೆಂದರೆ,ಸಮಸ್ತಯಜ್ಞಗಳಿಗೂ ನಿರ್ವಾ ಹಕನಾದ ಭಗವಂತನನ್ನು, ಆ ಯಜ್ಞಗಳಿಂದಲೇ ಶ್ರದ್ಧೆಯಿಟ್ಟು ಆರಾಧಿಸಬೇ ಕೆಂಬುದೇ ಇದರ ಮುಖ್ಯತಾತ್ಪರ್ಯವು ಈ ಭಗವದಾರಾಧನರೂಪವಾದ ಕರ್ಮವು ಮನಸ್ಸಿಗೆ ಶಾಂತಿಯನ್ನುಂಟುಮಾಡುವುದು ನಿರತಿಶಯವಾದ ಮೋಕ್ಷಸುಖವನ್ನೂ ಒಡಗೂಡಿಸುವುದು ಆದುದರಿಂದ ಪುರಾತನಮಹರ್ಷಿ ಗಳು, ಶಾಸ್ತ್ರದೃಷ್ಟಿಯಿಂದ ಈ ಭಗವದಾರಾಧನರೂಪವಾದ ಕರ್ಮವೇ ಪ್ರಾರಬ್ಧಕರ್ಮಗಳನ್ನು ನೀಗಿಸತಕ್ಕ ಸುಲಭೋಪಾಯವೆಂದು ನಿಶ್ಚಯಿಸಿ ರುವರು ಇತರಪ್ರಾಣಿಗಳಿಗೆ ಹಿಂಸೆಯಿಲ್ಲದೆ ಸಂಪಾದಿಸಿದ ಪರಿಶುದ್ಧವಾದ ಧನದಿಂದ, ಆ ಪರಮಪುರುಷನನ್ನು ಶ್ರದ್ಧೆಯಿಂದ ಪೂಜಿಸಬೇಕು ಬ್ರಾಹ್ಮ ಣಕ್ಷತ್ರಿಯವೈಶ್ಯರೆಂಬ ಮೂರುವರ್ಣಗಳಲ್ಲಿರುವ ಗೃಹಸ್ಥರಿಗೂ ಶ್ರೇಯ ಸ್ಸಾಧಕವಾದ ಮಾರ್ಗವೇ ಇದು! ವಿವೇಕಿಯಾದ ಪುರುಷನು, * ಯಜ್ಞ ಮತ್ತು ದಾನಗಳಲ್ಲಿ, ಕೈಹಿಡಿಯದೆ ಹಣವನ್ನು ವೆಚ್ಚಮಾಡುವುದರಿಂದ, ಹಣದಾಸೆಯನ್ನೂ, ಕುಟುಂಬ ಭೋಗಾನುಭವದಿಂದ ಹೆಂಡಿರುಮಕ್ಕಳ ಮೋಹವನ್ನೂ,ಕ್ಲ್ಪಪ್ತಕಾಲದಮೇಲೆ ಸ್ವರ್ಗಾದಿಸುಖಗಳನ್ನೂ ಕೊನೆಗಾಣಿ ಸತಕ್ಕ ಕಾಲದ ಮಹಿಮೆಯನ್ನು ಪರಿಶೋಧಿಸುವುದರಿಂದ, ಪರಲೋಕಸುಖ ದ ಆಸೆಯನ್ನೂ ನೀಗಬಹುದು. ಹೀಗೆ ಅನೇಕಧೀರರು ಗ್ರಾಮಗಳಲ್ಲಿದ್ದು, ಮೇಲೆ ಹೇಳಿದ ಈಷಣತ್ರಯಗಳಲ್ಲಿಯೂ ಜಿಹಾಸೆಹೊಂದಿ, ತಪೋವನಕ್ಕೆ ಹೋಗಿರುವರು ತ್ರೈವರ್ಣಿಕನು, ಹುಟ್ಟುವಾಗಲೇ ದೇವ, ಋಷಿ, ಪಿತೃಋ ಣಗಳೆಂಬ ಮೂರು ಸಾಲಗಳನ್ನು ಹೊತ್ತೇ ಹುಟ್ಟುವನು ಇವುಗಳಲ್ಲಿ ಯ ಜ್ಞಾದಿಗಳಿಂದ ದೇವಋಣವನ್ನೂ,ಅಧ್ಯಯನಾದಿಕರ್ಮಗಳೆಂಬ ಋಷಿಋಣ

---

* ದಾನಯಜ್ಞಾದಿಗಳಲ್ಲಿ ಕೈಹಿಡಿಯದೆ ಧನವನ್ನು ವೆಚ್ಚಮಾಡುವುದರಿಂದ, ಅದನ್ನು ರಕ್ಷಿಸಿಡಬೇಕಾದ ದುಃಖವು ತಪ್ಪುವುದು. ಸಂಸಾರದಲ್ಲಿ ಭಾರ್ಯಾಪುತ್ರಾದಿಗಳ ಸುಖವನ್ನನುಭವಿಸುವುದರಿಂದ,ಅದರ ಆಸೆಯೂ ತಪ್ಪುವುದು.ಸ್ವರ್ಗಾದಿಸುಖಗಳೂ ಕಾಲಕ್ರಮದಿಂದ ಕ್ಷೀಣಿಸುವುವೆಂಬುದನ್ನು ತಿಳಿದಾಗ, ಅದರ ಆಸೆಯೂ ಬಿಟ್ಟು ಹೋ ಗುವುದೆಂದು ಭಾವವು.

ವನ್ನೂ, ಪುತ್ರಲಾಭದಿಂದ ಪಿತೃಋಣವನ್ನೂ ತೀರಿಸಬೇಕು ಹೀಗಿಲ್ಲದವನು ನರಕದಲ್ಲಿ ಬೀಳುವನು ಓ! ವಸುದೇವಾ! ಈಗ ನೀನು ನಿನ್ನ ವರ್ಣಾಶ್ರಮೋಚಿತವಾದ ಅಧ್ಯಯನಾದಿಗಳಿಂದ ಋಷಿಋಣವನ್ನು ತೀರಿಸಿದಂತಾಯಿತು. ಬಲರಾಮಕೃಷ್ಣರನ್ನು ಪುತ್ರರನ್ನಾಗಿ ಪಡೆದುದರಿಂದ ಪುತ್ರಋಣವನ್ನೂ ತೀರಿಸಿದಂತಾಯಿತು. ಈಗ ನೀನು ಭಗವದಾರಾಧನರೂಪವಾದ ಯಜ್ಞಗಳಿಂದ ದೇವತೆಗಳ ಋಣವನ್ನು ತೀರಿಸಬೇಕಾದುದೊಂದೇ ಉಳಿದಿರುವುದು ಆ ಋಣವನ್ನು ತೀರಿಸಿದಮೇಲೆ, ಗೃಹಾದಿಗಳಲ್ಲಿ ಸಂಬಂಧಗಳನ್ನು ತೊರೆದು,ವಿರಕ್ತನಾಗಿ ತಪೋವನಕ್ಕೆ ಹೋಗಿ,ಮೋಕ್ಷಸಾಧನೆಗೆ ಯತ್ನಿಸಬೇಕು ವಸುದೇವಾ! ಭಗವಂತನಲ್ಲಿ ನಿನಗಿರುವ ಭಕ್ತಿಯು ಲೋಕಪ್ರಸಿದ್ಧವಾದುದು. ನಿನ್ನ ಭಕ್ತಿಗೆ ವಶನಾಗಿಯೇ ಆತನು ಕೃಷ್ಣರೂಪದಿಂದ ನಿನಗೆ ಪುತ್ರನಾಗಿ ಅವತರಿಸಿರುವನು" ಎಂದರು. ಈಮಾತನ್ನು ಕೇಳಿದೊಡನೆ ವಸುದೇವನು, ಆಋಷಿಗಳ ಉಪದೇಶದಂತೆ ಪರಮಪುರುಷನನ್ನು ಯಜ್ಞಗಳಿಂದಾರಾಧಿಸಬೇಕೆಂದು ನಿಶ್ಚಯಿಸಿ,ಆ ಮಹರ್ಷಿಗಳಿಗೆ ನಮಸ್ಕರಿಸಿ,ಮುಂದೆ ತಾನು ನಡೆಸಬೇಕಾದ ಯಜ್ಞಗಳಿಗೆ ಆ ಮಹರ್ಷಿಗಳನ್ನೇ ಋತ್ವಿಕ್ಕುಗಳನ್ನಾಗಿ ಪ್ರಾರ್ಥಿಸಿಕೊಂಡನು ಧಾರ್ಮಿಕೋತ್ತಮನಾದ ಆ ವಸುದೇವನ ಪ್ರಾರ್ಥನೆಯಂತೆ ಆ ಋಷಿಗಳೆಲ್ಲರೂ ಅಲ್ಲಿಯೇ ನಿಂತು, ಆವಸಿಂದ ಆ ಸ್ಯಮಂತಕರಪಂಚಕಕ್ಷೇತ್ರದಲ್ಲಿಯೇ, ಮಂತ್ರ, ತಂತ್ರ, ದ್ರವ್ಯಾದಿಲೋಪಗಳಿಲ್ಲದೆ,ಶಾಸ್ತ್ರೋಕ್ತವಾಗಿ ಯಜ್ಞನಳನ್ನು ಮಾಡಿಸಿದರು ವಸುದೇವನು ಯಜ್ಞದೀಕ್ಷೆಯನ್ನು ವಹಿಸಿ ಯಾಗವನ್ನುಮಾಡುವಕಾಲದಲ್ಲಿ, ಸಮಸ್ತಯಾದವರೂ ಸ್ನಾನಮಾಡಿ, ವಸ್ತ್ರಪುಷ್ಪಾಭರಣಗಳಿಂದಲಂಕೃತರಾಗಿ ಅವನನ್ನನುವರ್ತಿಸುತ್ತಿದ್ದರು. ಆಗ ವಸುದೇವನ ಅಂತಃಪುರಸ್ತ್ರೀಯರು ಸ್ವರ್ಣಾಭರಣಗಳಿಂದಲೂ, ಗಂಧಪುಷ್ಪವಸ್ತ್ರಾದಿಗಳಿಂದಲೂ ಅಲಂಕೃತರಾಗಿ, ಕೈಕಾಣಿಕೆಗಳೊಡನೆ ದೀಕ್ಷಾಶಾಲೆಗೆ ಬಂದು ಸಿದ್ಧರಾಗಿದ್ದರು ಮೃದಂಗ, ಪಟಹ, ಶಂಖ, ಭೇರಿ, ಆನಕ ಮೊದಲಾದ ಮಂಗಳವಾದ್ಯಗಳು ಮೊಳಗುತಿದ್ದುವು ನಟನರ್ತಕಿಯರು ನರ್ತನಮಾಡುತ್ತಿದ್ದರು ಪುರಾಣಪಠನಮಾಡತಕ್ಕ ಸೂತರೂ, ವಂಶಾವಳಿಯನ್ನು ಕೀರ್ತಿಸತಕ್ಕ ಮಾಗಧರೂ, ವಸುದೇ

ವನ ಗುಣಗಳನ್ನು ಸ್ತುತಿಸುತಿದ್ದರು. ಗಂಧರ್ವಸ್ತ್ರೀಯರು ತಮ್ಮತಮ್ಮ ಪತಿಗಳೊಡನೆ ಸುಸ್ವರದಿಂದ ಗಾನಮಾಡುತಿದ್ದರು. ಯಜ್ಞಕ್ಕೆ ಮೊದಲು ಋತ್ವಿಕ್ಕುಗಳೆಲ್ಲರೂ ಶಾಸ್ತ್ರೋಕ್ತರೀತಿಯಿಂದ ಹದಿನಾರುಕಲೆಗಳೊಡಗೂಡಿದ ಚಂದ್ರನಂತೆ, ಹದಿನಾರುಮಂದಿ ಪತ್ನಿಯರೊಡಗೂಡಿದ ಆ ವಸುದೇವನಿಗೆ, ನವನೀತದಿಂದ ಅಭ್ಯಂಗನವನ್ನು ಮಾಡಿಸಿ, ಕಣ್ಣುಗಳಿಗೆ ಅಂಜನವನ್ನಿಡಿಸಿ ಅಲಂಕರಿಸಿದರು ಆ ವಸುದೇವ ಪತ್ನಿಯರೆಲ್ಲರೂ ಶುದ್ಧವಾದ ದುಕೂಲದಿಂದಲೂ, ಹಾರ,ನೂಪುರ,ಕುಂಡಲಾದ್ಯಾಭರಣಗಳಿಂದಲೂ, ಅಲಂಕೃತರಾಗಿದ್ದರು. ಅವರನಡುವೆ ಯಜ್ಞದೀಕ್ಷೆಯನ್ನು ವಹಿಸಿದ ವಸುದೇವನು ಕೃಷ್ಣಾಜಿನವನ್ನು ಧರಿಸಿ ಶೋಭಿಸುತ್ತಿದ್ದನು ಋತ್ವಿಕ್ಕುಗಳೆಲ್ಲರೂ, ಹೊಸ ಪಟ್ಟೆಮಡಿಗಳನ್ನುಟ್ಟು, ಇತರಸದಸ್ಯರೊಡನೆ ಸಿದ್ಧರಾಗಿದ್ದರು. ಆ ಎರಡು ಗೋಷ್ಠಿಯೂ, ಪೂರ್ವದಲ್ಲಿ ಇಂದ್ರಯಾಗದಲ್ಲಿದ್ದ ಯಾಗಗೋಷ್ಠಿಯಂತೆ ಶೋಭಿಸುತ್ತಿತ್ತು. ಈ ಯಜ್ಞಕಾಲದಲ್ಲಿ ಬ್ರಹ್ಮಾದಿಸಮಸ್ತಜೀವಗಳಿಗೂ, ಅಧೀಶ್ವರರಾದ ಬಲರಾಮಕೃಷ್ಣರೂಕೂಡ, ತಮ್ಮತಮ್ಮ ಬಂಧುಗಳೊಡನೆಯೂ, ಹೆಂಡರುಮಕ್ಕಳೊಡನೆಯೂ, ಇತರವೈಭವಗಳೊಡನೆಯೂ, ಅಲ್ಲಿ ಬಂದು ಸಿದ್ಧರಾಗಿದ್ದರು ಯಜ್ಞಾರಂಭವಾಯಿತು ಆಗ ವಸುದೇವನು ಜ್ಯೋತಿಷ್ಟೋಮ, ದರ್ಶ ಪೂರ್ಣಮಾಸಗಳೇ ಮೊದಲಾದ ಪ್ರಾಕೃತ ಕರ್ಮಗಳಿಂದಲೂ, ಅವುಗಳ ವೈಕೃತಗಳೆನಿಸಿಕೊಂಡ ಸಾಧ್ಯಸತ್ರಾದಿಗಳಿಂದಲೂ, ಅಗ್ನಿಹೋತ್ರಾದಿಗಳೆಂಬ ಹೋಮಕಾರ್ಯಗಳಿಂದಲೂ, ದ್ರವ್ಯ ಜ್ಞಾನ ಕ್ರಿಯಾರೂಪಗಳಾದ ಭೂತಪಂಚಕ, ಜ್ಞಾನೇಂದ್ರಿಯಪಂಚಕ, ಕರ್ಮೇಂದ್ರಿಯಪಂಚಕಗಳಿಗೂ ನಿರ್ವಾಹಕನಾದ ಭಗವಂತನನ್ನು ವಿಧ್ಯುಕ್ತವಾಗಿ ಆರಾಧಿಸಿದನು ಆಮೇಲೆ ಋತ್ವಿಕ್ಕುಗಳಿಗೆ ಯಥೋಕ್ತವಾದ ದಕ್ಷಿಣೆಯನ್ನು ಕೊಟ್ಟನು. ಸದಸ್ಯರೆಲ್ಲರನ್ನೂ ಅಲಂಕರಿಸಿ, ತಾನೂ ದೇಹಾಲಂಕಾರಮಾಡಿಕೊಂಡು, ಗೋದಾನ, ಭೂದಾನ, ಕನ್ಯಾದಾನ ಮೊದಲಾದುವುಗಳನ್ನೂ ನಡೆಸಿದನು. ಆಮೇಲೆ ಯಜ್ಞಾಂತದಲ್ಲಿ ನಡೆಸತಕ್ಕ ಪತ್ನೀಸಂಯಾಜ, ಅವಭೃಥ್ಯಗಳೆಂಬ ಎರಡುಯಾಗಗಳೂ ನಡೆದುವು ಅದರಿಂದಾಚೆಗೆ ಎಲ್ಲರೂ ಪರಶುರಾಮನಿರ್ಮಿತವಾದ ಮಡುವಿನಲ್ಲಿಳಿದು, ಶಾಸ್ತ್ರೋಕ್ತ

ವಾಗಿ ಅವಭೃಥಸ್ನಾನವನ್ನು ಮುಗಿಸಿದರು. ಆಗ ವಸುದೇವನು ವಂದಿಗಳಿಗೆ ವಸ್ತ್ರಾಲಂಕಾರಗಳನ್ನು ಒಹುಮಾನಿಸಿದರು ಸ್ತ್ರೀಯರೆಲ್ಲರೂ ಸ್ನಾನಮಾಡಿ ಉತ್ತಮಾಲಂಕಾರಗಳಿಂದ ಶೋಭಿಸುತ್ತಿದ್ದರು ಆಮೇಲೆ ವಸುದೇವನು, ನಾಯಿ ಮೊದಲುಗೊಂಡು ಸಮಸ್ತಪ್ರಾಣಿಗಳಿಗೂ,ಅನ್ನವನ್ನಿಕ್ಕಿ ಸಂತೋಷಪಡಿಸಿದನು. ತನ್ನ ಬಂಧುಗಳಿಗೂ, ಅವರ ಹೆಂಡಿರುಮಕ್ಕಳಿಗೂ, ಯಥೋಚಿತವಾದ ಬಹುಮಾನವನ್ನು ಮಾಡಿದನು ವಿದರ್ಭ, ಕೋಸಲ, ಕಾಶಿ, ಕೇಕಯ, ಸೃಂಜಯಾದಿರಾಜರೆಲ್ಲರನ್ನೂ ಅವರವರ ಯೋಗ್ಯತಾನುಸಾರವಾಗಿ ಸತ್ಕರಿಸಿದನು. ಯಜ್ಞಕ್ಕಾಗಿ ಅಲ್ಲಿಗೆ ಬಂದಿದ್ದ ಸದಸ್ಯರೂ, ಋತ್ವಿಕ್ಕುಗಳೂ, ದೇವತೆಗಳೂ, ಮನುಷ್ಯರೂ, ಭೂತಗಣಗಳೂ ಪಿತೃಗಣಗಳೂ, ಚಾರಣರೂ, ವಸುದೇವನಿಂದ ಸತ್ಕೃತರಾಗಿ, ಶ್ರೀಕೃಷ್ಣನಿಗೆ ನಮಸ್ಕರಿಸಿ, ಅವನ ಅನುಮತಿಯನ್ನು ಪಡೆದು, ಆ ಯಾಗದ ವೈಭವವನ್ನು ಕೊಂಡಾಡುತ್ತ, ತಮ್ಮ ತಮ್ಮ ಸ್ಥಾನಗಳಿಗೆ ಹಿಂತಿರುಗಿದರು. ಹಾಗೆಯೇ, ಧೃತರಾಷ್ಟ್ರ, ವಿದುರ, ಧರ್ಮರಾಜ, ಭೀಷ್ಮ, ದ್ರೋಣಾದಿಗಳೂ, ಕುಂತೀದೇವಿಯೂ, ನಕುಲಸಹದೇವರೂ, ನಾರದಮುನಿಯೂ, ಪೂಜ್ಯನಾದ ವ್ಯಾಸಮಹರ್ಷಿಯೂ, ಕ್ರಮವಾಗಿ ತಮ್ಮ ಬಂಧುಗಳನ್ನೂ, ಯಾದವರನ್ನೂ ಪ್ರೀತಿಯಿಂದಾಲಿಂಗಿಸಿ, ಅವರನ್ನು ಬಿಟ್ಟು ಹೋಗಲಾರದೆ ವ್ಯಸನಪಡುತ್ತ, ಕೊನೆಗೆ ಪ್ರಯತ್ನದಿಂದ ತಮ್ಮ ತಮ್ಮ ಪರಿವಾರಗಳೊಡನೆ ಸ್ವದೇಶಗಳಿಗೆ ಹೋದರು. ಅಲ್ಲಿ ನಂದಗೋಪನಿಗೂ, ಅವನೊಡನೆ ಬಂದಿದ್ದ ಇತರಗೋಪಾಲಕರಿಗೂ ಎಲ್ಲರಿಗಿಂತಲೂ ವಿಶೇಷವಾದ ಸತ್ಕಾರಗಳು ನಡೆದುವು ಆತನು ಬಲರಾಮಕೃಷ್ಣರಲ್ಲಿಯೂ, ವಸುದೇವನಲ್ಲಿಯೂ, ಉಗ್ರಸೇನಾದಿಗಳಲ್ಲಿಯೂ ತನಗಿರುವ ನಿರತಿಶಯವಾದ ಪ್ರೀತಿಯಿಂದ, ಅವರನ್ನು ಬಿಟ್ಟು ಹೋಗಲಾರದೆ, ಕೆಲವುದಿನಗಳವರೆಗೆ ಅವರೊಡನೆಯೇ ನಿಂತುಬಿಟ್ಟನು ಓ ಪರೀಕ್ಷಿದ್ರಾಜಾ! ಹೀಗೆ ವಸುದೇವನು ದೊಡ್ಡ ಯಜ್ಞವನ್ನು ಮಾಡಿ ಮುಗಿಸಿ, ತನ್ನ ಮನೋರಥವೆಂಬ ಮಹಾಸಮುದ್ರವನ್ನು ದಾಟಿದಮೇಲೆ, ಸಂತೋಷದಿಂದ ಸಕಲಬಂಧುಮಿತ್ರರನ್ನೂ ಮಾತಾಡಿಸುತ್ತ, ನಂದನ ಬಳಿಗೆ ಬಂದು, ಅವನ ಕೈಯನ್ನು ಹಿಡಿದು ಹೀಗೆಂದು

ಹೇಳುವನು "ಅಣ್ಣಾ ! ಪ್ರಾಣಿಗಳನ್ನೆಲ್ಲಾ ಈಶ್ವರನು, ಸ್ನೇಹವೆಂಬ ಒಂದಾನೊಂದು ದೃಢವಾದ ಪಾಶದಿಂದ ಬಿಗಿದಿರುವನು. ಎಂತಹ ಧೀರರಾದರೂ ಅದನ್ನು ಕಿತ್ತು ಹಾಕಲಾರರು ದೇವತೆಗಳಿಗಾಗಲಿ, ಜ್ಞಾನಿಗಳಾದ ಯೋಗಿಗಳಿಗಾಗಲಿ, ಅದನ್ನು ಬಿಡಿಸಿಕೊಳ್ಳುವುದು ಸಾಧ್ಯವಲ್ಲವೆಂದೇ ನನಗೆ ತೋರುವುದು ಈ ವಿಷಯದಲ್ಲಿ ಈಗ ನಿನ್ನನ್ನೇ ನಿದರ್ಶನವಾಗಿ ಹೇಳಬಹುದು. ಏಕೆಂದರೆ, ಹಿಂದೆ ನಿನ್ನಿಂದ ನಾನು ಎಣೆಯಿಲ್ಲದ ಉಪಕಾರವನ್ನು ಪಡೆದೆನು. ಆ ಉಪಕಾರಕ್ಕೆ ಇದುವರೆಗೆ ನಾನು ತಕ್ಕ ಪ್ರತ್ಯುಪಕಾರವನ್ನು ನಡೆಸಲಾರದೆ ಹೋದುದರಿಂದ, ನನ್ನನ್ನು ಉಪಕಾರಸ್ಮರಣೆಯಿಲ್ಲದ ಅಜ್ಞರ ಗುಂಪಿನಲ್ಲಿಯೇ ಸೇರಿಸಬೇಕಾಗಿರುವುದು. ಹೀಗೆ ನೀನು ಮಾಡಿದ ಉಪಕಾರವು ನಮ್ಮಲ್ಲಿ ನಿಷ್ಫಲವೇ ಆಗಿದ್ದರೂಕೂಡ, ಈಗಲೂ ನೀನು ನನ್ನಲ್ಲಿ ಆ ಪೂರ್ವಸ್ನೇಹವನ್ನು ಬಿಡದಿರುವೆಯಲ್ಲವೆ? ಇದರಿಂದಲೇ ಈಶ್ವರನಿರ್ಮಿತವಾದ ಸ್ನೇಹಪಾಶವು ಎಂದಿಗೂ ಬಿಟ್ಟುಹೋಗತಕ್ಕುದಲ್ಲವೆಂದು ತೋರುವುದು. ಅಣ್ಣಾ ! ಮೊದಲು ನಾವು ಕಂಸನ ಬಾಧೆಯಲ್ಲಿ ಸಿಕ್ಕಿಬಿದ್ದಿದ್ದಾಗ, ನಿನಗೆ ಯಾವವಿಧವಾದ ಸಹಾಯವನ್ನೂ ಮಾಡಲಾರದಿದ್ದೆವು. ಈಗ ನಾವು ಮೊದಲಿನ ಸ್ಥಿತಿಗೆ ಬಂದಿದ್ದರೂ, ಆ ಐಶ್ವರ್ಯಮದದಿಂದ ಕುರುಡರಾಗಿ, ಹಿಂದೆ ನೀನು ಮಾಡಿದ ಉಪಕಾರವನ್ನೇ ಮರೆತಂತೆ ಉದಾಸೀನರಾಗಿರುವೆವು. ಇದರಿಂದ ನನ್ನ ಮನಸ್ಸಿಗೆ ತೋರುವುದೇನೆಂದರೆ, ಶ್ರೇಯಃಕಾಂಕ್ಷಿಯಾದ ಪುರುಷನಿಗೆ, ಎಂದಿಗೂ ಈ ವಿಧವಾದ ರಾಜ್ಯಾಧಿಕಾರವುಂಟಾಗಬಾರದು. ಐಶ್ವರ್ಯಮದದಿಂದ ಕೊಬ್ಬಿದವನು, ದೊಡ್ಡವರೆಂದೂ, ಬಂಧುಗಳೆಂದೂ, ಇಷ್ಟಮಿತ್ರರೆಂದೂ, ಸಾಧುಗಳೆಂದೂ, ನೋಡಲಾರನು" ಎಂದು ಹೇಳಿ, ಆ ವಸುದೇವನು, ಹಿಂದೆ ನಂದನು ತನಗೆ ಮಾಡಿದ ಉಪಕಾರವನ್ನು ಸ್ಮರಿಸಿಕೊಂಡು, ಧಾರೆಧಾರೆಯಾಗಿ ಕಣ್ಣೀರುಬಿಡುತ್ತ ಅಳುವುದಕ್ಕೂ ಆರಂಭಿಸಿದನು ಆಗ ನಂದನು ವಸುದೇವನಿಗೆ ನಾನಾವಿಧಸಮಾಧಾನೋಕ್ತಿಯನ್ನು ಹೇಳಿ, ದುಃಖಶಾಂತಿಯನ್ನು ಮಾಡಿದನು. ಆಮೇಲೆ ನಂದನ್ನು ತನ್ನ ಪರಿವಾರಗಳೊಡನೆ ಹೊರಡುವುದಕ್ಕೆ ಯತ್ನಿಸಿದಾಗಲೆಲ್ಲಾ ವಸುದೇವನೇ ಮೊದಲಾದ ಯಾದವರೆಲ್ಲರೂ, ಈ ಹೊತ್ತು, ನಾಳೆ

ನಾಗಿದ್ದು, ಎಂದು ನಿರ್ಬಂಧಿಸುತ್ತಿದ್ದುದರಿಂದಲೂ, ಬಲರಾಮಕೃಷ್ಣರಲ್ಲಿ ತನಗಿದ್ದ ಪ್ರೀತಿಯಿಂದಲೂ, ಅಲ್ಲಿಂದ ಬಿಟ್ಟು ಹೋಗಲಾರದೆ, ಮೂರು ತಿಂಗಳವರೆಗೆ ಅವರೊಡನೆಯೇ ವಾಸಮಾಡುತ್ತಿದ್ದನು ಈ ಮೂರುತಿಂಗ ಳಾದಮೇಲೆ ವಸುದೇವನೂ, ಉಗ್ರಸೇನನೂ, ಬಲರಾಮಕೃಷ್ಣರೂ, ಉದ್ಧವನೂ, ತಮತಮಗೆ ತೋರಿದಂತೆ ವಸ್ತ್ರಾಭರಣಗಳನ್ನೂ, ಇನ್ನೂ ಬೇಕುಬೇಕಾದ ಅಮೂಲ್ಯ ವಸ್ತುಗಳನ್ನೂ ಕೊಟ್ಟು,ನಂದನನ್ನು ಸತ್ಕರಿಸಿದ ರು.ಆಮೇಲೆ ಅವನು ತನ್ನ ಪರಿವಾರಗಳೊಡನೆ ಗೋಕುಲಕ್ಕೆ ಪ್ರಯಾಣಮಾ ಡಿದನು. ಹೀಗೆ ನಂದನೂ, ಗೋಪಸ್ತ್ರೀಯರೂ, ಗೋಪಾಲಕರೂ, ಅಲ್ಲಿಂದ ಬಿಟ್ಟು ಬರುವಾಗ,ಆ ಶ್ರೀಕೃಷ್ಣನ ಪಾದಾರವಿಂದಗಳಲ್ಲಿ ನಟ್ಟ ಮನಸ್ಸನ್ನು ತಿರುಗಿಸಲಾರದೆ, ಅನವರತವೂ ಅವನನ್ನೇ ಚಿಂತಿಸುತ್ತ, ದಾರಿಯುದ್ದಕ್ಕೂ ಆ ಕೃಷ್ಣನ ಗುಣಗಳನ್ನೇ ಕೊಂಡಾಡುತ್ತ, ಮಥುರೆಯ ಕಡೆಗೆ ಬಂದರು. ಹೀಗೆ ಯಜ್ಞಾರ್ಥವಾಗಿ ಬಂದಿದ್ದ ವಸುದೇವನ ಬಂಧುಗಳೆಲ್ಲರೂ ಅವರವರ ಸ್ಥಾನಗಳಿಗೆ ಹಿಂತಿರುಗಿದಮೇಲೆ, ಕೃಷ್ಣನನ್ನೇ!ಪರದೈವವೆಂದು ನಂಬಿ ಅವನ ಆಶ್ರಯದಲ್ಲಿದ್ದ ಋಷಿಗಳೆಲ್ಲರೂ, ಮಳೆಗಾಲವು ಸಮೀಪಿಸಿದುದನ್ನು ನೋಡಿ ;ದ್ವಾರಕಾಪುರಿಗೆ ಹಿಂತಿರುಗಿ ಬಂದು, ಅಲ್ಲಿದ್ದ ಜನರೆಲ್ಲರಿಗೂ, ಆ ತೀರ್ಥಯಾತ್ರೆಯ ಮಹಿಮೆಯನ್ನೂ, ವಸುದೇವನು ಅಲ್ಲಿ ನಡೆಸಿದ ಯಜ್ಞದ ವೈಭವವನ್ನೂ, ತಾವು ಅಲ್ಲಿ ಬಹುಕಾಲದಿಂದಗಲಿದ್ದ ಇಷ್ಟಮಿತ್ರ ಬಂಧುಗಳ ಸಮಾಗಮದಿಂದ ಸಂತೋಷಿಸಿದುದನ್ನೂ, ಹೇಳಿಹೇಳಿ ಕೊಂ ಡಾಡುತ್ತಿದ್ದರು. ಇದು ಎಂಬತ್ತುನಾಲ್ಕನೆಯ ಅಧ್ಯಾಯವು.

---

{ ವಸುದೇವನು ಶ್ರೀ ಕೃಷ್ಣನ ಯಾಥಾತ್ಮ್ಯವನ್ನು ವರ್ಣಿಸಿದುದು. }

ಓ ಪರೀಕ್ಷಿದ್ರಾಜಾ! ಅದರಿಂದಾಚೆಗೆ, ಒಮ್ಮೆ ಬಲರಾಮಕೃಷ್ಣ ರಿಬ್ಬರೂ ತಂದೆಯಾದ ವಸುದೇವನ ಬಳಿಗೆ ಬಂದು, ಅವನಿಗೆ ಪಾದಾಭಿ ವಂದನವನ್ನು ಮಾಡಿದರು ವಸುದೇವನು ತನ್ನ ಕುಮಾರರಿಬ್ಬರನ್ನೂ ಪ್ರೀತಿಯಿಂದಾಲಿಂಗಿಸಿ ಮನ್ನಿಸಿದನು. ಶ್ರೀ ಕೃಷ್ಣನನ್ನು ನೋಡಿದೊಡನೆ

ವಸುದೇವನಿಗೆ, ಹಿಂದೆ ಸ್ಯಮಂತಕ್ಷೇತ್ರದಲ್ಲಿ ಮಹರ್ಷಿಗಳು ತನಗೆ ಸೂಚಿಸಿದ್ದ ರಾಮಕೃಷ್ಣರ ಪ್ರಭಾವವು ನೆನಪಿಗೆ ಬಂದಿತು ಆ ಮಹರ್ಷಿಗಳ ಮಾತಿನಿಂದ ಅವನಿಗೆ ತನ್ನ ಮಕ್ಕಳು ಮಹಾಪ್ರಭಾವವುಳ್ಳವರೆಂಬ ನಂಬಿಕೆ ಹುಟ್ಟಿತು ಆಗ ವಸುದೇವನು ಆ ಪುತ್ರರಿಬ್ಬರನ್ನೂ ಕುರಿತು ಹೀಗೆಂದು ಹೇಳುವನು ಕೃಷ್ಣಾ! ಕೃಷ್ಣಾ! ನಿನ್ನ ಯಾಥಾತ್ಮ್ಯವು ಈಗೀಗಲೇ ನನಗೆ ತಿಳಿಯುತ್ತಿರುವುದು. ನೀನು ಯೋಗೀಶ್ವರರಿಗೆಲ್ಲಾ ಈಶ್ವರನೆನಿಸಿರುವೆ. ಓ ಬಲರಾಮಾ! ಪುರಾಣಪುರುಷನಾದ ಸಂಕರ್ಷಣನೇ ನೀನು! ನೀವಿಬ್ಬರೂ ಈ ಜಗತ್ತಿಗೆಲ್ಲಾ ಕಾರಣಭೂತವಾದ ಸಾಕ್ಷಾತ್ಪ್ರಕೃತಿಪುರುಷಶರೀರಕರೆಂಬುದನ್ನೂ, ಅವೆರಡಕ್ಕೂ ವಿಲಕ್ಷಣವೆನಿಸಿದ ಪರಮಾತ್ಮಸ್ವರೂಪರೆಂಬುದನ್ನೂ ನಾನು ತಿಳಿದೆನು ಈ ಪ್ರಪಂಚದಲ್ಲಿ, *ಎಲ್ಲಿ, ಯಾವಾಗ, ಯಾವುದರಿಂದ, ಯಾವುದರಮೂಲಕವಾಗಿ, ಯಾವಕಾರಣಕ್ಕಾಗಿ, ಯಾವುದರ ಸಂಬಂಧವುಳ್ಳ ಯಾವಯಾವ ವಸ್ತುವು, ಹೇಗೆ ಹುಟ್ಟಿರುವುದೋ, ಅವೆಲ್ಲವೂ, ಪ್ರಕೃತಿಪುರುಷೇಶ್ವರರೆನಿಸಿಕೊಂಡ ನೀವೇಹೊರತು ಬೇರೆಯಲ್ಲ! ಓ ಅಧೋಕ್ಷಜಾ! ಪರಮಾತ್ಮಸ್ವರೂಪಾ! ಹೀಗೆ ನಿನ್ನಿಂದ ಸೃಷ್ಟಿಸಲ್ಪಟ್ಟ ನಾನಾವಿಧವಾದ ಪ್ರಪಂಚದಲ್ಲಿ, ನಿನಗೆ ಶರೀರಭೂತವಾದ ಜೀವನೊಡನೆ ನೀನೂ ಪ್ರವೇಶಿಸಿ, ಅವುಗಳನ್ನು ರಕ್ಷಿಸುತ್ತಿರುವೆ! ಅದರೊಳಗಣ ಪ್ರಾಣ ಜೀವಗಳೆರಡೂ ನಿನಗೆಶರೀರವೆನಿಸಿದ್ದರೂ,ಆ ಶರೀರಗತವಾದ ದೋಷಗಳಿಗಾಗಲಿ,ವಿಕಾರಗಳಿಗಾಗಲಿ ನೀನು ಈಡಾಗತಕ್ಕವನಲ್ಲ! ಸೃಷ್ಟಿಸಾಧನಗಳಾದ ಪ್ರಾಣಗಳು, ಪಂಚಭೂತಗಳು, ಏಕಾದಶೇಂದ್ರಿಯಗಳು, ಮಹದಹಂಕಾರ ತತ್ವಗಳು, ಇವೆಲ್ಲಕ್ಕೂ ಸೃಷ್ಟಿಕಾರ್ಯೋಪಯುಕ್ತಗಳಾದ ಯಾವಯಾವ ಶಕ್ತಿಗಳುಂಟೋ, ಅವೆಲ್ಲವೂ ಅಂತರಾತ್ಮನಾದ ನಿನ್ನ ಶಕ್ತಿಗಳೇ! ಏಕೆಂದರೆ ಆ ಪ್ರಾಣಾದಿಗಳೆಲ್ಲವೂ ಅಸ್ವತಂತ್ರಗಳು! ಅವುಗಳಲ್ಲಿ ಒಂದೊಂದಕ್ಕೆ ಒಂದೊಂದು ಶಕ್ತಿಯುಮಾತ್ರ ನಿನ್ನಿಂದ ನಿಯಮಿತವಾಗಿರುವುದು ಆ ಜೀವ ಪ್ರಾಣಗಳಲ್ಲಿ ಒಂದರ ಕಾರ್ಯವನ್ನು ಮತ್ತೊಂದು ನಡೆಸಲಾರದು. ಹೀಗೆ ಅವುಗಳ ಶಕ್ತಿಯಲ್ಲಿಯೇ ಒಂದಕ್ಕೊಂದಕ್ಕೆ ಹೊಂದಿಕೆಯಿಲ್ಲದಿರುವಾಗ,

* ಇಲ್ಲಿ ಅಧಿಕರಣ ಮೊದಲಾದ ಕಾರಕಗಳೆಲ್ಲವೂ ನೀನೇ ಎಂದು ಭಾವವು.

ಅವು ಸ್ವತಂತ್ರವಾಗಿ ಯಾವ ಕೆಲಸವನ್ನು ತಾನೇ ಮಾಡಬಲ್ಲುವು? ಅಹೇ ತನಗಳಾದ ದೇಹಾದಿಗಳ ಚೇಷ್ಟೆಯೆಲ್ಲವೂ ಜೀವಾತ್ಮಪರಮಾತ್ಮರ ಚೇಷ್ಟೆ ಯಲ್ಲದೆ ಬೇರೆಯಲ್ಲ! ಜೀವನ ಚೇಷ್ಟೆಗೂ ಪರಮಾತ್ಮನಾದ ನೀನೇ ನಿರ್ವಾಹಕನು. ಜೀವನಿಗೇ ಆ ಸ್ವಾತಂತ್ರ್ಯವಿಲ್ಲದಿರುವಾಗ ಪ್ರಾಣಾದಿಗಳಿಗೆ ಆ ಸ್ವಾತಂತ್ರ್ಯವನ್ನು ಹೇಗೆ ಹೇಳಬಹುದು? ಚಂದ್ರನಿಗೆ ಕಾಂತಿ, ಅಗ್ನಿಗೆ ತೇಜಸ್ಸು, ಸೂರ್ಯನಿಗೆ ಪ್ರಭೆ, ನಕ್ಷತ್ರಗಳಿಗೆ ಹೊಳಪು ಮಿಂಚಿಗೆ ಪ್ರಕಾಶ, ಪರ್ವತಗಳಿಗೆ ಸ್ಥೈರ್ಯ, ಭೂಮಿಯಲ್ಲಿರತಕ್ಕ ಗಂಧ, ಇವೆಲ್ಲವೂ ವಾಸ್ತವವಲ್ಲಿ ನೀನೇ! ಜಲವು ಲೋಕಕ್ಕೆ ಜೀವನಹೇತುವಾಗಿರುವುದು ಅವುಗಳಲ್ಲಿರತಕ್ಕ ಸ್ನೇಹವೂ, ರಸವೂ, ಅವುಗಳ ಮಾಧುರ್ಯವೂ ಇವೆಲ್ಲವೂ ನಿನಗೆ ಅಧೀನ ವಾದುವೇ! ವಾಯುವಿಗಿರತಕ್ಕ ಶಕ್ತಿ, ಬಲ, ವೇಗ, ಧಾರಣಶಕ್ತಿ, ನಡೆ, ಇವೆಲ್ಲವೂ,ನಿನ್ನ ಶಕ್ತಿಯೇ! ದಿಕ್ಕುಗಳೂ, ಆಕಾಶವೂ, ಅವುಗಳಲ್ಲಿ ಕಾಣತಕ್ಕ ಅವಕಾಶವೂ, ಆಕಾಶದ ಗುಣವಾದ ಶಬ್ದವೂ ನೀನೇ! ಶಬ್ದವ್ಯಂಜಕಗಳಾದ ಅಕಾರಾದಿವರ್ಣಗಳೂ, ಓಂಕಾರವೂ, ಬೇರೆಬೇರೆ ಆಕಾರಗಳ ಪೃಥಕ್ಶ್ರುತಿ ಯೂ ನೀನೇ! ಇಂದ್ರಿಯಗಳಿಗಿರುವ ವಿಷಯಗ್ರಹಣಶಕ್ತಿಯೂ, ಆ ಶಕ್ತಿಗ ಳನ್ನು ಕೊಡತಕ್ಕ ಅಭಿಮಾನದೇವತೆಯೂ ನೀನೇ!ಬುದ್ಧಿಯಲ್ಲಿರತಕ್ಕ ಬೋಧ ಶಕ್ತಿಯೂ, ಜೀವನಿಗೆ ಎಡೆಬಿಡದೆ ಅನುಸರಿಸಿಬರುವ ಸಂಸ್ಕಾರಜನ್ಯಜ್ಞಾ ನವೂ ನೀನೇ! ಆಕಾಶಾದಿಭೂತಗಳಿಗೆ ಕಾರಣವಾದ ತಾಮಸಾಹಂಕಾರವೂ, ಇಂದ್ರಿಯಗಳಿಗೆ ಅನುಗ್ರಾಹಕವಾದ ತೈಜಸಾಹಂಕಾರವೂ,ವೈಕಾರಿಕವೆನಿಸಿ ಕೊಂಡ ಸಾತ್ವಿಕಾಹಂಕಾರವೂ, ಕರ್ಮಮಾರ್ಗದಲ್ಲಿರತಕ್ಕವರಿಗೆ ಆ ಕರ್ಮ ಫಲವನ್ನು ಕೊಡತಕ್ಕ ಪ್ರಧಾನಕರ್ಮವೂ ನೀನೇ!ಮಣ್ಣು. ಭಂಗಾರ ಮೊದ ಲಾದ ದ್ರವ್ಯಗಳಿಗೆ, ಆಗಾಗ ಉಂಟಾಗತಕ್ಕ ವಿಕಾರಗಳು ನಶ್ವರಗಳಾ ದರೂ,ಪ್ರಧಾನದ್ರವ್ಯಕ್ಕೆಮಾತ್ರ ನಾಶವಿಲ್ಲವೆ, ಎಲ್ಲಾ ಅವಸ್ಥೆಗಳಲ್ಲಿಯೂ ಅದು ಅನುಸರಿಸಿ ಇರುವಂತೆ ಲೋಕದಲ್ಲಿ ಆಯಾಭಾವಗಳು ನಶ್ವರಗಳೆನಿಸಿ, ಒಮ್ಮೊಮ್ಮೆ ಕಾಣಿಸುತ್ತಲೂ, ಮತ್ತೊಮ್ಮೆ ಕಾಣಿಸದೆಯೂ ಹೋಗು ತ್ತಿರುವಾಗ, ಅವುಗಳಿಗೆ ಆಶ್ರಯವಾಗಿ ಸ್ಥಿರವಾದ ಭಾವವು ಯಾವುದೋ ಅದು ನೀನೇ ಆಗಿರುವೆ. ಸತ್ವರಜಸ್ತಮಸ್ಸುಗಳೆಂಬ ಗುಣಗಳೂ, ಆ ಗುಣ

ಗಳ ವೃತ್ತಿಗಳೂ, ಪರಬ್ರಹ್ಮನೆನಿಸಿಕೊಂಡ ನಿನ್ನ ಸಂಕಲ್ಪರೂಪಜ್ಞಾನ ದಿಂದಲೇ ಕಲ್ಪಿತಗಳಾಗಿರುವುವು ಆದುದರಿಂದ ಈ ಕಲ್ಪನೆಗಳು ಚೇತನಾ ಚೇತನಗಳಿಗಿಂತಲೂ ಭಿನ್ನನಾದ ನಿನ್ನಲ್ಲಿ ಸಂಬಂಧಿಸಲಾರವು ಈ ವಿಕಾ ರಗಳೆಲ್ಲವೂ ಪ್ರಕೃತಿ ಮೊದಲಾದುವುಗಳಲ್ಲಿಯೇ ಸೇರಿರುವುವು ಆದರೆ ನೀನು ಅಂತಹ ವಿಕಾರವಸ್ತುಗಳೊಳಗೆ ಯಾವಾಗಲೂ ಅಂತರ್ಯಾಮಿಯಾಗಿ ಪ್ರವೇ ಶಿಸಿರುವೆಯೆಂದು ಶಾಸ್ತ್ರಪ್ರಮಾಣಗಳಿಂದ ಸಿದ್ಧವಾಗುವುದು, ಸತ್ವಾದಿ ಗುಣಗಳ ಪ್ರವಾಹರೂಪವಾದ ಸಂಸಾರದಲ್ಲಿ ಬಿದ್ದವರು, ಸರ್ವಾಂತರಾತ್ಮ ನಾದ ನಿನ್ನ ಯಾಥಾತ್ಮ್ಯವನ್ನು ತಿಳಿಯಲಾರದೆ,ಅಜ್ಞಾನದಿಂದಲೂ,ಪಾಪ ಪುಣ್ಯಕರ್ಮಸಂಬಂಧದಿಂದಲೂ ಕಳವಳಿಸುವರು. ಈ ಲೋಕದಲ್ಲಿ ದುರ್ಲ ಭವಾದ ಮನುಷ್ಯಜನ್ಮವನ್ನೂ, ಇಂದ್ರಿಯಪಟುತ್ವವನ್ನೂ ಹೊಂದಿ ದ್ದರೂ ಪುರುಷನು ನಿನ್ನ ಮಾಯೆಯಿಂದ ಮೋಹಿತನಾಗಿ, ತನಗೆ ಶ್ರೇಯ ಸ್ಸಾಧನವಾದ ನಿನ್ನ ಯಾಥಾತ್ಮ್ಯಜ್ಞಾನವನ್ನೇ ಮರೆತಿರುವನು. ಅಯ್ಯೋ! ಅಂತವನ ಆಯಸ್ಸು ವ್ಯರ್ಥವಾಗಿಯೇ ಕಳೆದು ಹೋಗುತ್ತಿರು ವುದು ಈ ದೇಹದಲ್ಲಿಯೂ, ದೇಹಸಂಬಂಧಿಗಳಾದ ಹೆಂಡಿರು ಮಕ್ಕಳು ಮೊದಲಾದವರಲ್ಲಿಯೂ, “ನಾನು, ನನ್ನದು” ಎಂಬ ಸ್ನೇಹಪಾಶಗಳಿಂದ ನೀನೇ ಸಮಸ್ತಜಗತ್ತನ್ನೂ ಕಟ್ಟಿಹಾಕಿರುವೆ ಕೃಷ್ಣಾ! ನೀವಿಬ್ಬರೂ ನಿಜ ವಾಗಿಯೂ ನನ್ನ ಮಕ್ಕಳಲ್ಲ! ನೀವಿಬ್ಬರೂ ಸಾಕ್ಷಾತ್ಪ್ರಕೃತಿಪುರುಷರು. ಭೂಮಿಗೆ ಭಾರಭೂತರಾದ ಕ್ಷತ್ರಿಯರನ್ನು ನಿಗ್ರಹಿಸುವುದಕ್ಕಾಗಿಯೇ ಅವತ ರಿಸಿದವರು. ನಿನ್ನ ಅವತಾರಕಾಲದಲ್ಲಿ ನಿನ್ನ ಬಾಯಿಂದಲೇ ಈ ವಿಷಯವನ್ನು ನೀನು ನನಗೆ ತಿಳಿಸಿದ್ದರೂ, ಆಗಾಗ ನಾನೂ ನಿನ್ನ ಮಾಯೆಯಿಂದ ಮೋಹಿತನಾಗಿ, ನಿನ್ನನ್ನು ಪುತ್ರಮೋಹದಿಂದ ಕಾಣುತ್ತಿದ್ದೆನು ಓ ದೀನ ಬಂಧೋ! ಈಗ ನಾನು ಬೇರೆ ಉಪಾಯವೊಂದನ್ನೂ ಕಾಣದೆ, ಸಂಸಾರ ಭಯನಿವರ್ತಕವಾದ ನಿನ್ನ ಪಾದಾರವಿಂದವನ್ನು ಶರಣಹೊಂದಿರುವೆನು. ದೇಹದಲ್ಲಿ ಆತ್ಮಬುದ್ಧಿಯಿಂದಲೂ, ಪರಾತ್ಪರನಾದ ನಿನ್ನಲ್ಲಿ ಪುತ್ರಮೋಹ ದಿಂದಲೂ, ಬುದ್ಧಿಗೆಟ್ಟು ನಾನು ವಿಷಯಾಭಿಲಾಷೆಯಿಂದ ಕಳೆದ ಕಾಲವು ಇಷ್ಟಕ್ಕೇ ಸಾಕು. ಇನ್ನುಮೇಲಾದರೂ ನನಗೆ ವಿಷಯವೈರಾಗ್ಯವನ್ನು ಅನು

ಗ್ರಹಿಸಬೇಕು ಕೃಷ್ಣಾ! ನಿನ್ನ ಜನನಕಾಲದಲ್ಲಿ ಪ್ರಸವಗೃಹದಲ್ಲಿದ್ದಾಗಲೇ ನೀನು ನಮ್ಮನ್ನು ನೋಡಿ''ನನಗೆ ಕರ್ಮಾಧೀನವಾದ ಜನ್ಮಾದಿಗಳಿಲ್ಲದಿದ್ದರೂ ಧರ್ಮಮರ್ಯಾದೆಯನ್ನು ರಕ್ಷಿಸುವುದಕ್ಕಾಗಿ ಒಂದೊಂದು ಯುಗದಲ್ಲಿಯೂ ಹೀಗೆ ಅವತರಿಸುತ್ತಿರುವೆನು" ಎಂದು ಹೇಳಿರುವೆ? ನೀನು ಈವಿಧವಾಗಿ ಆಗಾಗ ಅನೇಕದೇಹಗಳನ್ನು ವಹಿಸುತ್ತಲೂ,ಬಿಡುತ್ತಲೂ ಇದ್ದರೂ, ನಿನ್ನ ಸ್ವಭಾವವುಮಾತ್ರ ಆಕಾಶದಂತೆ ನಿರ್ಲೇಪವಾಗಿರುವುದು. ಎಲೈ ಪುಣ್ಯ ಶ್ಲೋಕನೆ! ಈ ನಿನ್ನ ಮಾಯೆಗಳನ್ನೂ, ವಿಭೂತಿಗಳನ್ನೂ ಯಾವನು ತಾನೇ ತಿಳಿಯಬಲ್ಲನು" ಎಂದನು.

ಓ! ಪರೀಕ್ಷಿದ್ರಾಜಾ! ತನಗೆ ತಂದೆಯಾದ ವಸುದೇವನು ಹೇಳಿದ ಈ ಸ್ತುತಿವಾಕ್ಯವನ್ನುಕೇಳಿ ಕೃಷ್ಣನು, ಮಂದಹಾಸದಿಂದ ನಗುತ್ತ ವಿನಯ ಪೂರ್ವಕವಾದ ಮೃದುವಾಕ್ಯಗಳಿಂದ ಹೀಗೆಂದು ಹೇಳುವನು.''ಜನಕಾ!ನೀನು ನನ್ನನ್ನೇ ಪರಬ್ರಹ್ಮನೆಂದು ಹೇಳಿದೆ! ನಿನ್ನ ಮಕ್ಕಳಾದ ನಮಗೆ,ಲೋಕದಲ್ಲಿ ಸಮಸ್ತವೂ ಬ್ರಹ್ಮಾತ್ಮಕವೆಂಬ ತತ್ವವನ್ನು ಉಪದೇಶಿಸ.ವುದಕ್ಕಾಗಿ ನೀನು ಹೀಗೆ ಹೇಳಿರಬಹುದೇಹೊರತು ಬೇರೆಯಲ್ಲ! ನಾನು ಅಷ್ಟೊಂದು ಗೌರ ವಕ್ಕೆ ಪಾತ್ರನಲ್ಲದಿದ್ದರೂ, ನೀನು ಹೇಳಿದ ಮಾತು ಯುಕ್ತವೆಂದೇ ಭಾವಿಸ ಬೇಕಾಗಿದೆ ಜನಕಾ! ನಾನಾಗಲಿ, ನೀನಾಗಲಿ, ನನ್ನಣ್ಣನಾದ ಬಲರಾಮ ನಾಗಲಿ, ಅಷ್ಟೇಕೆ? ಈ ಚರಾಚರಾತ್ಮಕವಾದ ಸಮಸ್ತಪ್ರಪಂಚವೂ ಪರ ಬ್ರಹ್ಮಾತ್ಮಕವಾಗಿಯೇ ಇರುವುದೆಂದು ತಿಳಿಯಬೇಕು ಏಕೆಂದರೆ, ಸ್ವಯಂ ಪ್ರಕಾಶನಾದ ಪರಮಾತ್ಮನು ತಾನೊಬ್ಬನೇ ಆಗಿದ್ದರೂ, ಪ್ರಾಕೃತಗುಣ ಗಳ ಸಂಬಂಧವಿಲ್ಲದವನಾಗಿದ್ದರೂ, ಆ ಸತ್ವಾದಿಗುಣಗಳಮೂಲಕವಾಗಿ ತನ್ನಿಂದ ಸೃಷ್ಟಿಸಲ್ಪಟ್ಟ ದೇವಮನುಷ್ಯಾದಿಸಮಸ್ತಶರೀರಗಳಲ್ಲಿಯೂ ವ್ಯಾಪಿಸಿ, ತಾನೇ ನಾನಾವಿಧದಿಂದ ಕಾಣಿಸಿಕೊಳ್ಳುವನೆಂದು ಪ್ರಮಾಣಗ ಳಿಂದ ಸ್ಪಷ್ಟವಾಗುವುದು. ಪೃಥಿವಿ, ಅಪ್ಪು, ತೇಜಸ್ಸು, ವಾಯು, ಆಕಾ ಶಗಳೆಂಬ ಪಂಚಭೂತಗಳೂ, ತಮ್ಮಿಂದುಂಟಾದ ಕಾರ್ಯವಸ್ತುಗಳಲ್ಲಿ ತಾವೇ ಆಯಾ ಆಕೃತಿಗೆ ತಕ್ಕಂತೆ, ಸಣ್ಣದಾಗಿಯೂ, ದೊಡ್ಡದಾಗಿಯೂ, ಪ್ರತ್ಯೇ

ಕವಾಗಿಯೂ, ಗುಂಪಾಗಿಯೂ ತೋರುವಂತೆ, ಈ ಪರಮಾತ್ಮನು, ತನ್ನ ಒಂದೇ ಸ್ವರೂಪವನ್ನು ನಾನಾವಿಧವಾಗಿ ತೋರಿಸುತ್ತಿರುವನು." ಎಂದನು.

ಹೀಗೆ ಭಗವಂತನಾದ ಕೃಷ್ಣನ ಬಾಯಿಂದ ಹೊರಟ ತತ್ವಾರ್ಥ ಸಾರವನ್ನು ಕೇಳಿ ವಸುದೇವನು ಪ್ರಪಂಚದಲ್ಲಿ! ಬ್ರಹ್ಮಾತ್ಮಕವಲ್ಲದ ವಸ್ತುವೇ ಇಲ್ಲವೆಂಬ ನಿಶ್ಚಯಜ್ಞಾನವನ್ನು ಹೊಂದಿ ಸಂತೋಷದಿಂದಿದ್ದನು,

{ ಕೃಷ್ಣನು, ತನಗಿಂತ ಮೊದಲು ದೇವಕೀದೇವಿಯಲ್ಲಿ ಹುಟ್ಟಿದ ಆರು ಗರ್ಭಶಿಶುಗಳನ್ನು ತಂದು ತೋರಿಸಿದುದು. }

ಪರೀಕ್ಷಿದ್ರಾಜಾ! ಹೀಗಿರುತ್ತಿರುವಾಗ ಒಮ್ಮೆ, (ಶ್ರೀಕೃಷ್ಣನಿಗೆ ತಾಯಿಯೆನಿಸಿದುದರಿಂದ) ತಾನೇ ಸರ್ವದೇವತಾಸ್ವರೂಪೆಯೆನಿಸಿ ಕೊಂಡ ದೇವಕೀದೇವಿಯು, ತನ್ನ ಮಕ್ಕಳಾದ ಬಲರಾಮಕೃಷ್ಣರು ಆಗಾಗ ನಡೆಸಿದ ಅದ್ಭುತಕಾರ್ಯಗಳನ್ನು ಕೇಳಿ ಆನಂದಿಸುತ್ತಿದ್ದಳು. ಅದ ರಲ್ಲಿ ಶ್ರೀಕೃಷ್ಣನು ಸಾಂದೀಪನಿಯೆಂಬ ತನ್ನ ಗುರುವಿನ ಮೃತಪುತ್ರನನ್ನು ಬದುಕಿಸಿ ತಂದ ವೃತ್ತಾಂತವನ್ನು ಕೇಳಿದಳು! ಆಗ ಅವಳಿಗೆ, ಹಿಂದೆ ಕಂಸ ನಿಂದ ಸಂಹೃತರಾದ ತನ್ನ ಆರುಮಕ್ಕಳ ಮರಣವು ನೆನಪಿಗೆ ಬಂದಿತು ತ ಟ್ಟನೆ ಅವಳ ಕಣ್ಣುಗಳಲ್ಲಿ ನೀರು ತುಂಬಿತು ಆಗ ರಾಮಕೃಷ್ಣರನ್ನು ಕರೆಸಿ ಬಹಳದೈನ್ಯದಿಂದ ಹೀಗೆಂದು ಹೇಳುವಳು! "ರಾಮಾ! ರಾಮಾ! ನೀನು ಅಪ್ರಮೇಯಪ್ರಭಾವವುಳ್ಳವನು ಕೃಷ್ಣಾ! ನೀನು ಸಮಸ್ತಯೋಗೀಶ್ವ ರರಿಗೂ ಈಶ್ವರನೆನಿಸಿಕೊಂಡಿರುವೆ ನೀವಿಬ್ಬರೂ ಸೃಷ್ಟಿಕರ್ತರಾದ ಬ್ರಹ್ಮಾದಿಗಳಿಗೂ ಈಶ್ವರರೆಂದೂ, ಆದಿಪುರುಷರೆಂದೂ, ನಾನು ಕೇಳಿ ಬಲ್ಲೆನು ಕಾಲವಶದಿಂದ ಸತ್ವಗುಣವು ಕೆಟ್ಟಾಗ, ಶಾಸ್ತ್ರಮರ್ಯಾದೆಯನ್ನು ಲ್ಲಂಘಿಸಿ ಪ್ರವರ್ತಿಸುವ ಭೂಭಾರಭೂತರಾದ ಕ್ಷತ್ರಿಯರನ್ನು ಕೊಲ್ಲುವುದ ಕ್ಕಾಗಿಯೇ ನೀವಿಬ್ಬರೂ ಅವತರಿಸಿರುವಿರಿ! ಕೃಷ್ಣಾ! ಯಾವನ ಶಕ್ತಿಯಲ್ಲಿ ಕೋಟಿಕಲಾಂಶಮಾತ್ರದಿಂದಲೇ ಪ್ರಪಂಚದ ಸೃಷ್ಟಿ ಸ್ಥಿತಿಲಯಗ ಳೆಲ್ಲವೂ ನಡೆದು ಹೋಗುತ್ತಿರುವುವೋ ಅಂತಹ ಪರಬ್ರಹ್ಮವೇ ನೀನಾ ಗಿರುವುದರಿಂದ, ಈಗ ನಾನು ನಿನ್ನಲ್ಲಿ ಮರೆಹೊಕ್ಕು ಒಂದು ವಿಷಯವನ್ನು

ಪ್ರಾರ್ಥಿಸುವೆನು ಹಿಂದೆ ನೀವು ನಿಮ್ಮ ವಿದ್ಯಾಗುರುವಾದ ಸಾಂದೀಪನಿಯೆಂಬ ಬ್ರಾಹ್ಮಣನ ಕೋರಿಕೆಯಂತೆ, ಬಹುಕಾಲಕ್ಕೆ ಹಿಂದೆ ಮೃತನಾದ ಅವನ ಪುತ್ರನನ್ನು ಯಮಲೋಕದಿಂದ ಬದುಕಿಸಿ ತಂದು, ಅವರಿಗೆ ಗುರುದಕ್ಷಿಣೆಯಾಗಿ ಕೊಟ್ಟಿರೆಂದು ಕೇಳಿರುವೆನು.ಅದರಂತೆಯೇ ಈಗ ನನಗೂ, ಒಂದು ಕೋರಿಕೆಯನ್ನೀಡೇರಿಸಬೇಕು. ದುಷ್ಟನಾದ ಕಂಸನು, ನಿಮಗೆ ಮೊದಲು ನನ್ನ ಗರ್ಭದಲ್ಲಿ ಜನಿಸಿದ ಆರುಮಕ್ಕಳನ್ನೂ ಕೊಂದುಹಾಕಿರುವನು. ಆ ಮಕ್ಕಳನ್ನು ತಿರುಗಿ ಒಂದಾವರ್ತಿ ಕಣ್ಣಿಂದ ನೋಡಬೇಕೆಂದುನನಗೆ ಆಸೆಯಿರುವುದು ಸಮಸ್ತಯೋಗಶಕ್ತಿಗಳಿಗೂ ನೀವೇ ಪ್ರಭುಗಳಾದುದರಿಂದ ಆ ಕಾರ್ಯವೇನೂ ನಿಮಗೆ ಅಸಾಧ್ಯವಲ್ಲ! ನನ್ನ ಉದ್ದೇಶವನ್ನು ಕೈಗೂಡಿಸಬೇಕು" ಎಂದಳು, ಹೀಗೆ ತಾಯಿಯು ದೈನ್ಯದಿಂದ ಪ್ರಾರ್ಥಿಸುವುದನ್ನು ಕೇಳಿ, ಒಡನೆಯೇ ರಾಮಕೃಷ್ಣರಿಬ್ಬರೂ, ತಮ್ಮ ಯೋಗಮಾಯೆಯನ್ನವಲಂಬಿಸಿ, ಸುತಲವನ್ನು ಪ್ರವೇಶಿಸಿದರು ಸಕಲಜೀವಗಳಿಗೂ ದೈವಸ್ವರೂಪರಾದ ಬಲರಾಮಕೃಷ್ಣರಿಬ್ಬರೂ ಬಂದುದನ್ನು ಕೇಳಿ, ದೈತ್ಯರಾಜನಾದ ಬಲಿಚಕ್ರವರ್ತಿಯು, ಉತ್ಸಾಹದಿಂದ ಸಪರಿವಾರನಾಗಿ ಇದಿರುಗೊಂಡು ಬಂದು, ಅವರಿಗೆ ನಮಸ್ಕರಿಸಿ, ಇಬ್ಬರಿಗೂ ಉತ್ತಮಾಸನಗಳನ್ನು ತಂದೊಪ್ಪಿಸಿದನು. ಸುಖಾಸೀನರಾದ ಅವರ ಪಾದಗಳನ್ನು ತನ್ನ ಕೈಯಿಂದಲೇ ತೊಳೆದು, ಆ ಪಾದತೀರ್ಥವನ್ನು ಶಿರಸ್ಸಿಗೆ ಪ್ರೋಕ್ಷಿಸಿಕೊಂಡನು ಬ್ರಹ್ಮಾದಿದೇವತೆಗಳನ್ನೂ ಪಾವನಮಾಡತಕ್ಕ ಆ ಜಲವನ್ನು ಶಿರಸಾಧಾರಣಮಾಡುವಂತೆ ತನ್ನ ಜನರಿಗೂ ನಿಯಮಿಸಿದನು. ಬೆಲೆಯುಳ್ಳ ವಸ್ತ್ರಾಭರಣಗಳನ್ನೂ, ಗಂಧಪುಷ್ಪಗಳನ್ನೂ, ಧೂಪದೀಪಗಳನ್ನೂ ಕಾಣಿಕೆಯಾಗಿ ಸಮರ್ಪಿಸಿದನು. ಅಮೃತಸಮಾನವಾದ ಭಕ್ಷ್ಯಭೋಜ್ಯಗಳನ್ನೂ ತಂದಿಟ್ಟನು ಅಷ್ಟೇಕೆ? ತನ್ನ ಸರ್ವಸ್ವವನ್ನೂ, ತನ್ನನ್ನೂ, ಅವರಲ್ಲಿ ಸಮರ್ಪಿಸಿ, ಬದ್ಧಾಂಜಲಿಯಾಗಿ ನಿಂತನು ಆಗ ರಾಮಕೃಷ್ಣರ ದರ್ಶನದಿಂದುಂಟಾದ ಸಂತೋಷದಿಂದ, ಅವನ ಕಣ್ಣುಗಳಲ್ಲಿ ಆನಂದಬಾಷ್ಪವು ತುಳುಕುತಿತ್ತು. ಅವನ ದೇಹವೆಲ್ಲವೂ ಪುಳಕಿತವಾಯಿತು. ಅವರ ಪಾದಗಳಿಗೆ ತಲೆಯನ್ನು ಸೋಕಿಸಿ ಬಾರಿಬಾರಿಗೂ ಪ್ರಣಾಮವನ್ನು ಮಾಡುತ್ತ, ಗದ್ಗದಸ್ವರದಿಂದ

ಹೀಗೆಂದು ಹೇಳುವನು. “ರಾಮಾ! ಆದಿಶೇಷಸ್ವರೂಪನಾಗಿ ತಿರಸ್ಸಿನ ಏಕದೇಶದಿಂದಲೇ ಸಮಸ್ತವಿಶ್ವವನ್ನೂ ಧರಿಸಿರತಕ್ಕ ನಿನಗೆ ನಮಸ್ಕಾರವು ಕೃಷ್ಣಾ! ಸಮಸ್ತಜಗತ್ತಿಗೂ ವಿಧಾಯಕನಾಗಿಯೂ, ಆತ್ಮಪರಮಾತ್ಮೋಪಾಸನರೂಪವಾದ ಸಾಂಖ್ಯಯೋಗಗಳಿಗೆ ಪ್ರವರ್ತಕನಾಗಿಯೂ, ಪರಬ್ರಹ್ಮಸ್ವರೂಪನಾಗಿಯೂ, ಪರಮಾತ್ಮನಾಗಿಯೂ ಇರುವ ನಿನಗೆ ನಮಸ್ಕಾರವು. ನಿಮ್ಮಿಬ್ಬರ ದರ್ಶನವು ಲೋಕಕ್ಕೆ ದುರ್ಲಭವಾಗಿದ್ದರೂ ಕೆಲವರಿಗೆ ನಿನ್ನ ಕೃಪೆಯಿಂದ ಸುಲಭಸಾಧ್ಯವಾಗುವುದು. ಇದಕ್ಕೆ ನಾನೇ ನಿದರ್ಶನವು. ರಾಜಸ, ತಾಮಸ ಸ್ವಭಾವವುಳ್ಳ ನಮಗೇ ಈಗ ನಿಮ್ಮ ದರ್ಶನವು ಯಾದೃಚ್ಛಿಕವಾಗಿ ಲಭಿಸಿತಲ್ಲವೆ? ದೈತ್ಯ, ದಾನವ, ಗಂಧರ್ವ, ಸಿದ್ಧ ವಿದ್ಯಾಧರ, ಯಕ್ಷ, ರಾಕ್ಷಸ, ಪಿಶಾಚಾದಿಗಳೂ, ಭೂತಗಳೂ, ಪ್ರಮಥಗಣಗಳೂ, ನಾವೂ, ನಮ್ಮಂತೆ ಇನ್ನೂ ಕೆಲವರೂ, ದೈತ್ಯಾಂಶದಿಂದ ಹುಟ್ಟಿದ ಕಂಸಾದಿಗಳೂ, ಶುದ್ಧಸತ್ವಮಯವಾಗಿ ಕೇವಲ ಶಾಸ್ತ್ರಗಮ್ಯವಾದ ಸ್ವರೂಪವುಳ್ಳ ನಿನ್ನಲ್ಲಿ ಯಾವಾಗಲೂ ಬದ್ಧವೈರವುಳ್ಳವರು! ಹಾಗಿದ್ದರೂ ನಿನ್ನ ಕೃಪೆಯಿಂದ ನಮ್ಮಲ್ಲಿ ಕೆಲವರಿಗೆ ನಿನ್ನ ಸಾಲೋಕ್ಯವೂ, ಕೆಲವರಿಗೆ ಸಾಮೀಪ್ಯವೂ, ಕೆಲವರಿಗೆ ನಿನ್ನ ಸಾರೂಪ್ಯವೂ, ಕೆಲವರಿಗೆ ನಿನ್ನ ಸಾಯುಜ್ಯವೂ ಲಭಿಸಿತು ಇದರಿಂದ ನಿನ್ನಲ್ಲಿ ಸ್ಥಿರವಾಗಿ ನೆಲೆಸಿದ ಚಿತ್ತವೃತ್ತಿಯು, ಯಾವವಿಧವಾಗಿದ್ದರೂ ಮುಕ್ತಿಕಾರಣವೆಂಬುದು ಸ್ಪಷ್ಟವಾಗುವುದು. ಕೆಲವರು ನಿನ್ನಲ್ಲಿ ದ್ವೇಷದಿಂದಲೂ, ಕೆಲವರು ಭಕ್ತಿಯಿಂದಲೂ, ಕೆಲವರು (ಗೋಪಿಕಾದಿಗಳು) ಕಾಮದಿಂದಲೂ, ನಿನ್ನ ಸಾನ್ನಿಧ್ಯವನ್ನು ಪಡೆದಿರುವರು. ಕೇವಲ ಸತ್ವಗುಣಪ್ರಧಾನರಾಗಿ, ಯಾವಾಗಲೂ ನಿನ್ನನ್ನಾಶ್ರಯಿಸಿಯೇ ಇರತಕ್ಕ ದೇವತೆಗಳಿಗೂಕೂಡ ಅಂತಹ ಭಾಗ್ಯವು ಲಭಿಸಲಾರದು. ಆದುದರಿಂದ ಓ ಯೋಗೀಶ್ವರಾ! ನಿನ್ನ ಯೋಗಮಾಯೆಯ ಪ್ರಭಾವವನ್ನಾಗಲಿ, ಅದರ ಸ್ವರೂಪಸ್ವಭಾವಗಳನ್ನಾಗಲಿ, ಹೀಗೆಂದು ನಿರ್ಣಯಿಸುವುದು ಯೋಗಿಗಳಿಗೂ ಸಾಧ್ಯವಲ್ಲ ಇನ್ನು ನಮ್ಮಂತಹ ಅಜ್ಞರಿಗೆ ಹೇಗೆತಾನೇ ತಿಳಿಯುವುದು? ಆದುದರಿಂದ ನಿನ್ನ ಸ್ವರೂಪಸ್ವಭಾವಗಳನ್ನು ಯಥಾವತ್ತಾಗಿ ತಿಳಿದು, ಆ ಜ್ಞಾನಬಲದಿಂದ ಸಂಸಾ

ರಸಮುಖ್ರವನ್ನು ಪಾಟುವುದೇನೋ ನಮ್ಮಂತವರಿಗೆ ಸಾಧ್ಯವಲ್ಲ! ಆದುದ ರಿಂದ ನಿಷ್ಕಾಮರಾದ ಯೋಗಿಗಳಿಗೆ ಮುಖ್ಯಾದರಣೀಯವಾದ ನಿನ್ನ ಪಾ ದಾರವಿಂದಗಳಲ್ಲಿ ನನಗೆ ಸ್ಥಿರಬುದ್ಧಿಯುಂಟಾಗುವಂತೆ ಅನುಗ್ರಹಿಸಬೇಕು. ಪಾಪಪ್ರಚುರವಾದ ಈ ಸಂಸಾರವೆಂಬ ಕತ್ತಲೆಮನೆಯನ್ನು ಬಿಟ್ಟು ಕಾಡಿನಲ್ಲಿ ವೃಕ್ಷಗಳ ಕೆಳಗೆ ತಾನಾಗಿ ಉದಿರಿ ಬಿದ್ದ ಹಣ್ಣು ಮೊದಲಾದುವು ಗಳಿಂದ ಹೊಟ್ಟೆಹೊರೆಯುತ್ತ, ಶಾಂತಚಿತ್ತನಾಗಿ, ಏಕಾಕಿಯಾಗಿಯೋ, ಸರ್ವಭೂತಸುಹೃತ್ತುಗಳಾದ ಮಹಾತ್ಮರೊಡನೆ ಸೇರಿಯೋ ಕಾಲವನ್ನು ಕಳೆಯುವಂತೆ ಅನುಗ್ರಹಿಸಬೇಕು. ಸಮಸ್ತಚರಾಚರಗಳೂ ನಿಮ್ಮ ಸಂಕ ಲ್ಪಕ್ಕೆ ಅಧೀನವಾಗಿಯೇ ನಡೆಯತಕ್ಕವುಗಳು ಆದುದರಿಂದ ಈಗ ನೀವು ನನ್ನಲ್ಲಿ ಕೃಪೆಯಿಟ್ಟು, ನಾನು ನಡೆಸಬೇಕಾದ ಕಾರ್ಯವೇನೆಂಬುದನ್ನು ತಿಳಿಸಿ, ನನ್ನನ್ನು ಪಾಪರಹಿತನನ್ನಾಗಿ ಮಾಡಬೇಕು ನಿನ್ನ ಶಾಸನವನ್ನು ಶ್ರದ್ಧೆ ಯಿಂದ ನಡೆಸತಕ್ಕವನೇ ತನ್ನ ಕರ್ಮಪಾಶವನ್ನು ಕಿತ್ತು ಉತ್ತಮಪುರು ಷಾರ್ಥವನ್ನೂ ಹೊಂದುವನು" ಎಂದನು ಆಗ ಶ್ರೀಕೃಷ್ಣನು ಬಲಿಚಕ್ರ ವರ್ತಿಯನ್ನು ಕುರಿತು, "ಓ ದಾನವೋತ್ತಮಾ! ಹಿಂದೆ ಸ್ವಾಯಂಭುವ ಮನ್ವಂತರದಲ್ಲಿ, ಮರೀಚಿಗೆ ಊರ್ಣೆಯೆಂಬ ಭಾರ್ಯೆಯಲ್ಲಿ ಆರುಮಂದಿ ಪು ತ್ರರು ಹುಟ್ಟಿ, ಬ್ರಹ್ಮನಲ್ಲಿ ಅಪರಾಧಿಗಳಾಗಿ ಅವನಿಂದ ಶಾಪವನ್ನು ಹೊಂ ದಿದರು ಆ ಶಾಪಕಾರಣವನ್ನು ತಿಳಿಸುವೆನು ಕೇಳು ಬ್ರಹ್ಮನು ಹಿಂದೆ ತನ್ನ ಮಗಳಾದ ಸರಸ್ವತಿಯಲ್ಲಿ ಮೋಹಗೊಂಡು, ಅವಳೊಡನೆ ರತಿಯನ್ನು ಮಾಡುವುದಕ್ಕಾಗಿ ಪ್ರಯತ್ನಿಸುತ್ತಿರುವುದನ್ನು ನೋಡಿ. ಅವರು ಅವನನ್ನು ಅಪಹಾಸ್ಯಮಾಡಿದರು ಹೀಗೆ ಪ್ರಜಾಧಿಪತಿಯಾದ ಬ್ರಹ್ಮನಲ್ಲಿ ಅಪರಾಧಿಗ ಳಾದುದರಿಂದ, ಅವರು ರಾಕ್ಷಸಯೋನಿಯಲ್ಲಿ ಹಿರಣ್ಯಕಶಿಪುವಿನ ಮಕ್ಕಳಾಗಿ ಹುಟ್ಟಿದರು. ಆದರಿಂದಾಚೆಗೆ ಅವರೇ ಭಗವಂತನ ಯೋಗಮಾಯಾ ಪ್ರಭಾವದಿಂದ, ದೇವಕಿಯ ಗರ್ಭಕ್ಕೆ ಸಾಗಿಸಲ್ಪಟ್ಟು ಅವಳ ಶಿಶುಗಳಾಗಿ ಜನಿಸಿದರು ಆ ಮಕ್ಕಳು ಹುಟ್ಟಿದೊಡನೆ ಕಂಸನು, ಅವುಗಳೆಲ್ಲವನ್ನೂ ಕೊ ಲ್ಲುತ್ತ ಬಂದನು ಆ ಮಕ್ಕಳನ್ನು ನೆನೆಸಿಕೊಂಡು ಈಗಲೂ ನನ್ನ ತಾಯಿಯಾ ದ ದೇವಕಿಯು ದುಃಖಿಸುತ್ತಿರುವಳು. ಇದೋ! ಆ ಮಕ್ಕಳು ಈಗ ನಿನ್ನ

ಸಮೀಪದಲ್ಲಿರುವರು ನನ್ನ ತಾಯಿಯ ದುಃಖಶಾಂತಿಗಾಗಿ ನಾವು ಇವರನ್ನು ಅಲ್ಲಿಗೆ ಕರೆದುಕೊಂಡು ಹೋಗಬೇಕೆಂದಿರುವೆವು ಇದರಿಂದ ಇವರು ಪಾಪವಿಮುಕ್ತರಾಗಿ, ತಮ್ಮ ದುಃಖವನ್ನು ನೀಗಿ, ಮೊದಲಿನಂತೆ ಪುಣ್ಯಲೋಕವನ್ನು ಹೊಂದುವರು ಆ ಆರುಮಂದಿಗೂ, ಸ್ಮರ, ಉದ್ಗೀಥ, ಪರಿಷ್ವಂಗ, ಪತಂಗ, ಕ್ಷುದ್ರಭುಕ್, ಘೃಣಿ ಎಂದು ಹೆಸರು ಈ ಆರುಮಂದಿಯೂ ನನ್ನ ಅನುಗ್ರಹದಿಂದ ತಿರುಗಿ ಸದ್ಗತಿಯನ್ನು ಹೊಂದುವರು" ಎಂದನು ಒಡನೆಯೇ ಬಲಿಚಕ್ರವರ್ತಿಯು ಆ ಆರುಮಕ್ಕಳನ್ನೂ ಕೃಷ್ಣನ ವಶಕ್ಕೊಪ್ಪಿಸಿ, ಅವರನ್ನು ಯಥೋಚಿತವಾಗಿ ಪೂಜಿಸಿ ಕಳುಹಿಸಿಕೊಟ್ಟನು ಬಲರಾಮಕೃಷ್ಣರಿಬ್ಬರೂ ಆ ಕುಮಾರರನ್ನು ದ್ವಾರಕೆಗೆ ಕರೆತಂದು,ತಮ್ಮ ತಾಯಿಯ ವಶಕ್ಕೊಪ್ಪಿಸಿದರು ಆ ಮಕ್ಕಳನ್ನು ಕಂಡೊಡನೆ,ದೇವಕಿಯು ಪುತ್ರಸ್ನೇಹದಿಂದ ತೊರೆಯಿಕ್ಕುವ ಸ್ತನವುಳ್ಳವಳಾಗಿ, ಬಾರಿಬಾರಿಗೂ ಆ ಶಿಶುಗಳನ್ನಾಲಿಂಗಿಸಿಕೊಂಡು,ತೊಡೆಯಲ್ಲಿ ಮಲಗಿಸಿ,ತಲೆಯನ್ನಾಘ್ರಾಣಿಸುತ್ತ ಸ್ತನ್ಯಪಾನವನ್ನು ಮಾಡಿಸಿದಳು ಓ! ಪರೀಕ್ಷಿದ್ರಾಜಾ! ಸೃಷ್ಟಿಕರ್ತನಾದ ಭಗವಂತನ ಮಾಯೆಯಿಂದ ಮೋಹಿತಳಾದ ದೇವಕಿದೇವಿಯು ಆ ದೈತ್ಯಕುಮಾರರನ್ನು ತನ್ನ ಮಕ್ಕಳೆಂದೇ ಭಾವಿಸಿ ಪರಮಪ್ರೇಮದಿಂದ ಪಾಲಿಸುತ್ತಿದ್ದಳು ಓ! ರಾಜೇಂದ್ರಾ! ಆ ಶಿಶುಗಳ ಭಾಗ್ಯವನ್ನು ನೋಡಿದೆಯಾ? ಸಾಕ್ಷಾದ್ಭಗವಂತನಾದ ಶ್ರೀಕೃಷ್ಣನು ಕುಡಿದು ಮಿಗಿಸಿದ ಅಮೃತಸಮಾನವಾದ ಸ್ತನ್ಯವನ್ನು ಪಾನಮಾಡಿದುದರಿಂದಲೂ, ಆ ಭಗವಂತನ ದೇಹಸ್ಪರ್ಶದಿಂದಲೂ ಅವರ ಜನ್ಮಾಂತರಪಾಪಗಳೆಲ್ಲವೂ ನೀಗಿದುವು ಮೊದಲಿನಂತೆ ಅವರಿಗೆ ಆತ್ಮಪರಮಾತ್ಮಸ್ವರೂಪವೂ ಜ್ಞಾನಗೋಚರವಾಯಿತು ಅವರಿಗೆ ಮೊದಲಿನ ದಿವ್ಯತೇಜಸ್ಸುಂಟಾಯಿತು ಆಮೇಲೆ ಅವರೆಲ್ಲರೂ,ದೇವಕೀವಸುದೇವರಿಗೂ, ರಾಮಕೃಷ್ಣರಿಗೂ ಭಕ್ತಿಯಿಂದ ನಮಸ್ಕರಿಸಿ, ಸಮಸ್ತಭೂತಗಳೂ ನೋಡುತಿದ್ದಹಾಗೆಯೇ ವಿಮಾನವನ್ನೇರಿ ಆಕಾಶಮಾರ್ಗದಿಂದ ತಮ್ಮ ಲೋಕಕ್ಕೆ ಹೊರಟುಹೋದರು ಆಗ ದೇವಕೀದೇವಿಯು, ಬಹುಕಾಲಕ್ಕೆ ಹಿಂದೆ ಕಂಸನಿಂದ ಸಂಹೃತರಾದ ತನ್ನ ಶಿಶುಗಳು ತಿರುಗಿ ತನ್ನ ಕಣ್ಣಿಗೆ ಗೋಚರಿಸಿದುದೂ, ಒಡನೆಯೇ ಅವರು ವಿಮಾನ

ವನ್ನೇರಿ ಹೊರಟುಹೋದುದೂ, ಇವೆಲ್ಲವೂ ಆ ಶ್ರೀಕೃಷ್ಣನ ಮಾಯೆಯೆಂದೇ ತಿಳಿದು, ಆಶ್ಚರ್ಯದಿಂದ ಬೆರಗಾದಳು ಓ ಪರೀಕ್ಷಿದ್ರಾಜಾ! ಪರಮಾತ್ಮನಾದ ಶ್ರೀಕೃಷ್ಣನ ಅದ್ಭುತಕಾರ್ಯಗಳು ಹೀಗೆಯೇ ಇನ್ನೂ ಅನೇಕವಾಗಿರುವುವು” ಎಂದು ಶುಕಮಹರ್ಷಿಯು ಪರೀಕ್ಷಿದ್ರಾಜನಿಗೆ ಹೇಳಿದ ಈ ಕೃಷ್ಣ ಚರಿತ್ರವನ್ನು, ಸೂತಪೌರಾಣಿಕನು ಶೌನಕಾದಿ ಋಷಿಗಳಿಗೆ ತಿಳಿಸುತ್ತ “ಓ! ಮಹರ್ಷಿಗಳೇ! ಸಮಸ್ತಪಾಪನಿವಾರಕವಾಗಿಯೂ, ಭಗವದ್ಭಕ್ತರಿಗೆ ಕರ್ಣಾಭರಣವಾಗಿಯೂ ಇರುವ ಪುಣ್ಯಶ್ಲೋಕನಾದ ಶ್ರೀ ಕೃಷ್ಣನ ಈ ಚರಿತ್ರವನ್ನು, ಯಾವನು ಕಿವಿಯಿಂದ ಕೇಳುವನೋ. ಅಥವಾ ಮತ್ತೊಬ್ಬರಿಗೆ ಹೇಳುವನೋ, ಅವನು ಆ ಭಗವಂತನಲ್ಲಿಯೇ ನಟ್ಟ ಮನಸ್ಸುಳ್ಳವನಾಗಿ,ಭಯರಹಿತವಾದ ಆ ಭಗವಂತನ ಸಾನ್ನಿಧ್ಯವನ್ನು ಹೊಂದುವನು.” ಎಂದನು ಇದು ಎಂಭತ್ತೈದನೆಯ ಅಧ್ಯಾಯವು.

---

ಸುಭದ್ರಾ ಕಲ್ಯಾಣದ ಕಥೆ.

ತಿರುಗಿ ಪರೀಕ್ಷಿದ್ರಾಜನು ಪ್ರಶ್ನೆಮಾಡುವನು. “ಓ ಮಹರ್ಷೀ! ಬಲರಾಮಕೃಷ್ಣರಿಗೆ ತಂಗಿಯಾದ ಸುಭದ್ರೆಯನ್ನು, ಅರ್ಜುನನು ವಿವಾಹಮಾಡಿಕೊಂಡ ವೃತ್ತಾಂತವನ್ನು ನನಗೆ ತಿಳಿಸಬೇಕು ಅವಳು ನನ್ನ ಪಿತಾಮಹಿಯಾದುದರಿಂದ, ಅವಳ ಚರಿತ್ರವನ್ನು ಕೇಳಬೇಕೆಂಬ ಕುತೂಹಲವು ನನಗೆ ವಿಶೇಷವಾಗಿರುವುದು’ ಎಂದನು. ಅದಕ್ಕಾ ಶುಕಮಹರ್ಷಿಯು, “ರಾಜೇಂದ್ರಾ! ಕೇಳು! ಅರ್ಜುನನು ತೀರ್ಥಯಾತ್ರೆಗಾಗಿ ಭೂಮಿಯನ್ನು ಸುತ್ತುತ್ತ,ಪ್ರಭಾಸ ತೀರ್ಥಕ್ಕೆ ಹೋದನು.ಅಲ್ಲಿ ಅವನು,ತನ್ನ ಮಾವನ ಮಗಳಾದ ಸುಭದ್ರೆಗೆ ವಿವಾಹಪ್ರಯತ್ನವು ನಡೆಯುತ್ತಿರುವುದನ್ನೂ, ಬಲರಾಮನೊಬ್ಬನುಮಾತ್ರ ಅವಳನ್ನು ದುರ್ಯೋಧನಿಗೆ ಕೊಡಬೇಕೆಂದು ಪ್ರಯತ್ನಿಸುತ್ತಿರುವುದನ್ನೂ ಕೇಳಿದನು. ಈ ಸಂಬಂಧವು ಆ ಸುಭದ್ರೆಯ ಬಂಧುವರ್ಗದಲ್ಲಿ ಯಾರಿಗೂ ಇಷ್ಟವಿಲ್ಲವೆಂದೂ ಅವನಿಗೆ ತಿಳಿಯಿತು. ಆಗ ಹೇಗಾದರೂ ಆ ಸುಭದ್ರೆಯನ್ನು ತಾನೇ ಮದುವೆಯಾಗಬೇಕೆಂದು ಅರ್ಜುನನಿಗೆ ಆಸೆ ಹುಟ್ಟಿತು. ಬಲರಾಮನಿಗೆ ತಿಳಿಯದೆ ತಂತ್ರದಿಂದ ಆಕೆಯನ್ನಪ

ಹರಿಸಿಕೊಂಡು ಹೋಗಬೇಕೆಂದು ನಿಶ್ಚಯಿಸಿ, ಯತಿವೇಷದಿಂದ ತ್ರಿದಂಡವನ್ನು ಹಿಡಿದು ದ್ವಾರಕೆಯಬಳಿಗೆ ಬಂದನು. ಮಳೆಗಾಲದ ನಾಲ್ಕು ತಿಂಗಳೂ ಅಲ್ಲಿಯೇ ಸಮಯನಿರೀಕ್ಷಣೆಯಿಂದ ಕಾದಿದ್ದನು ಪುರವಾಸಿಗಳೆಲ್ಲರೂ ಅವನನ್ನು ನಿಜವಾದ ಸನ್ಯಾಸಿಯೆಂದೇ ತಿಳಿದು ಗೌರವಿಸುತ್ತಿದ್ದರು ಬಲರಾಮನೂ ನಿಜಸ್ಥಿತಿಯನ್ನು ತಿಳಿಯದೆ ಅವನನ್ನು, ವಿರಕ್ತನಾದ ಸನ್ಯಾಸಿಯೆಂದೇ ನಂಬಿಬಿಟ್ಟನು ಒಮ್ಮೆ ಬಲರಾಮನು ಅವನನ್ನು ಭಿಕ್ಷೆಗಾಗಿ ಮನೆಗೆ ಕರೆತಂದು ಅವನನ್ನು ಶ್ರದ್ಧೆಯಿಂದ ಸತ್ಕರಿಸಿದನು ಭಿಕ್ಷೆಯೆಲ್ಲವೂ ನಡೆದ ಮೇಲೆ, ಲೋಕಮೋಹನೆಯಾದ ಸುಭದ್ರೆಯು, ಅಲ್ಲಿ ಆ ಅರ್ಜುನನನ ಕಣ್ಣಿಗೆ ಗೋಚರಿಸಿದಳು. ಅರ್ಜುನನು ಸಂತೋಷದಿಂದರಳಿದ ಕಣ್ಣುಳ್ಳವನಾಗಿ ಆ ಕನ್ಯೆಯನ್ನೇ ನೋಡುತ್ತಿರುವಾಗ, ಅವನ ಮನಸ್ಸು ಮನ್ಮಥವಿಕಾರಕ್ಕೊಳಗಾಯಿತು ಇದರಂತೆಯೇ ಅತ್ತಲಾಗಿ ಸುಭದ್ರೆಗೂ, ಸಮಸ್ತಸ್ತ್ರೀಯರಿಗೂ ಮೋಹಕರವಾದ ರೂಪಾತಿಶಯವುಳ್ಳ ಆ ಅರ್ಜುನನನ್ನು ನೋಡಿ, ಅವನಲ್ಲಿ ಮನಸ್ಸು ನಾಟಿತು ಅರ್ಜುನನ ಮುಖವನ್ನು ಕಂಡೊಡನೆ ಮುಖದಲ್ಲಿ ಮಂದಹಾಸವನ್ನು ಸೂಚಿಸುತ್ತ, ಲಜ್ಜೆಯಿಂದ ಥಟ್ಟನೆ ದೃಷ್ಟಿಯನ್ನು ಹಿಂತಿರುಗಿಸುತಿದ್ದಳು. ಕ್ರಮಕ್ರಮವಾಗಿ ಆ ಸುಭದ್ರೆಯ, ಕಣ್ಣೂ ಮನಸ್ಸೂ, ಅವನಲ್ಲಿಯೇ ನೆಲೆಗೊಂಡಿತು ಇತ್ತಲಾಗಿ ಅರ್ಜುನನಿಗೂ ಕಾಮತಾಪವು ಪ್ರಬಲವಾಗುತ್ತ ಬಂದು, ಅವನ ಮನಸ್ಸಿಗೆ ನೆಮ್ಮದಿಯಿಲ್ಲದಂತಾಯಿತು. ಅವಳೊಡನೆ ಸರಸಸಲ್ಲಾಪಗಳನ್ನು ಮಾಡುವುದಕ್ಕೆ ಸಮಯವನ್ನು ಹುಡುಕುತ್ತ ತದೇಕಧ್ಯಾನದಲ್ಲಿರುತ್ತಿದ್ದನು. ಹೀಗಿರುವಾಗ ಒಮ್ಮೆ, ವಸುದೇವಾದಿಗಳೆಲ್ಲರೂ ಒಂದು ದೊಡ್ಡಜಾತ್ರೆಯನ್ನು ನೋಡುವ ಉದ್ದೇಶದಿಂದ, ಪಟ್ಟಣದ ಕೋಟೆಯಿಂದ ಹೊರಕ್ಕೆ ಬಂದಿದ್ದರು ಸುಭದ್ರೆಯೂ ರಥದಲ್ಲಿ ಕುಳಿತು ಬರುತ್ತಿದ್ದಳು ಊರಿನ ಹೊರಗೆ, ಒಂದಾನೊಂದು ಪರ್ವತಗುಹೆಯಲ್ಲಿ ಸನ್ಯಾಸಿವೇಷದಿಂದಿದ್ದ ಅರ್ಜುನನು, ಇದನ್ನು ತಿಳಿದು, ಬಲರಾಮನಿಗೆ ತಿಳಿಯದಂತೆ ದೇವಕೀವಸುದೇವರ ಮತ್ತು ಕೃಷ್ಣನ ಅನುಮತಿಯನ್ನು ಪಡೆದು, ಆ ಸುಭದ್ರೆಯನ್ನು ಅಪಹರಿಸಿಕೊಂಡುಹೋದನು. ಸುಭದ್ರೆಯ ಕಡೆಯವರಾದ ಯಾದವರೆಲ್ಲರೂ ಸಂಭ್ರಮದಿಂದ "ಹಾಹಾ"



೨೩೫೨. ಅರ್ಜುನನು ಸುಭದ್ರೆಯನ್ನು ಎತ್ತಿಕೊಂಡು ಹೋದುದು.

ಎಂದು ಕೂಗುತಿದ್ದರು. ಕೆಲವು ವೀರಭಟರು ಅವನನ್ನು ಬೆನ್ನಟ್ಟಿ ಹಿಡಿಯು ವುದಕ್ಕೂ ಪ್ರಯತ್ನಿಸಿದರು. ಒಡನೆಯೇ ಅರ್ಜುನನು, ಧನುಸ್ಸನ್ನು ಕೈಗೆತ್ತಿ ಕೊಂಡು, ಆ ಭಟರೆಲ್ಲರನ್ನೂ ಓಡಿಸಿ,ಸಿಂಹವು ಸಣ್ಣಮೃಗಗಳ ಗುಂಪಿನಲ್ಲಿರು ವ ಆಹಾರವನ್ನು ಹೊತ್ತುಕೊಂಡುಹೋಗುವಂತೆ ಯಾರನ್ನೂ ಲಕ್ಷ್ಯಮಾ ಡದೆ, ಸುಭದ್ರೆಯನ್ನು ಕರೆದುಕೊಂಡು ಹೋದನು. ಈ ಸಂಗತಿಯನ್ನು ಕೇ ಳಿ ಬಲರಾಮನಿಗೆ ಪರ್ವಕಾಲದ ಸಮುದ್ರದಂತೆ ಕೋಪವು ಉಕ್ಕಿ ಬಂದಿತು. ತಾನೇ ಅರ್ಜುನನಿಗಿದಿರಾಗಿ ನಿಂತು ಯುದ್ಧಮಾಡಬೇಕೆಂದು ಪ್ರಯತ್ನಿಸುವ ಷ್ಟರಲ್ಲಿ, ಕೃಷ್ಣನೂ, ಇತರ ಬಂಧುಮಿತ್ರರೂ ಬಂದು, ಆ ಬಲರಾಮನ ಕಾಲನ್ನು ಹಿಡಿದು ಕೋಪಸಮಾಧಾನವನ್ನು ಮಾಡಿದರು. ಮಿಂಚಿ ಹೋದ ಕಾರ್ಯಕ್ಕೆ ಇನ್ನು ಕೋಪಿಸಿ ಫಲವಿಲ್ಲವೆಂದು,ಕೊನೆಗೆ ಬಲರಾಮನೂ ಶಾಂತಿಯ ನ್ನು ವಹಿಸಿದನು. ಆಮೇಲೆ ತಾನೇ ಉತ್ಸಾಹದಿಂದ ವಧೂವರರಿಗೆ ಬೇಕಾದ ಉಡುಗೊರೆಗಳನ್ನೂ, ವಿಶೇಷವಾದ ಧನವನ್ನೂ, ಆನೆ, ಕುದುರೆ ರಥ, ದಾಸಿ ಯರು, ಮುಂತಾದ ಪರಿಕರಗಳನ್ನೂ ತರಿಸಿ, ಬಳುವಳಿಯಾಗಿ ಕಳುಹಿಸಿಕೊ ಟ್ಟನು. ಪಾಂಡವರೂ ಯಾದವರೂ ಸಂತುಷ್ಟರಾದರು ಇದೀಗ ಸುಭ ದ್ರಾಕಲ್ಯಾಣ ವೃತ್ತಾಂತವು.

### ಬಹುಳಾಶ್ವ ಶ್ರುತದೇವರ ವೃತ್ತಾಂತವು

ಓ ಪರೀಕ್ಷಿದ್ರಾಜಾ! ಆ ಶ್ರೀಕೃಷ್ಣನಿಗೆ ತನ್ನ ಭಕ್ತರಲ್ಲಿರುವ ವಾತ್ಸ ಲ್ಯವೆಂತದೆಂಬುದನ್ನು ತೋರಿಸುವುದಕ್ಕೆ ಮತ್ತೊಂದು ನಿದರ್ಶನವನ್ನು ಹೇಳು ವೆನು ಕೇಳು. ಕೃಷ್ಣನಿಗೆ ಶ್ರುತದೇವನೆಂಬ ಮಿತ್ರನೊಬ್ಬನಿದ್ದನು ಅವನಿಗೆ ಕೃಷ್ಣನಲ್ಲಿ ಎಣೆಯಿಲ್ಲದ ಭಕ್ತಿಯಿದ್ದಿತು. ಆತನು ಯಾವುದಕ್ಕೂ ಹೆಚ್ಚಾಗಿ ಆಸೆಪಡತಕ್ಕವನಲ್ಲ! ಶಾಂತಚಿತ್ತನು? ಬಹಳ ವಿಷಯಗಳನ್ನು ತಿಳಿದವನು. ಆತನು ವಿದೇಹದೇಶದಲ್ಲಿದ್ದ ಮಿಥಿಲಾಪಟ್ಟಣದಲ್ಲಿ ಗೃಹಸ್ಥಾಶ್ರ ಮವನ್ನು ನಡೆಸುತ್ತಿದ್ದನು ಪ್ರಯತ್ನವಿಲ್ಲದೆ ತಾನಾಗಿ ಲಭಿಸಿದುದರಲ್ಲಿ ತೃಪ್ತ ನಾಗಿ, ಅದರಿಂದಲೇ ತನ್ನ ನಿತ್ಯಕರ್ಮಗಳನ್ನು ಕ್ರಮವಾಗಿ ನಡೆಸುತಿದ್ದನು. ಆಯಾದಿನಕ್ಕೆ ಬೇಕಾದ ಆಹಾರವು ಸಿಕ್ಕಿದರೆ ಸಾಕೆಂದು ತಿಳಿದು, ದೈವಾ ಧೀನವಾಗಿ ಲಭಿಸಿದುದರಲ್ಲಿ ತೃಪ್ತಿಹೊಂದುತಿದ್ದನೇಹೊರತು ಅದಕ್ಕಿಂತ

ಸ್ವಲ್ಪಮಾತ್ರವೂ ಹೆಚ್ಚಾಗಿ ಅಪೇಕ್ಷಿಸುತ್ತಿರಲಿಲ್ಲ ಪಂಚಮಹಾಯ ಜ್ಞಗಳೇ ಮೊದಲಾದ ತನ್ನ ನಿತ್ಯಕರ್ಮಗಳಿಗೆ ಲೋಪವಿಲ್ಲದೆ ನಡೆಸುತ್ತಿದ್ದನು ಆಗ ಆ ದೇಶಕ್ಕೆ ಬಹುಳಾಶ್ವನೆಂಬವನು ರಾಜನಾಗಿದ್ದನು ಆತನೂ ಈ ಪ್ರುತದೇವನಂತೆಯೇ ಅಹಂಕಾರಮಮಕಾರಗಳನ್ನು ಬಿಟ್ಟು, ಶಾಂತ ಚಿತ್ತನಾಗಿದ್ದನು ಆತನೂ ಕೃಷ್ಣನಲ್ಲಿ ವಿಶೇಷಭಕ್ತಿಯನ್ನು ತೋರಿಸು ತ್ತಿದ್ದನು ಹೀಗಿರುವಾಗ ಒಮ್ಮೆ ಶ್ರೀಕೃಷ್ಣನು, ತನಗೆ ಪರಮಭಕ್ತರಾದ ಅವರಿಬ್ಬರನ್ನೂ ಅನುಗ್ರಹಿಸಬೇಕೆಂಬ ಬುದ್ಧಿಯಿಂದ, ಅನೇಕ ಋಷಿಗಳನ್ನು ತನ್ನೊಡನೆ ಕರೆದುಕೊಂಡು, ದಾರುಕಪ್ರೇರಿತವಾದ ರಥವನ್ನೇರಿ, ಅವರಿದ್ದ ಮಿಥಿಲಾಪುರಿಗೆ ಹೊರಟನು ಓ ಪರೀಕ್ಷಿದ್ರಾಜಾ! ಕೃಷ್ಣನು ಹೊರಟಾಗ ಅವನ ಹಿಂದೆ, ನಾರದ, ವಾಮದೇವ, ಅತ್ರಿ, ವ್ಯಾಸ, ಪರಶುರಾಮ, ಅಸಿತ, ಅರುಣ, ಬೃಹಸ್ಪತಿ, ಕಣ್ವ, ಮೈತ್ರೇಯ, ಚ್ಯವನರೇ ಮೊದಲಾದ ಮಹ ರ್ಷಿಗಳೊಡನೆ ನಾನೂ ಅಲ್ಲಿಗೆ ಹೊರಟೆನು ಕೃಷ್ಣನು ಬಂದ ವೃತ್ತಾಂತ ವನ್ನು ಕೇಳಿದೊಡನೆ, ಅಲ್ಲಿನಪುರವಾಸಿಗಳೂ,ದೇಶವಾಸಿಗಳೂ, ರಾಜಕುಮಾ ರರೂ ಇದಿರುಗೊಂಡು ಬಂದು, ಬ್ರಾಹ್ಮಣರು ಶುಕ್ರಾದಿಗ್ರಹಗಳೊಡನೆ ಉದಿಸಿಬರುವ ಸೂರ್ಯನನ್ನು ಹೇಗೋಹಾಗೆ ಅರ್ಘ್ಯಾದಿಗಳಿಂದ ಪೂಜಿಸಿದ ರು. ಕೃಷ್ಣನು ಬರುತ್ತಿರುವಾಗ ಆನರ್ತ, ಧನ್ವ, ಕುರುಜಾಂಗಲ, (ಕುರುಕ್ಷೇತ್ರ) ವಂಗ, ಮತ್ಸ್ಯ, ಪಾಂಚಾಲ, ಕುಂತಿ, ಮಧು, ಕೇಕಯ, ಕೋಸಲ, ಅರ್ಣ ಮೊದಲಾದ ಅನೇಕದೇಶಗಳ ಸ್ತ್ರೀಪುರುಷರೆಲ್ಲರೂ, ಹಸನ್ಮುಖದಿಂ ದಲೂ, ಪ್ರಸನ್ನದೃಷ್ಟಿಯಿಂದಲೂ, ಸುಂದರವಾದ ಶ್ರೀ ಕೃಷ್ಣನ ಮು ಖಲಾವಣ್ಯರಸವನ್ನು ತಮ್ಮ ನೇತ್ರಾಂಜಲಿಗಳಿಂದ ತೃಪ್ತಿಯಿಲ್ಲದೆ ಪಾನ ಮಾಡುತಿದ್ದರು ಲೋಕಗುರುವಾದ ಶ್ರೀ ಕೃಷ್ಣನು ತನ್ನ ದರ್ಶನದಿಂದಲೇ ಪಾವನರಾದ ಆ ಜನರೆಲ್ಲರನ್ನೂ, ತನ್ನ ಕಟಾಕ್ಷವೀಕ್ಷಣದಿಂದಲೂ ಅನು ಗ್ರಹಿಸುತ್ತ, ಅಲ್ಲಲ್ಲಿ ದೇವತೆಗಳಿಂದಲೂ, ಮನುಷ್ಯರಿಂದಲೂ ಕೀರ್ತಿಸಲ್ಪ ಡುತ್ತಿರುವ ಪರಿಶುದ್ಧವಾದ ತನ್ನ ಯಶಸ್ಸನ್ನು ಕಿವಿಯಿಂದ ಕೇಳುತ್ತ,ಮೆಲ್ಲಗೆ ವಿದೇಹದೇಶಕ್ಕೆ ಬಂದು ಸೇರಿದನು ಕೃಷ್ಣನು ಬಂದನೆಂಬ ವೃತ್ತಾಂತವ ನ್ನು ಕೇಳಿದೊಡನೆ, ಅಲ್ಲಿನ ಪೌರಜನಪದಗಳೆಲ್ಲವೂ ಕೈಕಾಣಿಕೆಗಳೊಡನೆ

ಇದಿರುಗೊಂಡು ಬಂದರು. ಅವರೆಲ್ಲರೂ ಪುಣ್ಯಶ್ಲೋಕಶಿಖಾಮಣಿಯಾದ ಆ ಕೃಷ್ಣನನ್ನು ಕಂಡು, ಸಂತೋಷದಿಂದರಳಿದ ಮುಖವುಳ್ಳವರಾಗಿ, ಆ ಕೃಷ್ಣನಿಗೂ, ಅವನೊಡನೆ ಬಂದಿದ್ದ ಮಹರ್ಷಿಗಳಿಗೂ ಕೈಮುಗಿದು ನಮಸ್ಕರಿಸಿದರು ಹಾಗೆಯೇ ಕೃಷ್ಣನಿಗೆ ಪರಮಭಕ್ತರಾದ ಬಹುಳಾಶ್ವಶ್ರುತದೇವರೂಕೂಡ, ತಮ್ಮನ್ನು ಅನುಗ್ರಹಿಸುವುದಕ್ಕಾಗಿಯೇ ಕೃಷ್ಣನು ಬಂದನೆಂದುತಿಳಿದು.ಮುಂದೆ ಬಂದು ಆ ಕೃಷ್ಣನ ಪಾದಗಳನ್ನು ಹಿಡಿದು ನಮಸ್ಕರಿಸಿದರು. ಅವರಿಬ್ಬರೂ ಆ ಕೃಷ್ಣನನ್ನೂ, ಅವನ ಸಹಚರರಾದ ಮಹರ್ಷಿಗಳನ್ನೂ, ಏಕಕಾಲದಲ್ಲಿಯೇ ತಮ್ಮ ಮನೆಗೆ ಆತಿಥ್ಯಕ್ಕಾಗಿ ಬರಬೇಕೆಂದು ಕೈಮುಗಿದು ಬಹಳವಾಗಿ ಪ್ರಾರ್ಥಿಸಿ ನಿರ್ಬಂಧಿಸಿದರು. ಕೃಷ್ಣನು ಅವರಿಬ್ಬರ ಪ್ರಾರ್ಥನೆಯನ್ನೂ ಅಂಗೀಕರಿಸಿ, ಇಬ್ಬರಿಗೂ ಪ್ರಿಯವನ್ನುಂಟುಮಾಡುವುದಕ್ಕಾಗಿ, ಅವರಿಗೆ ತಿಳಿಯದಂತೆ ಒಂದೇಕಾಲದಲ್ಲಿ ಎರಡು ರೂಪಗಳನ್ನು ತಾಳಿ,ಅವರಿಬ್ಬರ ಮನೆಗೂ ಬಂದನು ದುರ್ಜನರ ಕಣ್ಣುಗಳಿಗೂ ಅಗೋಚರನಾದ ಕೃಷ್ಣನು, ಅನೇಕ ಮಹರ್ಷಿಗಳೊಡನೆ ತನ್ನ ಮನೆಗೆ ಆತಿಥ್ಯಕ್ಕಾಗಿ ಬಂದುದನ್ನು ನೋಡಿ, ಬಹುಳಾಶ್ವನು, ಕಣ್ಣುಗಳಲ್ಲಿ ಆನಂದಬಾಷ್ಪವನ್ನು ಸುರಿಸುತ್ತ, ಭಕ್ತಿಯಿಂದ ಅವರೆಲ್ಲರಿಗೂ ಸುಖಾಸನವನ್ನು ಕೊಟ್ಟು ಕುಳ್ಳಿರಿಸಿದನು ಅವರ ಪಾದಗಳಿಗೆ ನಮಸ್ಕರಿಸಿ, ಆ ಪಾದಗಳನ್ನು ತೊಳೆದು, ಲೋಕಪಾವನವಾದ ಆ ತೀರ್ಥವನ್ನು ಶಿರಸಾಧಾರಣಮಾಡಿದನು. ತನ್ನ ಕುಟುಂಬವರ್ಗದವರೆಲ್ಲರಿಗೂ ಪ್ರೋಕ್ಷಿಸಿದನು. ಗಂಧ, ಪುಷ್ಪ, ಧೂಪ, ದೀಪ, ಅರ್ಘ್ಯ, ಮಧುಪರ್ಕಾದಿಗಳಿಂದ ಯಥೋಕ್ತವಾಗಿ ಪೂಜಿಸಿದನು. ಅವರೆಲ್ಲರಿಗೂ ಮೃಷ್ಟಾನ್ನಭೋಜನವನ್ನು ಮಾಡಿಸಿದನು ಹೀಗೆ ಅವರೆಲ್ಲರನ್ನೂ ಭೋಜನಾದಿಗಳಿಂದ ತೃಪ್ತಿಗೊಳಿಸಿದಮೇಲೆ, ಕೃಷ್ಣನ ಪಾದಗಳನ್ನು ತನ್ನ ತೊಡೆಯಮೇಲಿಟ್ಟುಕೊಂಡು, ಮೆಲ್ಲಗೆ ಒತ್ತುತ್ತ, ಮೃದುಮಧುರವಾಕ್ಯದಿಂದ ಹೀಗೆಂದು ಹೇಳುವನು” ಓ ಪ್ರಭೂ! ನೀನು ಸಮಸ್ತಭೂತಗಳಿಗೂ ಅಂತರಾತ್ಮನು ಸರ್ವಸಾಕ್ಷಿಯಾಗಿ ಸ್ವಯಂಪ್ರಕಾಶನೆನಿಸಿಕೊಂಡಿರುವೆ ! ಆದರಿಂದಲೇ ಈಗ ನನ್ನ ಉದ್ದೇಶವೇನೆಂಬುದನ್ನು ನೀನಾಗಿ ತಿಳಿದುಕೊಂಡು, ಯಾವಾಗಲೂ ನಿನ್ನ ಪಾದದರ್ಶನಕ್ಕಾಗಿಯೇ ಕಳವಳಿಸು

ತಿದ್ದ ನನಗೆ ಈಗ ದರ್ಶನವನ್ನು ಕೊಟ್ಟಿರುವೆ? ಇದಲ್ಲದೆ ನೀನು ಆಗಾಗ, "ನನಗೆ ನಿತ್ಯಸಖನಾದ ಆದಿಶೇಷನಾಗಲಿ, ಪತ್ನಿಯಾದ ಲಕ್ಷ್ಮೀ ದೇವಿಯಾಗಲಿ, ಮಗನಾದ ಬ್ರಹ್ಮನಾಗಲಿ, ಭಕ್ತರಿಗಿಂತಲೂ ಹೆಚ್ಚು ಪ್ರೀತಿಪಾತ್ರರಲ್ಲ" ವೆಂಬು ನಿನ್ನ ಬಾಯಿಂದಲೇ ಹೇಳಿರುವೆ. ಆ ಮಾತನ್ನು ಸ್ಥಿರಪಡಿಸುವುದಕ್ಕಾಗಿಯೇ ಈಗ ನೀನು, ನನ್ನ ಕಣ್ಣುಗಳಿಗೆ ಗೋಚರಿಸಿದೆ! ಹೀಗೆ ನಿನ್ನಲ್ಲಿರುವ ಎಣೆಯಿಲ್ಲದ ಭಕ್ತವಾತ್ಸಲ್ಯವನ್ನು ತಿಳಿದವನು ಯಾವನು ತಾನೇ ನಿನ್ನ ಪಾದಾಶ್ರಯದಲ್ಲಿ ವಿಮುಖನಾಗುವನು? ವಿವೇಕಿಯಾದವನು ಎಂದಿಗೂ ಅದನ್ನು ಬಿಡಲಾರನು. ಸಮಸ್ತವಿಷಯಗಳಲ್ಲಿಯೂ ಆಸೆಯನ್ನು ತೊರೆದು, ಅಕಿಂಚನರಾಗಿಯೂ, ನಿನ್ನನ್ನೇ ನಿರತಿಶಯಪುರುಷಾರ್ಥವೆಂದು ನಂಬಿದವರಾಗಿಯೂ ಇರುವ ಮುನಿಗಳಿಗೆ ನೀನು ನಿನ್ನನ್ನೇ ಒಪ್ಪಿಸಿಬಿಡತಕ್ಕವನು ಈ ಪ್ರಕೃತಿಮಂಡಲದಲ್ಲಿ ಸಾಂಸಾರಿಕತಾಪತ್ರಯಗಳಿಂದ ಬಳಲುತ್ತಿರುವ ಜೀವರಿಗೆ, ಆ ತಾಪ ಶಮನಾರ್ಥನಾಗಿಯೇ ಈಗ ನೀನು ಯದುವಂಶದಲ್ಲಿ ಈ ಮನುಷ್ಯರೂಪದಿಂದ ಅವತರಿಸಿ, ಲೋಕಪಾವನವಾದ ನಿನ್ನ ಕೀರ್ತಿಯನ್ನು ಹರಡಿರುವೆ ಓ ಬಗವಂತಾ! ಕೃಷ್ಣಾ! ನಿನಗೆ ನಮಸ್ಕಾರವು. ಆಶ್ರಿತರ ಸೇವೆಯನ್ನು ಎಂದೆಂದಿಗೂ ಮರೆಯದೆ ಸ್ಮರಿಸತಕ್ಕವನಾಗಿಯೂ, ಲೋಕಕ್ಷೇಮಕ್ಕಾಗಿಯೇ ನಾರಾಯಣಋಷಿರೂಪದಿಂದ ತಪೋನಿಷ್ಠನಾಗಿಯೂ ಇರುವ ನಿನಗೆ ನಮಸ್ಕಾರವು ಸರ್ವೈಶ್ವರ್ಯಪರಿಪೂರ್ಣನಾದ ಓ ಕೃಷ್ಣಾ! ನೀನು ಇನ್ನೂ ಕೆಲವುದಿನಗಳವರೆಗೆ ಈ ಮಹರ್ಷಿಗಳೊಡನೆ ಇಲ್ಲಿಯೇ ವಾಸಮಾಡುತಿದ್ದು, ನಿನ್ನ ಪಾದಧೂಳೀಸಂಬಂಧದಿಂದ ಈ ನಮ್ಮ ನಿಮಿಕುಲವನ್ನು ಪಾವನಮಾಡಬೇಕು" ಎಂದನು. ಹೀಗೆ ವಿನಯದಿಂದ ಪ್ರಾರ್ಥಿಸುತ್ತಿರುವ ಆ ಬಹುಳಾಶ್ವನ ಮಾತನ್ನು ಮೀರಲಾರದೆ, ಕೃಷ್ಣನು ಕೆಲವು ದಿನಗಳವರೆಗೆ ಅವನ ಮನೆಯಲ್ಲಿಯೇ ಇದ್ದು, ಆ ಪುರವಾಸಿಗಳಿಗೂ ಅನೇಕವಿಧದಲ್ಲಿ ಕ್ಷೇಮವನ್ನುಂಟುಮಾಡುತಿದ್ದನು.

ಓ ಪರೀಕ್ಷಿದ್ರಾಜಾ! ಹೀಗೆಯೇ ಅತ್ತಲಾಗಿ ಶ್ರುತದೇವವೆಂಬ ಬ್ರಾಹ್ಮಣನೊಕೂಡ, ಶ್ರೀಕೃಷ್ಣನೂ, ಅನೇಕಮಹರ್ಷಿಗಳೂ ತನ್ನ

ಮನೆಗೆ ಅತಿಥಿಗಳಾಗಿ ಬಂದುದನ್ನು ನೋಡಿ, ಸಂತೋಷದಿಂದ ಮೈಮರೆತು, ತಾನು ಹೊದೆದಿದ್ದ ಉತ್ತರೀಯವನ್ನು ಹಾರಿಸಿ ಕುಣಿದಾಡುತ್ತ ಬಂದು, ಅವರ ಪಾದಗಳನ್ನು ಹಿಡಿದು ನಮಸ್ಕರಿಸಿದನು. ತನ್ನ ಶಕ್ತಿಗೆ ತಕ್ಕಂತೆ ಅವರೆಲ್ಲರಿಗೂ ನೊದೆಹುಲ್ಲಿನ ಆಸನಗಳನ್ನೂ, ಬ್ರುಸಿಯೆಂಬ ಮುಷ್ಠ್ಯಾಸನಗ ಳನ್ನೂ, ಕೃಷ್ಣಾಜಿನಗಳನ್ನೂ ತಂದುಕೊಟ್ಟು ಕುಳ್ಳಿರಿಸಿದನು. ಅವರ ಸುಖಾಗಮನವನ್ನು ಕೇಳಿ, ಭಾರ್ಯಾಸಮೇತನಾಗಿ ಅವರೆಲ್ಲರ ಪಾದಗಳನ್ನೂ ತೊಳೆದು, ಅದೇ ತನಗೆ ಸರ್ವಾಭೀಷ್ಟಪ್ರದವೆಂದು ತಿಳಿದು, ಆ ತೀರ್ಥವನ್ನು ತನ್ನ ತಲೆಗೆ ಪ್ರೋಕ್ಷಿಸಿಕೊಂಡನು. ತನ್ನ ಪತ್ನಿಗೂ, ಗೃಹಕ್ಕೂ ಅದನ್ನು ಪ್ರೋಕ್ಷಿಸಿದನು. ಗಂಧಪುಷ್ಪ ಧೂಪದೀಪಾದಿಗಳನ್ನೂ, ಫಲದ ಕಾಣಿಕೆ ಗಳನ್ನೂ, ಲಾಮಂಚದಿಂದ ಸುವಾಸಿತವಾದ ಪಾನಜಲವನ್ನೂ ತಂದೊಪ್ಪಿ ಸಿದನು. ಸುಗಂಧವುಳ್ಳ ಕಸ್ತೂರಿ, ತುಲಸಿ, ಸತ್ವಗುಣವರ್ಧಕವಾದ ಶುದ್ಧಾನ್ನ, ಮೊದಲಾಗಿ, ತನಗೆ ಅನಾಯಾಸಲಭ್ಯವಾದ ವಸ್ತುಗಳಿಂದಲೇ ಅವರಿಗೆ ಸಮಸ್ತಸತ್ಕಾರಗಳನ್ನೂ ನಡೆಸಿದನು ಹೀಗೆ ಅವರೆಲ್ಲರಿಗೂ ಪೂಜೆ ಯನ್ನು ಮಾಡುವಾಗ, ಆಬ್ರಾಹ್ಮಣನು ತನ್ನಲ್ಲಿ ತಾನು ಸಂತೋಷದಿಂದ ಹೀ ಗೆಂದು ಯೋಚಿಸುವನು. "ಆಹಾ! ಏನಿದು ನನ್ನ ಭಾಗ್ಯವು! ನಾನೋ ಸಂ ಸಾರವೆಂಬ ಮಹಾನರಕದಲ್ಲಿ ಕಣ್ಣುಕಾಣದೆ ತೊಳಲುತ್ತಿರುವೆನು. ಇಂತಹ ಸ್ಥಿತಿಯಲ್ಲಿ ನನಗೆ, ಪರಮಪುರುಷನಾದ ಶ್ರೀ ಕೃಷ್ಣನೊಡನೆಯೂ, ಆ ಪರ ಮಾತ್ಮನಿಗೆ ನಿತ್ಯನಿವಾಸಭೂತರಾದ ಈ ಮಹರ್ಷಿಗಳೊಡನೆಯೂ ಸಮಾ ಗಮವುಂಟಾಯಿತಲ್ಲವೆ? ಇವರ ಪಾದರಜಸ್ಸೇ ಸಮಸ್ತಪುಣ್ಯತೀರ್ಥಗಳಿಗೆ ಸಮಾನವೆನಿಸುವುದು. ಇಂತವರು ನನ್ನ ಮನೆಗೆ ಬಂದುದು ನನ್ನ ಪರಮ ಭಾಗ್ಯವಲ್ಲವೆ?" ಎಂದು ಆನಂದಿಸುತಿದ್ದನು. ಹೀಗೆ ಅಲ್ಲಿ ಬಂದವರೆಲ್ಲರೂ ಆತಿಥ್ಯವನ್ನು ಕೈಕೊಂಡು ಸುಖಾಸೀನರಾಗಿದ್ದಾಗ, ಶ್ರುತದೇವನು ತನ್ನ ಪತ್ನೀಸಮೇತನಾಗಿ ಬಂದು, ಕೃಷ್ಣನ ಪಾದಗಳನ್ನೊತ್ತುತ್ತ "ದೇವಾ! ನೀನು ಪ್ರಕೃತಿಪುರುಷರಿಗಿಂತಲೂ ವಿಲಕ್ಷಣನಾಗಿ, ಅವೆರಡಕ್ಕಿಂತಲೂ ಉತ್ಕೃಷ್ಟನೆನಿಸಿರುವೆ. ನೀನು ನಿನ್ನ ಸಂಕಲ್ಪಮಾತ್ರದಿಂದಲೇ ಈ ಜಗತ್ತ ನ್ನು ಸೃಷ್ಟಿಸಿ, ಎಂದಿಗೂ ವಿಕಾರವಿಲ್ಲದ ನಿನ್ನ ಆತ್ಮಸ್ವರೂಪದೊಡನೆ ಅದ

ರಲ್ಲಿ ನೀನೂ ಪ್ರವೇಶಿಸುವೆ ಪುರುಷನು ಮಲಗಿದ್ದಾಗ, ಜೀವಶರೀರಕನಾಗಿ ತನ್ನಲ್ಲಿ ನೆಲೆಗೊಂಡ ಪರಮಾತ್ಮನ ಸಂಕಲ್ಪದಿಂದ, ಆ ಜೀವನ ಮನೋರಥಗಳಿಗೂ, ಅವನ ಕರ್ಮಗಳಿಗೂ ತಕ್ಕಂತೆ, ಆ ಮಲಗಿದ್ದ ಶರೀರಕ್ಕಿಂತಲೂ ಭಿನ್ನವಾಗಿ, ಆಯಾಕಾಲದಲ್ಲಿಮಾತ್ರ ಇದ್ದು ಹೋಗತಕ್ಕ ಸ್ವಪ್ನದೇಹವನ್ನು ಹೊಂದಿ, ಅದರಲ್ಲಿ ರಾಜ್ಯಾಭಿಷೇಕ ಶಿರಚ್ಛೇದನಾದಿಗಳನ್ನನುಭವಿಸಿದರೂ, ವಾಸ್ತವದಲ್ಲಿ ಅವನಿಗೆ ಅದರ ಸಂಬಂಧವಿಲ್ಲದಿರುವಂತೆ, ನೀನೂ ಈ ಜಗತ್ತನ್ನು ಸೃಷ್ಟಿಸಿ, ನಿನ್ನ ಸಂಕಲ್ಪದಿಂದ ಅದರಲ್ಲಿ ಅನುಪ್ರವೇಶಮಾಡಿದ್ದರೂ ಅದರ ದೋಷಕ್ಕೆ ನೀನು ಈಡಾಗುವವನಲ್ಲ! ಕೃಷ್ಣಾ! ನಿನ್ನ ಪುಣ್ಯಕಥೆಗಳನ್ನು ಯಾವಾಗಲೂ ಕಿವಿಯಿಂದ ಕೇಳತಕ್ಕವರಾಗಲಿ, ಬಾಯಿಂದ ಹೇಳತಕ್ಕವರಾಗಲಿ, ನಿನ್ನನ್ನು ಆಗಾಗ ಸಾಕ್ಷಾತ್ತಾಗಿ ನೋಡತಕ್ಕವರಾಗಲಿ, ನಿನಗೆ ಆಗಾಗ ನಮಸ್ಕರಿಸತಕ್ಕವರಾಗಲಿ, ನಿನ್ನ ನಿಜವಾದ ಸ್ವರೂಪವೇನೆಂಬುದನ್ನು ತಮ್ಮ ಹೃದಯದಲ್ಲಿಯೇ ನೋಡಿ ತಿಳಿಯಬೇಕೇಹೊರತು, ಅದು ಯಾರ ಕಣ್ಣಿಗೂ ಗೋಚರಿಸಲಾರದು ಕರ್ಮಪಾಶದಿಂದ ಕದಲಿದ ಮನಸ್ಸುಳ್ಳವರಿಗೆ, ನೀನು ಅವರ ಹೃದಯದಲ್ಲಿದ್ದರೂ ದೂರದಲ್ಲಿದ್ದಂತೆಯೇಹೊರತು ಬೇರೆಯಲ್ಲ! ಹೀಗೆ ಎಂತಹ ಮಹಾಯೋಗಿಗಳಿಗೂ ದುರ್ಲಭನಾದ ನೀನು, ಈಗ ನನ್ನ ಕಣ್ಣಿದಿರಾಗಿ ಗೋಚರಿಸಿದೆ ರಜಸ್ತಮೋಗುಣಗಳಿಂದ ಕದಲಿದ ಮನಸ್ಸುಳ್ಳವರಿಗೆ, ನೀನು ಹೃದಯದಲ್ಲಿಯೇ ಇದ್ದರೂ ನಿನ್ನ ಮಾಯಾಶಕ್ತಿಯಿಂದ ಅವರಿಗೆ ನಿನ್ನ ಸ್ವರೂಪವು ತಿಳಿಯದಂತೆ ಮರೆಸಿಡುವೆ! ಅಧ್ಯಾತ್ಮತತ್ವವನ್ನು (ನಿನ್ನ ಯಾಥಾತ್ಮ್ಯವನ್ನು) ತಿಳಿದವರಿಗೆ ಪ್ರಾಪ್ಯವಸ್ತುವಾದ ಪರಮಾತ್ಮನೂ, ಅದರಲ್ಲಿ ವಿಮುಖರಾದ ಅಜ್ಞಾನಿಗಳಿಗೆ ನಿಜಸಂಕಲ್ಪದಿಂದ ಮೃತ್ಯುವನ್ನುಂಟುಮಾಡತಕ್ಕವನೂ ನೀನೇ ಆಗಿರುವೆ! ಕರ್ಮಮೂಲಕವಾದ ಶರೀರಸಂಬಂಧವಿಲ್ಲದಿರುವಾಗಲೂ ಲೋಕೋಜ್ಜೀವನಾರ್ಥವಾಗಿ ಈ ದಿವ್ಯಮಂಗಳವಿಗ್ರಹವನ್ನು ಕೈಕೊಂಡು, ಮಾಯೆಯಿಂದ ಮೋಹಿತರಾದವರಿಗೆ ಮುಕ್ತಿಮಾರ್ಗವನ್ನು ಮರೆಸಿಡತಕ್ಕ ನಿನಗೆ ನಮಸ್ಕಾರವು ದೇವಾ! ನಾನು ನಿನ್ನ ಭೃತ್ಯನು, ನನ್ನಿಂದ ಈಗ ನಿನಗೆ ಯಾವ ವಿಧವಾದ ಸೇವೆಯು ನಡೆಯಬೇಕೆಂಬುದನ್ನು

ರೂಪವನ್ನು ಬೋಧಿಸಬೇಕು. ಶಬ್ದಗಳ ಪ್ರವೃತ್ತಿನಿಮಿತ್ತವೇ ಇದು! ಮೇಲೆ ಹೇಳಿದ ವಿಶೇಷಣಗಳ ಮೂಲಕವಾಗಿ, ಆ ಗುಣಗಳಿಲ್ಲದ ಇತರವಸ್ತುವನ್ನು ಬೋಧಿಸುವುದೂ ಅಸಂಭವವಲ್ಲವೆ? ಬ್ರಹ್ಮವೆಂಬುದು ಚೇತನಾಚೇತನಗಳೆರಡಕ್ಕಿಂತಲೂ ವಿಲಕ್ಷಣವಾದುದು! ಅದನ್ನು ಹೀಗೆಂದು ನಿರ್ಧರಿಸುವುದೇ ಸಾಧ್ಯವಿಲ್ಲ. ಚೇತನಾಚೇತನಗಳನ್ನು ತೋರಿಸುವುದಕ್ಕೆ ನಿಮಿತ್ತವಾದ ಜಾತಿ, ಗುಣ, ಕ್ರಿಯಾದಿಗಳೊಂದೂ ಆ ಬ್ರಹ್ಮನಲ್ಲಿ ಸಂಭವಿಸಲಾರವು. ಹೀಗಿರುವಾಗ,ಚೇತನಾ ಚೇತನಗಳನ್ನು ನಿರ್ದೇಶಿಸತಕ್ಕ ಶ್ರುತಿಗಳು,ಜಾತ್ಯಾದಿಭೇದಗಳೊಂದೂ ಇಲ್ಲದ ಪರಬ್ರಹ್ಮನಲ್ಲಿ ಹೇಗೆ ವರ್ತಿಸುವುವು? ಶ್ರುತಿಗಳಲ್ಲಿರುವ ಒಂದೊಂದು ಶಬ್ದವೂ ಆ ಪರಬ್ರಹ್ಮವನ್ನೇ ನಿರ್ದೇಶಿಸುವುದೆಂದೂ ಆ ವೇದವಾಕ್ಯದಿಂದಲೇ ಹೇಳಲ್ಪಟ್ಟಿರುವುದು. ಒಂದುವೇಳೆ ಆ ಬ್ರಹ್ಮನನ್ನು ಸತ್ಯಜ್ಞಾನಾನಂದಸ್ವರೂಪವಾಗಿಯೂ, ಸರ್ವಜ್ಞತ್ವ ಸರ್ವಶಕ್ತಿತ್ವಾದಿಗುಣಗಳಿಂದ ಕೂಡಿದುದಾಗಿಯೂ ಹೇಳತಕ್ಕ ಶ್ರುತಿಗಳು, ಆ ಬ್ರಹ್ಮಸ್ವರೂಪವನ್ನು ತಿಳಿಸುವುದಕ್ಕೆ ಪ್ರಮಾಣವೆನಿಸಿದ್ದರೂ, ಚೇತನಾಚೇತನಗಳೆಲ್ಲವನ್ನೂ ಬ್ರಹ್ಮವೆಂದು ಹೇಳತಕ್ಕ ಶ್ರುತಿಗಳಿಗೆ ಪ್ರಮಾಣತ್ವವು ಹೇಗೆ? ಚೇತನಾಚೇತನಗಳ ಜಾತಿಗುಣಾದಿಗಳೊಂದೂ ಇಲ್ಲದ ಬ್ರಹ್ಮನಲ್ಲಿ, ಆ ಶ್ರುತಿಗಳು ವಾಚ್ಯಾರ್ಥದಿಂದ ವರ್ತಿಸುವುದು ಹೇಗೆಂಬುದನ್ನು ನನಗೆ ತಿಳಿಸಬೇಕು” ಎಂದನು ಅದಕ್ಕಾ ಶುಕನು “ರಾಜೇಂದ್ರಾ! ಕೇಳು. ಭಗವಂತನು ಜೀವಗಳಲ್ಲಿ ಅಂತರಾತ್ಮನಾಗಿದ್ದು ಅವುಗಳಿಗೆ ನಾಮರೂಪಗಳನ್ನು ನಿರ್ವಹಿಸುವುದಕ್ಕಾಗಿ, ಬುದ್ಧಿ, ಇಂದ್ರಿಯಗಳು, ಮನಸ್ಸು, ಪ್ರಾಣಗಳು, ಮೊದಲಾದುವುಗಳಿಂದ, ಮಹಾಭೂತಗಳವರೆಗೆ ಜಗತ್ತನ್ನು ಸೃಷ್ಟಿಸಿ, ಅವುಗಳನ್ನು ತನಗೆ ಶರೀರವಾಗಿ ಮಾಡಿಕೊಂಡು, ಆ ಶರೀರಸಂಬಂಧದಿಂದ ತಾನೇ ಅವುಗಳ ಹೆಸರಿನಿಂದ ವ್ಯವಹರಿಸಲ್ಪಡುವನು. ಅಸತ್ಪ್ರಾಯವಾಗಿರುವ ಜೀವಗಳಿಗೆ, ತನ್ನ ಆರಾಧನಕ್ಕೆ ಸಾಧನವಾದ ದೇಹಾದಿಗಳನ್ನು ಕೊಟ್ಟು, ಅದರಿಂದ ತನ್ನನ್ನಾರಾಧಿಸತಕ್ಕವರಿಗೆ ಶ್ರೇಯಸ್ಸನ್ನು ಕೈಗೂಡಿಸುವುದಕ್ಕಾಗಿಯೂ, ಮುಕ್ತಿಸಾಧನವಾದ ಅಧ್ಯಾತ್ಮಜ್ಞಾನವನ್ನು ಪಡೆಯುವುದಕ್ಕೆ ಅವಕಾಶವನ್ನು ಕಲ್ಪಿಸಿಕೊಡುವುದಕ್ಕಾಗಿಯೂ, ಜ್ಞಾನ

ವೊಂದೇ ಆಕಾರವಾಗಿ ಉಳ್ಳ ಜೀವಗಳಲ್ಲಿ, ದೇವಮನುಷ್ಯಾದಿಭೇದಕಲ್ಪನೆಯು ತಪ್ಪುವುದಕ್ಕಾಗಿಯೂ, ಆ ಜೀವಗಳಿಗೆ ಬುದ್ಧೀಂದ್ರಿಯಾದಿಗಳನ್ನೂ ಕೊಟ್ಟು ಜಗತ್ಸೃಷ್ಟಿಯನ್ನು ಮಾಡಿರುವನು. ಶ್ರುತ್ಯುಕ್ತಗಳಾದ ಸಮಸ್ತಶಬ್ದಗಳೂ, ಮುಖ್ಯವೃತ್ತಿಯಿಂದ ಬ್ರಹ್ಮನಲ್ಲಿಯೇ ಸೇರುವುವೆಂದು ಹೇಳುವ ಆ ಬ್ರಹ್ಮವಿಚಾರವಾದ ಉತ್ಪತ್ತಿಯು ಬಹಳ ರಹಸ್ಯವಾದುದು. ಅದು ಉಪನಿಷದರ್ಥವಿಚಾರದಿಂದಲೇ ತಿಳಿಯತಕ್ಕುದಾಗಿರುವುದು ಹೀಗೆಂದು ನಮ್ಮ ಹಿರಿಯರಿಗಿಂತಲೂ ಹಿರಿಯರಾದ ವಾಮದೇವಾದಿಗಳಿಂದ ನಿಶ್ಚಯಿಸಲ್ಪಟ್ಟಿರುವುದು. ಬ್ರಹ್ಮವಿಚಾರವಾದ ಈ ಉತ್ಪತ್ತಿಯನ್ನು, ಯಾವಪುರುಷನು ಶ್ರದ್ಧೆಯಿಂದ ಹೃದಯದಲ್ಲಿ ಧಾರಣೆಮಾಡುವನೋ, ಅವನು, ಇತರಾಪೇಕ್ಷೆಯಿಲ್ಲದೆ ಮುಕ್ತಿಯನ್ನು ಹೊಂದುವನು. ನೀನು ಕೇಳಿದ ಇದೇ ಪ್ರಶ್ನೆಯವಿಚಾರವಾಗಿ, ಸಾಕ್ಷಾನ್ನಾರಾಯಣನಿಂದ ನಿರೂಪಿತಗಳಾದ ಕೆಲವು ವಾಕ್ಯಗಳನ್ನು ತಿಳಿಸುವೆನು ಕೇಳು. ಹಿಂದೆ ಈ ವಿಚಾರವಾಗಿ ನಾರದನಿಗೂ, ನಾರಾಯಣಮಹರ್ಷಿಗೂ, ನಡೆದ ಒಂದಾನೊಂದು ಸಂವಾದವುಂಟು ಹಿಂದೊಮ್ಮೆ ಭಗವಂತನಿಗೆ ಪರಮಪ್ರಿಯನಾದ ನಾರದನು, ಲೋಕಸಂಚಾರವನ್ನು ಮಾಡುತ್ತ, ಪುರಾತನ ಋಷಿಯಾದ ನಾರಾಯಣನನ್ನು ದರ್ಶನಮಾಡುವುದಕ್ಕಾಗಿ ಬದರಿಕಾಶ್ರಮಕ್ಕೆ ಹೋದನು ಓ ಪರೀಕ್ಷಿದ್ರಾಜಾ! ಆ ನಾರಾಯಣಮಹರ್ಷಿಯು ಯಾರೆಂದು ಬಲ್ಲೆಯಾ? ಈ ಭಾರತವರ್ಷದಲ್ಲಿರುವ ಮನುಷ್ಯರ ಕ್ಷೇಮಕ್ಕಾಗಿ ಸಾಕ್ಷಾನ್ಮಹಾವಿಷ್ಣುವೇ ಋಷಿರೂಪವನ್ನು ತಾಳಿ, ವರ್ಣಾಶ್ರಮಧರ್ಮಗಳನ್ನೂ, ಆತ್ಮಜ್ಞಾನವನ್ನೂ, ರಾಗದ್ವೇಷಾದಿಗಳಿಲ್ಲದ ಶಾಂತಸ್ವಭಾವವನ್ನೂ ತನ್ನಲ್ಲಿ ತೋರಿಸುತ್ತ, ಕಲ್ಪಾವಧಿಯಾಗಿ ತಪೋನಿಷ್ಠೆಯಲ್ಲಿ ಕುಳಿತಿರುವನು ಅವನ ತಪಸ್ಸೆಂಬುದು ತನ್ನ ಉಪಾಸನರೂಪವಾದುದೇ ಹೊರತು ಬೇರೆಯಲ್ಲ! ಹೀಗೆ ಬದರಿಕಾಶ್ರಮದಲ್ಲಿಆತ್ಮಧ್ಯಾನನಿಷ್ಠರಾದ ಅನೇಕ ಮಹರ್ಷಿಗಳಿಂದ ಪರಿವೃತನಾಗಿ ತಪೋನಿಷ್ಠೆಯಲ್ಲಿದ್ದ ನಾರಾಯಣನನ್ನು, ನಾರದನು ವಿನಯದಿಂದ ನಮಸ್ಕರಿಸಿ, ಈಗ ನೀನು ನನ್ನಲ್ಲಿ ಕೇಳಿದ ಪ್ರಶ್ನೆಯನ್ನೇ ಕೇಳಿದನು. ಆಗ ನಾರಾಯಣನು, ಅಲ್ಲಿದ್ದ ಋಷಿಗ

ಳೆಲ್ಲರೂ ಕೇಳುತ್ತಿರುವಹಾಗೆಯೇ, ಹಿಂದೆ ಜನಲೋಕನಿವಾಸಿಗಳಾದ ಸನಂದನಾದಿಬ್ರಾಹ್ಮಣರಲ್ಲಿ ನಡೆದ ಒಂದಾನೊಂದು ಸಂವಾದವನ್ನು ತಿಳಿಸುತ್ತ "ಓ ನಾರದಾ! ಪೂರ್ವದಲ್ಲಿ ಬ್ರಹ್ಮನಿಗೆ ಮಾನಸಪುತ್ರರಾಗಿಯೂ, ಹುಟ್ಟಿದಂದಿನಿಂದಲೇ ಜಿತೇಂದ್ರಿಯರಾಗಿಯೂ ಇದ್ದ ಸನಕಾದಿಗಳು, ಜನಲೋಕದಲ್ಲಿ, ಪರಬ್ರಹ್ಮನ ಗುಣಾನುಭವರೂಪವಾದ ಬ್ರಹ್ಮಸತ್ರವೆಂಬ ಯಾಗವನ್ನು ನಡೆಸಿದರು ಆಗ ನೀನು ಸರ್ವೇಶ್ವರನ ದರ್ಶನಾರ್ಥವಾಗಿ ಶ್ವೇತದ್ವೀಪಕ್ಕೆ ಹೋಗಿದ್ದೆ ಆಗ ಆ ಬ್ರಾಹ್ಮಣರಲ್ಲಿ ಕೆಲವು ವಾದಗಳು ನಡೆದುವು ಆ ವಾದಗಳಲ್ಲಿ ಶ್ರುತಿಗಳೆಲ್ಲಕ್ಕೂ ಐಕಕಂಠ್ಯವು ಸಮರ್ಥಿಸಲ್ಪಟ್ಟು, ಅವುಗಳ ವಿಕಲ್ಪಾರ್ಥಸಂದೇಹಗಳೆಲ್ಲವೂ ನಿವೃತ್ತವಾದುವು ಓ ನಾರದಾ! ಈಗ ನೀನು ನನ್ನಲ್ಲಿ ಯಾವ ಪ್ರಶ್ನೆಯನ್ನು ಕೇಳುತ್ತಿರುವೆಯೋ,ಆ ಪ್ರಶ್ನೆಯೇ ಅಲ್ಲಿಯೂ ವಿಚಾರಕ್ಕೆ ಬಂದು,ಅದಕ್ಕೆ ತಕ್ಕ ಸಮಾಧಾನಗಳೂಹೇಳಲ್ಪಟ್ಟಿರುವುವು ಅಲ್ಲಿ ನಡೆದ ಆಕ್ಷೇಪಪರಿಹಾರಾದಿಗಳನ್ನೇ ಈಗ ನಾನು ನಿನಗೆ ತಿಳಿಸುವೆನು ಕೇಳು ಆ ಬ್ರಹ್ಮಸತ್ರಯಾಗಕ್ಕಾಗಿ ಸೇರಿದ್ದವರೆಲ್ಲರೂ, ಗುಣದಲ್ಲಿಯೂ,ಶಾಸ್ತ್ರಜ್ಞಾನದಲ್ಲಿಯೂ, ತಪಸ್ಸಿನಲ್ಲಿಯೂ ಸಮಾನರು ಮತ್ತು ಅವರು, ತನ್ನವರಂದೂ, ಅನ್ಯರೆಂದೂ, ಉದಾಸೀನರೆಂದೂ ಭೇದಬುದ್ಧಿಯಿಲ್ಲದೆ ಸಮಸ್ತಭೂತಗಳನ್ನೂ ಸಮಬುದ್ಧಿಯಿಂದ ಭಾವಿಸತಕ್ಕವರು. ಹೀಗೆ ಅಲ್ಲಿ ಸೇರಿದ್ದವರೆಲ್ಲರೂ ಮಹಾಜ್ಞಾನಿಗಳಾಗಿದ್ದರೂ, ತಮ್ಮಲ್ಲಿ ಒಬ್ಬನನ್ನು ಪ್ರವಚನಕ್ಕಾಗಿ ಏರ್ಪಡಿಸಿ,ಉಳಿದವರೆಲ್ಲರೂ ಸೇವಕರಾಗಿ ಕುಳಿತರು ಇಂತಹ ಸತ್ರಯಾಗದಲ್ಲಿ ಎಲ್ಲರೂ ಜ್ಞಾನಿಗಳೇ ಸೇರಿದ್ದರೂ,ಒಬ್ಬನು ಉಪನ್ಯಾಸಕನಾಗಿಯೂ, ಇತರರು ಕೇಳತಕ್ಕವರಾಗಿಯೂ ಇರಬೇಕಾದುದೇ ಪದ್ಧತಿ!ಅದರಂತೆ ಅಲ್ಲಿ ಪ್ರವಚನಕ್ಕಾಗಿ ಅಗ್ರಾಸನದಲ್ಲಿ ಕುಳಿತಿದ್ದ ಸನಂದನನು ಹೀಗೆಂದು ಹೇಳುವನು" ಓ ಮಹಾತ್ಮರೆ! ಕೇಳಿರಿ! ಪರಮಪುರುಷನು ತನ್ನಿಂದ ಸೃಷ್ಟಿಸಲ್ಪಟ್ಟ ಚಿದಚಿದಾತ್ಮಕವಾದ ಸಮಸ್ತಜಗತ್ತನ್ನೂ ಲಯಹೊಂದಿಸಿ, ತನ್ನಲ್ಲಿಯೇ ಅಡಗಿಸಿಕೊಂಡು, ನಾಮರೂಪವಿಭಾಗವಿಲ್ಲದಂತೆ ಮಾಡಿ, ಪ್ರಕೃತಿ ಪುರುಷ ಕಾಲವೆಂಬ ಮೂರುಶಕ್ತಿಗಳೊಡನೆ ಆತ್ಮಾನಂದಾನುಭವರೂಪವಾದ ನಿದ್ರೆಯಲ್ಲಿರುವರು. ಪ್ರಳಯಾಂತದಲ್ಲಿ ಸೃಷ್ಟಿ

ಗೆ ಮೊದಲು, ಆತನ ನಿಶ್ವಾಸರೂಪವಾಗಿ ಶ್ರುತಿಗಳೂ ಹೊರಟು, ಮೂರ್ತಿ ವಿಶಿಷ್ಟಗಳಾಗಿ ನಿಂತು,ಸ್ತುತಿಪಾಠಕರು ನಿದ್ರೆಯಲ್ಲಿರುವ ರಾಜನನ್ನು ಪ್ರಾತಃ ಕಾಲದಲ್ಲಿ ಆತನ ಗುಣವರ್ಣನರೂಪವಾದ ಮಂಗಳಶ್ಲೋಕಗಳಿಂದ ಎಚ್ಚರ ಗೊಳಿಸುವಂತೆ, ಆತನನ್ನು ಸ್ತೋತ್ರಮಾಡುತ್ತ ಹೀಗೆಂದು ಹೇಳುವುವು "ದೇವಾ! ಜಯ!ವಿಜಯೀಭವ! ಸಮಸ್ತಜಗತ್ತನ್ನೂ ಜಯಿಸತಕ್ಕ ಪ್ರಕೃತಿ ಯೂಕೂಡ ನಿನ್ನನ್ನು ಜಯಿಸಲಾರದು. ಆದುದರಿಂದಲೇ ನೀನು ಅಜಿತನೆಂದು ಹೇಳಲ್ಪಡುವೆ. ಓ! ಪ್ರಭೂ! ಈಗ ನಿನ್ನಲ್ಲಿ ಸೂಕ್ಷ್ಮಾವಸ್ಥೆಯಿಂದ ಲೀನವಾ ಗಿರುವ ಜೀವಗಳಿಗೆ, ಸಂಸಾರಹೇತುವಾದ ಪ್ರಕೃತಿಸಂಬಂಧವನ್ನು ಬಿಡಿಸು ವುದಕ್ಕಾಗಿ ನೀನು ಎಚ್ಚರಗೊಳ್ಳುವನಾಗು. ನಿನ್ನಲ್ಲಿ ಅಪರಾಧಿಗಳಾದ ಜನಗ ಳಲ್ಲಿಯೂ. ನೀನು ಎಷ್ಟೋ ದೋಷಗಳಿದ್ದರೂ ಮನಸ್ಸಿಗೆ ತಂದುಕೊಳ್ಳದೆ ಅವರಲ್ಲಿರತಕ್ಕ ಅಲ್ಪಸ್ವಲ್ಪಗುಣವನ್ನೇ ಅಭಿನಂದಿಸತಕ್ಕವನಾದುದರಿಂದ ಜೀವಾತ್ಮರಿಗೆ ಸಂಸಾರಮೂಲಕವಾದ ಪ್ರಕೃತಿಯನ್ನು ತೊಲಗಿಸುವ ನಿನ ಗೆ ಈ ಕಾರ್ಯಕ್ಕೆ ತಕ್ಕ ಜ್ಞಾನಶಕ್ತಿ ಮೊದಲಾದುವುಗಳು ಇಲ್ಲವೆಂದುಹೇಳುವು ದಕ್ಕಿಲ್ಲ. ನೀನು ಸ್ವೇಚ್ಛೆಯಿಂದಲೇ ಜ್ಞಾನ, ಶಕ್ತಿ, ಬಲ, ಐಶ್ವರ್ಯ, ಮೊದ ಲಾದ ಷಡ್ಗುಣಗಳನ್ನೂ ಕೈಕೊಂಡಿರತಕ್ಕವನು * ಚೇತನಾಚೇತನ ಶರೀರ ರೂಪವಾಗಿ ಏರ್ಪಡುವ ಪ್ರಕೃತಿಗುಣಗಳಿಗೂ, ಅಂತಹ ಶರೀರವನ್ನು ಆಶ್ರ ಯಿಸತಕ್ಕ ಜೀವಗಳಿಗೂ ಇರುವ ಶಕ್ತಿಗಳೆಲ್ಲವನ್ನೂ, ಆಯಾ ಕಾರ್ಯೋ ನ್ಮುಖವಾಗುವಂತೆ ಎಚ್ಚರಗೊಳಿಸತಕ್ಕವನು ನೀನೇ! ಅಂತಹ ಪ್ರಕೃತಿ ಪುರುಷರೊಡಗೂಡಿ ಜಗತ್ತಿನ ಆಕಾರದಿಂದ ಪರಿಣಮಿಸತಕ್ಕವನೂ ನೀನೆ! ಆದುದರಿಂದ, ನಿನ್ನನ್ನು ವೇದಗಳು (ಎಂದರೆ ವೇದದಲ್ಲಿ ಚಿದಚಿದ್ವಾಚಕಗ ಳಾದ ಶಬ್ದಗಳೆಲ್ಲವೂ) ವಾಚ್ಯಾರ್ಥದಿಂದಲೇ ವ್ಯವಹರಿಸುವುವು. ಪ್ರಳಯ ಕಾಲದಲ್ಲಿ ಬ್ರಹ್ಮನಿಂದ ಸಮಸ್ತಜಗತ್ತೂ ಉಪಸಂಹರಿಸಲ್ಪಟ್ಟಿದ್ದರೂ, ಸೃಷ್ಟಿಕಾಲದಲ್ಲಿ ಉತ್ಪನ್ನವಾಗುವ ಈ ಜಗತ್ತೂ ಬ್ರಹ್ಮವೆಂದೇ ವ್ಯವಹರಿಸ

* ಜೀವಾತ್ಮಗಳಿಗೆ ಪ್ರಳಯದಶೆಯದಲ್ಲಿ ಚಿಚ್ಛಕ್ತಿಯು ಸಂಕುಚಿತವಾಗಿ,ಮೂ ಢವಾಗಿರುವುದರಿಂದ ಅದನ್ನು ವಿಕಾಸಗೊಳಿಸುವುದೇ ಆ ಜೀವಾತ್ಮರನ್ನು ಎಚ್ಚರ ಗೊಳಿಸುವುದೆಂದು ಗ್ರಾಹ್ಯವು.

ಲ್ಪಡುವುದು. ಕಾರ್ಯರೂಪವಾದ ಈ ಜಗತ್ತು ಯಾವುದರಿಂದ ಉತ್ಪನ್ನವಾಗುವುದೋ, ಕೊನೆಗೆ ಯಾವುದರಲ್ಲಿ ಲಯಹೊಂದುವುದೋ ಆ ಬ್ರಹ್ಮವು ಪ್ರಪಂಚಕ್ಕಿಂತ ಬೇರೆನಿಸಲಾರದು ಹೇಗೆಂದರೆ, ಮಣ್ಣು, ಗಡಿಗೆ, ಹರವಿ ಮೊದಲಾದ ವಿಕಾರಗಳನ್ನು ಹೊಂದಿದಾಗಲೂ ಅದಕ್ಕೆ ಮಣ್ಣೆಂಬ ವ್ಯವಹಾರವು ತಪ್ಪದಿರುವಂತೆ ಈ ಜಗತ್ತೂಕೂಡ ಆ ಬ್ರಹ್ಮಕ್ಕಿಂತಲೂ ಬೇರೆನಿಸಲಾರದು ಹೀಗೆ ನೀನೇ ಸರ್ವಸ್ವರೂಪನಾಗಿಯೂ, ಸರ್ವಕಾರಣನಾಗಿಯೂ ಇರುವುದರಿಂದ,ಜ್ಞಾನಿಗಳಾದ ಋಷಿಗಳೆಲ್ಲರೂ ನಿನ್ನನ್ನೇ ಧ್ಯಾನಿಸುತ್ತ ನಿನಗಾಗಿಯೇ ಕರ್ಮಗಳನ್ನು ನಡೆಸುತ್ತಿರುವರು ದೇವಾ! ಶೂನ್ಯವಾದ ಆಕಾಶದಲ್ಲಿ ಕಾಲಿಟ್ಟವನು, ತಲೆಕೆಳಗಾಗಿ ಕೆಳಗೆ ಬೀಳಬೇಕಾಗುವುದು ಸ್ಥಿರವಾದ ನೆಲದಲ್ಲಿ ಕಾಲಿಟ್ಟವನು ಬೀಳಲಾರನು ಹಾಗೆಯೇ ನಿನ್ನನ್ನುದ್ದೇಶಿಸಿ ನಡೆಸಿದ ತ್ರಿಕರಣವ್ಯಾಪಾರಗಳೂ, ನಿನ್ನ ಆರಾಧನರೂಪಗಳಾಗಿ, ಸಂಸಾರತಾಪವನ್ನು ನೀಗಿಸುವುವು. ಹಾಗಿಲ್ಲದೆ ಇತರದೇವತೆಗಳನ್ನುದ್ದೇಶಿಸಿ ನಡೆಸಿದಾಗ, ಅವೇ ಪತನಹೇತುಗಳಾಗುವುವು. ಆದುದರಿಂದ ಋಷಿಗಳು ತಮ್ಮ ತ್ರಿಕರಣಗಳನ್ನೂ ನಿನ್ನಲ್ಲಿಯೇ ನಿಲ್ಲಿಸುವರು. ಸೃಷ್ಟಿಸ್ಥಿತಿ ಲಯಗಳೆಂಬ ಮೂರುಕಾರ್ಯಗಳಿಗೂ ನಿರ್ವಾಹಕನಾದ ಓ ದೇವಾ! ವಿವೇಕಿಗಳಾದ ನಿತ್ಯಸೂರಿಗಳು, ಶ್ರವಣಕೀರ್ತನಾದಿಗಳಿಂದ ಸಮಸ್ತಪಾಪಗಳನ್ನೂ ನಿವಾರಿಸತಕ್ಕ ನಿನ್ನ ಕಥಾಮೃತಸಾಗರದಲ್ಲಿ ಓಲಾಡುವುದರಿಂದಲೇ, ಆಧ್ಯಾತ್ಮಕಾದಿತಾಪಗಳನ್ನು ತಪ್ಪಿಸಿಕೊಂಡಿರುವರು ಇನ್ನು ನಿನ್ನ ಸಂತತ ಧ್ಯಾನದಲ್ಲಿರತಕ್ಕವರು ಆ ತಾಪತ್ರಯವನ್ನು ತಪ್ಪಿಸಿಕೊಳ್ಳುವುದೇನಾಶ್ಚರ್ಯವು ಓ! ಪರಮಾತ್ಮಾ! ನಿನ್ನ ವಿಷಯವಾದ ಜ್ಞಾನದಿಂದ, ರಾಗದ್ವೇಷಾದಿಮನೋವ್ಯಾಪಾರಗಳನ್ನೂ, ಜರಾಮರಣಾದಿಕಾಲಗುಣಗಳನ್ನೂ ಜಯಿಸಿ, ನಿತ್ಯಜ್ಞಾನಾನಂದಮಯವಾದ ನಿನ್ನ ಸ್ವರೂಪವನ್ನು ಸಮಾಧಿಯಿಂದ ಸಾಕ್ಷಾತ್ಕರಿಸತಕ್ಕರರಿಗೆ ತಾಪತ್ರಯವು ಬಿಟ್ಟು ಹೋಗುವುದೇನಾಶ್ಚರ್ಯವು. ಓ! ಪ್ರಭೂ! ನಿನ್ನನ್ನಾಶ್ರಯಿಸುವುದಕ್ಕೆ ಅನುಕೂಲವಾದ ಜನ್ಮವು ಲಭಿಸಿರುವಾಗಲೂ, ನಿನ್ನನ್ನು ಬಿಟ್ಟು ಇಂದ್ರಿಯತೃಪ್ತಿಯಲ್ಲಿ ಆಸೆಯುಳ್ಳವರ ಜನ್ಮವು ಕೇವಲ ನಿರರ್ಥಕ

ವಾಗಿರುವುದು ಗಾಳಿ ತುಂಬಿದ ಚರ್ಮದ ತಿತ್ತಿಯಂತೆ ಅವರ ಉಸಿರಾಟವೂ ನಿಷ್ಫಲವು? ಮಹತ್ತು, ಅಹಂಕಾರ, ಮೊದಲಾದ ತತ್ವಗಳು ಮೊದಲು ನಿನ್ನ ದರ್ಶನರೂಪವಾದ ಸಂಕಲ್ಪದಿಂದಲೇ ಸತ್ತೆಯನ್ನು ಹೊಂದಿ, ಆಮೇಲೆ ನೀನು ಅಂತರ್ಯಾಮಿಯಾಗಿ ಪ್ರೇರಿಸಿದುದರಿಂದಲೇಜಗತ್ಕಾರಣವಾದಅಂಡವನ್ನು ಸೃಷ್ಟಿಸಿದುವು ನಿನ್ನ ಈಕ್ಷಾರೂಪವಾದ ಅನುಗ್ರಹವಿಲ್ಲದಿದ್ದರೆ ಅವುಗಳಿಗೆ ಜಗತ್ಕಾರಣತ್ವವೂ ಸಿದ್ಧಿಸದು. ‘‘ಅಚೇತನವಾದ ಪ್ರಕೃತಿಗೆ ಜಗತ್ಕಾರಣತ್ವವನ್ನು ಹೇಳುವುದಕ್ಕೆ ಸಾಧ್ಯವಿಲ್ಲದಿದ್ದರೂ, ಮೊದಲು ಆತ್ಮನಿಂದ ಆಕಾಶವುಂಟಾಯಿತೆಂಬ ಶ್ರುತಿವಾಕ್ಯವನ್ನನುಸರಿಸಿ, ಆತ್ಮನಿಗೇ ಜಗತ್ಕಾರಣತ್ವವನ್ನು ಹೇಳಬಾರದೆ?” ಎಂದರೆ. ಆ ಆತ್ಮಶಬ್ದವೂ ಸಾಮಾನ್ಯವಾದ ಪ್ರತ್ಯಗಾತ್ಮನಲ್ಲಿ ಅನ್ವಯಿಸಲಾರದು ಆನಂದವಲ್ಲಿಯೆಂಬ ಉಪನಿಷದ್ವಾಕ್ಯದಲ್ಲಿ, ಅನ್ನಮಯ, ಪ್ರಾಣಮಯ, ಮನೋಮಯ, ವಿಜ್ಞಾನಮಯ, ಆನಂದಮಯಗಳೆಂಬ ಪುರುಷಭೇದಗಳಲ್ಲಿ ಕೊನೆಯದಾದ ಆನಂದಮಯ ಪುರುಷಾಕಾರವೇ ಸೃಷ್ಟಿಕಾರಣವೆನಿಸುವುದು. ಆ ಆನಂದಮಯಪುರುಷನು ನೀನೇಹೊರತು ಬೇರೆ ಪ್ರತ್ಯಗಾತ್ಮನಲ್ಲ ಏಕೆಂದರೆ, ಸಮಸ್ತ ಚರಾಚರಗಳಿಗೂ ವಿಲಕ್ಷಣನಾಗಿ, ಅವುಗಳಲ್ಲಿ ಅಂತರಾತ್ಮನಾಗಿರತಕ್ಕವನೂ ನೀನೇ! ಹಿಂದೆ ಹೇಳಿದ ಅನ್ನಮಯಾದಿತತ್ವಗಳು ನಾಲ್ಕೂ ಉಪಸಂಹೃತವಾದ ಮೇಲೆಯೂ, ನಿರ್ವಿಕಾರವಾಗಿ ಉಳಿಯತಕ್ಕ ಆನಂದಮಯಪುರುಷತತ್ವವೂ ನೀನೇ! ವೇದಾಂತವಿಹಿತಗಳಾದ ಬ್ರಹ್ಮೋಪಾಸನಮಾರ್ಗದಲ್ಲಿ ಸೂಕ್ಷ್ಮಬುದ್ಧಿಯುಳ್ಳ ಅರುಣವಂಶೀಯರಾದ ಕೆಲವು ಋಷಿಗಳು, ತಮ್ಮ ಹೃದಯ ಪುಂಡರೀಕದಲ್ಲಿ ಉದರವೆಂಬ ಆಕಾಶರೂಪದಿಂದ ನಿನ್ನನ್ನುಪಾಸಿಸುವರು ವೈಶ್ವಾನರವಿದ್ಯಾನಿಷ್ಠರಾದವರು ಜಠರಾಗ್ನಿಶರೀರಕನಾದ ನಿನ್ನನ್ನು ಪಾಸಿಸುವರು ಮತ್ತೆ ಕೆಲವರು ಸೂಕ್ಷ್ಮನಾಡಿಯ ಮೂಲಕದಿಂದ ನಿನ್ನನ್ನು ಪಾಸಿಸುವರು ಅನಂತಾ! ಆ ಸೂಕ್ಷ್ಮನಾಡಿಯು, ಹೃದಯದಿಂದ ಹಿಡಿದು ನಿನ್ನ ಉಪಾಸನಸ್ಥಾನಗಳಲ್ಲಿ ಉತ್ತಮವೆನಿಸಿದ ಭ್ರೂಮಧ್ಯದವರೆಗೆ ಊರ್ಧ್ವಮುಖವಾಗಿ ವ್ಯಾಪಿಸಿರುವುದು ಮೇಲೆ ಹೇಳಿದ ಯಾವವಿಧದಿಂದಾದರೂ ನಿನ್ನನ್ನು ಉಪಾಸಿಸಿದವರು, ತಿರುಗಿ ಪ್ರಕೃತಿಮಂಡಲದಲ್ಲಿ

ಆಜ್ಞಾಪಿಸಬೇಕು! "ನಾನು ಪ್ರತ್ಯಕ್ಷನಾಗಿರುವಾಗ ನನ್ನಲ್ಲಿ ಮುಕ್ತಿಯನ್ನು ಕೇಳಿಕೊಳ್ಳದೆ ನನ್ನ ಸೇವೆಯನ್ನು ಬಯಸುವುದೇಕೆ?" ಎಂದು ನೀನು ಕೇಳು ವೆಯಾ? ದೇವಾ! ನಿನ್ನ ದರ್ಶನವೇ ಮುಕ್ತಿ! ನೀನು ಕಣ್ಣಿಗೆ ಗೋಚ ರಿಸದಿರುವವರೆಗೆಮಾತ್ರವೇ ಮನುಷ್ಯನಿಗೆ ತಾಪತ್ರಯಸಂಬಂಧವೇ ಹೊರತು, ನಿನ್ನನ್ನು ಕಣ್ಣಾರೆ ಕಂಡಮೇಲೆ, ಅದಕ್ಕಿಂತಲೂ ಅತಿಶಯವಾದ ಶ್ರೇಯಸ್ಸೇನಿರುವುದು? ಆದುದರಿಂದ ಈಗ ನಿನ್ನ ಪಾದಸೇವೆಯೇ ನನ್ನ ಅಭೀಷ್ಟವು" ಎಂದನು. ಇದನ್ನು ಕೇಳಿ ಆಶ್ರಿತದುಃಖನಿವಾರಕನಾದ ಕೃಷ್ಣನು, ಆ ಬ್ರಾಹ್ಮನ ಕೈಯನ್ನು ಹಿಡಿದು ಮಂದಹಾಸಪೂರ್ವಕವಾಗಿ ಹೀಗೆಂದು ಹೇಳುವನು. "ಓ ಬ್ರಾಹ್ಮಣೋತ್ತಮಾ! ಈ ಮಹರ್ಷಿಗಳೆಲ್ಲರೂ ನಿನ್ನನ್ನು ಅನುಗ್ರಹಿಸುವುದಕ್ಕಾಗಿಯೇ ಇಲ್ಲಿಗೆ ಬಂದಿರುವರೆಂದು ತಿಳಿ! ಇವರೆಲ್ಲರೂ ಯಾವಾಗಲೂ ನನ್ನಲ್ಲಿ ನಟ್ಟ ಮನಸ್ಸುಳ್ಳವರಾದುದರಿಂದ, ಇವರಿದ್ದ ಕಡೆಯಲ್ಲಿ ನಾನಿದ್ದೇ ಇರುವೆನು. ಹೀಗೆ ನನ್ನೊಡನೆ ನಿತ್ಯಸಂಬಂಧವುಳ್ಳ ಈ ಮಹಾತ್ಮರು, ತಮ್ಮ ಪಾದರೇಣುಸಂಬಂಧದಿಂದ ಲೋಕವನ್ನು ಪಾವನಮಾಡುವುದಕ್ಕಾಗಿಯೇ ಅಲ್ಲಲ್ಲಿ ಸಂಚರಿಸುತ್ತಿರು ವರು. ದೇವತಾಪ್ರತಿಮೆಗಳೂ, !ಪುಣ್ಯಕ್ಷೇತ್ರಗಳೂ, ಪುಣ್ಯತೀರ್ಥಗಳೂ, ಬಹಳದೀರ್ಘಕಾಲದವರೆಗೆ ದರ್ಶನಸ್ಪರ್ಶನಾದಿಗಳಿಂದ ತಮ್ಮನ್ನು ಸೇವಿ ಸಿದ ಮನುಷ್ಯರನ್ನು ಪಾವನಮಾಡುವುವು. ಅವುಗಳಿಗೆ ಆ ಮಹಿಮೆಯುಂ ಟಾದುದೂ ಇಂತಹ ಭಕ್ತರ ಕಟಾಕ್ಷಸಂಬಂಧದಿಂದಲೇ ಬಂದುದೆಂದು ತಿಳಿ! ಓ ಬ್ರಾಹ್ಮಣೋತ್ತಮಾ! ಪ್ರಾಣಿವರ್ಗದಲ್ಲಿ ಮನುಷ್ಯಜನ್ಮವು ಶ್ರೇಷ್ಠ ವೆನಿಸಿರುವುದು ಅದರಲ್ಲಿಯೂ ಬ್ರಾಹ್ಮಣನು ಜಾತಿಮಾತ್ರದಿಂದಲೇ ಶ್ರೇಷ್ಠತಮನೆನಿಸುವನು ಆ ಬ್ರಾಹ್ಮಣರಲ್ಲಿಯೂ ತಪಸ್ವಿಯಾದವನು ಉತ್ತಮನು ವೇದಾಂತವಿದ್ಯೆಯನ್ನು ಅಧಿಕರಿಸಿದವನು ಅವನಿಗಿಂತಲೂ ಉತ್ತಮನು. ನಿತ್ಯಸಂತೋಷವುಳ್ಳವನು ಅವನಿಗಿಂತಲೂ ಉತ್ತಮನು. ನನ್ನ ಉಪಾಸನೆಯಲ್ಲಿನಿರತನಾದವನು, ಇವರೆಲ್ಲರಿಗಿಂತಲೂ ಮೇಲೆಂಬು ದನ್ನು ಹೇಳಬೇಕಾದುದೇನು? ಹೆಚ್ಚೇಕೆ? ನನಗೆ ಎರಡುಭುಜವುಳ್ಳ ಈ ರೂಪವಾಗಲಿ, ನಾಲ್ಕುಭುಜಗಳುಳ್ಳ ನನ್ನ ದಿವ್ಯರೂಪವಾಗಲಿ, ಬ್ರಾ

ಹ್ಮಣರಿಗಿಂತಲೂ ಹೆಚ್ಚು ಪ್ರಿಯವಲ್ಲ! ಏಕೆಂದರೆ, ಬ್ರಾಹ್ಮಣನು ಸರ್ವ ವೇದಮಯನು. ನಾನು ಸರ್ವದೇವಮಯನು. ವೇದವೇ ನನ್ನ ನಿಜಸ್ಥಿತಿಗೆ ಪ್ರಮಾಣವಾದುದರಿಂದ, ದೇವಮಯವಾದ ನನ್ನ ದೇಹಕ್ಕಿಂತಲೂ, ವೇದ ಮಯರಾದ ಬ್ರಾಹ್ಮಣರೇ ನನಗೆ ವಿಶೇಷಪ್ರಿಯತಮರು ದೇಹಾತ್ಮಾಭಿ ಮಾನದಿಂದ ಅಜ್ಞರಾದ ಕೆಲವರು, ಈ ತತ್ವವನ್ನು ತಿಳಿಯದೆ, ಅರ್ಚಾವಿಗ್ರ ಹಗಳಲ್ಲಿ ವಿಶೇಷಪೂಜ್ಯತಾಬುದ್ಧಿಯನ್ನಿಟ್ಟು, ನನ್ನ ಸ್ವರೂಪದಿಂದ ಜ್ಞಾ ನೋಪದೇಶಕರಾದ ಗುರುಗಳನ್ನೂ, ನನ್ನ ಆತ್ಮಭೂತರಾದ ಬ್ರಾಹ್ಮಣ ರನ್ನೂ ಅಸೂಯೆಯಿಂದ ಅಲಕ್ಷ್ಯಮಾಡುವುದುಂಟು. ಜ್ಞಾನಿಯಾದ ಬ್ರಾಹ್ಮಣನು, ಚರಾಚರಾತ್ಮಕವಾದ ಸಮಸ್ತಪ್ರಪಂಚವನ್ನೂ, ಅದಕ್ಕೆ ಕಾರಣಭೂತಗಳಾದ ಮಹದಾದಿತತ್ವಗಳನ್ನೂ, ಇತರ ಸಮಸ್ತಭಾವ ಗಳನ್ನೂ ನನ್ನ ಸ್ವರೂಪದಿಂದಲೇ ತಿಳಿಯುತ್ತಿರುವನು ಆದುದರಿಂದ ಓ ವಿಪ್ರೋತ್ತಮಾ! ಬ್ರಹ್ಮಕುಲೋತ್ಪನ್ನರಾದ ಈ ಮಹರ್ಷಿಗಳೆಲ್ಲರನ್ನೂ ನೀನು ನನ್ನ ಸ್ವರೂಪದಿಂದಲೇ ಭಾವಿಸಿ, ಭಕ್ತಿಯಿಂದ ಆರಾಧಿಸು! ಅದ ರಿಂದ ನಾನು ತೃಪ್ತನಾಗುವೆನು ಹಾಗಿಲ್ಲದೆ ನನ್ನನ್ನು ಎಷ್ಟೋ ಪುಷ್ಕಲ ವಾದ ಉಪಚಾರಗಳಿಂದ ಸತ್ಕರಿಸಿದರೂ ನನಗೆ ತೃಪ್ತಿಯಿರದು." ಎಂದನು. ಹೀಗೆ ಭಗವಂತನಾದ ಕೃಷ್ಣನು ಆಜ್ಞಾಪಿಸಲು, ಆ ಶ್ರುತದೇವನು, ಶ್ರೀ ಕೃಷ್ಣನೊಡನೆ ಆ ಬ್ರಾಹ್ಮಣರೆಲ್ಲರನ್ನೂ ಪರಮಾತ್ಮಬುದ್ಧಿಯಿಂದಲೇ ಆರಾಧಿಸುತಿದ್ದು, ಕೊನೆಗೆ ಉತ್ತಮಗತಿಯನ್ನು ಪಡೆದನು. ಓ ಪರೀಕ್ಷಿ ದ್ರಾಜಾ! ಭಕ್ತರಿಗೆ ಭಕ್ತನಾದ ಕೃಷ್ಣನು, ಶ್ರುತದೇವನಿಗೂ, ಬಹುಲಾ ಶ್ವನಿಗೂ, ಸಾಧುಗಳು ಅನುಷ್ಠಿಸತಕ್ಕ ಧರ್ಮಮಾರ್ಗಗಳನ್ನು ತಿಳಿಸಿ, ಅಲ್ಲಿ ಯೇ ಕೆಲವುದಿನವಿದ್ದು, ಆಮೇಲೆ ದ್ವಾರಕೆಗೆ ಹಿಂತಿರುಗಿದನು. ಇದು ಎಂಬತ್ತಾರನೆಯ ಅಧ್ಯಾಯವು

---

## ಶ್ರು ತಿ ಗೀ ತೆ.

ತಿರುಗಿ ಪರೀಕ್ಷಿದ್ರಾಜನು ಪ್ರಶ್ನೆಮಾಡುವನು "ಓ ಮುನೀಂದ್ರಾ! ಶಬ್ದಗಳೆಲ್ಲವೂ ಜಾತಿ, ಗುಣ, ಕ್ರಿಯಾದಿವಿಶೇಷಣಗಳಿಂದಲ್ಲವೇ ವಸ್ತುಸ್ವ

ಸಂಸಾರವೆಂಬ ಮೃತ್ಯುವಿನ ಬಾಯಲ್ಲಿ ಬೀಳಲಾರರು. ನೀನು ಸಮಸ್ತಕ್ಕೂ ಉಪಾದಾನಕಾರಣನಾದುದರಿಂದ, ನಿನ್ನಿಂದ ಸೃಷ್ಟಿಕವಾದ, ಮತ್ತು ದೇವ ಮನುಷ್ಯಾದಿಭೇದಗಳಿಂದ ವಿಚಿತ್ರವಾದ ಜೀವಗಳಲ್ಲಿ ನೀನು ಅಂತರಾತ್ಮನಾಗಿಪ್ರವೇಶಿಸಿದೇ,ಅವುಗಳ ಕಾರ್ಯವನ್ನು ನಿರ್ವಹಿಸುತ್ತಿರುವೆ ಅಗ್ನಿಯುಹೆಚ್ಚು ಕಡಿಮೆಯಿಲ್ಲದ ಒಂದೇ ತೇಜಸ್ಸಿನಿಂದ ಬೆಳಗುವುದಾಗಿದ್ದರೂ, ತಾನು ಸೇರಿದ ಹುಲ್ಲು, ಕಟ್ಟಿ, ಮೊದಲಾದ ಆಶ್ರಯವಸ್ತುಗಳ ಆಕಾರಕ್ಕೆ ತಕ್ಕಂತೆ ಹೆಚ್ಚು ಕಡಿಮೆಯಾಗಿ ತೋರುವಂತೆ. ನೀನೂ ನಿನ್ನಿಂದ ನಿರ್ಮಿತವಾದ ಆಯಾಜೀವಶರೀರಗಳಿಗೆ ತಕ್ಕಂತೆ, ಜ್ಞಾನದಲ್ಲಿ ಹೆಚ್ಚು ಕಡಿಮೆಗಳನ್ನು ತೋರಿಸುತ್ತ ಅವುಗಳನ್ನೇ ಅನುಸರಿಸುತ್ತಿರುವೆ. ಆ ಶರೀರಗಳು ಕಂದಿಹೋದರೂ ಅದರಿಂದ ನಿನಗೆ ಯಾವವಿಧವಾದ ಕುಂದಕವೂ ಇರುವುದಿಲ್ಲ. ಏಕೆಂದರೆ, ನಿನ್ನಸ್ವರೂಪವು ಅಖಂಡಾನಂದಮಯವಾದುದು. ಆಯಾಕಾರ್ಯ ವಸ್ತುಗಳ ದೋಷವು ನಿನ್ನನ್ನು ತಗುಲಲಾರದು ಅಂತಹ ನಿನ್ನ ನಿತ್ಯಸ್ವರೂಪವನ್ನು ಶುದ್ಧಮನಸ್ಕರಾದ ಯೋಗಿಗಳೇ ಉಪಾಸನೆಯಿಂದ ತಿಳಿಯಬಲ್ಲರು. ನಿನ್ನಿಂದ ಸೃಷ್ಟವಾದ ದೇವಮನುಷ್ಯಾದಿದೇಹಗಳೇ ನಿನಗೆ ನಿವಾಸಸ್ಥಾನವು ಆಶ್ಚರ್ಯಶಕ್ತಿಯುಳ್ಳ ನಿನ್ನ ಸಂಕಲ್ಪರೂಪಜ್ಞಾನದಿಂದಲೇ ನೀನು ಪುರುಷಾಕಾರವನ್ನು ಧರಿಸುವೆ. ನೀನು ಪುರುಷಾಕಾರದಲ್ಲಿದ್ದರೂ ಸಮಸ್ತ ವಸ್ತುಗಳ ಒಳಗೂ, ಹೊರಗೂ ವ್ಯಾಪಿಸಬಲ್ಲವನು ಸ್ವರೂಪಸ್ವಭಾವಗಳಲ್ಲಿ ಸಂಕೋಚವಿಲ್ಲದವನು. ಈ ವಿಧವಾದ ನಿನ್ನ ಪುರುಷಸ್ವರೂಪವು ವೇದಾಂತಗಳಿಂದಲೇ ಪ್ರತಿಪಾದಿಸಲ್ಪಡುವುದು. ಹೀಗೆ ಪುರುಷಾಕಾರವುಳ್ಳ ನಿನ್ನ ವಿಗ್ರಹವನ್ನೂ, ನಿನ್ನನ್ನಾರಾಧಿಸುವುದಕ್ಕೆ ಉಪಯುಕ್ತವಾದ ಮನುಷ್ಯಜನ್ಮವನ್ನೂ, ಕೆಲವು ಜ್ಞಾನಿಗಳು ವಿಚಾರದಿಂದ ನಿಶ್ಚಯಿಸಿಕೊಂಡು, ಪ್ರಾಣೇಂದ್ರಿಯಗಳನ್ನು ಜಯಿಸಿ, ವೇದಪ್ರತಿಪಾದ್ಯವಾಗಿಯೂ, ಆಶ್ರಿತರಿಗೆ ಸಂಸಾರನಿವರ್ತಕವಾಗಿಯೂ ಇರುವ ನಿನ್ನ ಪಾದಾರವಿಂದವನ್ನು ದೃಢವಿಶ್ವಾಸದಿಂದ ಉಪಾಸಿಸುವರು. ಎಷ್ಟೇ ಶ್ರಮಪಟ್ಟರೂ ನಿನ್ನ ನಿಜಸ್ವರೂಪವನ್ನು ತಿಳಿಯುವುದು ಇತರರಿಗೆ ಸಾಧ್ಯವಲ್ಲವೆಂಬುದನ್ನು ತಿಳಿದೇ, ನೀನು ರಾಮಕೃಷ್ಣಾದಿರೂಪದಿಂದ ನಿನ್ನ ಮಹಿಮೆಯನ್ನು ಪ್ರಕಾಶಪಡಿಸುತ್ತಿರುವೆ.

ಆ ನಿನ್ನ ಅವತಾರಚರಿತ್ರೆಗಳೆಂಬ ಅಮೃತಸಮುದ್ರದಲ್ಲಿ ಓಲಾಡುತ್ತ, ಆಧ್ಯಾತ್ಮಿಕಾದಿತಾಪಗಳನ್ನು ನೀಗಿ, ನಿನ್ನ ಪಾದಸೇವೆಯಲ್ಲಿರುವ ಭಾಗವತರ ಸಹವಾಸಸುಖದಲ್ಲಿರುವವನು, ಅಪರಿಂದ ಅಪವರ್ಗವನ್ನೂ ಕೂಡ ಅಪೇಕ್ಷಿಸಲಾರನು ಜೀವನಿಗೆ ಪಂಜರದಂತಿರುವ ಈ ಮನುಷ್ಯಶರೀರವು ನಿನ್ನ ಪಾದಕೈಂಕರ್ಯಕ್ಕಾಗಿಯೇ ಉಪಯೋಗಿಸಲ್ಪಟ್ಟಪಕ್ಷದಲ್ಲಿ, ಆ ಶರೀರವೂ, ಜೀವಾತ್ಮಾದಿಗಳಿಗೆ ಸಮಾನವಾಗಿ ಸಾರ್ಥಕ್ಯವನ್ನು ಹೊಂದುವುದು ಆದರೆ ಕೆಲವರು ಇಂತಹ ದೇಹವನ್ನು ಹೊಂದಿಯೂ, ಪ್ರಿಯನಾಗಿಯೂ, ಹಿತನಾಗಿಯೂ, ಪರಮಾತ್ಮನಾಗಿಯೂ ಇರುವ ನಿನ್ನಲ್ಲಿ ವಿಮುಖರಾಗುವರು ಆ ದೇಹವೇ ಅಸತ್ತುಗಳಾದ ಶಬ್ದಾದಿವಿಷಯಗಳನ್ನು ಸೇವಿಸುವುದರಿಂದ, ತನ್ನೊಳಗಿನ ಜೀವನಿಗೂ ಸ್ಥಾವರತ್ವವನ್ನುಂಟುಮಾಡುವುದು ಈ ವಿಚಾರಗಳನ್ನು ಯೋಚಿಸದೆ, ಅಖಂಡಾನಂದಸ್ವರೂಪನಾದ ನಿನ್ನಲ್ಲಿ ವಿಮುಖರಾಗಿ, ಯಾರು ವಿಷಯಾಸಕ್ತಿಯಲ್ಲಿ ಬೀಳುವರೋ ಅಂತವರನ್ನು ತಮ್ಮನ್ನೇ ತಾವು ಕೆಡಿಸಿಕೊಳ್ಳತಕ್ಕ ಆತ್ಮಘಾತುಕರೆಂದು ಹೇಳುವುದಕ್ಕೆ ತಡೆಯೇನಿದೆ? ಅಂತವರ ಸ್ಥಿತಿಯು ಬಹಳ ಶೋಚನೀಯವು! ಅವರು ತಮ್ಮ ಪ್ರಾರಬ್ಧಕರ್ಮಶೇಷದಿಂದ ಮೇಲೆಮೇಲೆ ತಮ್ಮ ಜೀವಾತ್ಮನಿಗೆ ನಾನಾಬಗೆಯ ದೇಹಗಳನ್ನುಂಟುಮಾಡಿ, ಮಹಾಭಯಂಕರವಾದ ಸಂಸಾರದಲ್ಲಿ ಭ್ರಮಿಸುವರು, ಓ ದೇವಾ? ಪ್ರಾಣಗಳು, ಇಂದ್ರಿಯಗಳು, ಮನಸ್ಸು, ಇವೆಲ್ಲವನ್ನೂ ನಿಗ್ರಹಿಸಿ, ದೃಢವಾದ ಉಪಾಸನಾಯೋಗದಲ್ಲಿರುವ ಮಹರ್ಷಿಗಳು, ಯಾವ ನಿನ್ನ ಸ್ವರೂಪವನ್ನು ತಮ್ಮ ಹೃದಯದಲ್ಲಿ ಹೊಂದಿರುವರೋ ಅದನ್ನು ನಿನ್ನ ಶತ್ರುಗಳು,ದ್ವೇಷಬುದ್ಧಿಯಿಂದಲೇ ಹೊಂದಿರುವರು ಹಾಗೆಯೇ ಗೋಪಸ್ತ್ರೀಯರು ನಿನ್ನ ಭುಜ ಸೌಂದರ್ಯದಲ್ಲಿರುವ ಮೋಹದಿಂದ ಪಡೆದಿರುವರು ಹೆಚ್ಚೇಕೆ? ವೇದಾಭಿಮಾನಿದೇವತೆಗಳಾದ, ನಾವೂ, ನಿನ್ನ ಪಾದಾರವಿಂದವನ್ನೇ ಅಮೃತದಂತೆ ಆದರಿಸತಕ್ಕ ಇತರರೆಲ್ಲರೂ,ಮಹಾಯೋಗಿಗಳೊಡನೆಸಮಕಾಂಕ್ಷ್ಯೆಯಲ್ಲಿನಿನ್ನ ಸಾನ್ನಿಧ್ಯಸುಖವನ್ನನುಭವಿಸುವೆವು ಓ! ಪ್ರಭೋ! ಸೃಷ್ಟಿಗೆಮೊದಲು, ಸೂಕ್ಷ್ಮಚೇತನಾಚೇತನಗಳೊಡನೆ ಜಗತ್ಕಾರಣರೂಪದಲ್ಲಿದ್ದ ನಿನ್ನ ಆ ಸ್ವರೂಪವನ್ನು, ಈ

ಲೋಕದಲ್ಲಿ ಜನನಮರಣಗಳಿಗೆ ಗುರಿಯಾಗಿರುವ ಯಾವ ಚೇತನನುತಾನೇ ತಿಳಿಯಬಲ್ಲನು? ಅದನ್ನು ತಿಳಿಯುವುದಕ್ಕೆ ಶಾಸ್ತ್ರಪ್ರಮಾಣದಿಂದಲ್ಲದೆ ಬೇರೆ ವಿಧದಿಂದ ಸಾಧ್ಯವಿಲ್ಲ. ಏಕೆಂದರೆ, ಆ ನಿನ್ನ ಆದಿಸ್ವರೂಪದಿಂದ ಬ್ರಹ್ಮನು ಹುಟ್ಟಿದನು ಅದರಮೇಲೆ ಆ ಬ್ರಹ್ಮನಿಂದ ನಿವೃತ್ತಿಮಾರ್ಗನಿಷ್ಠರಾದ ಸನಕಾದಿಗಳೂ, ಪ್ರವೃತ್ತಿಧರ್ಮನಿಷ್ಠರಾದ ಮರೀಚಿ ಮೊದಲಾದವರೂ ಹುಟ್ಟಿದರು ಅವರಿಂದ ಎರಡುವಿಧವಾದ ದೇವಗಣಗಳುಂಟಾದುವು. ಕೊನೆಗೆ ಮನುಷ್ಯರು ಹುಟ್ಟಿರುವರು. ಅಂತಹ ಮನುಷ್ಯರಿಗೆ ಆ ನಿನ್ನ ಪೂರ್ವಸ್ವರೂಪವು ಹೇಗೆತಾನೇ ತಿಳಿಯುವುದು? ದೇವಾ! ನೀನು ಸಮಸ್ತ ವೇದಶಾಸ್ತ್ರಗಳನ್ನೂ ಉಪಸಂಹರಿಸಿ ಹೃದಯದಲ್ಲಿಟ್ಟುಕೊಂಡು ಮಲಗಿದ್ದಾಗ, ಸೃಷ್ಟಿಗೆ ಮೊದಲು ಚಿದಚಿತ್ಕಾಲಗಳೆಂಬ ತತ್ವಗಳೊಂದೂ ಕಾಣದಂತೆಯೇ ಇದ್ದುವು. * ಆದರೆ, ಸೃಷ್ಟಿವಿಚಾರದಲ್ಲಿ ಬೇರೆಬೇರೆ ಮತದವರು ಬೇರೆಬೇರೆ ವಿಧವಾಗಿ ವಿಕಲ್ಪಿಸುವರು ತಾರ್ಕಿಕರು ಅಸದ್ದ್ರವ್ಯಕ್ಕೇ ಉತ್ಪತ್ತಿಯನ್ನೂ (ಸತ್ತೆಯನ್ನೂ) ಸದ್ದ್ರವ್ಯಕ್ಕೇ ಮೃತಿಯನ್ನೂ ನಿರೂಪಿಸುವರು ಚಾರ್ವಾಕಮತದವರು ಆತ್ಮನಿಗೇ ದೇವಮನುಷ್ಯಾದಿ ಭೇದಗಳನ್ನೂ, ಸಣ್ಣದು ದೊಡ್ಡದೆಂಬ ಆಕಾಶವಿಭೇದಗಳನ್ನೂ ಹೇಳುವರು ಮೀಮಾಂಸಕರು ದೇವತೆಗಳಿಗೂ, ಮನುಷ್ಯರಿಗೂ ವಾಣಿಜ್ಯಫಲದಂತೆ ಪರಸ್ಪರೋಪಕಾರರೂಪವಾಗಿರುವ ಸ್ವರ್ಗಾದಿಫಲಗಳನ್ನು ಸತ್ಯವೆಂದೇ ನಿರೂಪಿಸುವರು ಈ ತಾರ್ಕಿಕಾದಿಮತದವರೆಲ್ಲರೂ, ಈ ವಿಧವಾಗಿ ತಮ್ಮಲ್ಲಿ ತಾವು ಭ್ರಾಂತಿಗೊಂಡಿರುವುದು ಮಾತ್ರವಲ್ಲದೆ, ಸಲ್ಲದ ಯುಕ್ತಿಗಳಿಂದ ಲೋಕಕ್ಕೂ ಅದನ್ನೇ ಉಪದೇಶಿಸುವರು. ನಿರೀಶ್ವರವಾದಿಗಳು ಸತ್ವಾದಿಗುಣಪ್ರಚುರನಾದವನು ಜೀವನೇಹೊರತು, ಆ ಜೀವನಿಗಿಂತಲೂ ವಿಲಕ್ಷಣನಾದ ಈಶ್ವರನೇ ಇಲ್ಲವೆಂದು ಹೇಳುವರು ಈ ಮತಭೇದಗಳೆಲ್ಲವೂ ನಿನ್ನ ನಿಜಸ್ಥಿತಿಯನ್ನು ತಿಳಿಯಲಾರದ ಅಜ್ಞತೆಯಿಂದ ಏರ್ಪಟ್ಟುದೇಹೊರತು ಬೇರೆಯಲ್ಲ? ಜೀವಪ್ರಕೃತಿಗಳಿಗಿಂತಲೂ ವಿಲಕ್ಷಣನಾಗಿ, ಜ್ಞಾನಸ್ವ

* ಇಲ್ಲಿ "ಏಕೋಹವೈ ನಾರಾಯಣ ಆಸೀತ್ ನಬ್ರಹ್ಮಾ ನೇಶಾನೋ ನೇಮೇ ದ್ಯಾವಾಪೃಥಿವೀ" ಎಂಬೀ ಶ್ರುತ್ಯರ್ಥವು ಪ್ರತಿಪಾದಿಸಲ್ಪಡುವುದು.

ರೂಪನಾಗಿಯೂ ಇರುವ ನಿನ್ನ ನಿಜವನ್ನು ತಿಳಿದೊಡನೆ, ಆ ವಿಧವಾದ ಅಜ್ಞಾನವೂ, ಆ ವಾದಭೇದಗಳೂ ಉಂಟಾಗಲಾರವು ಮನುಷ್ಯಜಾತಿಯವರೆಗಿನ ಸಮಸ್ತದೇಹಗಳಲ್ಲಿಯೂ ಇರುವ ತ್ರಿಗುಣಾತ್ಮಕವಾದ ಮನಸ್ಸು, ಬೇರೆ ಸಮಸ್ತ ವಿಷಯಗಳಲ್ಲಿಯೂ, ಕಾರ್ಯಕಾರಿಯಾಗುವಂತೆ ತೋರಿದರೂ, ನಿನ್ನಲ್ಲಿ ಅದರ ಕಾರ್ಯವು ನಡೆಯಲಾರದು ಚೇತನಾಚೇತನರೂಪವಾದ ಸಮಸ್ತಜಗತ್ತಿನೊಡಗೂಡಿ, ಆ ಜಗತ್ತಿಗೆ ಅಂತರಾತ್ಮನಾಗಿದ್ದರೂ ನಿನ್ನನ್ನು ಅದು ತಿಳಿಯಲಾರದು ಓ! ದೇವಾ! ನಿನ್ನ ಉಪಾಸನಾರೂಪವಾದ ಯೋಗದಿಂದ ಪರಿಶುದ್ಧಾಂತಃಕರಣರಾದ ಯೋಗಿಗಳುಮಾತ್ರವೇ ಸಮಸ್ತಜಗತ್ತನ್ನೂ ನಿನ್ನ ರೂಪದಿಂದಲೇ ತಿಳಿದು, ನಿನ್ನಂತೆ ಅದನ್ನೂ ಉಪಾಸ್ಯಕೋಟಿಯಲ್ಲಿಯೇ ಸೇರಿಸಿರುವರು ಬಂಗಾರದಿಂದ ಬೇರೆಬೇರೆ ಆಕೃತಿಯುಳ್ಳ ಆಭರಣಗಳನ್ನು ಮಾಡಿಟ್ಟರೂ, ಆ ವಿಕಾರಗಳೆಲ್ಲವೂ, ಆ ಬಂಗಾರಕ್ಕಿಂತಲೂ ಬೇರೆನಿಸವೆ! ಬಂಗಾರವೆಂದೇ ವ್ಯವಹರಿಸಲ್ಪಡು ಆ ಬಂಗಾರಕ್ಕಿಂತಲೂ ಬೇರೆನಿಸದೆ, ಬಂಗಾರವೆಂದೇ ವ್ಯವಹರಿಸಲ್ಪಡುವಂತೆ, ನಿನ್ನ ವಿಕಾರರೂಪವಾದ ಈಜಗತ್ತೂ ಕೂಡ ಬ್ರಹ್ಮಾತ್ಮಕವೆನಿಸಿರಬೇಕೇಹೊರತು, ಅದನ್ನು ಹೇಯವೆಂದೆಣಿಸುವುದಕ್ಕಿಲ್ಲ ಆದುದರಿಂದ ನಿನ್ನ ವಿಕಾರರೂಪವಾದ ಈ ಜಗತ್ತೆಲ್ಲವೂ, ಪರಮಾತ್ಮಶಬ್ದವಾಚ್ಯವಾಗಿ, ಉಪಾಸ್ಯವಸ್ತುವೆಂದೇ ನಿಶ್ಚಿತವಾಗಿರುವುದು ಆದುದರಿಂದ ಯಾರು ನಿನ್ನನ್ನು ಅಖಿಲಾಂತರಾತ್ಮನೆಂದು ಉಪಾಸಿಸುವರೋ- ಅಂತವರೇ ಮೃತ್ಯುವನ್ನೂ ಲಕ್ಷ್ಯಮಾಡದೆ,ಅದರ ತಲೆಯನ್ನು ಕಾಲಿಂದ ಮೆಟ್ಟಿ ನಿಲ್ಲತಕ್ಕವರು ಹಾಗೆ ನಿನ್ನನ್ನು ಸರ್ವಾತ್ಮಕನೆಂದು ತಿಳಿಯಲಾರದವರಿಗೆ, ನೀನು, ಪಶುಗಳಿಗೆ, ಮೂಗುದಾರವನ್ನು ಬಿಗಿದು ದಾರಿಗೆ ತರುವಂತೆ, ಶಾಸ್ತ್ರರೂಪವಾದ ಉಪದೇಶದಿಂದಬೋಧಿಸಿ,ಅವರನ್ನು ಸನ್ಮಾರ್ಗಕ್ಕೆ ತರುವೆ! "ಆದರೆ ಆ ಶಾಸ್ತ್ರಾಧಿಕಾರವಿಲ್ಲದವರಿಗೂ ಅಜ್ಞರಿಗೂ ಗತಿಯೇನು?" ಎಂದರೆ, ಅಂತವರು ನಿನ್ನ ಭಕ್ತರ ಸಹವಾಸದಿಂದಲೂ, ಸೇವೆಯಿಂದಲೂ ಉತ್ತಮಗತಿಯನ್ನು ಹೊಂದುವುದಕ್ಕೂ ಅವಕಾಶವನ್ನು ಕೊಟ್ಟಿರುವೆ! ಶಾಸ್ತ್ರಾಧಿಕಾರವೂ ಇಲ್ಲದೆ, ಸಜ್ಜನಸೇವೆಯನ್ನೂ ಮಾಡದವರಿಗೆ, ಅಧೋಗತಿಯೇ ನಿಜವು ದೇವಾ! ನೀನು ಸಂಕಲ್ಪಮಾತ್ರದಿಂದಲೇ ಜಗತ್ತಿನ ಸೃಷ್ಟಿಸ್ಥಿತಿಲಯಗಳನ್ನು ನಿರ್ವ

ಹಿಸತಕ್ಕ ಜ್ಞಾನಬಲವುಳ್ಳವನಾದುದರಿಂದ ಸರ್ವಜ್ಞನು ಕರ್ಮವಶ್ಯನಲ್ಲದ ಸ್ವತಂತ್ರನು ಕರ್ತೃ,ಕರ್ಮ,ಅಧಿಕ್ಕರಣ,ಮೊದಲಾದ ಕಾರಕಶಕ್ತಿಗಳೆಲ್ಲಕ್ಕೂ ನೀನೇ ಆಧಾರನು. ಪ್ರಕೃತಿಗೆ ವಶರಾದ, ವಾಯು, ಅಗ್ನಿ, ಸೂರ್ಯ, ಇಂದ್ರ, ಮೊದಲಾದ ದೇವತೆಗಳೂ, ಪ್ರಜಾಧಿಪತಿಗಳೂ, ಮತ್ತು ಬೇರೆ ಯಾರು ಯಾರು ಯಾವಯಾವ ಅಧಿಕಾರಗಳ್ಲಿರುವರೋ, ಅವರೆಲ್ಲರೂ ನಿನಗೆ ಭಯ ಪಟ್ಟು, ಪ್ರಜೆಗಳು ತಮ್ಮ ಚಕ್ರವರ್ತಿಯಲ್ಲಿ ಹೇಗೋಹಾಗೆ, ನಿನ್ನ ಸೇವಾರೂ ಪವಾಗಿಯೇ ತಮ್ಮ ತಮ್ಮ ಕಾರ್ಯಗಳನ್ನು ನಿರ್ವಹಿಸುತ್ತಿರುವರು. ಅವರೂ ನಿನ್ನ ಅನುಗ್ರಹದಿಂದ ಲಭಿಸಿದ ಭೋಗಗಗಳನ್ನೇ ಅನುಭವಿಸುತ್ತಿರುವರು. ಸ್ಥಾವರಜಂಗಮರೂಪವಾದ ಸಮಸ್ತಜಗತ್ತೂ ಪ್ರಕೃತಿಬದ್ಧವಾಗಿ, ದುಃಖಾಶ್ರಯವಾದ ಶರೀರಗಳಿಂದ ಕೂಡಿರುವುದೇಹೊರತು, ಯಾವ ಪ್ರಾಣಿಯೂ ಆ ಪ್ರಕೃತಿಸಂಬಂಧವನ್ನು ತಪ್ಪಿಸಿಕೊಳ್ಳಲಾರದು ಕೆಲವರು ಆ ಪ್ರಕೃತಿಸಂಬಂಧವನ್ನು ತಪ್ಪಿಸಿಕೊಂಡವರಾಗಿದ್ದರೂ, ಅದೂ ನಿನ್ನ ಕಟಾಕ್ಷ ದಿಂದಲ್ಲದೆ ಬೇರೆ ಉಪಾಯದಿಂದಲ್ಲ! ದೋಷವಿಮುಕ್ತನಾದ ಓ ಸ್ವಾಮಿ! ಪರಮಕಾರುಣಿಕಾ! ನಿನಗೆ ತನ್ನವನೆಂಬ ಅಭಿಮಾನಕ್ಕೆ ಪಾತ್ರನಾದವ ನೊಬ್ಬನಿಲ್ಲ! ಇತರನೆಂದು ಅಲಕ್ಷ್ಯಕ್ಕೀಡಾದವನೂ ಇಲ್ಲ! ಆಕಾಶದಂತೆ ಎಲ್ಲಾವಸ್ತುಗಳಲ್ಲಿಯೂ ವ್ಯಾಪಿಸಿದ್ದು, ಆ ವ್ಯಾಪ್ಯಗತದೋಷಗಳಿಗೆ ಸ್ವಲ್ಪ ಮಾತ್ರವೂ ಈಡಾಗದೆ ಬೆಳಗುತ್ತಿರುವೆ ನಿನಗೆ ಸರಿಸಮಾನವಾದುದು ಬೇರೊಂದಿಲ್ಲ! ಹೀಗೆ ಚರಾಚರಾತ್ಮಕಗಳಾದ ಸ್ಥೂಲಸೂಕ್ಷ್ಮಶರೀರಗಳ ಲ್ಲೆಲ್ಲಾ ಪ್ರವೇಶಿಸತಕ್ಕ ಈ ಅಣುಸ್ವರೂಪವು, ಜೀವಾತ್ಮಗಳಿಗೂ ಸಹಜ ವಾಗಿದ್ದರೂ, ಅವುಗಳಿಗೆ ಎಲ್ಲೆಲ್ಲಿಯೂ ವ್ಯಾಪಿಸತಕ್ಕ ವಿಭುತ್ವವಿಲ್ಲ! ಆ ಜೀ ವಾತ್ಮಗಳು ಅಸಂಖ್ಯಾತವಾಗಿಯೂ, ನಿತ್ಯವಾಗಿಯೂ ಇದ್ದರೂ ಅವುಗಳಿಗೆ ಸರ್ವಗತತ್ವವಿಲ್ಲ! ಹಾಗಿಲ್ಲದೆ ಜೀವಗಳೂ ಸರ್ವಗತಗಳಾಗಿದ್ದಪಕ್ಷದಲ್ಲಿ, ಒಂದು ಜೀವವನ್ನು ಮತ್ತೊಂದು ಜೀವವಾಗಲಿ, ಪರಮಾತ್ಮನಾಗಲಿ ನಿಯ ಮಿಸುವುದಕ್ಕೇ ಅವಕಾಶವಿಲ್ಲದೆ, ಎಲ್ಲವೂ ಸಮಸ್ಥಿತಿಯಲ್ಲಿಯೇ ಇರುತಿದ್ದು

ವಲ್ಲವೆ? ಇದಲ್ಲದೆ ಜೀವಾತ್ಮಕ್ಕೆ ಶ್ರುತಿಗಳಲ್ಲಿ ಹೇಳಲ್ಪಟ್ಟಂತೆ ನೇತ್ರಾದಿ ರಂಧ್ರಗಳಮೂಲಕವಾಗಿ ಶರೀರವನ್ನು ಬಿಟ್ಟು ಹೋಗುವುದು ಲೋಕಾಂತರವನ್ನು ಸೇರುವುದು, ತಿರುಗಿ ಭೂಮಿಗೆ ಬಂದು ಕರ್ಮಗತಿಯಲ್ಲಿ ತೊಳಲುವುದು ಎಂಬೀ ಉತ್ಕ್ರಾಂತಿ, ಗತಿ, ಆಗತಿ ಮೊದಲಾದ ನಿಯಮಗಳಿಗೂ ಸಂಭವವಿಲ್ಲದೆ ಹೋಗುವುದು ಯಾವನ ಸ್ವರೂಪದಿಂದಲೇ ಈ ಜಗತ್ತೆಲ್ಲವೂ ಹುಟ್ಟುವುದೋ ಆ ಪರಬ್ರಹ್ಮನು, ತಾನೂ ಅದರೊಳಗಿದ್ದು ನಿಯಮಿಸುವನೆಂಬ ತತ್ವವನ್ನು ಚೆನ್ನಾಗಿ ಪರಿಶೀಲಿಸದೆ ಹೇಳತಕ್ಕವರ ಮತವು ಕೇವಲ ದೋಷಾಸ್ಪದವು ಪ್ರಾಮಾಣಿಕರಿಗೆ ಅದು ಅಭಿಮತವಾದುದಲ್ಲ! ಜೀವಪ್ರಕೃತಿಗಳೆರಡಕ್ಕೂ ಉತ್ಪತ್ತಿಯಿಲ್ಲದುದರಿಂದ, ಅಜವೆನಿಸಿಕೊಂಡಿದ್ದರೂ, ಅವೆರಡರ ಸಂಯೋಗದಿಂದ ಪ್ರಾಣಿಗಳು ಬಗೆಬಗೆಯ ನಾಮರೂಪಭೇದಗಳಿಂದ ತೋರುತ್ತಿರುವುವು ಸಮುದ್ರದ ಜಲಾವಯವಗಳೇ ವಾಯುಪ್ರೇರಿತಗಳಾಗಿ, ಒಂದೊಂದಕ್ಕೆ ಸೇರಿದಾಗ, ಅದರಿಂದ ಗುಳ್ಳೆಗಳು ಹೊರಡುವುವಲ್ಲವೆ? ಅದರಂತೆಯೇ ಪ್ರಕೃತಿಪುರುಷರಿಗೆ ಸಹಜವಾದ ಉತ್ಪತ್ತಿವಿನಾಶಗಳಿಲ್ಲದಿದ್ದರೂ,ಅವಕ್ಕೆ ಪರಸ್ಪರಸಂಯೋಗದಿಂದಲೇ ಮನುಷ್ಯಾದಿಶರೀರವೆಂಬ ವಿಶಿಷ್ಟರೂಪದಿಂದ ಉತ್ಪತ್ತಿಯುಂಟು ಆ ರೂಪೋತ್ಪತ್ತಿಯಲ್ಲಿಯೂ ನೀನೇ ಅವುಗಳಿಗೆ ಆಧಾರಭೂತನಾಗಿ ಅಂತರ್ಯಾಮಿಯಾಗಿರುವೆ. ಈ ಪ್ರಾಣಿಗಳೆಲ್ಲವೂ ಕೊನೆಗೆ ಪ್ರಳಯದಶೆಯಲ್ಲಿ, ನದಿಗಳು ಸಮುದ್ರದಲ್ಲಿಯೂ, ಪುಷ್ಪರಸಗಳು ಜೇನಿನಲ್ಲಿಯೂ ಲೀನವಾಗುವಂತೆ, ನಾಮರೂಪಗಳಿಂದ ಬೇರ್ಪಡಿಸುವುದಕ್ಕೇ ಅವಕಾಶವಿಲ್ಲದ ಹಾಗೆ, ನಿನ್ನಲ್ಲಿ ಲಯಿಸುವುವು. ಮನುಷ್ಯರಿಗೆ ಪ್ರಕೃತಿಸಂಬಂಧದಿಂದ ದೇಹಾತ್ಮಾಭಿಮಾನರೂಪವಾದ ಭ್ರಮವು ಹುಟ್ಟಿ, ಅದೇ ಸಂಸಾರಕಾರಣವಾಗುವುದರಿಂದ, ವಿದ್ವಾಂಸರು ಈ ತತ್ವವನ್ನು ತಿಳಿದು ನಿನ್ನಲ್ಲಿ ದೃಢಭಕ್ತಿಯನ್ನಿಡುವರು. ಹಾಗೆ ನಿನ್ನನ್ನು ಭಕ್ತಿಯಿಂದನುವರ್ತಿಸತಕ್ಕವರಿಗೆ, ಸಂಸಾರಭಯವೆಂಬುದು ಹುಟ್ಟುವುದೇ

* ಜೀವನು ಯಾವಾಗಲೂ ಸರ್ವಗತನಾಗಿದ್ದ ಪಕ್ಷದಲ್ಲಿ, ದೇಹವನ್ನು ಬಿಟ್ಟು ಹೊರಡುವುದು,ಗತಿ, ಆಗತಿ ಮೊದಲಾದುವಕ್ಕೆ ಅವಕಾಶವಿಲ್ಲ. ಅವನು ಅಣುಸ್ವರೂಪನಾಗಿದ್ದಾಗಲೇ ಇವು ನಡೆಯಬೇಕೆಂದು ಭಾವವು.

ಇಲ್ಲ! ನಿನ್ನ ಕೋಪಸೂಚಕವಾದ ಭ್ರುಕುಟಿಗಳಂತೆ, ಶೀತೋಷ್ಣವರ್ಷಗಳಿಂದ ಕೂಡಿದ ಸಂವತ್ಸರರೂಪವಾದ ಕಾಲವು, ಅವರಿಗೆ ಸಂಸಾರಭಯವನ್ನುಂಟುಮಾಡದೆ ಬಿಡವು ಮನಸ್ಸೆಂಬುದು ದುಷ್ಟಾಶ್ವದಂತೆ ಯಥೇಚ್ಛವಾಗಿಸಿಕ್ಕಿದತಡೆಗೆ ಓಡುತ್ತಿರುವುದು,ಮತ್ತು ಬಹಳಚಂಚಲಸ್ವಭಾವವುಳ್ಳುದು. ಪ್ರಾಣಗಳನ್ನೂ, ಇಂದ್ರಿಯಗಳನ್ನೂ ಜಯಿಸಲಾರದವರಿಗೆ, ಅದನ್ನು ಸ್ವಾಧೀನದಲ್ಲಿಡುವುದೂ ಸಾಧ್ಯವಲ್ಲ! ಈ ಮನಸ್ಸೆಂಬ ದುಷ್ಟಾಶ್ವವನ್ನು ನಿಯಮಿಸಿಡುವುದಕ್ಕೆ ಗುರುಪರಿಚರ್ಯೆಯೇ ಉತ್ತಮವಾದ ಉಪಾಯವು. ಅದನ್ನು ಬಿಟ್ಟು ಬೇರೆ ಉಪಾಯದಿಂದ ಅದನ್ನು ನಿಗ್ರಹಿಸುವುದಕ್ಕೆ ಕಷ್ಟಪಡತಕ್ಕವರು, ಅನೇಕವ್ಯಸನಪರಂಪರೆಗಳಿಗೆ ಗುರಿಯಾಗುವರಲ್ಲದೆ, ನಾವಿಕರ ಸಹಾಯವಿಲ್ಲದ ಹಡಗನ್ನು ನಡೆಸಿಕೊಂಡು ಹೋಗುವ ಸಮುದ್ರವ್ಯಾಪಾರಗಳಂತೆ, ಸಂಸಾರವೆಂಬ ಮಹಾಸಮುದ್ರದಲ್ಲಿ ಮುಳುಗಿ ದುಃಖಕ್ಕೀಡಾಗುವರು ಸರ್ವವಿಧಸುಖಮಯನಾಗಿಯೂ ಸರ್ವಜೀವಪ್ರಿಯತಮನಾಗಿಯೂ ಇರುವ ನಿನ್ನನ್ನು ಯಾವನು ದೃಢಶ್ವಾಸದಿಂದ ಭಜಿಸುವನೋ ಅಂತಹಪುರುಷನಿಗೆ ಸ್ವಜನರಿಂದಾಗಲಿ, ಹೆಂಡಿರುಮಕ್ಕಳಿಂದಾಗಲಿ, ಮನೆಮಠಗಳಿಂದಾಗಲಿ, ಹಣಕಾಸುಗಳಿಂದಾಗಲಿ ದೇಶಕೋಶವಾಹನಾದಿಗಳಿಂದಾಗಲಿ,ಕೊನೆಗೆ ತನ್ನ ದೇಹದಿಂದಾಗಲಿ,ಪ್ರಾಣಗಳಿಂದಾಗಲಿ ಆಗಬೇಕಾದುದೇನು? ಅವು ಆವನಿಗೆ ಸ್ವಲ್ಪಮಾತ್ರವೂ ಸುಖಸಾಧನಗಳಲ್ಲ! ಹೀಗೆ ನೀನೇ ನಿರತಿಶಯಪುರುಷಾರ್ಥಭೂತನೆಂಬುದನ್ನು ತಿಳಿಯಲಾರದೆ ಮಿಥುನಸುಖವೇ ಪುರುಷಾರ್ಥವೆಂದು ತಿಳಿದು ಅದರಲ್ಲಿಯೇ ವರ್ತಿಸತಕ್ಕವರು, ಪ್ರಕೃತಿಯೆಂಬ ತೆರೆಯು ಮೇಲೆ ಕವಿಯುವುದರಿಂದ, ತಮ್ಮ ಆತ್ಮಕ್ಕೆ ಸಹಜವಾದ ಜ್ಞಾನೈಶ್ವರ್ಯಾದಿಸ್ವರೂಪವನ್ನೂ ಕಾಣದೆ ಹೋಗುವರು ಅಂತವರಿಗೆ ಈ ಲೋಕದಲ್ಲಿ ಅರ್ಥಕಾಮಗಳಿಂದುಂಟಾದ ಸುಖವು ಎಷ್ಟು ಮಾತ್ರವಾಗಿರುವುದು? ಅದೊಂದು ಸುಖವೇ ಅಲ್ಲ ಓ! ದೇವಾ! ನಿತ್ಯಸುಖಸ್ವರೂಪನಾದ ನಿನ್ನಲ್ಲಿ ಒಂದಾವರ್ತಿಯಾದರೂ ಮನಸ್ಸಿಟ್ಟವರಿಗೆ, ಸ್ವಾತ್ಮಪರಮಾತ್ಮಸ್ವರೂಪ ತಿಳಿದು ಹೋಗುವುದರಿಂದ,ದೇಹಾತ್ಮಾಭಿಮಾನರೂಪವಾದ ಮದವು ಅವರ ಮನಸ್ಸನ್ನು ಬಿಟ್ಟುಹೋಗುವುದು ಅವರ ಮನಸ್ಸಿನಲ್ಲಿ ಯಾವಾಗಲೂ

ನಿನ್ನ ಪಾದಾರವಿಂದಗಳೇ ಬೆಳಗುತ್ತಿರುವುವು. ಅಂತವರ ಪಾದತೀರ್ಥವೇ ಲೋಕಪಾವನವು ಮನುಷ್ಯನ ಜ್ಞಾನವೈರಾಗ್ಯಾದಿಗಳನ್ನು ಕೆಡಿಸತಕ್ಕ ಗೃಹಾದಿಗಳಲ್ಲಿ ಅಂತವರಿಗೆ ಅಭಿಲಾಷೆಯೇ ಹುಟ್ಟದು ಅವರು ದಾಂಪತ್ಯ ಸುಖದಲ್ಲಿ ಸಂಚರಿಸುವುದನ್ನು ಬಿಟ್ಟು, ಭೂಮಿಯಲ್ಲಿರುವ ಗಂಗಾದಿ ಪುಣ್ಯ ತೀರ್ಥಗಳನ್ನೂ, ಪುಣ್ಯಕ್ಷೇತ್ರಗಳನ್ನೂ ತಮ್ಮ ಸಂಬಂಧದಿಂದ ಮತ್ತಷ್ಟು ವಿಶೇಷವಾಗಿ ಪಾವನಮಾಡುವುದಕ್ಕಾಗಿ ಭೂಸಂಚಾರಮಾಡುತ್ತಿರುವರು.

"ಸತ್ತೆನಿಸಿಕೊಂಡ (ಪರಮಾರ್ಥಭೂತವಾದ) ಪರಬ್ರಹ್ಮದಿಂದ ಹುಟ್ಟಿದ ಈ ಜಗತ್ತೂ ಸತ್ತೆನಿಸಿಯೇ ಇರಬೇಕಲ್ಲವೆ? ಆದುದರಿಂದ ಮಣ್ಣು, ಬಂಗಾರ, ಮುಂತಾದುವುಗಳಿಂದ ನಿರ್ಮಿತವಾದ ವಸ್ತುಗಳೂ, ಅವುಗಳ ಸ್ವರೂಪವೇ ಆಗಿರುವಂತೆ,ಬ್ರಹ್ಮದಿಂದ ಹುಟ್ಟಿದ ಜಗತ್ತೂ ಆ ಬ್ರಹ್ಮನಂತೆ ಸತ್ತೆನಿಸಬೇಕೆಂಬುದು ಯುಕ್ತವಲ್ಲ! ಚೇತನನಾದ ಪುರುಷನಿಂದ ಹುಟ್ಟಿದ ಕೂದಲು, ಹಲ್ಲು, ಉಗುರು, ಮುಂತಾದುವು ಅಚೇತನಗಳಾಗಿಯೂ, ಅಚೇತನವಾದ ಸಗಣಿ ಮುಂತಾದುವುಗಳಲ್ಲಿ ಹುಟ್ಟಿದ ಚೇಳು ಮುಂತಾದುವುಗಳು ಚೇತನಗಳಾಗಿಯೂ ಇರುವುದನ್ನು ನೋಡಿದರೆ, ಕಾರಣದಲ್ಲಿರುವ ಲಕ್ಷಣಗಳೇ ಕಾರ್ಯದಲ್ಲಿರಬೇಕೆಂಬ ನಿಯಮವಿಲ್ಲ ಇದರಂತೆಯೇ ಸ್ವಪ್ನವೆಂಬುದು ನಿಜವಾಗಿದ್ದರೂ, ಅದರಲ್ಲಿ ಕಾಣುವ ಗಜತುರಗಾದಿ ವಸ್ತುಗಳು ನಿಜವಲ್ಲ. ಆದುದರಿಂದ ಬ್ರಹ್ಮವು ಸತ್ತೆನಿಸಿದರೂ, ಅದರಿಂದುಂಟಾಗತಕ್ಕ ಕಾರ್ಯರೂಪವಾದ ಪ್ರಪಂಚವೂ ಸತ್ಯವಾಗಿರಬೇಕೆಂಬ ನಿಯಮವು ಯುಕ್ತಿಯಿಂದ ಪರಿಹರಿಸಲ್ಪಡುವುದು. ಆದುದರಿಂದ ಕಾರ್ಯರೂಪವಾದ ಜಗತ್ತು ಮಿಥ್ಯೆಯೇ (ಸುಳ್ಳೇ) ಆಗಿರಬೇ"ಕೆಂದು ಕೆಲವರು ಹೇಳುವರು. ಇದು ಸಮಂಜಸವಲ್ಲ! ಕಾರಣದಂತೆ ಕಾರ್ಯವೆಂಬ ನಿಯಮಕ್ಕೆ ಎಲ್ಲಿಯೂ ಲೋಪವಿರದು. ಹಿಂದೆ ಹೇಳಿದ ಕೇಶಪುರುಷಾದಿ ನಿದರ್ಶನಗಳಿಂದಲೇ ಈ ಅಭಿಪ್ರಾಯವನ್ನು ಸ್ಥಿರಪಡಿಸಬಹುದು ಏಕೆಂದರೆ, ಪುರುಷನು ಚೇತನನಾದರೂ, ಆ ಪುರುಷದೇಹವು ಅಚೇತನವಾದುದರಿಂದ ಅಚೇತನವಾದ ದೇಹದಿಂದ ಹುಟ್ಟಿದ ಕೂದಲೂ ಅಚೇತನವೆ! ಹಾಗೆಯೇ ಕಾರ್ಯವೆಂಬುದೂ ಎಲ್ಲಿಯೂ ಸುಳ್ಳಾಗದು ಹಿಂದೆ ಹೇಳಿದ ಸ್ವಪ್ನದೃಷ್ಟಾಂ

ತವಿಂದಲೇ ಇದನ್ನೂ ನಿರ್ಧರಿಸಬಹುದು. ಸ್ವಪ್ನವು ನಿಜವಾಗಿರುವಾಗ, ಆ ಸ್ವಪ್ನದಲ್ಲಿ ಕಾಣುವ ಪದಾರ್ಥಗಳೂ ಈಶ್ವರಸೃಷ್ಟಿಯಾದುದರಿಂದ, ಅವನ್ನೂ ಸುಳ್ಳೆಂದು ಹೇಳುವುದಕ್ಕಿಲ್ಲ! ಕಾರ್ಯಕಾರಣಗಳೆಂಬ ಎರಡವಸ್ಥೆಯುಳ್ಳವುಗಳಲ್ಲಿಯೂ, ಆನಿಯಮಕ್ಕೆ ಭಂಗವುಂಟಾಗಲಾರದು. ಹೇಗೆಂದರೆ, ಮಣ್ಣು,ಬಂಗಾರ ಮುಂತಾದುವು ಕಾರಣಾವಸ್ಥೆಯಿಂದಲೂ, ಕಾರ್ಯಾವಸ್ಥೆಯಿಂದಲೂ ಕಾಣುವುವು. ಅದರಂತೆಯೇ ಸತ್ತೆನಿಸಿದ ಬ್ರಹ್ಮವು ಜಗತ್ತೆಂಬ ಕಾರ್ಯಾವಸ್ಥೆಯಲ್ಲಿಯೂ, ಸತ್ತೆನಿಸಿಯೇ ಇರಬೇಕಲ್ಲದೆ, ಈ ರೂಪಾಂತರದಲ್ಲಿ ಅದು ಮಿಥ್ಯೆಯೆನಿಸಿಕೊಳ್ಳಲಾರದು. "ಆದರೆ ಮೊದಲೇ ಸತ್ತೆನಿಸಿದ ವಸ್ತುವಿಗೆ ಬೇರೊಂದು ವಿಧದಿಂದ ಉತ್ಪತ್ತಿಯು ವ್ಯರ್ಥವಲ್ಲವೆ?" ಎಂದರೆ,ಅದೂ ವ್ಯರ್ಥವಲ್ಲ!ಮಣ್ಣಿಗೆ. ಗಡಿಗೆ,ಹರವಿ, ಶ್ರಾವೆ,ಮುಂತಾದ ಅವಸ್ಥಾಭೇದಗಳು ಕೇವಲವ್ಯವಹಾರಕ್ಕಾಗಿ ಉಪಯೋಗಿಸಲ್ಪಡುವುದರಿಂದ, ಆ ಅವಸ್ಥಾಂತರಗಳೂ ಸಫಲವೇಹೊರತು ವ್ಯರ್ಥವಲ್ಲ. "ಅದು ಹೋಗಲಿ! ಕಾರ್ಯವು ಸತ್ತೆಂಬುದು ಯುಕ್ತಿಯಿಂದ ತಪ್ಪಿ ಹೋಗದಿದ್ದರೂ "ನೇಹ ನಾನಾ" ಇತ್ಯಾದಿಶ್ರುತಿವಾಕ್ಯವೇ ಕಾರ್ಯರೂಪವಾದ ವಸ್ತುವನ್ನು ಮಿಥ್ಯೆಯೆಂದು ಹೇಳುತ್ತಿರುವುವಲ್ಲವೆ? ಎಂದರೆ, ಆ ಶ್ರುತಿಗಳಿಗೂಕೂಡ, ಅನಾದಿ ಕರ್ಮವಾಸನೆಯಿಂದ ಬುದ್ಧಿಮೋಹಗೊಂಡವರಿಗೆ ಬ್ರಹ್ಮಾತ್ಮಕವಲ್ಲದ ಬೇರೆ ಸ್ವತಂತ್ರವಸ್ತುವೊಂದೂ ಇಲ್ಲವೆಂದೂ, ಬ್ರಹ್ಮಸ್ವರೂಪವಾದ ಪ್ರಪಂಚದಲ್ಲಿ ದೇವಮನುಷ್ಯಾದಿಭೇದಗಳಿಲ್ಲವೆಂದೂ ಬೋಧಿಸುವುದೇ ತಾತ್ಪರ್ಯವು. ಈ ವಾಕ್ಯವೇ ಅಂಧಪರಂಪರೆಯಿಂದ ಪಾಪಬುದ್ಧಿಯುಳ್ಳವರಿಗೆ ಮಿಥ್ಯಾತ್ವವನ್ನು ಸೂಚಿಸುವಂತೆ ಭ್ರಮೆಗೊಳಿಸುವುದು. ಆದರೆ ಈ ಪ್ರಪಂಚವು ಸೃಷ್ಟಿಗೆ ಮೊದಲೂ ಇದ್ದುದಲ್ಲ! ಪ್ರಳಯಕಾಲದಮೇಲೆ ನಿಲ್ಲತಕ್ಕುದೂ ಅಲ್ಲ. ಈ ಆದ್ಯಂತಕಾಲಗಳಲ್ಲಿ ಸ್ಥಿರವಾಗಿರತಕ್ಕುದು ಬ್ರಹ್ಮವೊಂದೇ ಆದುದರಿಂದ, ಕೇವಲವಾದ ಆ ಬ್ರಹ್ಮನಲ್ಲಿ ಈನಡುವೆ ಕಾಣತಕ್ಕ ಪ್ರಪಂಚವು ಮಿಥ್ಯೆಯಾಗಿಯೇ ಇರಬೇಕೆಂದು ನಿಶ್ಚಯಿಸಬಹುದಲ್ಲವೆ? ಅದನ್ನನುಸರಿಸಿಯೇ ಶ್ರುತಿವಾಕ್ಯಗಳಲ್ಲಿಯೂಕೂಡ, ಬ್ರಹ್ಮನಿಂದುಟ್ಟಾದ ಈ ಪ್ರಪಂಚವೆಲ್ಲವೂ, ಮಣ್ಣು, ಬಂಗಾರ ಮೊದಲಾದ ದ್ರವ

ಜಾತಿಗಳ ವಿಕಲ್ಪರೂಪಗಳಾದ ಘಟಕುಂಟಲಾದಿಗಳಿಗೆ ಸಮಾನವಾಗಿ ನಿರೂಪಿಸಲ್ಪಟ್ಟಿರುವುದು. ಎಂದರೆ, ಕಾರ್ಯಗಳೆಲ್ಲವೂ ಕೇವಲನಾಮಧೇಯ ಮಾತ್ರಗಳೇ! ಕಾರಣವೆನಿಸಿದ ಮಣ್ಣು. ಬಂಗಾರವೊದಲಾದುವುಗಳೇ ಸತ್ಯವು. ಇದರಂತೆಯೇ ಆಕಾಶಾದಿಗಳೆಲ್ಲವೂ ನಾಮಮಾತ್ರಗಳು! ಕಾರಣವಾದ ಬ್ರಹ್ಮವೊಂದೇ ಸತ್ಯವು." ಎಂದು ಕೆಲವರು ಹೇಳುವರು. ಆದರೆ ಇದು ಕುತ್ಸಿತಬುದ್ಧಿಯುಳ್ಳವರ ಮನೋವಿಕಲ್ಪದಿಂದತೋರುವ ಅರ್ಥವೇ ಹೊರತು ಬೇರೆಯಲ್ಲ. ಶ್ರುತ್ಯರ್ಥವನ್ನು ತಿಳಿಯಲಾರದವರೇ ಈ ಅರ್ಥವನ್ನು ನಿಜವೆಂದು ನಂಬುವರು ಆ ಶ್ರುತಿಯು ಕಾರಣಮಾತ್ರವೇ ಸತ್ಯವೆಂದೂ, ಕಾರ್ಯವು ಸುಳ್ಳೆಂದೂ ಹೇಳತಕ್ಕುದಲ್ಲ. ಕಾರಣಕಾರ್ಯಗಳು ಒಂದಕ್ಕೊಂದಕ್ಕೆ ಭಿನ್ನವಲ್ಲವೆಂಬುದೇ ಅದರ ಅಭಿಪ್ರಾಯವು ಆದುದರಿಂದ ಈ ಪ್ರಪಂಚವೆಲ್ಲವೂ ನಿನಗಿಂತ ಬೇರೆಯಾದುದಲ್ಲವೆಂದು ಸ್ಪಷ್ಟವು ಆದರೆ ನಿನ್ನಂತೆ ಸಮಸ್ತಜೀವರಾಶಿಗಳಿಗೂ, ನಿತ್ಯತ್ವ ಪ್ರಕೃತಿಗತತ್ವ ಮುಂತಾದುವುಗಳು ಸಮಾನವಾಗಿದ್ದರೂ, ಆ ಜೀವಗಳು ಪ್ರಕೃತಿಗವಶಗಳಾಗುವುವು. ನೀನು ಅದಕ್ಕೆ ವಶ್ಯನಲ್ಲ! ಇದೇ ಜೀವನಿಗಿಂತಲೂ ನಿನ್ನಲ್ಲಿರುವ ವಿಶೇಷವು. ಓ ದೇವಾ! ಆ ಜೀವಾತ್ಮನು ನಿನ್ನ ಮಾಯೆಯಿಂದ ಮೋಹಿತನಾಗುವುದರಿಂದ, ಪ್ರಕೃತಿಪರಿಣಾಮಗಳೆನಿಸಿಕೊಂಡ ದೇವಮನುಷ್ಯಾದಿಶರೀರಗಳನ್ನು ಹೊಂದಿ, ಅದರಿಂದ ಶಬ್ದಾದಿವಿಷಯಗಳನ್ನು ಸೇವಿಸುತ್ತ, ಸಣ್ಣದು, ದೊಡ್ಡದೆಂಬ ಆಕೃತಿಭೇದಗಳಿಂದಲೂ ವ್ಯವಹರಿಸಲ್ಪಡುವನು ಆ ಶರೀರದಲ್ಲಿ ಅವನಿಗೆ ದೇಹಾತ್ಮಾಭಿಮಾನವೂ ಹುಟ್ಟುವುದು. ಕೊನೆಗೆ ಮರಣವನ್ನೂ ಹೊಂದುವನು. ಹೀಗೆ ಜನನಮರಣಾದಿರೂಪವಾದ ಸಂಸಾರದಲ್ಲಿ ತೊಳಲುವುದರಿಂದ, ತನಗೆ ಸಹಜವಾದ ಜ್ಞಾನೈಶ್ವರ್ಯಾದಿಗಳನ್ನು ಕಳೆದುಕೊಳ್ಳುವನು. ನೀನಾದರೋ, ಹಾವು ತನ್ನ ಪರೆಯನ್ನು ನೀಗುವಂತೆ ಆ ಪ್ರಕೃತಿಯನ್ನು ತ್ಯಜಿಸಬಲ್ಲವನು. ಅದು ನಿನ್ನನ್ನು ಕಟ್ಟಿಡಲಾರದು. ಆದರಿಂದಲೇ ನಿನ್ನ ಜ್ಞಾನೈಶ್ವರ್ಯಾದಿಗಳಿಗೆ ಎಂದಿಗೂ ಕೊರತೆಯಿಲ್ಲ. ಜೀವನಿಗೆ ಹೇಗೋಹಾಗೆ ನಿನ್ನ ಐಶ್ವರ್ಯಾದಿಗಳಿಗೆ ಪರಿಮಿತಿಯಿಲ್ಲ! ಹೀಗೆ ಅಪರಿಚ್ಛಿನ್ನವಾದ ಐಶ್ವರ್ಯಾದಿಗಳನ್ನು ಹೊಂದಿ, ಪಾಪರಾಹಿತ್ಯವೊದಲಾದ ಅಷ್ಟಗುಣಗಳಿಂದಕೂಡಿ, ಯಾ

ವಾಗಲೂ ಸ್ವಯಂಪ್ರಕಾಶನಾಗಿ ಬೆಳಗುತ್ತ ಸಮಸ್ತಲೋಕಗಳಿಂದಲೂ ಪೂಜಿಸಲ್ಪಡುವೆ? ಓ! ದೇವಾ! ಮನಸ್ಸನ್ನು ಸ್ಥಿರವಾಗಿ ನಿಲ್ಲಿಸಬಲ್ಲ ಮುನಿಗಳಾಗಿದ್ದರೂ, ತಮ್ಮ ಹೃದಯದಲ್ಲಿ ರೂಢಮೂಲವಾಗಿರುವ ಕಾಮಮೂಲಕವಾದ ಕರ್ಮವಾಸನೆಯನ್ನು ಕಿತ್ತುಹಾಕದಿದ್ದಪಕ್ಷದಲ್ಲಿ, ನೀನು ಅವರ ಹೃದಯದಲ್ಲಿಯೇ ಇರತಕ್ಕವನಾಗಿದ್ದರೂ, ತನ್ನ ಕಂಠದಲ್ಲಿರುವ ಪದಕವನ್ನೇ ಮರೆತು ಕಳವಳಿಸುವ ಮನುಷ್ಯನ ಭಾಗಕ್ಕೆ ಅದು ಇಲ್ಲದಹಾಗೆಯೇ ತೋರುವಂತೆ,ಅವರ ಭಾಗಕ್ಕೆ ನೀನೂ ಇಲ್ಲದಂತೆಯೇ ಆಗುವೆ.ಓಭಗವಂತಾ! ಕೇವಲಪ್ರಾಣೇಂದ್ರಿಯತೃಪ್ತಿಪರಾಯಣರಾದ ಆ ಯೋಗಿಗಳಿಗೆ, ಇಹದಲ್ಲಿಯಾಗಲಿ,ಪರದಲ್ಲಿಯಾಗಲಿ ಮೃತ್ಯುಭಯವು ಎಂದೂ ತಪ್ಪದು. ಅವರು ತಮ್ಮ ಕರ್ಮಬಲದಿಂದ ಇಹಲೋಕದಲ್ಲಿ ಎಷ್ಟೇ ಪುಷ್ಕಲವಾದ ಭೋಗಗಳನ್ನನುಭವಿಸುತ್ತಿದ್ದರೂ, ಮರಣಭಯವು ಅವರನ್ನು ಬಾಧಿಸುತ್ತಲೇ ಇರುವುದು ಪರಲೋಕದಲ್ಲಿಯೋ ಯಮರೂಪನಾದ ನಿನ್ನಿಂದ ತಮ್ಮ ಪಾಪಗಳಿಗಾಗಿ ಅವರು ಶಿಕ್ಷೆಯನ್ನೂ ಹೊಂದುವರು. ನಿನ್ನ ನಿಜಸ್ಥಿತಿಯನ್ನು ತಿಳಿದ ಜ್ಞಾನಿಗಳು, ಸಂಸಾರದಲ್ಲಿ ತನ್ನ ಪುಣ್ಯಪಾಪಕರ್ಮಗಳಿಂದುಂಟಾದ ಸುಖದುಃಖಗಳಿಗಾಗಲಿ, ಇತರರ ನಿಂದಾಸ್ತುತಿಗಳಿಗಾಗಲಿ, ಲಕ್ಷ್ಯಮಾಡಲಾರರು ಅಂತವರು ನಿನ್ನನ್ನೇ ಮುಕ್ತಿಕಾರಣನೆಂದು ತಿಳಿದಿರುವುದರಿಂದ, ಈ ಲೋಕದಲ್ಲಿ ನಿನ್ನ ಭಕ್ತರ ಸಹವಾಸದಲ್ಲಿದ್ದು, ನಿನ್ನ ಕಥಾಮೃತಗಳನ್ನು ಕಿವಿಯಿಂದ ಪಾನಮಾಡುತ್ತ, ಅನವರತವೂ ಅದನ್ನೇ ಮನಸ್ಸಿನಲ್ಲಿ ಧಾರಣಮಾಡುತ್ತ, ಆ ಅಮೃತಪಾನದಿಂದ ಮತ್ತೇರಿದಂತಿರುವರು. ಅದರಿಂದಲೇ ಅವರಿಗೆ ಬೇರೆಯವರ ನಿಂದಾಸ್ತುತಿಗಳಾಗಲಿ, ತಮ್ಮ ಮೇಲೆ ಬೀಳುವ ಸುಖದುಃಖಗಳಾಗಲಿ ಯಾವುದೂ ತಿಳಿಯಲಾರದು. ಸ್ವರ್ಗಾದಿಲೋಕಪಾಲಕರಾದ ಮಹೇಂದ್ರಬ್ರಹ್ಮಾದಿಗಳೂ,ನಿನ್ನ ಸ್ವರೂಪಸ್ವಭಾವಗಳನ್ನು ಪೂರ್ಣವಾಗಿ ತಿಳಿಯಲಾರದಿರುವಾಗ, ಈ ಸಾಮಾನ್ಯ ಮನುಷ್ಯರ ಮಾತೇನು?ಅಷ್ಟೇಕೆ?*ಕೊನೆಗೆ ನೀನೂ ಅದನ್ನು ತಿಳಿಯಲಾರೆ.

* ಇದರಿಂದ ಭಗವಂತನ ಸರ್ವಜ್ಞತ್ವಕ್ಕೆ ಲೋಪವೆಂದು ಗ್ರಹಿಸಬಾರದು. ವಾಸ್ತವಸ್ಥಿತಿಯನ್ನು ತಿಳಿಯುವುದೇ ಸರ್ವಜ್ಞತ್ವದ ಲಕ್ಷಣವು. ಅಪರಿಚ್ಛಿನ್ನವಾದುದನ್ನು ಪರಿಚ್ಛಿನ್ನವೆಂದು ತಿಳಿದುಕೊಳ್ಳುವುದೇ ಅಜ್ಞತೆಯೆನಿಸುವುದೆಂದು ಭಾವವು.

ಏಕೆಂದರೆ, ಅದು ಅನಂತವಾದುದು ನಿನ್ನ ಒಂದೊಂದು ರೋಮಕೂಪದಲ್ಲಿಯೂ ಆಕಾಶದಲ್ಲಿ ರೇಣುಗಳು ಹೇಗೋಹಾಗೆ ಸಪ್ತಾವರಣಗಳೊಡಗೂಡಿದ ಕೋಟಿಕೋಟಿಬ್ರಹ್ಮಾಂಡಗಳು ಅಡಗಿರುವುವು. ನೀನು ಇಂತಹ ಅಪಾರಮಹಿಮೆಯುಳ್ಳವನಾದುದರಿಂದಲೇ ಶ್ರುತಿಗಳು ತಮ್ಮ ಶಬ್ದವೃತ್ತಿಯಿಂದ ನಿನ್ನನ್ನು ಪ್ರಕೃತಿಪುರುಷರಿಗಿಂತಲೂ ವಿಲಕ್ಷಣನೆಂದು ಬೋಧಿಸುತ್ತಿರುವುವು. ಹೀಗೆ ನಿನ್ನನ್ನು ಚೇತನಾಚೇತನಗಳಿಗೆ ಸಜಾತೀಯನೆಂಬುದನ್ನು ಖಂಡಿಸಿ, ಅವಕ್ಕಿಂತಲೂ ನಿನ್ನನ್ನು ವಿಲಕ್ಷಣವೆಂಬುದನ್ನು ಬೋಧಿಸುವುದರಲ್ಲಿ ಮಾತ್ರವೇ ಅವು ಕೃತಾರ್ಥಗಳಾಗುವುವು. ಅದಕ್ಕಿಂತಲೂ ಹೆಚ್ಚಾಗಿ ನಿನ್ನ ಸ್ವರೂಪಸ್ವಭಾವಗಳನ್ನು ಬೋಧಿಸುವುದಕ್ಕೆ ಅವುಗಳಿಗೂ ಸಾಧ್ಯವಲ್ಲ"ಎಂದು ಸ್ತುತಿಸಿದುವು.

ಹೀಗೆ ಶ್ರುತಿಗಳು ಭಗವಂತನನ್ನು ಸ್ತುತಿಸಿದುದಾಗಿ ಸನಂದನನು ಹೇಳಿದ ಆತ್ಮತತ್ವವನ್ನು, ಬ್ರಹ್ಮಪುತ್ರರಾದ ಮರೀಚ್ಯಾದಿಗಳೆಲ್ಲರೂ ಕೇಳಿ, ಪರಮಾತ್ಮನ ನಿಜಸ್ಥಿತಿಯನ್ನು ತಿಳಿದು ಕೃತಾರ್ಥರಾಗಿ, ಆ ಸನಂದನನನ್ನು ವಿಶೇಷವಾಗಿ ಪೂಜಿಸಿದರು. ಓ ಪರೀಕ್ಷಿದ್ರಾಜಾ! ಇದೇ ವಿಚಾರವನ್ನು ಬದರಿಕಾಶ್ರಮದಲ್ಲಿದ್ದ ಲೋಕಗುರುವಾದ ಶ್ರೀನಾರಾಯಣಮುನಿಯು, ನಾರದನಿಗೆ ತಿಳಿಸಲು, ನಾರದನು ಅದನ್ನು ಶ್ರದ್ಧೆಯಿಂದ ಗ್ರಹಿಸಿ, ಅದನ್ನೇ ಮನಸ್ಸಿನಲ್ಲಿ ಧಾರಣಮಾಡಿಕೊಂಡು, ತನ್ನ ಸಂಶಯಗಳೆಲ್ಲವೂನೀಗಿದುದರಿಂದ ಪೂರ್ಣಮನೋರಥನಾಗಿ, "ಸಮಸ್ತಭೂತಗಳ ಅಪವರ್ಗಸಿದ್ಧಿಗಾಗಿ, ಇಂತಹ ಸರ್ವೋತ್ತಮಗಳಾದ ವಿದ್ಯೆಗಳನ್ನುಪದೇಶಿಸಿ ಸಮಸ್ತಲೋಕಕ್ಕೂ ಸುಖವನ್ನುಂಟುಮಾಡತಕ್ಕ ಪುಣ್ಯಶ್ಲೋಕನಾದ ಆ ಭಗವಂತನಿಗೆ ನಮಸ್ಕರಿಸುವೆನು" ಎಂದು ಹೇಳುತ್ತ, ಆದಿಋಷಿಯಾದ ಆ ನಾರಾಯಣಮುನಿಗೂ, ಅವನ ಶಿಷ್ಯರಾದ ಇತರಮಹಾತ್ಮರಿಗೂ ನಮಸ್ಕರಿಸಿ, ಅವರ ಅನುಮತಿಯನ್ನು ಪಡೆದು ಅಲ್ಲಿಂದ ಹಿಂತಿರುಗಿ,ನನ್ನ ತಂದೆಯಾದ ವ್ಯಾಸಮುನಿಯ ಆಶ್ರಮಕ್ಕೆ ಬಂದನು. ನನ್ನ ತಂದೆಯು ಅವನನ್ನು ಯಥೋಚಿತವಾಗಿ ಪೂಜಿಸಿ,ಆಸನವನ್ನು ಕೊಟ್ಟು ಸತ್ಕರಿಸಿದಮೇಲೆ,ನಾರದಯತನಗೆ ನಾರಾಯಣಮಹರ್ಷಿಯಿಂದುಪದೇಶಿಸಲ್ಪಟ್ಟ ಆ ಶ್ರುತಿಗೀತೆಗಳನ್ನೇ

ನನ್ನ ತಂದೆಗೂ ಉಪದೇಶಿಸಿದನು. ಅದನ್ನೇ ನನ್ನ ತಂದೆಯು ನನಗೆ ಉಪದೇಶಿಸಿದನು ಓ ಪರೀಕ್ಷಿದ್ರಾಜಾ! ನೀನು ನನ್ನನ್ನು ಕೇಳಿದ ಪ್ರಶ್ನೆಗೆ ಉತ್ತರವಾಗಿ,ಆ ಶ್ರುತಿವಚನಗಳನ್ನೇ ನಿನಗೆ ಉಪದೇಶಿಸಿದೆನು.ಇದರಿಂದ ನೀನು,ಪರಬ್ರಹ್ಮವೆಂಬುದು ನಿರ್ಗುಣವಾಗಿ ಅನಿರ್ದೇಶ್ಯವಾಗಿದ್ದರೂ, ಆ ಬ್ರಹ್ಮನಲ್ಲಿ ಶ್ರುತಿಗಳು ಮುಖ್ಯವೃತ್ತಿಯಿಂದಲೇ ಪ್ರವರ್ತಿಸುವುವೆಂಬುದನ್ನು ನಿಸ್ಸಂದೇಹವಾಗಿ ತಿಳಿಯಬಹುದು. ಯಾವನು ತನ್ನ ಸಂಕಲ್ಪಮಾತ್ರದಿಂದಲೇ ಈ ಜಗತ್ತಿನ ಸೃಷ್ಟಿಸ್ಥಿತಿಲಯಗಳನ್ನು ನಿರ್ವಹಿಸುವನೋ, ಕಾರಣಾವಸ್ಥೆಯಲ್ಲಿದ್ದ ಪ್ರಕೃತಿಪುರುಷರಿಗೆ ಅಂತರ್ಯಾಮಿಯಾಗಿ ಪ್ರೇರಿಸತಕ್ಕವನೋ, ಯಾವನು ಮಹತ್ತು ಮೊದಲಾಗಿ ಪೃಥಿವಿಯವರೆಗಿನ ಸಮಷ್ಟಿತತ್ವಸಮೂಹವನ್ನು ಸೃಷ್ಟಿಸಿ,ಚತುರ್ಮುಖನೆಂಬ ಜೀವನನ್ನು ತನಗೆ ಶರೀರವನ್ನಾಗಿ ಮಾಡಿಕೊಂಡು, ಅದರಲ್ಲಿ ಪ್ರವೇಶಮಾಡಿ, ಆಮೂಲಕವಾಗಿ ದೇವಮನುಷ್ಯಾದಿಶರೀರಗಳನ್ನು ಸೃಷ್ಟಿಸಿ ಪಾಲಿಸಿದನೋ, ಕರ್ಮವಶ್ಯನಾದ ಜೀವನು, ಯಾವನ ಆಶ್ರಯದಿಂದಲೇ, ಗೂಡಿನಲ್ಲಿ ಮಲಗಿದ್ದ ಹಕ್ಕಿಯು ಅದನ್ನು ಬಿಟ್ಟು ಹೋಗುವಂತೆ,ತನ್ನನ್ನು ಮುಚ್ಚಿಕೊಂಡಿರುವ ಪ್ರಕೃತಿಸಂಬಂಧವನ್ನು ಬಿಟ್ಟು, ತನಗೆ ಸಹಜವಾದ ಅಷ್ಟಗುಣಗಳೊಡನೆ ಮುಕ್ತನಾಗುವನೋ, ಯಾವನು ಸಂಸಾರಿಗಳಿಗೆ ಮೋಕ್ಷಪ್ರದನಾಗಿ, ಅವರಿಗೆ ಜನನಮರಣರೂಪವಾದ ಭಯವನ್ನು ತಪ್ಪಿಸುವನೋ, ಅಂತಹ ಆರ್ತಾರ್ತಿಹರನಾದ ಶ್ರೀಮನ್ನಾರಾಯಣನನ್ನು ಅನವರತವೂ ಧ್ಯಾನಿಸುವೆನು." ಎಂದನು. ಇದು ಎಂಭತ್ತೇಳನೆಯ ಅಧ್ಯಾಯವು.

---

## ತ್ರಿಮೂರ್ತಿಗಳಲ್ಲಿ ಮೋಕ್ಷಪ್ರದನಾರೆಂಬ ವಿಚಾರವು.

ತಿರುಗಿ ಪರೀಕ್ಷಿದ್ರಾಜನು ಪ್ರಶ್ನೆಮಾಡುವನು. "ಓ ಮುನೀಂದ್ರಾ! ದೇವದಾನವಮನುಷ್ಯರಲ್ಲಿ ಯಾರು (ರುಂಡಮಾಲೆ, ಸರ್ಪಾಭರಣ, ಚರ್ಮಾಂಬರ ಮುಂತಾದ ಅಮಂಗಳವೇಷವುಳ್ಳ) ಶಿವನನ್ನು ಭಜಿಸುವರೋ, ಅವರು ಪ್ರಾಯಕವಾಗಿ ಶ್ರೀಮಂತರಾಗಿಯೂ,ಭೋಗಿಗಳಾಗಿಯೂ ಇರುವರು. ಸಾಕ್ಷಾಲ್ಲಕ್ಷ್ಮೀಪತಿಯಾಗಿ, ಸಕಲ ವಿಭೂತಿನಾ

ಯಕನಾದ ವಿಷ್ಣುವನ್ನು ಭಜಿಸತಕ್ಕವರು,ಪ್ರಾಯಕವಾಗಿ ಅಕಿಂಚನರಾಗಿಯೇ ಇರುವರು ಹೀಗೆ ವಿಷ್ಣುರುದ್ರರ ಸ್ವಭಾವಗಳು ಪರಸ್ಪರವಿರುದ್ಧವಾಗಿರುವುದಕ್ಕೂ, ಅವರನ್ನು ಭಜಿಸತಕ್ಕವರಿಗೆ ಲಭಿಸತಕ್ಕ ಫಲಗಳು, ಆದೇವತೆಗಳ ಸ್ವಭಾವಕ್ಕೆ ವಿರುದ್ಧಗಳಾಗಿರುವುದಕ್ಕೂ ಕಾರಣವೇನು? ಈ ವಿಚಾರವಾಗಿ ನನಗೆ ಬಹಳ ಸಂದೇಹವಿರುವುದು. ಅದನ್ನು ಪರಿಹರಿಸಬೇಕು” ಎಂದನು. ಆದಕ್ಕಾ ಶುಕಮುನಿಯು 'ರಾಜಾ ಕೇಳು! ಪಾರ್ವತೀಸಮೇತನಾದ ರುದ್ರನು ತಮೋಗುಣಸ್ವಭಾವವುಳ್ಳವನು. ವೈಕಾರಿಕ, ತೈಜಸ, ತಾಮಸವೆಂಬ ಮೂರುವಿಧವಾದ ಅಹಂಕಾರಗಳಿಂದ ತುಂಬಿದವನು. ಈ ಮೂರುಬಗೆಯ ಅಹಂಕಾರಗಳಲ್ಲಿ, ತಾಮಸಾಹಂಕಾರದಿಂದ ಪಂಚಮಹಾಭೂತಗಳೂ, ವೈಕಾರಿಕದಿಂದ ಏಕಾದಶೇಂದ್ರಿಯಗಳೂ ಹುಟ್ಟಿರುವುವು ರಾಜಸಾಹಂಕಾರವೆಂಬುದು, ಉಳಿದ ಎರಡುಅಹಂಕಾರಗಳಿಗೂ ಪ್ರೋತ್ಸಾಹಕವಾಗಿರುವುದು. ಈ ಮೂರುಬಗೆಯ ಅಹಂಕಾರಗಳಿಗೂ,ಅವುಗಳ ವಿಕಾರರೂಪಗಳಾದ ಭೂತೇಂದ್ರಿಯಾದಿಗಳಿಗೂ, ಬೇರೆಬೇರೆ ಅಧಿದೇವತೆಗಳುಂಟು. ಆ ಅಧಿದೇವತೆಗಳಲ್ಲಿ ಮನುಷ್ಯನು ಯಾವ ದೈವವನ್ನು ಭಜಿಸುವನೋ, ಆ ದೈವವು ಅವನಿಗೆ ತನ್ನಿಂದ ಕೊಡಬಹುದಾದ ಭೋಗೈಶ್ವರ್ಯಗಳನ್ನು ಕೈಗೂಡಿಸುವುದು. ಶ್ರೀಹರಿಯಾದರೋ ಹಾಗಲ್ಲ! ಅವನು ಸತ್ವಾದಿಪ್ರಕೃತಿಗುಣಗಳಿಗೆ ಒಳಗಾದವನಲ್ಲ! ಆತನು ಸಂಪೂರ್ಣವಾದ ಜ್ಞಾನೈಶ್ವರ್ಯಾದಿಷಡ್ಗುಣಗಳಿಂದ ತುಂಬಿದವನು. ಪ್ರಕೃತಿಜೀವಗಳೆರಡಕ್ಕಿಂತಲೂ ವಿಲಕ್ಷಣನಾದವನು ಸರ್ವಜ್ಞನಾದುದರಿಂದ ಗುಣದೋಷಗಳನ್ನು ತಿಳಿಯಬಲ್ಲವನು ಇತರದೇವತೆಗಳೆಲ್ಲರೂ, ಕರ್ಮವಶ್ಯರಾದುದರಿಂದ,ಜೀವಕೋಟಿಯಲ್ಲಿ ಸೇರಿ ಆ ಭಗವಂತನಿಗಿಂತಲೂ ಭಿನ್ನಸ್ವಭಾವವುಳ್ಳವರು. ಆದುದರಿಂದ ಆ ದೇವತೆಗಳು ತಮ್ಮನ್ನು ಭಜಿಸಿದವರಿಗೆ ತಮ್ಮ ಶಕ್ತಿಗೆ ತಕ್ಕ ಫಲವನ್ನೇ ಕೊಡುವರು. ಪ್ರಾಕೃತಗುಣರಹಿತನಾದ ಹರಿಯನ್ನು ಭಜಿಸತಕ್ಕವನು,ಆ ಪ್ರಕೃತಿಸಂಬಂಧವಿಲ್ಲದ ಮುಕ್ತಿಯನ್ನೇ ಹೊಂದಬೇಕು ಓ! ಪರೀಕ್ಷಿದ್ರಾಜಾ! ಇದೇವಿಚಾರವಾಗಿ ನಿನ್ನ ಅಜ್ಜನಾದ ಧರ್ಮರಾಜನು, ತನ್ನ ರಾಜಸೂಯಯಾಗವು ಮುಗಿದಮೇಲೆ,ಭಗವಂತನಾದ ಕೃಷ್ಣನಿಂದ ಅನೇಕಧರ್ಮಗಳನ್ನು ಕೇಳುತ್ತಿರು

ವಾಗ, ಈಗ ನೀನು ಕೇಳಿದ ಪ್ರಶ್ನೆಯನ್ನೇ ಕೇಳಿದನು. ಆಶ್ರಿತರಿಗೆ ಉತ್ತಮ ಪುರುಷಾರ್ಥವಾದ ಮೋಕ್ಷವನ್ನು ಕೈಗೂಡಿಸುವುದಕ್ಕಾಗಿಯೇ ಯದುಕುಲ ದಲ್ಲಿ ಅವತರಿಸಿದ್ಧ ಶ್ರೀಕೃಷ್ಣನು, ಒಂದೆರಡುಮಾತುಗಳಲ್ಲಿ ಅದರ ಸಾ ರಾಂಶವನ್ನು ಹೀಗೆಂದು ತಿಳಿಸಿರುವನು..'ಓ!ಧರ್ಮರಾಜಾ!ನಾನು ಯಾರನ್ನು ಅನುಗ್ರಹಿಸಬೇಕೆಂದು ಸಂಕಲ್ಪಿಸುವೆನೋ,ಮೊದಲುಅವರಧನವನ್ನೂ,ಭೋ ಗಸಾಮಗ್ರಿಗಳನ್ನೂ ಮೆಲ್ಲಗೆ ಅಪಹರಿಸಿಬಿಡುವೆನು. ಇದರ ಕಾರಣವೇನೆಂದು ಕೇಳುವೆಯಾ?ಮನುಷ್ಯನು ಧನಹೀನನಾಗಿ ಕಷ್ಟಪಡುತ್ತಿರುವಾಗ ಅವನನ್ನು ಸ್ವಜನರೆಲ್ಲರೂ ತಾವಾಗಿ ಬಿಟ್ಟುಹೋಗುವರು. ಅದರಿಂದ ಅವನಿಗೆ ಸ್ವಜ ನಾಭಿಮಾನವು ತಪ್ಪುವುದು. ಅವನಿಗೆ ದಾರಿದ್ರ್ಯದಶೆಯು ಹೆಚ್ಚುತ್ತಬಂದ ಹಾಗೆಲ್ಲಾ ಇಹಲೋಕಸುಖದಲ್ಲಿ ನಿರಾಶೆಯುಂಟಾಗಿ, ಪರಲೋಕದ ಮೇಲೆ ದೃಷ್ಟಿಯು ಹೋಗುವುದು. ಲೌಕಿಕಸುಖದ ಆಸೆಯನ್ನೇ ಬಿಟ್ಟು ಸಾಧುಗಳಾದ ನನ್ನ ಭಕ್ತರೊಡನೆ, ಸಹವಾಸಮಾಡುವನು. ಆ ಸಹವಾಸಬ ಲದಿಂದ ನನ್ನ ಅನುಗ್ರಹಕ್ಕೆ ಪಾತ್ರನಾಗುವನು. ಕ್ರಮಕ್ರಮವಾಗಿ ಅವನ ಮನಸ್ಸು ಶುದ್ಧವಾದಮೇಲೆ, ಅವನಿಗೆ ಪ್ರಕೃತಿಪುರುಷರಿಗಿಂತಲೂ ವಿಲಕ್ಷಣ ವಾಗಿಯೂ, ಸೂಕ್ಷ್ಮವಾಗಿಯೂ, ಜ್ಞಾನಸ್ವರೂಪಮಾತ್ರವಾಗಿಯೂ, ಕಾಲದೇಶಾಂಶಪರಿಚ್ಛೇದವಿಲ್ಲದುದಾಗಿಯೂ ಇರುವ ಬ್ರಹ್ಮಸ್ವರೂಪ ವನ್ನು ತೋರಿಸುವೆನು ಹೀಗೆ ನಾನು ನನ್ನನ್ನು ಭಜಿಸಿತಕ್ಕವರಿಗೆ ಮೊದಲು ಕಷ್ಟವನ್ನೇ ತಂದಿಡುವುದರಿಂದ, ದೂರದೃಷ್ಟಿಯಿಲ್ಲದ ಕೆಲವರು, ನನ್ನನ್ನು ಬಿಟ್ಟು ತತ್ಕಾಲಕ್ಕೆ ಸುಖಪ್ರದರಾಗಿದ್ದರೂ, ಕೊನೆಗೆ ದುಃಖಪ್ರದ ರಾಗಿಯೂ, ತಾವೇ ಕರ್ಮಪಾಶದಲ್ಲಿ ಸಿಕ್ಕಿ ದುಃಖಿತರಾಗಿಯೂ ಇರುವ ಇತರದೇವತೆಗಳನ್ನು ಭಜಿಸುವರು ಆ ದೇವತೆಗಳೇ ತಮಗೆ ನಿತ್ಯಸುಖ ಪ್ರದರೆಂದು ಭ್ರಮಿಸುವರು. ಇದಲ್ಲದೆ ರುದ್ರಾದಿದೇವತೆಗಳೆಲ್ಲರೂ, ತಮ್ಮ ನ್ನು ಭಜಿಸತಕ್ಕವರವಿಷಯದಲ್ಲಿ ಬಹುಶೀಘ್ರವಾಗಿ ಸಂತೋಷಪಡುವ ಸ್ವ ಭಾವವುಳ್ಳವರು.ಆದುದರಿಂದ ತಮ್ಮನ್ನು ಭಜಿಸತಕ್ಕವರಿಗೆ ಕೇಳಿದ ಭೋಗೈ ಶ್ವರ್ಯಾದಿಗಳನ್ನು ಬೇಗನೆ ಅನುಗ್ರಹಿಸಿಬಿಡುವರು.ಅವರಿಂದ ವರವನ್ನು ಪಡೆದ ಭಕ್ತರೂಕೂಡ, ಆ ಐಶ್ವರ್ಯದಿಂದ ಮತ್ತರಾಗಿ, ದಾರಿತಪ್ಪಿನಡೆಯುತ್ತ, ಕೊ

ನೆಗೆ ತಮಗೆ ವರಪ್ರದರಾದ ಆ ದೇವತೆಗಳನ್ನೇ ಲಕ್ಷ್ಯಮಾಡದೆ, ಗರ್ವದಿಂದ ಬೀಗುವರು” ಎಂದನು. ಓ! ರಾಜಾ! ಹೀಗೆ ಕೃಷ್ಣನು ತನ್ನ ಬಾಯಿಂದ ಲೇ ಧರ್ಮರಾಜನಿಗೆ ತಿಳಿಸಿರುವನು. ಇದೇವಿಚಾರದಲ್ಲಿ ಮತ್ತೊಂದುವಿಷಯ ವನ್ನು ತಿಳಿಸುವೆನು ಕೇಳು ಬ್ರಹ್ಮ, ವಿಷ್ಣು, ಶಿವಾದಿದೇವತೆಗಳೆಲ್ಲರೂ,ಇತ ರರನ್ನು ಅನುಗ್ರಹಿಸುವುದಕ್ಕಾಗಲಿ ನಿಗ್ರಹಿಸುವುದಕ್ಕಾಗಲಿ, ಸಮರ್ಥರು ಅ ವರ ನಿಗ್ರಹವಾಗಲಿ ಅನುಗ್ರಹವಾಗಲಿ ವಿಫಲವಾಗತಕ್ಕುದಲ್ಲ ಆದರೆ ಈ ತ್ರಿಮೂರ್ತಿಗಳಲ್ಲಿ ಬ್ರಹ್ಮರುದ್ರರಿಬ್ಬರೂ ಬಹುಶೀಘ್ರಕಾಲದಲ್ಲಿ ತಮ್ಮ ಕೋಪಪ್ರಸಾದಗಳನ್ನು ತೋರಿಸಿಬಿಡುವರು ಶ್ರೀವಿಷ್ಣುವಾದರೋ ಹಾಗಲ್ಲ ಎಂತವರನ್ನೂ ಅನುಗ್ರಹಿಸಬೇಕೆಂಬುದೇ ಅವನ ಸ್ವಭಾವ ವು ಅವನು ತೋರಿಸತಕ್ಕ ನಿಗ್ರಹವೂ ಕೊನೆಗೆ ಅನುಗ್ರಹರೂಪವಾಗಿ ಯೇ ಪರಿಣಮಿಸುವುದು. ಇದೇವಿಷಯವಾಗಿ ಹಿಂದೆ ರುದ್ರನು ವೃಕಾಸುರನಿಗೆ ವರವನ್ನು ಕೊಟ್ಟು, ಆದರಿಂದ ತಾನು ಅಪಾಯಕ್ಕೆ ಸಿಕ್ಕಿ ಬಿದ್ದ ಒಂದಾನೊಂದು ಸಣ್ಣ ಇತಿಹಾಸವುಂಟು ಶಕುನಿಯ ಮಗನಾದ ವೃಕನೆಂಬ ಅಸುರನೊಬ್ಬನಿದ್ದನು. ಅವನು ಒಮ್ಮೆ ದಾರಿಯಲ್ಲಿ ಸಂಚಾರವಶ ದಿಂದ ಬರುತಿದ್ದ ನಾರದಮಹರ್ಷಿಯನ್ನು ಕಂಡು,ತ್ರಿಮೂರ್ತಿಗಳಲ್ಲಿ ಶೀಘ್ರ ಸಂತೋಷಿಗಳಾರೆಂದು ಪ್ರಶ್ನೆಮಾಡಿದನು. ಆಗ ನಾರದನು ಅವನನ್ನು ಕುರಿತು. “ಓ! ಅಸುರೇಂದ್ರಾ! ನೀನು ರುದ್ರನನ್ನು ಭಜಿಸು! ಅವನು ಶೀಘ್ರದಲ್ಲಿ ಸಂತೋಷಪಡತಕ್ಕವನು. ಅತ್ಯಲ್ಪವಾದ ಗುಣದೋಷಗಳನ್ನು ನೋಡಿದಾಗಲೇ, ತನ್ನ ಸಂತೋಷವನ್ನೂ, ಕೋಪವನ್ನೂ ತೋರಿಸಿಬಿಡು ವನು ಹಿಂದೆ ಅವನು ರಾವಣನ ಮುಖಸ್ತುತಿಗೆ ವಶನಾಗಿ, ಅವನಿಗೆ ಕೇಳಿದ ವರಗಳನ್ನು ಕೊಟ್ಟು, ಕೊನೆಗೆ ಆ ರಾವಣನು ವೀರ್ಯಮದದಿಂದ ತಾನಿದ್ದ ಕೈಲಾಸವನ್ನು ಕಿತ್ತೆಸೆಯುವಾಗ, ಎಷ್ಟೋ ಕಷ್ಟಪಟ್ಟನು. ಬಾಣಾಸುರನ ಮುಖಸ್ತುತಿಗೆ ಮರುಳಾಗಿ, ಅವನ ಪಟ್ಟಣವನ್ನು ಕಾಯುವ ಕೆಲಸದಲ್ಲಿ ಎಷ್ಟೋ ಸಂಕಟಪಟ್ಟನು ಆದುದರಿಂದ ನೀನು ಅವನನ್ನು ಭಜಿ ಸಿದರೆ, ಶೀಘ್ರದಲ್ಲಿ ನಿನ್ನ ಕೋರಿಕೆಯನ್ನು ಪಡೆಯಬಹುದು.” ಎಂದನು. ಈ ಮಾತನ್ನು ಕೇಳಿದೊಡನೆ ವೃಕಾಸುರನು, ಕೇದಾರಕ್ಷೇತ್ರಕ್ಕೆ ಹೋಗಿ, ಅಲ್ಲಿ ಅಗ್ನಿಮುಖವಾಗಿ ತನ್ನ ದೇಹದ ಮಾಂಸವನ್ನು ಹೋಮಮಾಡುತ್ತ,

ಆದರಿಂದ ರುದ್ರನನ್ನು ಆರಾಧಿಸತೊಡಗಿದನು. ಹೀಗೆ ಆರುದಿನಗಳ ವರೆಗೆ ತನ್ನ ಅವಯವಗಳನ್ನೆಲ್ಲಾ ಕತ್ತರಿಸಿ ಹೋಮಮಾಡಿದರೂ, ರುದ್ರನು ಪ್ರತ್ಯಕ್ಷನಾಗಲಿಲ್ಲ. ಆ ದಾನವನಿಗಾದರೋ ಮನಸ್ಸಿನಲ್ಲಿ ಬಹಳಸಂಕಟ ವುಂಟಾಯಿತು. ಏಳನೆಯದಿನದಲ್ಲಿ ಸ್ನಾನಮಾಡಿ, ಆರ್ದ್ರಕೇಶ (ಒದ್ದೆತಲೆ) ದೊಡನೆಯೇ ಬಂದು, ಕೊಡಲಿಯಿಂದ ಮೊತ್ತಕ್ಕೆ ತನ್ನ ಶಿರಸ್ಸನ್ನೇ ಕತ್ತರಿಸಿ ಹೋಮಮಾಡುವುದಕ್ಕೆ ಯತ್ನಿಸಿದನು. ಆಗ ಪರಮಕಾರುಣಿಕನಾದ ಧೂರ್ಜಟಿಯು, ಅರಣಿಯಿಂದ ಅಗ್ನಿಯು ಹೇಗೋಹಾಗೆ,ಆ ಹೋಮಕುಂಡ ದಿಂದ ಮೇಲೆದ್ದು ಬಂದು, ತನ್ನ ಎರಡುಕೈಗಳಿಂದಲೂ ಆ ವೃಕಾಸುರನ ಕೈಗಳನ್ನು ಹಿಡಿದು, ಆತನ ಕ್ರೂರಪ್ರಯತ್ನವನ್ನು ತಪ್ಪಿಸಿದನು ರು ದ್ರನ ಹಸ್ತಸ್ಪರ್ಶದಿಂದ ಆ ರಾಕ್ಷಸನ ಮೈಯಲ್ಲಿದ್ದ ವ್ರಣಗಳೆಲ್ಲವೂ ಆರಿ, ಅವನು ಮೊದಲು ಕತ್ತರಿಸಿದ್ದ ಅವಯವಗಳೆಲ್ಲವೂ ಪೂರ್ಣವಾದುವು ಆಗ ರುದ್ರನು, ಅವನನ್ನು ಪ್ರಸನ್ನದೃಷ್ಟಿಯಿಂದ ನೋಡಿ, “ದಾನವೋ ತ್ತಮಾ! ಇನ್ನು ಸಾಕು ಬಿಡು! ನಾನು ಸಂತೋಷಪಟ್ಟೆನು ನಿನಗೆ ಬೇಕಾದ ವರವನ್ನು ಕೊಡುವೆನು ಕೇಳು! ನನ್ನಲ್ಲಿ ಮರೆಹೊಕ್ಕ ಜನರು, ಜಲ ಮಾತ್ರದ ಪೂಜೆಯನ್ನೊಪ್ಪಿಸಿದರೂ ನಾನು ಸಂತೋಷಪಡತಕ್ಕವನು. ನೀನು ಅದನ್ನು ಯೋಚಿಸದೆ ವ್ಯರ್ಥವಾಗಿ ನಿನ್ನ ದೇಹವನ್ನು ಕತ್ತರಿಸಿ ಕೊಡುವುದಕ್ಕಾಗಿ ಯತ್ನಿಸಿದೆಯಲ್ಲಾ!” ಎಂದನು. ಆಗ ಪಾಪಬುದ್ಧಿಯುಳ್ಳ ಆ ರಾಕ್ಷಸನು, ರುದ್ರನಿಗೆ ಕೈಮುಗಿದು “ಪ್ರಭೂ! ನಾನು ಯಾರಯಾರ ತಲೆಯಮೇಲೆ ಕೈಯಿಡುವೆನೋ, ಅವರು ಸಾಯಬೇಕು. ಇಷ್ಟೇನನ್ನ ಕೋ ರಿಕೆ”ಎಂದನು. ಹೀಗೆ ಆ ವೃಕಾಸುರನು ಸರ್ವಲೋಕ ಭಯಂಕರವಾದ ವರ ವನ್ನು ಕೇಳಿದೊಡನೆ, ರುದ್ರನಿಗೆ ಮನಸ್ಸಿನಲ್ಲಿ ಆಕ್ರೋಶವು ಹುಟ್ಟಿತು. ಹಾಗಿದ್ದರೂ ಆ ಕೋಪವನ್ನು ಹೊರಕ್ಕೆ ತೋರಿಸದೆ, ಸ್ವಲ್ಪಹೊತ್ತಿನ ವರೆಗೆ ಮನಸ್ಸಿನಲ್ಲಿಯೇ ಪರಿತಪಿಸಿ ಆಡಿದ ಮಾತನ್ನು ತಪ್ಪಲಾರದ ನಿರ್ಬಂಧ ದಲ್ಲಿ ಸಿಕ್ಕಿಬಿದ್ದು ಹಾವಿಗೆ ಹಾಲೆರೆದಂತೆ ಆ ವರವನ್ನೇ ಕೊಟ್ಟುಬಿಟ್ಟನು ಕೃತ ಘ್ನನಾದ ಆದಾನವನು,ರುದ್ರನು ತನಗೆ ಕೊಟ್ಟ ವರವು ನಿಜವೋ ಸುಳ್ಳೋ ಎಂಬುದನ್ನು ಪರೀಕ್ಷಿಸಬೇಕೆಂದು, ಆ ರುದ್ರನ ತಲೆಯಮೇಲೆಯೇ ಕೈಯಿಡು

ವುದಕ್ಕೆ ಹೋದನು. ಆಗ ರುದ್ರನು ಭಯಪಟ್ಟು ಓಡುವುದಕ್ಕಾರಂಭಿಸಿದನು. ರಾಕ್ಷಸನೂ ಅವನನ್ನು ಬೆನ್ನಟ್ಟಿದನು. ರುದ್ರನು ಗಡಗಡನೆ ನಡುಗುತ್ತ, ಭೂಮ್ಯಾಕಾಶಗಳ, ಮತ್ತು ದಿಕ್ಕುಗಳ ಎಲ್ಲೆಯವರೆಗೂ ಓಡಿದನು. ಊರ್ಧ್ವಾಧೋಲೋಕಗಳೆಲ್ಲವನ್ನೂ ಸುತ್ತಿಬಂದನು. ಕಂಡಕಂಡವರನ್ನೆಲ್ಲಾ ಮರೆಹೊಕ್ಕನು. ಬ್ರಹ್ಮಾದಿದೇವತೆಗಳೂ ಅದಕ್ಕೆ ಪ್ರತಿಕ್ರಿಯೆಯೇನೆಂದು ತಿಳಿಯಿಲೆ ಭಯಗ್ರಸ್ತರಾಗಿ ಸುಮ್ಮನಿದ್ದರು ಕೊನೆಗೆ ರುದ್ರನು, ದಿವ್ಯತೇಜೋವಿಶಿಷ್ಟವಾಗಿಯೂ, ಅಪ್ರಾಕೃತವಾಗಿಯೂ ಇರುವ *ವೈಕುಂಠಕ್ಕೆ ಹೋದನು ಅಲ್ಲಿ ಶ್ರೀಮನ್ನಾರಾಯಣನು, ಸರ್ವಭೂತದಯಾಪರರಾಗಿಯೂ, ಶಾಂತರಾಗಿಯೂ ಇರುವ ಭಕ್ತರ ಸೇವೆಯನ್ನು ಕೈಕೊಳ್ಳುತ್ತ ವಿನೋದದಿಂದಿರುತ್ತಿದ್ದನು. ಓ! ಪರೀಕ್ಷಿದ್ರಾಜಾ! ಅಲ್ಲಿದ್ದ ಶ್ರೀಮನ್ನಾರಾಯಣನು ಭಯದಿಂದ ತನ್ನ ಬಳಿಗೆ ಓಡಿ ಬರುತ್ತಿರುವ ರುದ್ರನನ್ನೂ. ಅವನನ್ನು ಬೆನ್ನಟ್ಟಿ ಬರುತಿಪ್ಪ ಅಸುರನನ್ನೂ ಕಂಡೊಡನೆ,ನಿಜಸ್ಥಿತಿಯನ್ನು ತಿಳಿದುಕೊಂಡು, ತನ್ನ ಯೋಗಮಾಯಾಪ್ರಭಾವದಿಂದ ಒಂದು ವಟುವೇಷವನ್ನು ಧರಿಸಿದನು. ಮೌಂಜಿ, ಕೃಷ್ಣಾಜಿನ, ದಂಡ, ಪದ್ಮಾಕ್ಷಮಾಲಿಕೆ, ಮುಂತಾದುವುಗಳನ್ನು ಧರಿಸಿ, ತೇಜಸ್ಸಿನಿಂದ ಅಗ್ನಿಯಂತೆ ಜ್ವಲಿಸುತ್ತ, ದೂರದಿಂದಲೇ ಆ ರಾಕ್ಷಸನನ್ನು ಇದಿರುಗೊಂಡು ಬಂದನು ಕೈಯಲ್ಲಿರುವ ಪವಿತ್ರದೊಡನೆ ಬಹಳ ವಿನಯದಿಂದ ಆ ರಾಕ್ಷಸನಿಗೆ ನಮಸ್ಕರಿಸಿ ಹೀಗೆಂದು ಹೇಳುವನು ‚‚ಓ! ಶಕುನಿಪುತ್ರಾ! ಇದೇನು! ನೀನು ಬಹಳ ಆಯಾಸಪಟ್ಟಂತೆ ತೋರುವುದು. ಬಹುದೂರದಿಂದ ನಡೆದು ಬಂದಹಾಗಿದೆ ಸ್ವಲ್ಪಹೊತ್ತು ವಿಶ್ರಮಿಸಿಕೊಳ್ಳಬಹುದಲ್ಲವೆ! ನಿನ್ನ ಶರೀರವನ್ನು ಅಷ್ಟು ಆಯಾಸಕ್ಕೆ ಗುರಿಪಡಿಸಬಹುದೆ? ಮನುಷ್ಯನಿಗೆ ದೇಹಕ್ಕಿಂತಲೂ ಪ್ರಿಯವಾದುದಿಲ್ಲ! ಸರ್ವಾಭೀಷ್ಟಗಳಿಗೂ ಈ ದೇಹವೇ ಮೂಲವು. ಓ! ರಾಕ್ಷಸಸಾರ್ವಭೌಮಾ! ನೀನು ಇಷ್ಟು ಶ್ರಮಪಟ್ಟು ಇಲ್ಲಿಗೆ ಬಂದ ಕಾರ್ಯವೇನೋ ಅದನ್ನು ನನಗೆ ತಿಳಿಸಬಹುದಾಗಿದ್ದರೆ ತಿಳಿಸು! ಮನುಷ್ಯನು, ತಾನು ನಡೆಸಬೇಕಾದ ಕಾರ್ಯವನ್ನು ತನ್ನ

* ಈ ವೈಕುಂಠವೆಂಬುದು ಮುಕ್ತರಿಗೆ ಪ್ರಾಪ್ಯವಾದ ಪರಮಾಕಾಶವಲ್ಲ. ಅಂಡಗಳಲ್ಲಿಯೇ ಸೇರಿದ ಬಿಂದಾನೊಂದು ವಿಷ್ಣುಲೋಕವೆ-ದು ಗ್ರಾಹ್ಯವು.

ಆಪ್ತರೊಡನೆ ಆಲೋಚಿಸಿಯೇ ನಡೆಸುವುದು ಮೇಲಲ್ಲವೆ” ಎಂದನು. ಹೀಗೆ ಮಾಯಾವಟುವಾದ ಭಗವಂತನು, ಅಮೃತದಂತೆ ಮಧುರವಾದ ಮಾತಿನಿಂದ ಕೇಳಲು, ವೃಕಾಸುರನು ಆ ಮಾತಿಗೆ ಮರುಳಾಗಿ, ಸ್ವಲ್ಪಹೊತ್ತು ದಣುವಾರಿಸಿಕೊಂಡು, ಹಿಂದೆ ನಡೆದ ಸಂಗತಿಗಳೆಲ್ಲವನ್ನೂ ಯಥಾವತ್ತಾಗಿ ತಿಳಿಸಿದನು. ಅದನ್ನು ಕೇಳಿದೊಡನೆ ಭಗವಂತನು ಅಟ್ಟಹಾಸದಿಂದ ನಕ್ಕು “ಅಸುರೇಂದ್ರಾ! ಇಷ್ಟೇ ಅಲ್ಲವೆ? ಈ ರುದ್ರನ ಮಾತನ್ನು ನಾವು ಎಷ್ಟು ಮಾತ್ರವೂ ನಂಬಲಾರೆವು. ಅವನ ರೂಪವನ್ನುನೋಡಿದರೆ ನಿನಗೆ ತಿಳಿಯುವುದಿಲ್ಲವೆ? ಈತನು ಅಮಂಗಳಸ್ವರೂಪನಾಗಿ, ಭೂತ ಪ್ರೇತ ಪಿಶಾಚಗಳಿಗೆ ತಾನೇ ಅಧಿಪತಿಯೆನಿಸಿಕೊಂಡಿರುವನು. ಪಿಶಾಚದ ಮಾತನ್ನು ಯಾರಾದರೂ ನಂಬುವರೆ! ದಾನವೇಂದ್ರಾ! ನೀನು ಇವನನ್ನು ಜಗದ್ಗುರುವೆಂದು ತಿಳಿದು, ಇವನ ಮಾತನ್ನೇ ನಂಬುವುದಾದರೆ, ನಾವು ಹೇಳತಕ್ಕದ್ದೇನಿದೆ? ಅಷ್ಟೇಕೆ? ನಿನಗೇನು ತಲೆಯಿಲ್ಲವೆ? ನಿನ್ನ ತಲೆಯಮೇಲೆ ನಿನ್ನ ಕೈಯಿಟ್ಟು ನೋಡಿದರೆ ಅವನ ಮಾತು ನಿಜವೋ ಸುಳ್ಳೋ ಎಂಬುದನ್ನು ಸುಲಭವಾಗಿ ತಿಳಿಯಬಹುದಲ್ಲವೆ? ಅವನ ಮಾತು ಸುಳ್ಳೆಂಬುದು ನಿನಗೆ ತಿಳಿದೊಡನೆ ನೀನು ಅವನನ್ನು ಹಿಡಿದು, ತಿರುಗಿ ಅವನು ಹೀಗೆ ಮತ್ತೊಬ್ಬನನ್ನು ಸುಳ್ಳಾಡಿ ವಂಚಿಸದಂತೆ ತೀರಿಸಿಬಿಡಬಹುದು” ಎಂದನು. ಹೀಗೆ ಭಗವಂತನು ಮಂದಹಾಸಪೂರ್ವಕವಾದ ಮಧುರವಾಕ್ಯಗಳಿಂದ ಅವನನ್ನು ಮೋಹಗೊಳಿಸಲು, ಅಲ್ಪಬುದ್ಧಿಯುಳ್ಳ ಆ ವೃಕಾಸುರನು, ತನ್ನನ್ನೇ ತಾನು ಮರೆತು ತನ್ನ ತಲೆಯಮೇಲೆಯೇ ಕೈಯಿಟ್ಟನು. ಆ ಕ್ಷಣವೇ ವಜ್ರಹತವಾದ ಪರ್ವತದಂತೆ ಅವನ ತಲೆಯು ಸೀಳಿ ಹೋಯಿತು. ಆಗ ಆಕಾಶದಲ್ಲಿ ನಾನಾಕಡೆಯಿಂದ ಜಯಶಬ್ದಗಳೂ, ನಮಶ್ಶಬ್ದಗಳೂ, ಸಾಧುವಾದಗಳೂ ಹೊರಟುವು ದೇವತೆಗಳೂ, ಋಷಿಗಳೂ, ಪುಷ್ಪವರ್ಷವನ್ನು ಕರೆದರು ರುದ್ರನೂ ಸಂಕಟದಿಂದ ಮುಕ್ತನಾದನು. ಆಗ ವಿಷ್ಣುವು ಶಿವನನ್ನು ಕುರಿತು. “ಓ ದೇವೋತ್ತಮಾ! ಮಹಾದೇವಾ! ಈ ಪಾಪಿಯು ತನ್ನ ಪಾಪದಿಂದಲೇ ಹತನಾದನು ದೊಡ್ಡವರಲ್ಲಿ ಅಪರಾಧಮಾಡಿದಮೇಲೆ ಯಾವ ಪ್ರಾಣಿಯುತಾನೇ ಕ್ಷೇಮದಿಂದಿರುವುದು? ಲೋಕಗುರುವಾಗಿ, ವಿಶ್ವೇಶ್ವರನೆನಿಸಿಕೊಂಡ ನಿನ್ನಲ್ಲಿ ಅಪರಾಧಿಯಾದ

ಈ ದುರಾತ್ಮನಿಗೆ ಈ ಸ್ಥಿತಿಯುಂಟಾದುದು ನ್ಯಾಯವೇ" ಎಂದನು. ಓ! ಪರೀಕ್ಷಿದ್ರಾಜಾ! ಹೀಗೆ ಪರಾತ್ಪರನಾಗಿಯೂ, ಸಮಸ್ತಯೋಗಶಕ್ತಿಗಳಿಗೂ ಸಮುದ್ರನಂತೆ ಆಧಾರನಾಗಿಯೂ, ಸಾಕ್ಷಾತ್ಪರಮಾತ್ಮನಾಗಿಯೂ ಇರುವ ಶ್ರೀ ಹರಿಯು, ರುದ್ರನ ಕಷ್ಟವನ್ನು ಬಿಡಿಸಿದ ಈ ಚರಿತ್ರವನ್ನು ಹೇಳತಕ್ಕವನೂ, ಕೇಳತಕ್ಕವನೂ, ಸಂಸಾರದುಃಖದಿಂದಡೂ, ಶತ್ರುಭಯದಿಂದಲೂ ಮುಕ್ತನಾಗುವನು. ಇದು ಎಂಬತ್ತೆಂಟನೆಯ ಅಧ್ಯಾಯವು.

---

## ತ್ರಿಮೂರ್ತಿ ತಾರತಮ್ಯಪರೀಕ್ಷೆ.

ಓ! ಪರೀಕ್ಷಿದ್ರಾಜಾ! ಸರಸ್ವತೀನದೀತೀರದಲ್ಲಿ ಒಮ್ಮೆ ಋಷಿಗಳು ಸತ್ರಯಾಗವನ್ನು ನಡೆಸುತಿದ್ದರು ಆಗ ಆಋಷಿಗಳ ಗೋಷ್ಠಿಯಲ್ಲಿ, ತ್ರಿಮೂರ್ತಿಗಳಲ್ಲಿ ಯಾರುಮೇಲೆಂಬ ವಿಚಾರವು ಹುಟ್ಟಿತು.ಆಗ ಋಷಿಗಳೆಲ್ಲರೂ ಸೇರಿ ಬ್ರಹ್ಮಪುತ್ರನಾದ ಭೃಗುಮಹರ್ಷಿಯನ್ನು ಕುರಿತು ಈ ವಿಚಾರವನ್ನು ಪರೀಕ್ಷಿಸಿ ತಿಳಿದು ಬರಬೇಕೆಂದು ಪ್ರಾರ್ಥಿಸಿದರು. ಒಡನೆಯೇ ಭೃಗುವು ಅಲ್ಲಿಂದ ಹೊರಟು. ಮೊದಲು ಬ್ರಹ್ಮಸಭೆಗೆ ಹೋದನು. ಅಲ್ಲಿ ಬ್ರಹ್ಮನ ಗುಣವನ್ನು ಪರೀಕ್ಷಿಸಬೇಕೆಂಬ ಉದ್ದೇಶದಿಂದ, ಆ ಸಭೆಗೆ ಬಂದಾಗಲೂ ಅವನಿಗೆ ಕೈಮುಗಿಯದೆ,ಅವನನ್ನು ಸ್ತೋತ್ರಮಾಡದೆ ಸುಮ್ಮನೆ ನಿಂತನು ಅದನ್ನು ನೋಡಿ ಬ್ರಹ್ಮನಿಗಾದರೋ ಮನಸ್ಸಿನಲ್ಲಿ ಅತ್ಯಾಕ್ರೋಶವು ಹುಟ್ಟಿತು ತೇಜಸ್ಸಿನಿಂದ ಜ್ವಲಿಸುವಂತೆ ಕೋಪದಿಂದ ಆತನನ್ನು ನೋಡಿದನು. ಆದರೆ ತನ್ನ ಮ ದ ಆ ಭೃಗುವಿನಲ್ಲಿ ಉಕ್ಕಿಬರುತ್ತಿರುವ ಆ ಕೋಪವನ್ನು ಉಪಯೋಗಿಸಲಾರದೆ, ಜಲದಿಂದ ಅಗ್ನಿಯನ್ನು ಹೇಗೋಹಾಗೆ, ವಿವೇಕದಿಂದ ಕೋಪವನ್ನಡಗಿಸಿ ಶಾಂತಿಯನ್ನು ವಹಿಸಿ ಸುಮ್ಮನಿದ್ದನು. ಆಮೇಲೆ ಭೃಗುವು ಅಲ್ಲಿಂದ ಹೊರಟು ಕೈಲಾಸಕ್ಕೆ ಹೋಗಿ, ರುದ್ರಸಭೆಯನ್ನು ಪ್ರವೇಶಿಸಿದನು. ಈ ಮಹರ್ಷಿಯನ್ನು ಕಂಡೊಡನೆ ಮಹೇಶ್ವರನು, ಎಷ್ಟೋಗೌರವದಿಂದ ಇದಿರೆದ್ದು, ಮುಂದೆ ಬಂದು, ಸಹೋದರಪ್ರೀತಿಯಿಂದ ಅವನನ್ನು ಆಲಿಂಗಿಸಿ ಕೊಳ್ಳುವುದಕ್ಕಾಗಿ ಬಂದನು. ಆಗ ಭೃಗುವು ರುದ್ರನನ್ನು ಕೋಪದಿಂದ ದು



೨೩೮೩ ತ್ರಿಮೂರ್ತಿಗಳಲ್ಲಿ ವಿಷ್ಣುವಿನ ಆಧಿಕ್ಯವು.

ರುಡುರನೆ ನೋಡುತ್ತ "ಮಹೇಶ್ವರಾ! ನೀನು ನನ್ನ ಮೈಯನ್ನು ಮುಟ್ಟ ಬೇಡ! ನೀನು ಲೋಕದ ನಡತೆಯೆಲ್ಲವನ್ನೂ ಬಿಟ್ಟು ದಾರಿತಪ್ಪಿ ನಡೆಯತಕ್ಕ ವನು" ಎಂದು ಆ ರುದ್ರನ ಅಂಗಸ್ಪರ್ಶಕ್ಕೆ ಸಮ್ಮತಿಸದೆಹೋದನು. ಈ ಮಾ ತನ್ನು ಕೇಳಿ ರುದ್ರನ ಕಣ್ಣುಗಳು ಕೆಂಡದಂತೆ ಕೆಂಪಾದುವು. ಶೂಲವನ್ನೆತ್ತಿ ಕೊಂಡು ಆ ಭೃಗುವನ್ನು ಆಕ್ಷಣವೇ ಕೊಂದುಬಿಡುವುದಕ್ಕಾಗಿ ಯತ್ನಿಸಿ ದನು. ಆಗ ಸಮೀಪದಲ್ಲಿದ್ದ ಪಾರ್ವತಿಯು, ಪತಿಯ ಕಾಲಿಗೆ ಬಿದ್ದು, ಸಾಂತ್ವ ವಾಕ್ಯಗಳಿಂದ ಸಮಾಧಾನಪಡಿಸಿದಳು. ಆಮೇಲೆ ಭೃಗುವು ಅಲ್ಲಿಂದಹೊರ ಟು ವೈಕುಂತಕ್ಕೆಹೋದನು.ಆಗ ವಿಷ್ಣುವು ಅಲ್ಲಿ ಸುಖನಿದ್ರೆಯನ್ನು ಮಾಡು ತ್ತಿರಲು, ಭೃಗುವು ನೆಟ್ಟಗೆ ಮುಂದೆಬಂದು, ಲಕ್ಷ್ಮೀದೇವಿಗೆ ನಿವಾಸಭೂತ ವಾದ ಆ ಭಗವಂತನ ವಕ್ಷಸ್ಥಲದಮೇಲೆ ಕಾಲಿಂದೊದೆದನು. ಒಡನೆಯೇ ಶ್ರೀಹರಿಯು ಥಿಗ್ಗನೆ ಹಾಸಿಗೆಯಿಂದೆದ್ದು, ಲಕ್ಷ್ಮೀಸಹಿತನಾಗಿ ಆ ಮಹರ್ಷಿ ಯ ಪಾದಗಳನ್ನು ಹಿಡಿದು ನಮಸ್ಕರಿಸಿ, ಹೀಗೆಂದು ಹೇಳುವನು "ಬ್ರಾಹ್ಮ ಣೋತ್ತಮಾ! ನಿನಗೆ ಸುಖಾಗಮನವೆ? ಈ ಆಸನದಮೇಲೆ ಕುಳಿತು ಸ್ವಲ್ಪ ಹೊತ್ತು ವಿಶ್ರಮಿಸಿಕೊಳ್ಳಬೇಕು. ಸ್ವಾಮೀ! ತಾವು ಬಂದುದನ್ನು ತಿಳಿಯದೆ ನಿದ್ರೆಯಿಂದ ಮೈಮರೆತು ಮಲಗಿದ್ದ ನನ್ನ ಇದೊಂದಪರಾಧವನ್ನು ಮನ್ನಿ ಸಬೇಕು! ಓ ಮಹಾತ್ಮಾ! ನಿನ್ನ ಪಾದತೀರ್ಥವು ಗಂಗಾದಿಪುಣ್ಯತೀರ್ಥಗಳ ನ್ನುಕೂಡ ತೀರ್ಥೀಕರಿಸತಕ್ಕುದು. ಆದುದರಿಂದ ಆ ನಿಮ್ಮ ಪಾದತೀರ್ಥ ಸಂಬಂಧದಿಂದ ತನ್ನನ್ನೂ, ತನ್ನಲ್ಲಿರುವ ಲೋಕಗಳನ್ನೂ, ಲೋಕಪಾಲ ಕರನ್ನೂ ಪಾವನಮಾಡಬೇಕು. ತಮ್ಮ ಪಾದಸ್ಪರ್ಶವಾದುದರಿಂದ ಈಗಲೇ ನಾನು ಪವಿತ್ರನಾದೆನು. ನನ್ನ ಎದೆಯು ಲಕ್ಷ್ಮಿಗೆ ನಿತ್ಯನಿವಾಸ ಯೋಗ್ಯವಾಯಿತು." ಎಂದನು. ಹೀಗೆ ಮೃದುಗಂಭೀರವಾಕ್ಯದಿಂದ ಮಹಾ ವಿಷ್ಣುವು ತನ್ನಲ್ಲಿ ಪ್ರಾರ್ಥಿಸುವುದನ್ನು ಕೇಳಿ ಭೃಗುವು, ಸಂತೋಷದಿಂದ ಮೈಮರೆತು, ಕಣ್ಣುಗಳಲ್ಲಿ ಆನಂದಬಾಷ್ಪವನ್ನು ಸುರಿಸುತ್ತ, ಆ ಭಗವಂತನ ಮುಂದೆ ಯಾವ ಮಾತನ್ನೂ ಆಡುವುದಕ್ಕೆ ತೋರದೆ, ಅಲ್ಲಿಂದ ತಟ್ಟನೆ ಹಿಂತಿರುಗಿ,ಬ್ರಹ್ಮವಾದಿಗಳಾದ ಮುನಿಗಳು ಸತ್ರಯಾಗವನ್ನು ನಡೆಸುತಿದ್ದ ಸ್ಥಳಕ್ಕೆ ಬಂದು, ತಾನು ನಡೆಸಿ ಬಂದ ವೃತ್ತಾಂತಗಳೆಲ್ಲವನ್ನೂ ಅವರಿಗೆ ವಿವ

ರಿಸಿ ತಿಳಿಸಿದನು. ಅದನ್ನು ಕೇಳಿ ಮಹರ್ಷಿಗಳೆಲ್ಲರೂ ಆಶ್ಚರ್ಯಪಡುತ್ತ, ತಾಳ್ಮೆ ಮತ್ತು ಅಪರಾಧಿಗಳಲ್ಲಿಯೂ ಪ್ರೀತಿ, ಮುಂತಾದ ಎಣೆಯಿಲ್ಲದ ಗುಣಗಳಿಂದ ವಿಷ್ಣುವೇ ತ್ರಿಮೂರ್ತಿಗಳಲ್ಲಿ ಅಧಿಕನೆಂದು ಐಕಕಂಠ್ಯದಿಂದ ನಿಶ್ಚಯಿಸಿಕೊಂಡರು « ಲೋಕಕ್ಕೆ ಧರ್ಮಜ್ಞಾನ ವೈರಾಗ್ಯಗಳಾಗಲಿ, ಅಣಿಮಾದ್ಯಷ್ಟಸಿದ್ಧಿಗಳಾಗಲಿ, ಯಾವನಿಂದಲೇ ಲಭಿಸುವುವೋ, ಯಾವನ ಕೀರ್ತಿಯು ಲೋಕಕ್ಕೆ ಸಮಸ್ತಪಾಪಗಳನ್ನೂ ನೀಗಿಸುವುದೋ, ಪ್ರಾಣಿಹಿಂಸಾವಿಮುಖರಾಗಿಯೂ, ಶಾಂತರಾಗಿಯೂ, ಸಮಚಿತ್ತರಾಗಿಯೂ, ವಿರಕ್ತರಾಗಿಯೂ ಇರುವ ಮಹರ್ಷಿಗಳಿಗೆ ಯಾವನು ಪರಮಗತಿಯೆನಿಸಿರುವನೋ. ಶುದ್ಧಸತ್ವವೇ ಯಾವನಿಗೆ ಪ್ರಿಯವಾದ ಮೂರ್ತಿಯೆನಿಸಿರುವುದೋ, ಬ್ರಾಹ್ಮಣರೇ ಯಾವನಿಗೆ ಇಷ್ಟದೇವತೆಗಳಂತಿರುವರೋ, ವಿವೇಕಿಗಳು ಬೇರೊಂದರಲ್ಲಿಯೂ ಆಸೆಯಿಡದೆ, ಯಾವನ ಪಾದಸೇವೆಯೇ ತಮಗೆ ಪರಮಭಾಗ್ಯವೆಂದೆಣಿಸಿರುವರೋ, ಅಂತಹ ಭಗವಂತನು, ತನ್ನ ಯೋಗಮಾಯೆಯಿಂದ ಸತ್ವಾದಿಗುಣಗಳನ್ನು ಕೈಕೊಂಡಾಗ, ದೇವ ದಾವನ ಮನುಷ್ಯರೆಂಬ ಮೂರುಬಗೆಯ ಆಕಾರಗಳಿಂದ ತೋರುವನು. ಶುದ್ಧ ಸತ್ವಮಯವಾದ ಆತನ ಮೂರ್ತಿಯೇ ಆತ್ಮಶುದ್ಧಿಗೆ ಸಾಧನವೆನಿಸಿರುವುದು "ಹೀಗೆಂದು ಸರಸ್ವತೀನದೀತೀರದಲ್ಲಿ ಬ್ರಹ್ಮಸತ್ರಕ್ಕಾಗಿ ನೆರೆದಿದ್ದ ಋಷಿಗಳೆಲ್ಲರೂ ಲೋಕಕ್ಕೆ ಸಂದೇಹನಿವೃತ್ತಿಯಾಗುವಂತೆ ನಿರ್ಣಯವನ್ನು ಮಾಡಿ, ಆ ಪರಮಪುರುಷನ ಪಾದಾರವಿಂದವನ್ನು ಧ್ಯಾನಿಸುತಿದ್ದು ಕೊನೆಗೆ, ಸದ್ಗತಿಯನ್ನು ಹೊಂದಿದರು" ಹೀಗೆಂದು ಶುಕಮುನಿಯು ಪರೀಕ್ಷಿದ್ರಾಜನಿಗೆ ಹೇಳಿದ ತ್ರಿಮೂರ್ತಿಗಳ ಗುಣತಾರತಮ್ಯವನ್ನು, ಸೂತಪೌರಾಣಿಕನು ನೈಮಿಶಾರಣ್ಯವಾಸಿಗಳಾದ ಋಷಿಗಳಿಗೆ ತಿಳಿಸುತ್ತ, ಅವರನ್ನು ಕುರಿತು. ‹‹ಓ ಮಹರ್ಷಿಗಳೆ! ವ್ಯಾಸಪುತ್ರನಾದ ಶುಕಮುನಿಯ ಮುಖಾರವಿಂದಸುಗಂಧದಿಂದ ಮಿಶ್ರವಾಗಿಯೂ, ಸಂಸಾರಭಯವನ್ನು ನೀಗಿಸತಕ್ಕುದಾಗಿಯೂ ಇರುವ ಪರಮಪುರುಷನ ಕಥಾಮೃತವನ್ನು, ಆಗಾಗ ಕರ್ಣಪುಟಗಳಿಂದ ಪಾನಮಾಡತಕ್ಕವನಿಗೆ, ಸಂಸಾರಮಾರ್ಗದಲ್ಲಿ ಬಹುಕಾಲದಿಂದ ಸುತ್ತಿದ ಶ್ರಮವೆಲ್ಲವೂ ಕ್ಷಣಮಾತ್ರದಲ್ಲಿ ನೀಗುವುದು" ಎಂದನು.

ತಿರುಗಿ ಶುಕನು ಪರೀಕ್ಷಿದ್ರಾಜನನ್ನು ಕುರಿತು “ಓ ರಾಜೇಂದ್ರಾ ಕೇಳು! ಒಮ್ಮೆ ದ್ವಾರಕೆಯಲ್ಲಿ, ಒಬ್ಬಾನೊಬ್ಬಬ್ರಾಹ್ಮಣಪತ್ನಿಗೆ ಒಂದು ಗಂಡುಮಗುವು ಹುಟ್ಟಿ, ಅದು ಭೂಸ್ಪರ್ಶವಾದೊಡನೆ, ಪ್ರಾಣವನ್ನು ಬಿಟ್ಟಿತು. ಬ್ರಾಹ್ಮಣನು ಆ ತನ್ನ ಸತ್ತ ಮಗುವನ್ನು ತಂದು, ಅರಮನೆಯ ಬಾಗಿಲಲ್ಲಿಟ್ಟು ಮಹಾವ್ಯಸನದಿಂದ ಹೀಗೆಂದು ವಿಲಪಿಸತೊಡಗಿದನು. “ಅಯ್ಯೋ! ಈ ಅನ್ಯಾಯವುಂಟೆ? ಬ್ರಾಹ್ಮಣದ್ವೇಷಿಗಳಾಗಿಯೂ,ಮೂರ್ಖಬುದ್ಧಿಯುಳ್ಳವರಾಗಿಯೂ, ಬೇಡರಂತೆ ದಯಾಶೂನ್ಯರಾಗಿಯೂ, ವಿಷಯಲಂಪಟರಾಗಿಯೂ ಇರುವ ಕ್ಷತ್ರಿಯಾಧಮರು ರಾಜ್ಯಾಧಿಕಾರವನ್ನು ನಡೆಸುವುದರಿಂದಲ್ಲವೇ ಇಂತಹ ವಿಪರೀತಗಳೆಲ್ಲವೂ ನಡೆಯುವುವು. ಆ ಕ್ಷತ್ರಿಯರ ಕರ್ಮದೋಷದಿಂದಲೇ, ನನ್ನ ಶಿಶುವು ಹುಟ್ಟಿದಾಗಲೇ ಸತ್ತಿತು. ಪ್ರಾಣಿಹಿಂಸೆಯಿಂದಲೇ ವಿನೋದಿಸತಕ್ಕವರಾಗಿಯೂ, ದುಶ್ಶೀಲರಾಗಿಯೂ, ಇಂದ್ರಿಯವನ್ನು ಜಯಿಸಲಾರದ ಕಾಮುಕರಾಗಿಯೂ ಇರುವ ಇಂತಹ ರಾಜರ ಕೈಕೆಳಗೆ ಬದುಕುವ ಪ್ರಜೆಗಳಿಗೆ, ದುಃಖವೂ ದಾರಿದ್ರ್ಯವೂ ಎಂದಿಗೂ ತಪ್ಪಿದುದಲ್ಲ!” ಎಂದು ಬಾಯಿಗೆ ಬಂದಹಾಗೆ ರಾಜನನ್ನು ನಿಂದಿಸಿ ಹೊರಟು ಹೋದನು ಆಮೇಲೆ ಅದೇ ಬ್ರಾಹ್ಮಣನಿಗೆ ಮತ್ತೊಂದು ಶಿಶುವು ಜನಿಸಿ, ಅದೂ ಭೂಸ್ಪರ್ಶವಾದೊಡನೆ ಮೃತಿಹೊಂದಿತು. ಆಗಲೂ ಹಿಂದಿನಂತೆಯೇ ಆ ಬ್ರಾಹ್ಮಣನು ಆ ಮಗುವನ್ನು ತಂದು, ಅರಮನೆಯ ಬಾಗಿಲಲ್ಲಿಟ್ಟು ಹಿಂದಿನ ಹಾಡುಗಳನ್ನೇ ಹಾಡಿ ಹೊರಟುಹೋದನು. ಇದೇವಿಧವಾಗಿ ಆ ಬ್ರಾಹ್ಮಣನಿಗೆ ಎಂಟುಶಿಶುಗಳು ಹುಟ್ಟಿ ಸತ್ತುವು. ಒಂದೊಂದನ್ನೂ ಅವನು ರಾಜದ್ವಾರದಲ್ಲಿ ತಂದಿಟ್ಟು, ಅದೇಮಾತುಗಳನ್ನು ಹೇಳಿಹೋಗುತ್ತಿದ್ದನು. ಒಂಭತ್ತನೆಯ ಶಿಶುವು ಹುಟ್ಟಿ ಅದೂ ಸತ್ತಿತು. ಮೊದಲಿನಂತೆ ಆ ಬ್ರಾಹ್ಮಣನು ಆ ಶಿಶುವನ್ನು ತಂದು,ಅರಮನೆಯ ಬಾಗಿಲಲ್ಲಿಟ್ಟು ಹಿಂದಿನಮಾತುಗಳನ್ನೇ ಹೇಳುತ್ತಿರುವಾಗ,ಕೃಷ್ಣಾರ್ಜುನರಿಬ್ಬರೂ ಅದನ್ನು ಕೇಳುತಿದ್ದರು. ಆಗ ಅರ್ಜುನನು ಆ ಬ್ರಾಹ್ಮಣನನ್ನು ಕುರಿತು “ಓ ಬ್ರಾಹ್ಮಣೋತ್ತಮಾ! ಏನಿದು! ನಿಮ್ಮ ಊರಿನಲ್ಲಿ ಧನುರ್ಧಾರಿಗಳಾದ ಕ್ಷತ್ರಿಯರೊಬ್ಬರಾದರೂ ಇಲ್ಲವೇನು? ನಿಮ್ಮ ರಾಜನಿಗೆ ನಿಮ್ಮಂತಹ ಬ್ರಾಹ್ಮಣರಲ್ಲಿ ಕರುಣೆಯಿಲ್ಲದಿದ್ದರೂ ಹೋ

ಗಲಿ: ಕ್ಷತ್ರಿಯನಾಗಿ ಹುಟ್ಟಿ ಧನುಸ್ಸನ್ನು ಹಿಡಿಯಬಲ್ಲವನಾದರೂ ಒಬ್ಬನೂ ಇಲ್ಲವೆ? ಇಲ್ಲಿನ ಕ್ಷತ್ರಿಯರೆಲ್ಲರೂ ಸತ್ರಯಾಗದಲ್ಲಿ ಸೇರಿದ ಬ್ರಾಹ್ಮಣರಂತೆ ನಿಶ್ಚಿಂತರಾಗಿ ತಿಂದು ಮಲಗುವಂತಿದೆ! ಯಾವ ದೇಶದಲ್ಲಿ ಬ್ರಾಹ್ಮಣರು, ಹೆಂಡಿರುಮಕ್ಕಳನ್ನೂ, ಹಣಕಾಸುಗಳನ್ನೂ ಕಳೆದುಕೊಂಡು ದುಃಖಕ್ಕೀಡಾಗುವರೋ,ಅಲ್ಲಿನ ರಾಜರು, ಹೊಟ್ಟೆಹೊರೆಯುವುದಕ್ಕಾಗಿ ಕ್ಷತ್ರಿಯ ವೇಷವನ್ನು ಧರಿಸಿದ ನಟರೇಹೊರತು ಬೇರೆಯಲ್ಲ! ಬ್ರಾಹ್ಮಣಾ! ನೀನು ಚಿಂತಿಸಬೇಡ! ನಿಮ್ಮ ಭಾಗಕ್ಕೆ ನಾನಿರುವೆನು. ನಿನಗೆ ಇನ್ನುಮೇಲೆ ಹುಟ್ಟತಕ್ಕ ಪುತ್ರನನ್ನು ಇಲ್ಲಿದ್ದಹಾಗೆಯೇ ನಾನು ರಕ್ಷಿಸಿ, ತಾಯಿತಂದೆಗಳಾದ ನಿಮ್ಮ ದುಃಖವನ್ನು ನೀಗಿಸುವೆನು. ಈ ಪ್ರತಿಜ್ಞೆಯನ್ನು ನಾನು ನಡೆಸಲಾರದೆ ಹೋದಪಕ್ಷದಲ್ಲಿ, 'ನನ್ನ ದೇಹವನ್ನು ಅಗ್ನಿಜ್ವಾಲೆಗೆ ಆಹುತಿಮಾಡಿ ಆ ದೋಷಪರಿಹಾರವನ್ನು ಮಾಡಿಕೊಳ್ಳುವೆನು" ಎಂದನು. ಅದಕ್ಕಾ ಬ್ರಾಹ್ಮಣನು "ಅಯ್ಯಾ! ಬಹಳ ಚೆನ್ನಾಯಿತು! ಬಲರಾಮನಾಗಲಿ, ಕೃಷ್ಣನಾಗಲಿ, ಮಹಾಧನುರ್ಧಾರಿಯಾದ ಪ್ರದ್ಯುಮ್ನನಾಗಲಿ, ರಥಿಕರಲ್ಲಿ ಅಸಮಾನನೆನಿಸಿಕೊಂಡ ಅನಿರುದ್ಧನಾಗಲಿ,ನನ್ನ ಪುತ್ರನನ್ನು ರಕ್ಷಿಸಲಾರದೆಹೋದರು ಜಗದೀಶ್ವರರೆನಿಸಿಕೊಂಡ ಅಂತವರಿಗೇ ದುಸ್ಸಾಧ್ಯವಾದ ಕಾರ್ಯವು ನಿನ್ನಿಂದ ಸಾಧ್ಯವೆ? ವಿವೇಕವಿಲ್ಲದೆ ನೀನು ಹೀಗೆ ಪ್ರತಿಜ್ಞೆಯನ್ನು ಮಾಡಬೇಡ! ನನಗೇನೋ ಆ ಕಾರ್ಯವು ನಿನ್ನಿಂದಾಗುವುದೆಂಬ ನಂಬಿಕೆಯಿಲ್ಲ" ಎಂದನು. ಅದಕ್ಕಾ ಅರ್ಜುನನು, ಆ ಬ್ರಾಹ್ಮಣನನ್ನು ನೋಡಿ ನಗುತ್ತ, "ಓ ಬ್ರಾಹ್ಮಣಾ! ನನ್ನನ್ನು ಆ ಬಲರಾಮನೆಂದೂ, ಕೃಷ್ಣನೆಂದೂ, ಪ್ರದ್ಯುಮ್ನಾನಿರುದ್ಧರೆಂದೂ ತಿಳಿಯಬೇಡ! ನಾನು ಯಾರೆಂದು ಬಲ್ಲೆ! ನಾನು ಅರ್ಜುನನು! ನನ್ನ ಧನುಸ್ಸು ಗಾಂಡೀವವು. ಓ ವೈದಿಕಬ್ರಾಹ್ಮಣಾ! ನನ್ನ ವೀರ್ಯವು ಮುಕ್ಕಣ್ಣನನ್ನೂ ಮೆಚ್ಚಿಸಿರುವುದು. ನನ್ನನ್ನು ಸಾಧಾರಣನೆಂದು ತಿಳಿದು ಅಲಕ್ಷ್ಯಮಾಡದಿರು! ನಾನು ಮೃತ್ಯುವಿನೊಡನೆಯಾದರೂ ಹೋರಾಡಿ ನಿನ್ನ ಮುದ್ದುಮಗುವನ್ನು ಬದುಕಿಸದೆ ಬಿಡಲಾರೆನು," ಎಂದನು. ಅರ್ಜುನನು ಇಷ್ಟುವಿಧವಾಗಿ ಭರವಸೆವನ್ನು ಕೊಟ್ಟಮೇಲೆ, ಆ ಬ್ರಾಹ್ಮಣನಿಗೆ ಅವನ ಮಾತಿನಲ್ಲಿ ನಂಬಿಕೆ ಹುಟ್ಟಿತು. ಆಗ ಆ ಬ್ರಾಹ್ಮಣನು ಧೈರ್ಯದಿಂದ ಹಿಂತಿರುಗಿ ಮನೆಗೆ

ಬಂದು, ಅರ್ಜುನನ ವೀರ್ಯವನ್ನು ನೋಡಬೇಕೆಂದು ನಿರೀಕ್ಷಿಸುತಿದ್ದನು ಆ ಬ್ರಾಹ್ಮಣನ ಪತ್ನಿಯು ಮತ್ತೊಮ್ಮೆ (ಹತ್ತನೆಯ ಸಾರಿ) ಗರ್ಭಿಣಿಯಾದಳು. ಪ್ರಸವಕಾಲವೂ ಸಮೀಪಿಸಿತು. ಆಗ ಬ್ರಾಹ್ಮಣನು ಅರ್ಜುನನ ಬಳಿಗೆ ಓಡಿಬಂದು "ಅರ್ಜುನಾ! ನನ್ನ ಪತ್ನಿಗೆ ಪ್ರಸವಕಾಲವಾಗಿರುವುದು. ನನ್ನ ಶಿಶುವನ್ನು ಮೃತ್ಯುವಿನಿಂದ ರಕ್ಷಿಸಬೇಕು" ಎಂದು ಪ್ರಾರ್ಥಿಸಿದನು. ಒಡನೆಯೇ ಅರ್ಜುನನು ಶುದ್ಧಾಚಮನವನ್ನು ಮಾಡಿ,ಮಹೇಶ್ವರನಿಗೆ ನಮಸ್ಕರಿಸಿ, ದಿವ್ಯಾಸ್ತ್ರಗಳನ್ನು ಸಂಗ್ರಹಿಸಿಟ್ಟುಕೊಂಡು, ತನ್ನ ಗಾಂಡೀವಧನುಸ್ಸಿಗೆ ನಾಣೇರಿಸಿದನು. ಅಲ್ಲಿದ್ದಹಾಗೆಯೇ ನಾನಾಬಗೆಯ ಅಸ್ತ್ರಗಳನ್ನು ಪ್ರಯೋಗಿಸಿ, ಆ ಬ್ರಾಹ್ಮಣಪತ್ನಿಯ ಪ್ರಸವಗೃಹದಸುತ್ತಲೂ ಬಾಣಗಳಿಂದಲೇ ಕೋಟೆಯನ್ನು ಕಟ್ಟಿದನು. ಆ ಮನೆಯ ಕೆಳಗೂ, ಮೇಲೆಯೂ, ಅಡ್ಡಲಾಗಿಯೂ ಶರಪಂಜರವನ್ನು ಬಿಗಿದನು. ಆಮೇಲೆ ಸ್ವಲ್ಪಹೊತ್ತಿನೊಳಗಾಗಿಯೇ ಆ ಬ್ರಾಹ್ಮಣಪತ್ನಿಯು, ಒಂದು ಗಂಡುಮಗುವನ್ನು ಪ್ರಸವಿಸಿದಳು. ಅದು ಹುಟ್ಟಿದೊಡನೆ ಒಂದಾವರ್ತಿ ಗಟ್ಟಿಯಾಗಿ ಅತ್ತು, ಹಾಗೆಯೇ ಪ್ರಾಣವನ್ನು ಬಿಟ್ಟಿತು. ಪ್ರಾಣವನ್ನು ಬಿಟ್ಟುದುಮಾತ್ರವೇ ಅಲ್ಲ! ಸ್ವಲ್ಪಹೊತ್ತಿನೊಳಗಾಗಿ ಆ ಮೃತಶರೀರವೂ ಆಕಾಶಮಾರ್ಗವಾಗಿ ಎಲ್ಲಿಯೋ ಅದೃಶ್ಯವಾಗಿ ಹೋಯಿತು. ಒಡನೆಯೇ ಆ ಬ್ರಾಹ್ಮಣನು, ಅರ್ಜುನನು ಕೃಷ್ಣನೊಡನೆ ನಿಂತಿದ್ದ ಸ್ಥಳಕ್ಕೆ ಬಂದು "ಅಯ್ಯೋ! ಷಂಡನಾದ ಈ ಅರ್ಜುನನ ಬಾಯಿಯ ಜಂಭಕ್ಕೆ ಮರುಳಾಗಿ,ನಾನು ಮೋಸಹೋದೆನಲ್ಲಾ! ನನ್ನ ಬುದ್ಧಿಯನ್ನು ಸುಡಬೇಕಲ್ಲವೆ? ಮಹಾವೀರನೆನಿಸಿಕೊಂಡ ಬಲರಾಮನೂ, ಕೃಷ್ಣನೂ, ಪ್ರದ್ಯುಮ್ನನೂ, ಅನಿರುದ್ಧನೂ, ನನ್ನ ಶಿಶುವನ್ನು ರಕ್ಷಿಸಲಾರದೆ ಹೋಗಿರುವಾಗ, ಮತ್ತೊಬ್ಬರಿಂದ ಸಾಧ್ಯವೆ? ನಾನು ಇವನ ಮಾತನ್ನು ನಂಬಬಹುದೆ! ಆತ್ಮಸ್ತುತಿಯಿಂದ ನನ್ನನ್ನು ವಂಚಿಸಿದ ಆ ಅರ್ಜನನೂ, ಅವನ ಧನುಸ್ಸೂ ಹಾಳಾಗಲಿ! ದೈವವು ಕಿತ್ತುಕೊಂಡು ಹೋದುದನ್ನು ತಾನು ತರಿಸಿಕೊಡುವುದಾಗಿ ಹೇಳಿದ ಆ ಅರ್ಜುನನ ದುರ್ಬುದ್ಧಿಯನ್ನು ಸುಡಬೇಕಲ್ಲವೆ?" ಎಂದು ಆ ಬ್ರಾಹ್ಮಣನು ನಿಂದಿಸುತ್ತಿರಲು, ಅರ್ಜುನನು ಮನಸ್ಸಿನಲ್ಲಿ ಬಹಳವಾಗಿ ಸಂಕಟಪಟ್ಟು, ಹೇಗಾದರೂ

ತಾನು ಮಾಡಿದ ಪ್ರತಿಜ್ಞೆಯನ್ನು ನಿರ್ವಹಿಸಬೇಕೆಂಬ ದೃಢಸಂಕಲ್ಪದಿಂದ, ಸಮಸ್ತಲೋಕಗಳನ್ನೂ ಸುತ್ತಿಬರತಕ್ಕ ಯೋಗವಿದ್ಯೆಯನ್ನವಲಂಬಿಸಿ, ಆ ಬ್ರಾಹ್ಮಣನ ಮಗುವನ್ನು ಕಂಡುಹಿಡಿಯಬೇಕೆಂದು ಯಮನ ರಾಜಧಾನಿಯಾದ ಸಂಯಮಿನೀಪಟ್ಟಣಕ್ಕೆ ಹೋದನು. ಅಲ್ಲಿ ಆ ಶಿಶುವನ್ನು ಕಾಣದೆ ಇಂದ್ರನ ಪಟ್ಟಣಕ್ಕೆ ಹೋದನು ಅಲ್ಲಿಯೂ ಆ ಶಿಶುವು ಕಾಣಿಸಲಿಲ್ಲ. ಅಲ್ಲಿಂದ ಅಗ್ನಿ, ವರುಣ, ನಿರುತಿ, ವಾಯು, ಮುಂತಾದ ದಿಕ್ಪಾಲಕರ ಪಟ್ಟಣವೆಲ್ಲವನ್ನೂ ಹಡುಕಿ, ಅಲ್ಲಿಯೂ ಆ ಶಿಶುವನ್ನು ಕಾಣದೆ, ಅಲ್ಲಿಂದ ರಸಾತಲಕ್ಕೆ ಹೋದನು. ಅಲ್ಲಿಂದ ನಾಕಪೃಷ್ಠಕ್ಕೆ ಹೋದನು. ಹಾಗೆಯೇ ಆಯುಧಪಾಣಿಯಾಗಿ ಸಮಸ್ತಲೋಕಗಳನ್ನೂ ಸುತ್ತಿಬಂದನು. ಆ ಬ್ರಾಹ್ಮಣಶಿಶುವು ದೊರೆಯಲಿಲ್ಲ! ಆದರಮೇಲೆ ಹಿಂದೆ ಅರ್ಜುನನು ಆ ಬ್ರಾಹ್ಮಣನಮುಂದೆ ಪ್ರತಿಜ್ಞೆಮಾಡಿದಂತೆ ಅಗ್ನಿಪ್ರವೇಶಮಾಡುವುದಕ್ಕೆ ಸಿದ್ಧನಾಗಿದ್ದನು. ಇಷ್ಟರಲ್ಲಿ ಶ್ರೀಕೃಷ್ಣನು ಅರ್ಜುನನನ್ನು ತಡೆದು, "ಅರ್ಜುನಾ! ಆತುರಪಡಬೇಡ! ಆ ಬ್ರಾಹ್ಮಣಶಿಶುವನ್ನು ನಾನು ತೋರಿಸಿಕೊಡುವೆನು. ನಿನ್ನನ್ನು ನೀನೇ ಅವಮಾನಪಡಿಸಿಕೊಳ್ಳಬೇಡ! ಈಗ ನೀನು! ಆತ್ಮಹತ್ಯೆಯನ್ನು ಮಾಡಿಕೊಂಡರೆ ದೊಡ್ಡ ಅಪಕೀರ್ತಿಗೆ ಗುರಿಯಾಗುವೆ! ಈಗ ನೀನು ನಿನ್ನ ಪ್ರಯತ್ನವನ್ನು ನಿಲ್ಲಿಸಿದಪಕ್ಷದಲ್ಲಿ, ಮನುಷ್ಯರೆಲ್ಲರೂ ನಿನ್ನ ಕೀರ್ತಿಯನ್ನು ಕೊಂಡಾಡುವರು" ಎಂದು ಹೇಳಿ ಅವನನ್ನು ಸಮಾಧಾನಪಡಿಸಿ, ಲೋಕೇಶ್ವರನಾದ ಆ ಭಗವಂತನು, ಅರ್ಜುನನನ್ನೂ ದಿವ್ಯರಥದಮೇಲೆ ಕುಳ್ಳಿರಿಸಿಕೊಂಡು, ಪಶ್ಚಿಮದಿಕ್ಕಿನಕಡೆಗೆ ಹೊರಟನು. ಅದೇದಾರಿಯಲ್ಲಿ ಸಪ್ತದ್ವೀಪಗಳನ್ನೂ, ಆ ದ್ವೀಪಗಳಲ್ಲಿರತಕ್ಕ ಸಪ್ತಕುಲಪರ್ವತಗಳನ್ನೂ, ಸಪ್ತಸಮುದ್ರಗಳನ್ನೂ ದಾಟಿ, ಅದರಿಂದಾಚೆಗೆ ಚಕ್ರವಾಳಪರ್ವತವನ್ನೂ ಅತಿಕ್ರಮಿಸಿ, ಅದರ ಹೊರಗಿನ ಮಹಾಂಧಕಾರವನ್ನು ಪ್ರವೇಶಿಸಿದನು. ಅಲ್ಲಿ ಶೈಬ್ಯ, ಸುಗ್ರೀವ, ಮೇಘಪುಷ್ಪ, ಬಲಾಹಕಗಳೆಂಬ ಅವನ ರಥಾಶ್ವಗಳು, ಆ ಅಂಧಕಾರದಲ್ಲಿ ಕಣ್ಣು ತಿಳಿಯದೆ ತತ್ತಳಿಸುತ್ತಿದ್ದುವು. ಹೀಗೆ ಕುದುರೆಗಳು ಕತ್ತಲೆಯಲ್ಲಿ ದಾರಿತಪ್ಪಿ ಹೋಗುತ್ತಿರುವುದನ್ನು ನೋಡಿ, ಮಹಾಯೋಗೇಶ್ವರನಾದ ಶ್ರೀಕೃಷ್ಣನು, ಕೋಟಿಸೂರ್ಯತೇಜಸ್ಸಿನಿಂದ ಬೆಳಗುತಿರುವ

ತನ್ನ ಸುದರ್ಶನಚಕ್ರವನ್ನು ಮುಂದೆ ಹೋಗುವಂತೆ ಪ್ರೇರಿಸಿದನು. ಎಂತವರಿಗೂ ದುರ್ಗಮವಾಗಿ, ಮಹಾಭಯಂಕರವಾದ ಆ ಮಹಾತಮಸ್ಸನ್ನೂ ಕೂಡ, ಸುದರ್ಶನಚಕ್ರವು, ತನ್ನ ಕಾಂತಿಯಿಂದ ಭೇದಿಸುತ್ತ,ರಾಮಬಾಣವು ಶತ್ರುಸೈನ್ಯದಲ್ಲಿ ಪ್ರವೇಶಿಸುವಂತೆ, ಮನೋವೇಗದಿಂದ ಮುಂದೆ ಹೋಯಿತು. ಆಗ ಚಕ್ರದ ಹಿಂದೆ ಹೋಗುತ್ತಿದ್ದ ಅರ್ಜುನನು, ಆ ಮಹಾಂಧಕಾರದನಡುವೆ ಅಪಾರತೇಜಸ್ಸಿನಿಂದ ಜ್ವಲಿಸುತಿದ್ದ ಚಕ್ರಾಯುಧವನ್ನು ನೋಡಲಾರದೆ, ತನ್ನ ಕಣ್ಣುಗಳನ್ನು ಮುಚ್ಚಿಬಿಟ್ಟನು. ಹಾಗೆಯೇ ಆ ರಥವು ಆ ಅಂಧಕಾರವನ್ನು ದಾಟಿ, ಅದರಿಂದಾಚೆಗಿರುವ ಸಮುದ್ರವನ್ನೂ ಪ್ರವೇಶಿಸಿತು. ಅಲ್ಲಿ ಪ್ರಚಂಡವಾದ ಬಿರುಗಾಳಿಯಿಂದ ದೊಡ್ಡದೊಡ್ಡ ಅಲೆಗಳು ಹೊರಟು, ಈ ತಮಸ್ಸಿಗಿಂತಲೂ ಭಯಂಕರವಾಗಿ ತೋರುತ್ತಿತ್ತು. ಆಜಲಮಧ್ಯದಲ್ಲಿ ಅದ್ಭುತವಾದ ಒಂದಾನೊಂದು ದಿವ್ಯಭವನವು ಕಾಣಿಸಿತು. ಅದರ ವೈಭವವನ್ನು ಕೇಳಬೇಕೆ ? ಆ ದಿವ್ಯಭವನದಲ್ಲಿ ಸಾವಿರಾರು ರತ್ನಸ್ತಂಭಗಳು ಶೋಭಿಸುತ್ತಿದ್ದುವು. ಆ ಭವನಮಧ್ಯದಲ್ಲಿ ಭಯಂಕರಾಕಾರವುಳ್ಳ ಅದ್ಭುತಸ್ವರೂಪನಾದ ಆದಿಶೇಷನಿದ್ದನು. ಅವನಿಗೆ ಝುಗಝುಗಿಸುತ್ತಿರುವ ಸಹಸ್ರಫಣಾಮಣಿಗಳು ! ಎರಡು ಸಾವಿರಕಣ್ಣುಗಳು ! ಸ್ಫಟಿಕಪರ್ವತದಂತೆ ಶುಭ್ರವಾದ ಆಕೃತಿ! ಕಪ್ಪಾದ ಕಂಠದಿಂದಲೂ, ಎರಡೆರಡು ನಾಲಗೆಗಳಿಂದಲೂ ಪ್ರಕಾಶಿಸುವ ಶಿರಸ್ಸುಗಳು! ಇಂತಹ ಆದಿಶೇಷನ ಶರೀರದಮೇಲೆ, ನೀಲಮೇಘಶ್ಯಾಮನಾಗಿ, ಪೀತಾಂಬರದಧಾರಿಯಾಗಿದ್ದ ಪುರುಷೋತ್ತಮನು, ಪ್ರಸನ್ನವಾದ ಮುಖದಿಂದಲೂ, ವಿಶಾಲವಾದ ಕಣ್ಣುಗಳಿಂದಲೂ ಶೋಭಿಸುತ್ತ ಕುಳಿತಿದ್ದನು. ಆತನ ಕಿರೀಟಕುಂಡಲಗಳಲ್ಲಿರುವ ರತ್ನಗಳ ಕಾಂತಿಯು, ಮುಂಗುರುಳುಗಳಮೇಲೆ ಬಿದ್ದು, ಅದಕ್ಕೆ ಮತ್ತಷ್ಟು ಶೋಭಾತಿಶಯವನ್ನುಂಟು ಮಾಡುತ್ತಿರುವುದು. ಅವನಿಗೆ ನೀಡಿದ ಎಂಟುಭುಜಗಳು ! ಎದೆಯಲ್ಲಿ ಕೌಸ್ತುಭಮಣಿ ! ಕಂಠದಲ್ಲಿ ವನಮಾಲಿಕೆ ! ವಕ್ಷಸ್ಥಲದಲ್ಲಿ ಶ್ರೀವತ್ಸವೆಂಬ ಮಚ್ಚೆ ! ಅವನ ಸುತ್ತಲೂ ಸುನಂದ, ನಂದ, ಮೊದಲಾದ ಪಾರ್ಷದರೂ, ಪುರುಷಾಕಾರದಿಂದಿರುವ ಚಕ್ರಾದ್ಯಾಯುಧಗಳೂ, ಸೇವಾನಿರತರಾಗಿ ಕಾದಿರುವರು. ಪುಷ್ಟಿ, ಶ್ರೀ, ಕೀರ್ತಿ ಮೊದಲಾದ

ಶಕ್ತಿಗಳೂ, ಅವನನ್ನು ಸೇವಿಸುತ್ತಿರುವುವು. ಬ್ರಹ್ಮಾದಿಗಳಿಗೂ ಪ್ರಭು ವಾಗಿಯೂ, ತನಗಿಂತಲೂ ಅಭಿನ್ನನಾಗಿಯೂ ಇರುವ ಆ ಭಗವಂತನನ್ನು ನೋಡಿ ಕೃಷ್ಣನು ವಂದನಮಾಡಿದನು. ಅರ್ಜುನನೂ ಹಾಗೆಯೇ ಭಕ್ತಿಯಿಂ ದ ಅವನನ್ನು ನಮಸ್ಕರಿಸಿದನು ಆದರೆ ಆ ಸ್ವರೂಪವನ್ನು ಕಂಡಾಗ ಅರ್ಜು ನನಿಗೆ ದೇಹವೆಲ್ಲವೂ ಭಯದಿಂದ ನಡುಗುತಿತ್ತು. ಆಗ ಶೇಷಶಾಯಿ ಯಾದ ಆ ಪರಮಪುರುಷನು ತನ್ನ ಮುಂದೆ ಬದ್ಧಾಂಜಲಿಗಳಾಗಿ ನಿಂತಿದ್ದ ಕೃಷ್ಣಾರ್ಜುನರಿಬ್ಬರನ್ನೂ ನೋಡಿ, ಗಂಭೀರವಾಕ್ಯದಿಂದ ಮಂದಹಾಸ ಪೂರ್ವಕವಾಗಿ ಹೀಗೆಂದು ಹೇಳುವರು. “ಓ ! ಕೃಷ್ಣಾರ್ಜುನರೆ ! ನಿಮ್ಮಿ ಬ್ಬರನ್ನೂ ಇಲ್ಲಿಗೆ ಕರೆತರಿಸಿ ನೋಡಬೇಕೆಂಬ ಉದ್ದೇಶದಿಂದಲೇ ನಾನು ಆ ಬ್ರಾಹ್ಮಣನ ಶಿಶುಗಳನ್ನು ಇಲ್ಲಿಗೆ ತಂದಿಟ್ಟೆನು. ನೀವಿಬ್ಬರೂ ಭೂಮಿಯಲ್ಲಿ ಧರ್ಮರಕ್ಷಣಾರ್ಥವಾಗಿ* ನನ್ನ ಕಳೆಯಿಂದ ಅವತರಿಸಿರುವಿರಿ! ಭೂಮಿಗೆ ಭಾರ ಭೂತರಾದ ದಾನವರನ್ನು ಸಂಹರಿಸಿ, ಶೀಘ್ರದಲ್ಲಿಯೇ ನೀವು ನನ್ನ ಕಡೆಗೆ ಹಿಂತಿರುಗತಕ್ಕವರು. ನೀವೇ ಪೂರ್ವದಲ್ಲಿ ನರನಾರಾಯಣರೆಂಬ ಋಷಿಶ್ರೇಷ್ಠ ರಾಗಿದ್ದವರು. ನೀವು ಪೂರ್ಣಕಾಮರಾಗಿದ್ದರೂ ಜಗದ್ರಕ್ಷಣಾರ್ಥವಾಗಿ ಈ ಲೋಕಸಂಗ್ರಹವೆಂಬ ಧರ್ಮಗಳನ್ನು ನಡೆಸುತ್ತಿರುವಿರಿ” ಎಂದನು. ಕೃಷ್ಣಾರ್ಜುನರಿಬ್ಬರೂ, ಆ ಭಗವಂತನ ಆಜ್ಞೆಯನ್ನು ಅಂಗೀಕರಿಸಿ, ಆತ ನಿಗೆ ವಂದಿಸಿ,ಅವನ ಅನುಮತಿಯಿಂದ ಅಲ್ಲಿದ್ದ ಬ್ರಾಹ್ಮಣಶಿಶುಗಳೆಲ್ಲವನ್ನೂ ತಮ್ಮೊಡನೆ ಕರೆದುಕೊಂಡು, ಸಂತೋಷದಿಂದ ತಮ್ಮ ಪಟ್ಟಣಕ್ಕೆ ಹಿಂತಿ ರುಗಿದರು. ಮೊದಲು ಹುಟ್ಟಿದ ಆಕಾರದಲ್ಲಿಯೇ ಇದ್ದ ಆ ಶಿಶುಗಳೆಲ್ಲವನ್ನೂ ಆ ಬ್ರಾಹ್ಮಣಿಗೆ ಒಪ್ಪಿಸಿದರು. ಆಗ ಅರ್ಜುನನ ಆಶ್ಚರ್ಯವನ್ನು ಕೇಳಬೇಕೆ ? ತಾನು ವಿಷ್ಣುಸಾನ್ನಿಧ್ಯವನ್ನು ಕಣ್ಣಾರೆ ನೋಡುವಂತಾದುದು ತನ್ನ ಪರಮಭಾಗ್ಯವೆಂದು ವಿಸ್ಮಿತನಾಗಿ, ಲೋಕದಲ್ಲಿ ಮನುಷ್ಯನಿಗೆ ಯಾವು ದಾದರೂ ಬಂದು ವಿಧವಾದ ಪುರುಷಾರ್ಥವು ಲಭಿಸುವಪಕ್ಷದಲ್ಲಿ ಅದು ಶ್ರೀಕೃಷ್ಣನ ಕೃಪೆಯಿಂದಲೇ ಲಭಿಸಬೇಕೆಂದು ಮನಸ್ಸಿನಲ್ಲಿ ನಿಶ್ಚಯಿಸಿ

* ಇಲ್ಲಿ ಭಗವಂತನ ಕಳೆಯಿಂದವತರಿಸಿದವನು ಅರ್ಜುನನೊಬ್ಬನೇ. ಕೃಷ್ಣ ನು ಆ ಭಗವಂತನ ಪೂರ್ಣಾವತಾರವೆಂದು ಗ್ರಾಹ್ಯವು.

ಕೊಂಡನು. ಓ! ಪರೀಕ್ಷಿದ್ರಾಜಾ! ಹೀಗೆ ಅಖಿಲೇಶ್ವರನಾದ ಭಗವಂತನು, ಕೃಷ್ಣಾವತಾರದಲ್ಲಿ ದೇವತೆಗಳಿಗೂ, ಮನುಷ್ಯರಿಗೂ ಸಾಧ್ಯವಲ್ಲದ ಇನ್ನೂ ಅನೇಕ ಅದ್ಭುತಕಾರ್ಯಗಳನ್ನು ನಡೆಸುತ್ತ, ಸಾಮಾನ್ಯಜನರಂತೆ ಗ್ರಾಮ್ಯ ಭೋಗಗಳನ್ನೂ ಅನುಭವಿಸುತ್ತಿದ್ದನು. ಭೂರಿದಕ್ಷಿಣೆಗಳುಳ್ಳ ಅನೇಕಯಾಗ ಗಳನ್ನೂ ನಡೆಸಿದನು. ಮತ್ತು ಇಂದ್ರನು ಕಾಲಕಾಲಕ್ಕೆ ಮಳೆಯನ್ನು ಸುರಿಸುವಂತೆ, ಬ್ರಾಹ್ಮಣಾದಿಪ್ರಜೆಗಳೆಲ್ಲರಿಗೂ, ಕಾಲಾನುಗುಣವಾಗಿ ಅವರವರ ಅಭೀಷ್ಟಗಳನ್ನು ಈಡೇರಿಸುತ್ತಿದ್ದನು. ಅಧಾರ್ಮಿಕರಾದ ಕ್ಷತ್ರಿಯ ರಲ್ಲಿ ಕೆಲವರನ್ನು ತನ್ನ ಕೈಯಿಂದಲೇ ಕೊಂದು, ಅರ್ಜುನಾದಿಗಳಿಂದ ಕೆಲವರನ್ನು ಕೊಲ್ಲಿಸಿದನು. ಧರ್ಮರಾಜಾದಿಗಳಿಂದ ಲೋಕದಲ್ಲಿ ವರ್ಣಾಶ್ರ ಮಧರ್ಮಗಳನ್ನು ಪ್ರವರ್ತಿಸುವಹಾಗೆ ಮಾಡುತ್ತಿದ್ದನು. ಇದು ಎಂಬತ್ತೊಂಬತ್ತನೆಯ ಅಧ್ಯಾಯವು.

---

## ಮಹಿಷೀಗೀತೆಗಳು.

ಓ ಪರೀಕ್ಷಿದ್ರಾಜಾ! ಸಾಕ್ಷಾಚ್ಛ್ರಿಯಃಪತಿಯಾದ ಕೃಷ್ಣನು, ದ್ವಾರಕೆಯಲ್ಲಿದ್ದಾಗ, ಅದು ಸಕಲಸಂಪತ್ಸಮೃದ್ಧವಾಗಿ ಶೋಭಿಸುತಿತ್ತು. ಅನೇಕಯಾದವಶ್ರೇಷ್ಠರಿಂದ ತುಂಬಿದ್ದಿತು. ನವಯೌವನವುಳ್ಳ ಸ್ತ್ರೀಯ ರು ಉತ್ತಮಾಲಂಕಾರಭೂಷಿತರಾಗಿ, ಮಿಂಚಿನಂತೆ ಶೋಭಿಸುತ್ತ, ತಮ್ಮ ತಮ್ಮ ಮನೆಯ ಉಪ್ಪರಿಗೆಗಳಮೇಲೆ ಚಂಡಾಟ ಮೊದಲಾದ ವಿನೋದಗ ಳಿಂದ ವಿಹರಿಸುತ್ತಿರುಳತು. ಅಲ್ಲಿನ ರಾಜಮಾರ್ಗಗಳೆಲ್ಲವೂ ಮದಜಲವನ್ನು ಸುರಿಸುತ್ತಿರುವ ಮದದಾನೆಗಳಿಂದ ಯಾವಾಗಲೂ ನಿಬಿಡವಾಗಿರುವುವು. ಮತ್ತು ಅಲ್ಲಿನ ಬೀದಿಗಳೆಲ್ಲವೂ, ಅಲಂಕೃತರಾದ ಸುಭಟರಿಂದಲೂ, ಕುದು ರೆಗಳಿಂದಲೂ, ಸುವರ್ಣರಥಗಳಿಂದಲೂ ಶೋಭಿತಗಳಾಗಿರುವುವು. ಎಲ್ಲಿ ನೋಡಿದರೂ ಉದ್ಯಾನಗಳೂ, ಉಪವನಗಳೂ ಕಂಗೊಳಿಸುತ್ತಿರುವುವು. ಅಲ್ಲಿನ ಗಿಡುಮರಗಳೆಲ್ಲವೂ ಫಲಪುಷ್ಪಗಳಿಂದ ತುಂಬಿ, ಯಾವಾಗಲೂ ಭ್ರಮರಝುಂಕಾರಗಳಿಂದ ಕೂಡಿರುವುದು. ಇಂತಹ ದ್ವಾರಕಾನಗರಿ ಯಲ್ಲಿ ಕೃಷ್ಣನು, ಹದಿನಾರುಸಾವಿರಮಂದಿ ರಾಜಕುಮಾರಿಯರಿಗೂ

ತಾನೊಬ್ಬನೇ ಪ್ರಿಯನಾಗಿ, ಅಷ್ಟೇ ಆಕೃತಿಗಳನ್ನು ಧರಿಸಿ, ಸಕಲಸಂಪ ತ್ಸಮೃದ್ಧಗಳಾದ ಅವರ ಮನೆಗಳಲ್ಲಿ ರಮಿಸುತಿದ್ದನು. ತಾವರೆ, ನೈದಿಲೆ ಮೊದಲಾದ ಪುಷ್ಪಗಳ ಪರಾಗದಿಂದ ಸುವಾಸಿತವಾಗಿಯೂ, ಹಂಸಕಾ ರಂಡವಾದಿಪಕ್ಷಿಗಳ ಧ್ವನಿಯಿಂದ ಮನೋಹರವಾಗಿಯೂ ಇರುವ ನದಿಗ ಳಲ್ಲಿ, ಆಗಾಗ ಆ ಸ್ತ್ರೀಯರೊಡನೆ ಜಲಕ್ರೀಡೆಯನ್ನಾಡುತ್ತ, ಆ ಸ್ತ್ರೀಯರ ಸ್ತನಕುಂಕುಮದಿಂದ ಲೇಪಿತಗಾತ್ರನಾಗಿ, ನಗುವವರನ್ನು ನೋಡಿ ನಗು ವುದು, ನೀರೆರಚಿದವರಮೇಲೆ ನೀರೆರಚುವುದು, ಈ ವಿಧವಾದ ವಿನೋದಗ ಳಿಂದ, ಯಕ್ಷಸ್ತ್ರೀಯರೊಡನೆ ಯಕ್ಷರಾಜನಾದ ಕುಬೇರನಂತೆ, ಅವರೊಡನೆ ವಿಹರಿಸುತ್ತಿದ್ದನು. ಶ್ರೀ ಕೃಷ್ಣನ ಜಲಕ್ರೀಡಾವಿನೋದದಲ್ಲಿ ಆಕಾಶ ದಲ್ಲಿ ಗಂಧರ್ವರೂ, ಭೂಮಿಯಲ್ಲಿ, ಸೂತ ಮಾಗಧ ವಂದಿಗಳೂ, ಮೃದಂಗ, ಪಣವ, ಆನಕ, ವೀಣೆ, ಮೊದಲಾದ ವಾದ್ಯಗಳೊಡನೆ ಆತನ ಗುಣಕೀರ್ತನೆ ಗಳನ್ನು ಮಾಡುತ್ತಿದ್ದರು ಈ ಜಲಕ್ರೀಡೆಯಲ್ಲಿ, ಆ ಸ್ತ್ರೀಯರ ದುಕೂಲಗ ಳೆಲ್ಲವೂ ನೆನೆದು, ಅವರ ಸ್ತನಜಘನಾದಿಗಳು ವ್ಯಕ್ತವಾಗುತ್ತಿರುವುವು. ಅವರು ಎತ್ತಿ ಕಟ್ಟಿದ ತುರುಬಿನಿಂದ ಹೂಗಳು ಉದಿರುತ್ತಿರುವುವು. ಈ ವೇಷದಿಂದ ಕೃಷ್ಣನಿಗೆ ತಮ್ಮಲ್ಲಿ ಮತ್ತಷ್ಟು ಮೋಹವನ್ನು ಹೆಚ್ಚಿಸುವಂತೆ, ಅವನಮೇಲೆ ನೀರನ್ನು ಚೆಲ್ಲಿ, ತಿರುಗಿ ಅವನು ತಮ್ಮಮೇಲೆ ಪ್ರತಿಯಾಗಿ ನೀರೆರೆಚುವುದಕ್ಕೆ ಅವಕಾಶವಿಲ್ಲದಂತೆ ಥಟ್ಟನೆ ಮುಂದೆ ಹೋಗಿ, ಅವನನ್ನು ದೃಢವಾಗಿ ಆಲಿಂಗಿಸಿಕೊಳ್ಳುವರು. ಆ ಕೃಷ್ಣನ ದೇಹಾಲಿಂಗನದಿಂದುಂ ಟಾದ ಸಂತೋಷದಿಂದ ಮೈಮರೆತು ನಗುಮುಖದೊಡನೆ ನಿಲ್ಲುವರು. ಹಾಗೆಯೇ ಕೃಷ್ಣನೂಕೂಡ, ಆ ಸ್ತ್ರೀಯರ ಸ್ತನಕುಂಕುಮದಿಂದ ಲೇಪಿತ ಗಾತ್ರನಾಗಿ, ಆ ವಿನೋದಸಂಭ್ರಮದಲ್ಲಿ, ಕದಲಿದ ಮುಂಗುರುಳುಗಳೊ ಡನೆ, ಆಗಾಗ, ಅವರಮೇಲೆ ನೀರೆರೆಚುತ್ತ, ಅವರು ತನ್ನ ಮೇಲೆ ಚೆಲ್ಲಿದ ನೀರಿಗೆ ಸಂತೋಷದಿಂದ ಮೈಯೊಡ್ಡುತ್ತ, ಹೆಣ್ಣಾನೆಗಳೊಡನೆ ಆಡುವ ಮದಗಜ ದಂತೆ ಕಾಣುತಿದ್ದನು. ಹೀಗೆ ಜಲಕ್ರೀಡೆಯೆಲ್ಲವೂ ಮುಗಿದಮೇಲೆ ನಟರು ನರ್ತಕರು, ಮೊದಲಾಗಿ ಗೀತವಾದ್ಯಗಳಿಂದ ಉಪಜೀವಿಸತಕ್ಕವರೆಲ್ಲರಿಗೂ ಕೃಷ್ಣನೂ, ಆ ಕೃಷ್ಣನ ಪತ್ನಿಯರೂ ನಾನಾವಿಧಗಳಾದ ವಸ್ತ್ರಾಲಂಕಾ

ರಗಳನ್ನು ಕೊಟ್ಟು ಸಂತೋಷಪಡಿಸಿದರು. ಹೀಗೆ ಕೃಷ್ಣನೊಡನೆ ಜಲ ಕ್ರೀಡೆಯನ್ನಾಡಿದಮೇಲೆ, ಆ ಸ್ತ್ರೀಯರೆಲ್ಲರಿಗೂ, ಅವನ ನಡೆ, ನುಡಿ, ನೋಟ, ನಗೆ, ಮುಂತಾದ ಚೇಷ್ಟೆಗಳನ್ನೂ, ಅವನ ದೇಹಾಲಿಂಗನಸೌಖ್ಯವನ್ನೂ, ಅವನು ತಮ್ಮಲ್ಲಿ ತೋರಿಸಿದ ಸರಸವಿನೋದಗಳನ್ನೂ ನೆನೆಸಿಕೊಂಡು, ಬುದ್ಧಿಯು ಪರವಶವಾಯಿತು. ಅವರ ಮನಸ್ಸು ಸಂತತಧ್ಯಾನದಿಂದ ಕೃಷ್ಣನಲ್ಲಿಯೇ ನೆಲೆಗೊಂಡಿತು. ಬೇರೆ ಯಾವ ವಿಷಯವೂ ಅವರ ಮನ ಸ್ಸಿಗೆ ತೋರದಂತಾಯಿತು. ಆ ಕೃಷ್ಣನನ್ನೇ ಹಂಬಲಿಸುತ್ತ ಹುಚ್ಚ ರಂತೆಯೂ, ಮಂಕರಂತೆಯೂ, ತಮ್ಮೊಳಗೆ ತಾವು ಹೀಗೆಂದು ಮಾತಾಡ ತೊಡಗಿದರು.

ಅವರಲ್ಲಿ ಒಬ್ಬಳು “ಓ! ಕುರರಪಕ್ಷೀ! ನಿದ್ರೆಯಿಲ್ಲದೆ ಹೀಗೇಕೆ ಅರಚುತ್ತಿರುವೆ. ಸುಮ್ಮನೆ ಕೂಗದೆ ಸುಖವಾಗಿ ಮಲಗು. ಈ ರಾತ್ರಿಯಲ್ಲಿ ಸರ್ವೇಶ್ವರನಾದ ಕೃಷ್ಣನು, ಬಾಹ್ಯವಿಷಯಗಳಲ್ಲಿ ಗಮನವನ್ನು ಬಿಟ್ಟು ನಿದ್ರಿಸುತ್ತಿರುವನಲ್ಲವೆ? ಅವನಿಗೆ ನೀನು ಹೀಗೆ ನಿದ್ರಾಭಂಗವನ್ನು ಮಾಡ ಬಹುದೆ? ಅಥವಾ! ಇದು ನಿನ್ನ ತಪ್ಪಲ್ಲ! ನೀನೂ ನಮ್ಮಂತೆ ಆ ಕೃಷ್ಣನ ನಗೆ ನೋಟಗಳನ್ನೂ, ಅವನ ವಿಲಾಸಗಳನ್ನೂ ನೋಡಿ ಮೋಹಪರವಶೆ ಯಾಗಿರಬಹುದು. ಆ ವಿರಹಸಂಕಟದಿಂದಲೇ ನೀನೂ ಅಳುತ್ತಿರಬಹುದು” ಎಂದಳು.

ಮತ್ತೊಬ್ಬಳು “ಎಲೆ ಚಕ್ರವಾಕಿ! ಏನಿದು? ಈ ರಾತ್ರಿಯಲ್ಲಿ ನೀನು ನಿನ್ನ ಪ್ರಿಯನನ್ನು ಕಾಣದುದಕ್ಕಾಗಿ ಕಣ್ಣು ಮುಚ್ಚಿ ಕೊಂಡಿರುವೆಯೇನು? ಅದ ಕ್ಕಾಗಿಯೇ ಇಷ್ಟು ದೈನ್ಯದಿಂದ ಅಳುವಹಾಗಿದೆ! ಅಥವಾ ನನ್ನಂತೆ ನೀನೂ ಆ ಕೃಷ್ಣನ ಪಾದಸೇವೆಯನ್ನೇ ಬಯಸಿ ದುಃಖಿಸುವೆಯಾ? ಆತನ ಪಾದಾರವಿಂದಗಳಲ್ಲಿ ಸಮರ್ಪಿಸಿದ ಪುಷ್ಪಮಾಲಿಕೆಯನ್ನು ಶಿರಸ್ಸಿನಲ್ಲಿ ನಮ್ಮಂತೆ ನೀನೂ ಧರಿಸಬೇಕೆಂಬ ತವಕದಿಂದ ಮರುಗುವೆಯೇನು?” ಎಂದಳು.

ಇನ್ನೊಬ್ಬಳು “ಎಲೈ ಸಮುದ್ರವೆ! ನೀನು ಹಗಲುರಾತ್ರಿಯೂ ನಿದ್ರೆಯಿಲ್ಲದೆ ಯಾವಾಗಲೂ ಹೀಗೆ ಭಯಂಕರವಾಗಿ ಮೊರೆದು ಕೂಗು

ತ್ತಿರುವೆಯಲ್ಲಾ ! ಈಗ ನಾವು ಅನುಭವಿಸುತ್ತಿರುವ ದುಸ್ಸಹವಾದ ಅವಸ್ಥೆಯೇ ನಿನಗೂ ಹಿಡಿಯಿತೇನು? ಹಾಗೆಯೇ ಇರಬೇಕು! ಆ ಕೃಷ್ಣನು ಒಂದೆರಡಾವರ್ತಿ ನಮ್ಮನ್ನು ಆಲಿಂಗಿಸಿಕೊಂಡ ನೆವದಿಂದ ನಮ್ಮ ಸ್ತನಾಗ್ರದ ಕುಂಕುಮರೇಖೆಯನ್ನು ಅಪಹರಿಸಿಕೊಂಡು ಹೋದಂತೆ, ನಿನ್ನಲ್ಲಿದ್ದ ಅಮೂಲ್ಯಗಳಾದ ಕೌಸ್ತುಭಮಣಿ,ಲಕ್ಷ್ಮಿ,ಮುಂತಾದ ಲಾಂಛನಗಳನ್ನೆಲ್ಲಾ ಕಿತ್ತುಕೊಂಡು ಓಡಿಹೋಗಿರುವನು. ಆದುದರಿಂದ ನಮ್ಮ ಅವಸ್ಥೆಯೇ ನಿನಗೂ ಉಂಟಾಗಿರಬೇಕು.

ಬೇರೊಬ್ಬಳು "ಓ! ಚಂದ್ರಾ! ನಿನಗೆ ಪ್ರಬಲವಾದ ಕ್ಷಯರೋಗವು ಹಿಡಿದು ದಿನದಿನಕ್ಕೆ ಕುಂದುತ್ತಿರುವೆ! ಹಿಂದಿನಂತೆ ಅಂಧಕಾರವನ್ನಡಗಿಸುವ ಶಕ್ತಿಯೂ ನಿನ್ನಲ್ಲಿ ತಗ್ಗುತ್ತಬರುತ್ತಿದೆ. ಹೀಗೆ ನೀನು ದಿನದಿನಕ್ಕೆ ಕ್ಷೀಣಿಸುವಕಾರಣವೇನು? ಒಂದುವೇಳೆ ನಮ್ಮಂತೆಯೇ ನೀನೂ ಆ ಶ್ರೀಕೃಷ್ಣನ ಬಾಯಿಂದ ಹೊರಟ ಮುದ್ದುಮಾತುಗಳನ್ನು ಸ್ಮರಿಸಿಕೊಂಡು ಅವನ ಚಿಂತೆಯಿಂದಲೇ ಕೊರಗುತ್ತಿರುವೆಯೇನು? ಹಾಗೆಯೇ ಇರಬೇಕು" ಎಂದಳು

ಮತ್ತೊಬ್ಬಳು "ಓ! ಮಲಯಮಾರುತಾ! ನಿನಗೆ ನಾನು ಯಾವ ಅಪಕಾರವನ್ನು ಮಾಡಿರುವೆನು? ಆ ಶ್ರೀಕೃಷ್ಣನ ಕಟಾಕ್ಷವೀಕ್ಷಣವೆಂಬ ಬಾಣದಿಂದ ಮೊದಲೇ ಭೇದಿಸಿ ಹೋಗಿರುವ ನಮ್ಮ ಹೃದಯವನ್ನು ನೀನು ಮತ್ತಷ್ಟು ನೋಯಿಸುತ್ತಿರುವೆಯಲ್ಲಾ! ನಿರಪರಾಧಿನಿಯಾದ ನನ್ನನ್ನು ಹೀಗೆ ಪೀಡಿಸಬಹುದೆ?" ಎಂದಳು.

ಕೃಷ್ಣನನ್ನು ಹುಡುಕುತ್ತ ಬಂದವಳೊಬ್ಬಳು ಹೂತೋಟದಲ್ಲಿ ಅದೇಚಿಂತೆಯಿಂದ ನಿಂತಿದ್ದ ಮತ್ತೊಬ್ಬಳನ್ನು ನೋಡಿ" *ಓ ಸಖೀ! ಏನು!

* ಇಲ್ಲಿ ಬಹಳಚಮತ್ಕಾರವಾದ ಶ್ಲೇಷಾರ್ಥವುಳ್ಳ ಮೂಲಶ್ಲೋಕವಿದೆ.

ಮುಗ್ಧೇ! ಧ್ಯಾಯಸಿ ಕಿಂ? ಗೃಹಾಣ ಪುರತಃ ಕುಂದಂ ವಿಕಾಸೋನ್ಮುಖಂ!
ಕಿಂ ಕುಂದೇನ ಮಮಾಮುನಾ? ಸುಮನಸಃ ಕೇದೃಗ್ವಿಧಾಸ್ತೇ ಪ್ರಿಯಾಃ ?।
ಪುನ್ನಾಗಂ ಮೃಗಯೇ ಸಖಿ! ಶ್ರುತಿಶಿರೋಭೂಷಾ ವಿಶೇಷಾಯುತಂ!
ಗಾವೋಽಕಪ್ಯಜ್ಞಿತಸೂನಮಾಸತ ತದಾವೋದಪ್ರಕಷೋರ್ನ್ಮುಖಾಃ ॥

ಇಲ್ಲಿ ನೀನು ಹೂಗಳನ್ನು ಕುಯ್ಯುವುದಕ್ಕಾಗಿ ಬಂದೆಯಾ? ಅದೋ! ಅಲ್ಲಿ ಈಗಲೇ ಅರಳುತ್ತಿರುವ ಕುಂದಪುಷ್ಪಗಳು ಕಾಣುತ್ತಿರುವುವಲ್ಲವೆ? ಅವುಗಳನ್ನು ತೆಗೆದುಕೊಳ್ಳಬಹುದಲ್ಲಾ" ಎಂದು ಕೇಳಲು, ಅದಕ್ಕವಳು "ಸಖೀ! * ಈ (ಮುವರ್ಣವಿಲ್ಲದ) ಕುಂದದಿಂದ ನನಗೇನಾಗಬೇಕಾಗಿದೆ? ಇದು ನನಗೆ ಬೇಡ!" ಎಂದಳು. ಆಗ ಮೊದಲನೆಯವಳು "ಹಾಗಿದ್ದರೆ ನಿನಗೆ ಯಾವ ಪುಷ್ಪದಲ್ಲಿ ಆಸೆಯುಂಟು"? ಎಂದು ಕೇಳಲು; ಎರಡನೆಯವಳು "ಸಖಿ! † ಕಿವಿಗೂ, ತಲೆಗೂ ಅಲಂಕಾರಯೋಗ್ಯವಾದ ಪುನ್ನಾಗಪುಷ್ಪವನ್ನು (ವೇದಾಂತಗೋಚರನಾದ ಪುರುಷೋತ್ತಮನನ್ನು ಎಂದರೆ ಶ್ರೀಕೃಷ್ಣನನ್ನು) ಹುಡುಕುತ್ತಿರುವೆನು ಪುಷ್ಪಸಮೃದ್ಧವಾದ ಆ ಗಿಡದ ಸುವಾಸನೆಗಲ್ಲವೇ ಅಜ್ಞಜಂತುಗಳಾದ ‡ ಗೋವುಗಳೂ ಉನ್ಮುಖವಾಗಿ ಹುಡುಕುತ್ತಿರುವುವು. (ಜನ್ಮರಹಿತನಾದ ಆ ಪುರುಷೋತ್ತಮನನ್ನು ಶ್ರುತಿವಾಕ್ಯಗಳೂ ಹುಡುಕುತ್ತಿರುವುವು) ಇನ್ನು ನಮಗೆ ಅದರಲ್ಲಿ ಆಸೆಯು ಹುಟ್ಟುವುದೇನಾಶ್ಚರ್ಯವು" ಎಂದಳು.

ಮತ್ತೊಬ್ಬಳು ಮೇಘವನ್ನು ನೋಡಿ "ಓ ಮೇಘವೆ! ನೀನೇ ಭಾಗ್ಯವಂತನು! ಆ ಶ್ರೀಕೃಷ್ಣನ ಮೈಮೇಲೆ ಬಿಸಿಲು ಬೀಳದಂತೆ ನೀನು ಮರೆಯಾಗಿ, ಅವನಿಗೆ ಆಗಾಗ ಪ್ರಿಯವನ್ನುಂಟುಮಾಡಿರುವೆ? ನಮ್ಮಂತೆ ನೀನೂ ಈಗ ಆತನನ್ನೇ ನಿಶ್ಚಲವಾಗಿ ಧ್ಯಾನಿಸುವೆಯೇನು? ಆದರಿಂದಲೇ ನೀನೂ ನಮ್ಮಂತೆ ಜಲಾರ್ದ್ರಹೃದಯನಾಗಿರುವುದು ನ್ಯಾಯವೇ? ಆ ಕೃಷ್ಣನ ಪ್ರಸಂಗವು ಎಂತವರಿಗಾದರೂ ದುಃಖಹೇತುವು." ಎಂದಳು.

---

* ಇದಕ್ಕೆ "ಅಮುನಾ ಕುಂದೇನ ಮಮಕಿಂ" ಎಂಬುದು ಮೂಲವಾಕ್ಯವು. ಮುವರ್ಣವಿಲ್ಲದ ಕುಂದದಿಂದ ನನಗೇನು? ಎಂದರೆ, ಮುಕಾರವಿಶಿಷ್ಟವಾದ ಕುಂದವೇ (ಮುಕುಂದನೇ) ತನಗೆ ಪ್ರಿಯವೆಂದು ಭಾವವು.

† "ಪುನ್ನಾಗಂ" ಪುರುಷಶ್ರೇಷ್ಠನನ್ನು "ಶ್ರುತಿಶಿರೋಭೂಷಾವಿಶೇಷಾಯಿದಂ" ವೇದಾಂತಗಳಿಗೆ ಭೂಷಣಪ್ರಾಯನನ್ನು ಎಂದು ಶ್ಲೇಷಾರ್ಥವು.

‡ ಇಲ್ಲಿ "ಗಾವಃ ಉಜ್ಝಿತಸೂನಂ" ಎಂಬೀಪದಗಳಿಗೆ, ವೇದಗಳೂಕೂಡ ಜನ್ಮರಹಿತನಾದ ಯಾವನನ್ನು ಹುಡುಕುವುವೋ ಅವನನ್ನೇ ನಾನು ಹುಡುಕುವೆನೆಂದು ಅರ್ಥಾಂತರವು.

ಮತ್ತೊಬ್ಬಳು “ಎಲೆ ಕೋಗಿಲೆ ! ನಿನಗೆ ಕಲಕಂಠನೆಂಬ ಹೆಸರು ಯುಕ್ತವೇ! ಆ ಶ್ರೀಕೃಷ್ಣನಾಮದಂತೆ ಮಧುರವಾದ ಶಬ್ದವನ್ನೇ ನೀನು ಯಾವಾಗಲೂ ನುಡಿಯುತ್ತಿರುವೆ. ಸತ್ತವರನ್ನೂ ಬದುಕಿಸುವಷ್ಟು ಕೋಮಲವಾದ ನಿನ್ನ ಮಧುರಸ್ವರದಿಂದ, ನಿನಗೆ ನನ್ನಿಂದಾಗಬೇಕಾದ ಪ್ರಿಯವೇನೆಂಬುದನ್ನು ಮತ್ತೊಮ್ಮೆ ಹೇಳು! ಓ ಶುಕರಾಜಾ ! ಯದೂತ್ತಮನಾದ ಆ ಶ್ರೀಕೃಷ್ಣನ ಕಥೆಗಳನ್ನು ಒಂದಾವರ್ತಿ ನಿನ್ನ ಬಾಯಿಂದ ಹಾಡು ! ವಿರಹಾಗ್ನಿಯಿಂದ ಬೇಯುತ್ತಿರುವ ನಮ್ಮ ಹೃದಯವನ್ನು ಆ ಶ್ರೀಕೃಷ್ಣನ ಕಥಾಮೃತದಿಂದ ನೀನು ಆಪ್ಯಾಯನಮಾಡುವುದಾದರೆ, ನಿನಗೆ ಹಾಲಿನಿಂದಲೇ ಅಭಿಷೇಕವನ್ನು ಮಾಡುವೆವು ಓ ಪರ್ವತರಾಜಾ! ನೀನು ಬಹಳ ಉದಾರಸ್ವಭಾವವುಳ್ಳವನು, ಇದ್ದ ಕಡೆಯನ್ನು ಬಿಟ್ಟು ಕದಲದೆ, ಬಾಯಿಬಿಟ್ಟು ಮಾಡಾಡದೆ ನಿಂತಿರುವೆ ? ಏನೋ ದೊಡ್ಡವಿಷಯವನ್ನು ಆಲೋಚಿಸುವಂತಿದೆ. ನಾವು ನಮ್ಮ ಸ್ತನಾಗ್ರಗಳಿಂದ ಆ ನಂದಕುಮಾರನ ಪಾದಾರವಿಂದಗಳನ್ನು ಧರಿಸುವುದಕ್ಕಾಗಿ ಆಸೆಪಡುವಂತೆ, ನೀನೂ ನಿನ್ನ ಶಿಖರಗಳಿಂದ ಅವುಗಳನ್ನು ಧರಿಸಬೇಕೆಂದು ಕೋರುವೆಯಾ? ಓ ಸಮುದ್ರಪತ್ನಿಗಳಾದ ನದಿಗಳಿರಾ ! ಇದೇನು ? ನೀವು ದಿನದಿನಕ್ಕೆ ನೀರೊಣಗಿ ಕೃಶರಾಗುತ್ತಿರುವಿರಿ! ನಿಮ್ಮಲ್ಲಿರುವ ಕಮಲಗಳ ಕಾಂತಿಯ ಕಂದುತ್ತಿರುವುದು. ಇದಕ್ಕೆ ಕಾರಣವೇನು? ನಾವು ಆ ಶ್ರೀಕೃಷ್ಣನ ಪ್ರಣಯಕಟಾಕ್ಷಕ್ಕೆ ಪಾತ್ರರಾಗದೆ ದುಃಖದಿಂದ ಕೃಶರಾಗುವಂತೆ, ನೀವೂ ನಿಮ್ಮ ಭರ್ತನಾದ ಸಮುದ್ರರಾಜನ ಪ್ರಣಯದೃಷ್ಟಿಯನ್ನು ಪಡೆಯದೆ ದುಃಖಿಸುತ್ತಿರುವಿರೇನು? ಓ ಹಂಸವೆ! ನಿನಗೆ ಸುಖಾಗಮನವೆ? ಇಲ್ಲಿ! ಬಾ! ಕುಳ್ಳಿರು! ಹಾಲೆರೆಯುವೆನು ! ಕುಡಿ ! ನಿನಗೆ ಕೃಷ್ಣವೃತ್ತಾಂತವೇನಾದರೂ ತಿಳಿದಿದ್ದರೆ ಹೇಳು ! ನೀನು ಆ ಕೃಷ್ಣನ ಕಡೆಯ ದೂತನೆಂದು ಕೇಳಿಬಲ್ಲೆವು ಅಜಿತನಾದ ಆ ಕೃಷ್ಣನಿಗೆ ಕುಶಲವಷ್ಟೆ ? ಅವನು ಹಿಂದೆ ನಮಗೆ ಹೇಳಿಹೋದ ಮಾತನ್ನು ಸ್ಮರಿಸುವನೆ? ಹಾಗಿರದು! ಅವನ ಪ್ರೇಮವು ಸ್ಥಿರವಲ್ಲ! ಬಹಳಚಂಚಲವಾದುದು. ಹಾಗೆ ಅವನಿಗೆ ನಮ್ಮ ಸ್ಮರಣೆಯಿದ್ದಪಕ್ಷದಲ್ಲಿ ನೀನೇ ಅವನನ್ನು ಇಲ್ಲಿಗೆ ಕರೆತರಬಹುದಾಗಿತ್ತಲ್ಲವೆ?ಈಗಲೂ ನೀನು ಅವನನ್ನು ಇಲ್ಲಿಗೆ ಕರೆ

ತಂದುಬಿಡು! ಆದರೆ ಯಾವಳು ನಮ್ಮೆಲ್ಲರನ್ನೂ ವಂಚಿಸಿ, ತಾನೊಬ್ಬಳೇ ಆತನ ಸಹವಾಸಸುಖವನ್ನನುಭವಿಸುತ್ತಿರುವಳೋ, ಆ ಲಕ್ಷ್ಮಿಗೆ ತಿಳಿಸದೆ ಅವನನ್ನುಮಾತ್ರ ಕರೆತರಬೇಕು ಯಾವಾಗಲೂ ಅವನಿಗೆ ನಿತ್ಯಾನಪಾಯಿ ನಿಯಾಗಿ, ಅವನಲ್ಲಿ ಏಕನಿಷ್ಠೆಯಿಂದಿರುತ್ತಿರುವ ಆಕೆಯನ್ನು ವಂಚಿಸಿ ಕರೆ ತರುವುದು ಸಾಧ್ಯವೆ?" ಎಂದು ನೀನು ತಿಳಿಯಬೇಡ! ಅವಳಿಗೆ ಮಾತ್ರ ಆ ಕೃಷ್ಣನಲ್ಲಿ ಏಕನಿಷ್ಠೆಯಿರುವುದೇನು? " ನಮಗಿಲ್ಲದುದೇನು?" ಎಂದಳು.

ಓ ಪರೀಕ್ಷಿದ್ರಾಜಾ! ಹೀಗೆ ಆ ಕೃಷ್ಣಪತ್ನಿಯರೆಲ್ಲರೂ, ಯೋಗೇಶ್ವರೇಶ್ವರನಾದ ಆ ಭಗವಂತನಲ್ಲಿ ಅಸಾಧಾರಣಭಕ್ತಿಯನ್ನು ತೋರಿಸುತ್ತ, ಅದರಿಂದ ಕೃಷ್ಣಗತಿ (ಮುಕ್ತಿ) ಯನ್ನೂ ಹೊಂದಿದರು ಒಂದಾವರ್ತಿ ಕಿವಿಯಿಂದ ಕೇಳಿದರೂ, ಬಾಯಿಂದ ನುಡಿದರೂ, ಶ್ರೀಕೃಷ್ಣನ ಗುಣಗಳು ಸ್ತ್ರೀಯರ ಮನಸ್ಸನ್ನು ಬಲವಾಗಿ ಆಕರ್ಷಿಸುವುವು. ಹೀಗಿರುವಾಗ ಅವನ ಲೀಲೆಗಳನ್ನು ಪ್ರತ್ಯಕ್ಷವಾಗಿ ಕಂಡನುಭವಿಸಿದ ಆ ರಾಜಕನ್ಯೆಯರ ಮನಸ್ಸು ಅವನ ವಿಷಯದಲ್ಲಿ ಆಕರ್ಷಿಸಲ್ಪಡುವುದೇನಾಶ್ಚರ್ಯವು? ತ್ರೈಲೋಕ್ಯ ಪತಿಯಾದ ಆ ಕೃಷ್ಣನನ್ನು ತಮ್ಮ ಪತಿಯೆಂದು ಭಾವಿಸಿ, ಅವನ ಕಾಲೊತ್ತುವುದೇ ಮೊದಲಾದ ಪರಿಚರ್ಯೆಗಳಿಂದ ಅವನ ಸೇವೆಮಾಡುತಿದ್ದ ಆಸ್ತ್ರೀಯರ ತಪೋವಿಶೇಷವನ್ನು ಎಷ್ಟೆಂದು ಹೇಳಬಹುದು? ಸಜ್ಜನರಿಗೆ ತಾನೇ ಮುಖ್ಯಗತಿಯೆನಿಸಿಕೊಂಡ ಕೃಷ್ಣನು, ವೇದೋಕ್ತವಾದ ಕರ್ಮಗಳನ್ನು ಯಥಾವಿಧಿಯಾಗಿ ಅನುಷ್ಠಿಸುತ್ತ, ಧರ್ಮಾರ್ಥಕಾಮಗಳಿಗೆ ಗೃಹಸ್ಥಾಶ್ರಮವೇ ಉತ್ತಮಸ್ಥಾನವೆಂಬುದನ್ನೂ ಲೋಕಕ್ಕೆ ತೋರಿಸುತಿದ್ದನು ಆ ಶ್ರೀಕೃಷ್ಣನು ಗೃಹಧರ್ಮದಲ್ಲಿದ್ದಾಗ, ಅವನಿಗೆ ಹದಿನಾರುಸಾವಿರದ ಎಂಟುನೂರುಮಂದಿ ಪತ್ನಿಯರಿದ್ದರು.ಅವರಲ್ಲಿ ಹಿಂದೆ ಹೇಳಿದಂತೆ ರುಕ್ಮಿಣಿ ಮೊದಲಾದ ಅಷ್ಟಮಹಿಷಿಯರು ಪ್ರಧಾನಭೂತರೆನಿಸಿಕೊಂಡಿದ್ದರು. ಈ ಸಮಸ್ತ ಪತ್ನಿಯರಲ್ಲಿಯೂ ಒಬ್ಬೊಬ್ಬಳಿಗೆ ಹತ್ತುಮಂದಿ ಪುತ್ರರಂತೆ ಜನಿಸಿದರು. ಈ ಮಕ್ಕಳೆಲ್ಲರೂ ಉದ್ದಾಮವೀರ್ಯವುಳ್ಳವರೆಂಬ ಪ್ರಖ್ಯಾತಿಹೊಂದಿದರು. ಅದರಲ್ಲಿ ಹದಿನೆಂಟುಮಂದಿಕುಮಾರರು ಮಹಾರಥರೆನಿಸಿಕೊಂಡು, ಲೋಕ

ವಿಖ್ಯಾತವಾದ ಯಶಸ್ಸಿಗೆ ಭಾಗಿಗಳಾದರು. ಪ್ರದ್ಯುಮ್ನ, ಅನಿರುದ್ಧ, ದೀಪ್ತಿಮಂತ, ಭಾನು, ಸಾಂಬ, ಮಧು ಬೃಹದ್ಭಾನು,ಚಿತ್ರಭಾನು,ವೃಕ, ಅರುಣ, ಪುಷ್ಕರ,ದೇವಬಾಹು, ಶ್ರುತದೇವ, ಸುನಂದನ, ಚಿತ್ರಬಾಹು,ವಿರೂಪ, ಕಲಿ, ನ್ಯಗ್ರೋಧರೆಂದು ಅವರಿಗೆ ಹೆಸರು. ಕಂಸವಧಕ್ಕೆ ಮೊದಲು ಕೃಷ್ಣನಿಗೆ ಗಂಧವನ್ನೊಪ್ಪಿಸಿ, ಅವನನ್ನು ಮೋಹಿಸಿದ ತ್ರಿವಕ್ರೆಯೆಂಬ ಕುಬ್ಜೆಯಲ್ಲಿ, ಉಪಶ್ಲೋಕನೆಂಬ ಪುತ್ರನಾದನು ಇವನು ನಾರದಮುನಿಗೆ ಪ್ರಿಯಶಿಷ್ಯನಾಗಿದ್ದು, ಕೃಷ್ಣನಿಗೆ ಅಭಿನ್ನಭಕ್ತನಾಗಿ, ತನ್ನ ಮನಸ್ಸನ್ನು ಆ ಭಗವತ್ಸಮಾಧಿಯಲ್ಲಿಯೇ ನೆಲೆಗೊಳಿಸಿದನು ಈತನೇ ಪಾಂಚರಾತ್ರದಲ್ಲಿ ಸಾತ್ವತತಂತ್ರವನ್ನು ನಿರ್ಣಯಿಸಿದವನು. ಆ ಸಾತ್ವತಸಂಹಿತೆಯನ್ನು ಅಧ್ಯಯನಮಾಡಿದವರು ತಪ್ಪದೆ ಮುಕ್ತಿಯನ್ನು ಹೊಂದುವರು.ಆಸಾತ್ವತಸಂಹಿತೆಯಲ್ಲಿಯೇವೇದಾಧಿಕಾರವಿಲ್ಲದ ಸ್ತ್ರೀಯರಿಗೂ.ಶೂದ್ರರಿಗೂ,ದಾಸರಿಗೂ, ತಾಪಪುಂಡ್ರಾದಿ ವೈಷ್ಣವ ಸಂಸ್ಕಾರಗಳು ವಿಧಿಸಲ್ಪಟ್ಟಿರುವುವು. ಕೃಷ್ಣನಿಗೆ ಜನಿಸಿದ ಅನೇಕ ಮಂದಿಪುತ್ರರಲ್ಲಿ, ರುಕ್ಮಿಣಿಯ ಪ್ರಥಮಪುತ್ರನಾದ ಪ್ರದ್ಯುಮ್ನನು, ರೂಪದಲ್ಲಿಯೂ, ಪರಾಕ್ರಮದಲ್ಲಿಯೂ ತನ್ನ ತಂದೆಯಾದ ಕೃಷ್ಣನಿಗೆ ಸಾಟಿಯೆನಿಸಿಕೊಂಡಿದ್ದನು ಈತನು ರುಕ್ಮಿಯ ಮಗಳನ್ನು ಮದುವೆಯಾಗಿ,ಅವಳಲ್ಲಿ ಸಾವಿರಾನೆಗಳ ಬಲವುಳ್ಳ ಅನಿರುದ್ಧನೆಂಬ ಪುತ್ರನನ್ನು ಪಡೆದನು ಈ ಅನಿರುದ್ಧನು ರುಕ್ಮಿಯ ಪೌತ್ರಿಯನ್ನು (ಮಗನ ಮಗಳನ್ನು) ವಿವಾಹಮಾಡಿಕೊಂಡು, ವಜ್ರನೆಂಬ ಮಗನನ್ನು ಪಡೆದನು ಮೌಸಲ ಶಾಪದಿಂದುಂಟಾದ ಯಾದವಕುಲಕ್ಷಯದಲ್ಲಿ, ಇವನೊಬ್ಬನೇ ಕೃಷ್ಣಾನುಗ್ರಹದಿಂದ ಬದುಕಿದವನು. ಇವನಿಗೆ ಪ್ರತಿಬಾಹುವೆಂಬ ಮಗನಾದನು ಹಾಗೆಯೇ ವಂಶಾನುಕ್ರಮವಾಗಿ ಪ್ರತಿಬಾಹುವಿನಿಂದ ಸುಬಾಹುವೂ,ಅವನಿಂದ ಧರ್ಮಸೇನನೂ,ಅವನಿಂದ ಶ್ರುತಸೇನನೂ ಜನಿಸಿದರು.ಓ ಪರೀಕ್ಷಿದ್ರಾಜಾ! ಹೀಗೆ ಯಾದವಕುಲವು ಅನಂತವಾಗಿ ವಿಸ್ತರಿಸಿದ್ದರೂ, ಅದರಲ್ಲಿ ಬಡವನಾಗಲಿ, ಸಂತಾನಸಮೃದ್ಧಿಯಿಲ್ಲದವನಾಗಲಿ, ಅಲ್ಪಾಯುಸ್ಸಿನಿಂದ ಸತ್ತವನಾಗಲಿ, ಅಲ್ಪವೀರ್ಯವುಳ್ಳವನಾಗಲಿ, ಬ್ರಾಹ್ಮಣಪ್ರಿಯನಲ್ಲದವನಾಗಲಿ ಒಬ್ಬನಾದರೂ ಇರಲಿಲ್ಲ. ಈ ಯಾದವವಂಶದಲ್ಲಿ ಹುಟ್ಟಿ, ವೀರಕಾರ್ಯಗಳಿಂದ ಪ್ರಖ್ಯಾತಿ

ಹೊಂದಿದವರೆಷ್ಟುಮಂದಿಯೆಂಬುದನ್ನು ಲೆಕ್ಕಿಸಿನೋಡಬೇಕೆಂದರೆ, ಸಾವಿರಾರುವರ್ಷಗಳ ಕಾಲವಾದರೂ ತೀರದು. ಆ ಯಾದವಕುಮಾರರಿಗೆ ಪಾಠಹೇಳತಕ್ಕ ಆಚಾರ್ಯರಾಗಿದ್ದವರಸಂಖ್ಯೆಯುಮಾತ್ರವೇಮೂರುಕೋಟಿಯೂ ಎಂಬತ್ತೆಂಟುಸಾವಿರದನೂರೆಂದು ನಾನು ಕೇಳಿರುವೆನು. ಅನೇಕಬಾಲಕರನ್ನು ಸೇರಿಸಿ ಅಧ್ಯಯನಮಾಡಿಸತಕ್ಕ ಆಚಾರ್ಯರ ಸಂಖ್ಯೆಯೇ ಇಷ್ಟಿರುವಾಗ, ಇನ್ನು ಆ ಯಾದವಕುಮಾರರ ಸಂಖ್ಯೆಯಿಷ್ಟಿರಬಹುದು! ಅಷ್ಟೇಕೆ? ಯದುಗಳಲ್ಲಿ ಸಹದೇವನೊಬ್ಬನಿಗೆಮಾತ್ರವೇ ಲಕ್ಷೋಪಲಕ್ಷಪುತ್ರರು ಹುಟ್ಟಿರುವರು ದೇವಾಸುರಯುದ್ಧದಲ್ಲಿ ಹತರಾದ ಅನೇಕದೈತ್ಯರು, ಭೂಲೋಕದಲ್ಲಿ ಮನುಷ್ಯರಾಗಿ ಹುಟ್ಟಿ ಪ್ರಜೆಗಳನ್ನು ಬಾಧಿಸುತಿದ್ದಾಗ, ಅವರನ್ನು ನಿಗ್ರಹಿಸುವುದಕ್ಕಾಗಿಯೇ, ಭಗವದಾಜ್ಞೆಯಿಂದ ದೇವತೆಗಳು ಯಾದವರಾಗಿ ಹುಟ್ಟಿದರು. ಈ ಯಾದವರಲ್ಲಿ ವೃಷ್ಣಿಗಳು, ಅಂಧಕರು ಮೊದಲಾಗಿ ಬೇರೆಬೇರೆ ನೂರೊಂದು ಕುಲದವರಾದರು. ಸರ್ವದೇವೋತ್ತಮನಾದ ಶ್ರೀಹರಿಯು, ಈ ಭೂಮಿಯಲ್ಲಿಯೂ ಅವರಿಗೆ ಪ್ರಭುವೆನಿಸಿ ನಿಯಮಿಸುವುದಕ್ಕಾಗಿ, ತಾನೇ ಕೃಷ್ಣರೂಪದಿಂದವತರಿಸಿದನು. ಈ ಯಾದವರೆಲ್ಲರೂ ಕೃಷ್ಣನು ಶಯನಿಸುವಾಗಲೂ, ಕುಳ್ಳಿರುವಾಗಲೂ, ಸಂಚರಿಸುವಾಗಲೂ, ಸಂಭಾಷಿಸುವಾಗಲೂ, ವಿಹರಿಸುವಾಗಲೂ, ಸ್ನಾನಪಾನಗಳನ್ನು ಮಾಡುವಾಗಲೂ, ಬೇರೆ ಕಾರ್ಯಗಳನ್ನು ನಡೆಸುವಾಗಲೂ, ಅವನೊಡನೆ ಸಮಾನಸ್ಕಂಧರಾಗಿ ಕಲೆತು,ಸ್ನೇಹಭಾವದಿಂದ ನೋಡುತಿದ್ದರೇ ಹೊರತು, ಅವನೇ ತಮಗೆ ಅಂತರಾತ್ಮನಾದ ಪರಮಪುರುಷನೆಂದು ತಿಳಿಯದಿದ್ದರು. ಓ ಪರೀಕ್ಷಿದ್ರಾಜಾ ! ಕೃಷ್ಣಾವತಾರಕ್ಕೆ ಮೊದಲು, ದೇವನದಿಯಾದ ಗಂಗೆಯೇ ಲೋಕದಲ್ಲಿ ಸರ್ವೋತ್ತಮವಾದ ಪುಣ್ಯತೀರ್ಥವೆನಿಸಿಕೊಂಡಿದ್ದಿತು. ಈಗ ಶ್ರೀಕೃಷ್ಣನ ಕೀರ್ತಿರೂಪವಾದ ತೀರ್ಥವು ಆತನ ಪಾದತೀರ್ಥವಾದ ಗಂಗೆಯ ಪ್ರಭಾವವನ್ನೂ ತಗ್ಗಿಸಿತು. ಆಕೃಷ್ಣನ ಕೀರ್ತಿಯೇ ಸಮಸ್ತತೀರ್ಥಗಳಿಗೂ ಮೇಲೆನಿಸಿರುವುದು. ಆ ಕೃಷ್ಣನನ್ನು ದ್ವೇಷಿಸಿದವರೂ ಪ್ರೇಮಿಸಿದವರೂ ಸಮಕಕ್ಷ್ಯೆಯಲ್ಲಿ ಅವನ ಸಾಧರ್ಮ್ಯವನ್ನು ಹೊಂದಿರುವರು. ಯಾವಳ ಕಟಾಕ್ಷಲೇಶಕ್ಕೆ ಪಾತ್ರರಾಗುವುದಕ್ಕಾಗಿ, ಬ್ರಹ್ಮಾದಿದೇವತೆ

ಗಳೂ ಎಷ್ಟೋಪ್ರಯತ್ನಪಡುವರೋ, ಅಂತಹ ಮಹಾಲಕ್ಷ್ಮಿಯೇ ಅವನಿಗೆ ಅನನ್ಯಾರ್ಹಶೇಷಭೂತೆಯಾಗಿರುವಾಗ, ಅವನ ಪ್ರಭಾವವನ್ನು ಎಷ್ಟೆಂದು ಹೇಳಬಹುದು ? ಪರಮಕಾರುಣಿಕನಾದ ಆ ಶ್ರೀಕೃಷ್ಣನು, ತನ್ನ ಹೆಸರನ್ನು ಒಂದಾವರ್ತಿ ಕಿವಿಯಿಂದ ಕೇಳಿದವರಿಗೂ, ಬಾಯಿಂದಾಡಿದವರಿಗೂ, ಅರ್ಥಜ್ಞಾನವಿಲ್ಲದೆ ಬಾಯಿಗೆ ಬಂದಂತೆ ತನ್ನ ನಾಮವನ್ನುಚ್ಚರಿಸಿದವರಿಗೂ, ಅಶುಭಗಳೆಲ್ಲವನ್ನೂ ನೀಗಿಸಿ, ಕ್ಷೇಮವನ್ನುಂಟುಮಾಡುವನು ಆತನೇ ಧರ್ಮಪ್ರವರ್ತಕನು. ಕಾಲಾಭಿಮಾನಿಯಾದ ಸುದರ್ಶನಚಕ್ರವೇ ಯಾವನ ಆಯುಧವೆನಿಸಿರುವುದೋ, ಅಂತಹ ಭಗವಂತನಾದ ಶ್ರೀಕೃಷ್ಣನು, ಭೂಭಾರಪರಿಹಾರರೂಪವಾದ ಕಾರ್ಯವನ್ನು ನಡೆಸಿದುದೊಂದು ಚಿತ್ರವಲ್ಲ. ಸಮಸ್ತಪ್ರಾಣಿಗಳಿಗೂ ಆಧಾರಭೂತನಾದ ಆ ಭಗವಂತನು, ತನಗೆ ಕರ್ಮಾಧೀನವಾದ ಜನನವಿಲ್ಲದಿದ್ದರೂ, ದೇವಕೀದೇವಿಯ ಗರ್ಭದಲ್ಲಿ ಜನಿಸಿದನೆಂಬ ನಾಮಮಾತ್ರಕ್ಕೆ ಪಾತ್ರನಾಗಿ, ಯದುವೀರರೆಂಬ ಭುಜಗಳಿಂದ ಲೋಕದಲ್ಲಿ ಅಧರ್ಮವನ್ನು ನಿರ್ಮೂಲಮಾಡಿದನು. ಮತ್ತು ಬೃಂದಾವನದಲ್ಲಿರುವ ತರು, ಗುಲ್ಮ, ಲತಾದಿ ಸ್ಥಾವರಗಳಿಗೂ, ಪಶುಪಕ್ಷಿಮೃಗಾದಿಜಂಗಮಗಳಿಗೂ, ತನ್ನೊಡನೆ ಯಾವುದೋ ಒಂದು ವಿಧವಾದ ಸಂಬಂಧದಿಂದ, ಮೋಕ್ಷಪ್ರತಿಬಂಧಕವಾದ ಪಾಪವನ್ನು ನೀಗಿಸಿ ಉತ್ತಮಗತಿಯನ್ನುಂಟುಮಾಡಿದನು. ಮುದ್ದುಬೀರುವ ತನ್ನ ಮುಖವಿಕಾಸದಿಂದಲೇ ಗೋಪಸ್ತ್ರೀಯರ ಮನಸ್ಸನ್ನು ಮೋಹಗೊಳಿಸಿ, ಅವರಿಗೂ ಉತ್ತಮಗತಿಯನ್ನು ಅನುಗ್ರಹಿಸಿದನು. ಹೀಗೆ ಸಕಲಜಗದುದ್ಧಾರಕನಾದ ಶ್ರೀ ಕೃಷ್ಣನು ಸರ್ವೋತ್ಕೃಷ್ಟನಾಗಿರಲಿ ! ಓ ಪರೀಕ್ಷಿದ್ರಾಜಾ ! ವೇದಗಳ ಮೂಲವಾಗಿ ಮೊದಲು ತನ್ನಿಂದ ನಿರ್ಣಯಿಸಲ್ಪಟ್ಟ ಧರ್ಮಗಳನ್ನು ರಕ್ಷಿಸುವುದಕ್ಕಾಗಿಯೇ, ಮನುಷ್ಯದೇಹವನ್ನು ಕೈಕೊಂಡು, ಆ ಮನುಷ್ಯನಟನೆಗಳಿಂದಲೇ ತನ್ನ ಅಪಾರಮಹಿಮೆಯನ್ನು ತೋರಿಸಿದ ಆ ಕೃಷ್ಣನ ಚರಿತ್ರಗಳು, ಕಿವಿಯಿಂದ ಕೇಳಿದವರಿಗೂ, ಬಾಯಿಂದಾಡಿದವರಿಗೂ, ಭಕ್ತಿಪ್ರತಿಬಂಧಕಗಳಾದ ಸಮಸ್ತಪಾಪಗಳನ್ನೂ ನೀಗಿಸುವುವು. ಆತನ ಪಾದಾರವಿಂದದಲ್ಲಿ ಭಕ್ತಿಯನ್ನಪೇಕ್ಷಿಸತಕ್ಕವನು, ಅವಶ್ಯವಾಗಿ ಅದನ್ನು ಕೇಳಬೇಕು ಪ್ರತಿ

ಸಂಧ್ಯೆಯಲ್ಲಿಯೂ ಆ ಮುಕುಂದನ ಸತ್ಕಥಾಶ್ರವಣಕೀರ್ತನಗಳಿಂದ, ಆ ಪರಮಾತ್ಮನಲ್ಲಿ ಮೇಲೆಮೇಲೆ ಆಸಕ್ತಿಯು ಹೆಚ್ಚುತ್ತ ಬರುವುದು ಅದರಿಂದ ಭಕ್ತಿಯೋಗವು ಹುಟ್ಟುವುದು. ಆ ಭಕ್ತಿಬಲದಿಂದ ಎಂತವರಿಗೂ ಜಯಿಸ ಬಾರದ ಮೃತ್ಯುವನ್ನು ಜಯಿಸಿ, ನಿತ್ಯಸುಖಾಸ್ಪದವಾದ ಭಗವಂತನ ಸಾನ್ನಿಧ್ಯವನ್ನು ಸೇರಬಹುದು. ಆ ಭಗವದಾಸ್ಥಾನವೋ ಸಾಧಾರಣವಾದುದಲ್ಲ! ಏಕಛತ್ರಾಧಿಪತ್ಯದಲ್ಲಿರುವ ರಾಜರೂ ಕೂಡ, ಆ ಸ್ಥಾನವನ್ನು ಪಡೆಯಬೇಕೆಂಬ ಉದ್ದೇಶದಿಂದ,ತಮ್ಮ ರಾಜ್ಯ ಕೋಶ ಭೋಗಗಳಲ್ಲಿಯೂ ಆಸೆಯನ್ನು ಬಿಟ್ಟು, ಅಡವಿಯಲ್ಲಿ ತಪಸ್ಸಿಗಾಗಿ ಹೋಗುವರು." ಎಂದು ಶುಕಮುನಿಯು ಪರೀಕ್ಷಿದ್ರಾಜನಿಗೆ ತಿಳಿಸಿದ ಶ್ರೀ ಕೃಷ್ಣ ಚರಿತ್ರವನ್ನು, ಸೂತಪೌರಾಣಿಕನು ನೈಮಿಶಾರಣ್ಯವಾಸಿಗಳಾದ ಋಷಿಗಳಿಗೆ ಹೇಳಿದನು. ಇದು ತೊಂಭತ್ತನೆಯ ಅಧ್ಯಾಯವು.

ದಶಮಸ್ಕಂಧವು ಸಮಾಪ್ತವು.

ಶ್ರೀಕೃಷ್ಣಾಯ ಪರಬ್ರಹ್ಮಣೇ ನಮಃ.

ಶ್ರೀ ಶ್ರೀ ಶ್ರೀ ಶ್ರೀ.

---

PRINTED AT THE ANANDA PRESS, MADRAS.—1922